ಶ್ರೀ ಜಯಚಾಮರಾಜೇಂದ್ರ ಗ್ರಂಥರತ್ನಮಾಲಾ

ಸಂಖ್ಯೆ ೩೮

# ಶ್ರೀಮದ್ವಾಯುಮಹಾಪುರಾಣಂ

(ಕನ್ನಡ ಅನುವಾದ ಸಹಿತ)

ಸಂಚಿಕೆ ೪


ಅನುವಾದಕ:

ಸಾಹಿತ್ಯ, ವೇದಾಂತ, ಕರ್ಣಾಟಕ, ಆಸ್ಥಾನ, ವಿದ್ವಾನ್

**ಆರ್. ಸೇತುಮಾಧವಾಚಾರ್**

ಪಂಡಿತ, ಗೌ॥ ಟ್ರೈನಿಂಗ್ ಕಾಲೇಜ್, ಮೈಸೂರು




Rs. 4-8-0


ಮೈಸೂರು

ಶ್ರೀ ಶಾರದಾ ಎಲೆಕ್ಟ್ರಿಕ್ ಪ್ರೆಸ್

1947

# ಪೀಠಿಕೆ



ಶ್ರೀಮದ್ವಾಯುಮಹಾಪುರಾಣದ ದ್ವಿತೀಯ ಖಂಡದಲ್ಲಿ ಮೊದಲನೆಯ ಸಂಪುಟವು ಮುದ್ರಿತವಾಗಿ ಈಗ ಪ್ರಕಟವಾಗಿದೆ. ಇದು ಈ ವಾಯುಪುರಾಣದ ನಾಲ್ಕನೆಯ ಸಂಪುಟವಾಗಿದೆ. ಇದರಲ್ಲಿ ಹದಿನಾರು ಅಧ್ಯಾಯಗಳಿವೆ. ಪ್ರಥಮಾಧ್ಯಾಯದಲ್ಲಿ ಸ್ವಾಯಂಭುವಾದಿ ಸಪ್ತಮನುಗಳ ವರ್ಣನೆಯೂ ಚಾಕ್ಷುಷಮನ್ವಂತರದಲ್ಲಿ ದಕ್ಷ ಪ್ರಜಾಪತಿಗೆ ಉತ್ತಾನುಪಾದರಾಜನೂ ಅವನ ಸಂತತಿಯಲ್ಲಿ ವೇನರಾಜನೂ ಉತ್ಪನ್ನರಾಗಿರುವರೆಂಬ ವಿಷಯವು ಉಕ್ತವಾಗಿದೆ. ಆ ವೇನರಾಜನು ಲೋಕಕಂಟಕನೂ ಐಶ್ವರ್ಯ ಮದೋನ್ಮತ್ತನೂ ಪ್ರಜಾಘಾತುಕನೂ ಆಗಿದ್ದನು ಆಗ ಮಳೆಬೆಳೆಗಳಿಲ್ಲದೆ ಕ್ಷಾಮಡಾಮರಗಳಿಂದ ಪ್ರಜಗಳು ಬಹಳವಾಗಿ ಪೀಡಿತರಾಗಿದ್ದರು. ತರುವಾಯ ಕರುಣಾಳುಗಳಾದ ಮಹರ್ಷಿಗಳೆಲ್ಲರೂ ಒಟ್ಟುಗೂಡಿ ಲೋಕಕಲ್ಯಾಣಕ್ಕಾಗಿ ಬಲಾತ್ಕಾರದಿಂದ ವೇನರಾಜನನ್ನು ಹಿಡಿದು ಅವನ ಬಲಗೈಯನ್ನು ಮಥಿಸಿದರು. ಆಗ ಸಮುದ್ರಮಥನದಿಂದ ಅಮೃತವು ಜನಿಸಿದಂತೆ ಧರ್ಮಾತ್ಮನೂ, ಜ್ಞಾನಿಯೂ ಆದ ಪೃಥುಮಹಾರಾಜನು ಜನಿಸಿದನು ತರುವಾಯ ಅವನು ಪ್ರಜಾಹಿತಕ್ಕಾಗಿ ಭೂದೇವಿಯನ್ನು ಪ್ರಾರ್ಥಿಸಿ ವಿಷಮಭಾಗವನ್ನು ಸಮಮಾಡಿ ಗೋರೂಪಿಯಾದ ಭೂಮಿಯಿಂದ ಕ್ಷೀರವನ್ನು ಕರೆದನು ಅದರಿಂದ ಸಕಲವಸ್ತುಗಳೂ ದೊರೆತವು. ಅಂದಿನಿಂದ ಪೃಥ್ವಿಯಲ್ಲಿ ಸಕಲ ಧನಧಾನ್ಯಸಮೃದ್ಧಿಯೂ ವರ್ಣಾಶ್ರಮಧರ್ಮಗಳೂ ಉಂಟಾದುವು. ಹೀಗೆ ಮಹರ್ಷಿಗಳು ವೇನರಾಜನನ್ನು ತೆಗೆದುಹಾಕಿ ಪೃಥುಮಹಾರಾಜನಿಂದ ಲೋಕಕಲ್ಯಾಣವನ್ನು ಉಂಟುಮಾಡಿಸಿದರು ಮಹಾನುಭಾವನೂ, ಧರ್ಮಾತ್ಮನೂ ಆದ ಪೃಥುಮಹಾರಾಜನಿಂದ ಭೂಮಾತೆಯು ಸಕಲಕಲಾಪೂರ್ಣಳೂ, ನವರತ್ನಗಳಿಂದ ಮಂಡಿತಳೂ, ವರ್ಣಾಶ್ರಮಧರ್ಮಗಳಿಂದ ಮಾನ್ಯಳೂ, ಗ್ರಾಮನಗರೋಪವನಾದಿಗಳಿಂದ ಭೂಷಿತಳೂ, ಸಮಸ್ತಸಮೃದ್ಧಿಗಳಿಂದಲಂಕೃತಳೂ ಆಗಿ ಪೃಥಿವಿಯೆಂಬ ನಾಮವನ್ನು ಪಡೆದು ಪ್ರಖ್ಯಾತಳಾದಳು, ಎಂಬ ವಿಷಯವು ಉಕ್ತವಾಗಿದೆ.

ಶ್ರೀ ಪರಮಪುರುಷನೊಬ್ಬನೇ ಅನಂತನಾಮಗಳಿಂದ ಪ್ರಖ್ಯಾತನಾಗಿರುವನು. ಆ ಪರಮಾತ್ಮನೊಬ್ಬನೇ ಬ್ರಹ್ಮ, ವಿಷ್ಣು, ಮಹೇಶ್ವರಾದಿ ನಾಮಗಳಿಂದ ವ್ಯವಹರಿಸಲ್ಪಡುವನು. ಅವನಿಂದಲೆ ಸೃಷ್ಟಿ, ಸ್ಥಿತಿ, ಸಂಹಾರಾದಿಗಳು ಉಂಟಾಗುವುವು. ಈ ವಿಷಯವೂ ಕೂಡ ನಿರೂಪಿತವಾಗಿದೆ. ಈ ಜಗತ್ತಿಗೆ ಅನೇಕ ದೇವತೆಗಳು ಸ್ವತಂತ್ರವಾಗಿ ಕಾರಣರಾಗಿದ್ದರೆ ಬಹುನಾಯಕತ್ವದಿಂದ ರಾಜ್ಯವು ಕೆಡುವಂತೆ ಪ್ರಪಂಚವೇ ದುಃಖಕ್ಕೆ ಭಾಗಿಯಾಗಬೇಕಾಗುವುದು. ಆದುದರಿಂದ ಒಬ್ಬನೇ

ಭಗವಂತನು ಸೃಷ್ಟ್ಯಾದಿಗಳನ್ನು ಮಾಡುವನು ಮತ್ತು ಪ್ರಜೆಗಳ ಕರ್ಮಾನುಗುಣವಾಗಿ ಫಲದಾಯಕನೂ ಆಗುವನು.

ಶ್ರಾದ್ಧಪ್ರಕರಣದಲ್ಲಿ ಪಿತೃಗಳು, ಪಿತೃದೇವತೆಗಳು, ವಿಶ್ವೇದೇವತೆಗಳೆಂದು ಮೂರು ಪಂಗಡದವರು ಉಕ್ತರಾಗಿರುವರು. ಇವರಲ್ಲಿ ವಿಶ್ವೇದೇವತೆಗಳು ದಕ್ಷಪ್ರಜಾಪತಿಯ ಕುಮಾರಿಯಾದ ವಿಶ್ವೇದೇವಿಗೂ, ಧರ್ಮದೇವನಿಗೂ ಜನಿಸಿದ ಮಕ್ಕಳಾಗಿರುವರು. ಇವರು ತಪಸ್ಸನ್ನು ಮಾಡಿ ಬ್ರಹ್ಮದೇವನಿಂದಲೂ, ಪಿತೃದೇವತೆಗಳಿಂದಲೂ, ಶ್ರಾದ್ಧದಲ್ಲಿ ಅಗ್ರಪೂಜೆಯು ದೊರೆಯುವಂತೆ ವರಗಳನ್ನು ಪಡೆದರು. ಆದುದರಿಂದ ಶ್ರಾದ್ಧಕರ್ಮದಲ್ಲಿ ಅವರಿಗೆ ಪಿತೃಗಳಿಗಿಂತಲೂ ಮೊದಲು ಪೂಜಿಸಬೇಕು.

ಪಿತೃದೇವತೆಗಳು ಪಿತೃಗಳಿಗಿಂತಲೂ ಭಿನ್ನರಾಗಿರುವರು (ಬೇರೆಯಾಗಿರುವರು). ಈ ಪಿತೃದೇವತೆಗಳು, ದೇವತೆಗಳ ಕುಮಾರರೂ, ಮಹಾನುಭಾವರೂ ಆಗಿರುವರು. ಪುರುಷರು ಶ್ರಾದ್ಧಕರ್ಮದಲ್ಲಿ ಪಿತೃಗಳಿಗಾಗಿ ಮಾಡಿದ ಅನ್ನದಾನಾದಿಗಳನ್ನು ಅವರವರ ಪಿತ್ರಾದಿಗಳು ಯಾವ ದೇಶದಲ್ಲಿ ಯಾವ ಪ್ರಾಣಿಯಾಗಿ ಜನಿಸಿದ್ದರೂ, ಈ ಪಿತೃದೇವತೆಗಳು ಅವರಿಗೆ ಯೋಗ್ಯವಾದ ಆಹಾರವನ್ನಾಗಿ ಮಾಡಿಕೊಟ್ಟು ತೃಪ್ತಿಗೊಳಿಸುವರು. ಬ್ರಹ್ಮನು ಹಾಗೆಯೇ ಅವರಿಗೆ ವರವನ್ನು ಕೊಟ್ಟಿರುವನು. ಬ್ರಹ್ಮದೇವನ ವರದಿಂದ ಈ ಮಹಾಶಕ್ತಿಯು ಅವರಿಗೆ (ಪಿತೃದೇವತೆಗಳಿಗೆ) ಉಂಟಾಗಿದೆ

ಪುರುಷರಿಗೆ ಜನ್ಮಾಂತರದಲ್ಲಿ ಪುರುಷಜನ್ಮವು ಬರುವುದೇ ವಿನಾ ಬೇರೆ ಜನ್ಮವು (ಪ್ರಾಣಿಜನ್ಮ) ಬರುವುದಿಲ್ಲವೆಂದು ಹೇಳುವವರ ವಾದವು ಯುಕ್ತಿವಿರುದ್ಧವೂ, ಶಾಸ್ತ್ರವಿರುದ್ಧವೂ ಆಗಿದೆ. ಪುರುಷರು ತಾವು ಮಾಡಿರುವ ಕರ್ಮಾನುಸಾರವಾಗಿ ಉತ್ತಮವಾದ ಪುರುಷಜನ್ಮವೂ, ಅಧಮವಾದ ಪ್ರಾಣಿಜನ್ಮವೂ ಉಂಟಾಗುವದೆಂಬ ವಿಷಯವು ಶಾಸ್ತ್ರಸಮ್ಮತವಾಗಿದೆ.

ಹೀಗೆ ಮಹರ್ಷಿಗಳು ಭೂತಭವಿಷ್ಯದ್ವರ್ತಮಾನ ವಿಷಯಗಳನ್ನೂ, ಜನ್ಮಾಂತರಗಳ ವಿಷಯಗಳನ್ನೂ, ಕಲ್ಪಾಂತರಗಳಲ್ಲಿಯೂ, ಯುಗಾಂತರಗಳಲ್ಲಿಯೂ, ಲೋಕಾಂತರಗಳಲ್ಲಿಯೂ, ನಡೆಯುವ ವಿಷಯಗಳನ್ನೂ ತಮ್ಮ ಜ್ಞಾನದೃಷ್ಟಿಯಿಂದ ತಿಳಿದು ಪುರಾಣಾದಿಗಳಲ್ಲಿ ವರ್ಣಿಸಿರುವರು. ಆದುದರಿಂದ ಇಹಪರಗಳಲ್ಲಿ ಸುಖಾಭಿಲಾಷೆಯುಳ್ಳ ಪುರುಷರು ಶಾಸ್ತ್ರೋಕ್ತವಾದ ಕರ್ಮಗಳನ್ನಾಚರಿಸಿ ಇಹಪರ ಸೌಖ್ಯಗಳನು ಪಡೆಯಬೇಕು.

ಇಂತಹ ಪುರಾಣೋಕ್ತವಾದ ಧರ್ಮಗಳು ಸಕಲರಿಗೂ ಸುಲಭವಾಗಿ ತಿಳಿಯುವುದಕ್ಕೋಸ್ಕರ ಪರಮದಯಾಳುಗಳಾದ ಕರ್ಣಾಟಕ ಸಾರ್ವಭೌಮರು, ಅಷ್ಟಾದಶ ಪುರಾಣಗಳನ್ನು ಕನ್ನಡ ಭಾಷೆಯಲ್ಲಿ ಪರಿವರ್ತನೆಯನ್ನು ಮಾಡಿಸಿರುತ್ತಾರೆ. ಇಂತಹ ಕರ್ಣಾಟಕ ಸಾರ್ವಭೌಮರಾದ **ಶ್ರೀಮಜ್ಜಯ ಚಾಮರಾಜೇಂದ್ರ ಒಡೆಯರ್ ಬಹದ್ದೂರ್, ಜಿ.ಸಿ.ಬಿ., ಜಿ.ಸಿ.ಎಸ್.ಐ.,** ಮಹಾಪ್ರಭುಗಳವರ ಕೀರ್ತಿಯೂ, ಸಂಪತ್ಸಮೃದ್ಧ್ಯಾದಿಗಳೂ ಇಮ್ಮಡಿಯಾಗಲೆಂದು ಹಾರೈಸುವ.

ಅನುವಾದಕ :

ತಾ|| 15–10–47 — **ಆರ್. ಸೇತುಮಾಧವಾಚಾರ್,**

ಆಶ್ವಯುಜ ಶುದ್ಧ ಪಾಡ್ಯಮಿ — ಆಸ್ಥಾನ ವಿದ್ವಾನ್



# ವಿಷಯಾನುಕ್ರಮಣಿಕೆ



—|| ಹರಿಃ ಓಂ ||—

—ಶ್ರೀ ಗಣೇಶಾಯ ನಮಃ—

# ಶ್ರೀಮದ್ವಾಯುಮಹಾಪುರಾಣಂ

## ದ್ವಿತೀಯ ಖಾಂಡಂ

### ಪ್ರಥಮೋಽಧ್ಯಾಯಃ

**|| ಶಾಂಶಪಾಯನ ಉವಾಚ ||**

**ಕ್ರಮಂ ಮನ್ವಂತರಾಣಾಂ ತು ಜ್ಞಾತುಮಿಚ್ಛಾಮಿ ತತ್ವತಃ ।**
**ದೇವತಾನಾಂ ಚ ಸರ್ವೇಷಾಂ ಯೇ ಚ ಯಸ್ಯಾಂತರೇ ಮನೋಃ || ೧ ||**

**|| ಸೂತ ಉವಾಚ ||**

**ಮನ್ವಂತರಾಣಾಂ ಯಾನಿ ಸ್ಯುರತೀತಾನಾಗತಾನಿ ಹ ।**
**ಸಮಾಸಾದ್ವಿಸ್ತರಾಚ್ಚೈವ ಬ್ರುವತೋ ವೈ ನಿಬೋಧತ || ೨ ||**

---

### ಒಂದನೆಯ ಅಧ್ಯಾಯವು

೧. ಶಾಂಶಪಾಯನ ಮುನಿಯು ಹೇಳಿದನು :— ಎಲೈ ವಾಯುದೇವನೇ, ಮನ್ವಂತರಗಳ ಕ್ರಮಗಳನ್ನು ಯಥಾಸ್ಥಿತವಾಗಿ ಕೇಳಬೇಕೆಂಬ ಇಚ್ಛೆಯು ಬಹಳವಾಗಿದೆ. ಆದುದರಿಂದ ಮನ್ವಂತರಗಳ ಕ್ರಮವನ್ನೂ, ಯಾವ ಯಾವ ಮನ್ವಂತರಗಳಲ್ಲಿ ಯಾವ ಯಾವ ಕಾರ್ಯಗಳೂ, ದೇವಋಷ್ಯಾದಿಗಳೂ ಉತ್ಪನ್ನರಾಗುವರು. ಈ ವಿಷಯಗಳನ್ನು ದಯಪಾಲಿಸಿ ನನಗೆ ತಿಳಿಸಬೇಕೆಂದು ಶಾಂಶಪಾಯನಮುನಿಯು ವಾಯುದೇವನಿಗೆ ಹೇಳಿದನು.

೨. ವಾಯುದೇವನು ಶಾಂಶಪಾಯನ ಮುನಿಗೆ ಹೇಳಿದ ವಿಷಯಗಳನ್ನು ಸೂತಮುನಿಯು ಋಷಿಗಳಿಗೆ ಹೇಳಿದನು :—ಎಲೈ ಮುನಿವರ್ಯರೇ, ಅತೀತಾನಾಗತವಾದ ಯಾವ ಮನ್ವಂತರಗಳಿವೆಯೋ, ಅವುಗಳನ್ನು ಮೊದಲು ಸಂಕ್ಷೇಪವಾಗಿಯೂ ಅನಂತರ ವಿಸ್ತಾರವಾಗಿಯೂ ತಿಳಿಸುವೆನು ಕೇಳಿರೆಂದು ಹೇಳಿದನು.

**ಸ್ವಾಯಂಭುವೋ ಮನುಃ ಪೂರ್ವಂ ಮನುಃ ಸ್ವಾರೋಚಿಷಸ್ತಥಾ ।**
**ಔತ್ತಮಸ್ತಾಮಸಶ್ಚೈವ ತಥಾ ರೈವತಚಾಕ್ಷುಷೌ ॥**
**ಷಡೇತೇ ಮನವೋಽತೀತಾ ವಕ್ಷ್ಯಾಮ್ಯನಾಗತಾನ್ ॥ ೩ ॥**

**ಸಾವರ್ಣಾಃ ಪಂಚರೌಚ್ಯಶ್ಚ ಭೌತ್ಯೋ ವೈವಸ್ವತಸ್ತಥಾ ।**
**ವಕ್ಷ್ಯಾಮ್ಯೇತಾನ್ ಪುರಸ್ತಾತ್ತು ಮನೋರ್ವೈವಸ್ವತಸ್ಯ ಹ ॥ ೪ ॥**

**ಮನವಃ ಪಂಚ ಯೇಽತೀತಾ ಮಾನವಾಂಸ್ತಾನ್ ನಿಬೋಧತ ।**
**ಮನ್ವಂತರಂ ಮಯಾ ಚೋಕ್ತಂ ಕ್ರಾಂತಂ ಸ್ವಾಯಂಭುವಸ್ಯ ಹ ॥ ೫ ॥**

**ಅತ ಊರ್ಧ್ವಂ ಪ್ರವಕ್ಷ್ಯಾಮಿ ಮನೋಃ ಸ್ವಾರೋಚಿಷಸ್ಯ ಹ ।**
**ಪ್ರಜಾಸರ್ಗಂ ಸಮಾಸೇನ ದ್ವಿತೀಯಸ್ಯ ಮಹಾತ್ಮನಃ ॥ ೬ ॥**

---

೩. ಮನುಗಳಲ್ಲಿ ಸ್ವಾಯಂಭುವ ಮನುವು ಮೊದಲನೆಯವನು. ಸ್ವಾರೋಚಿಷನು ಎರಡನೆಯವನು ಔತ್ತಮನುವು ಮೂರನೆಯವನು. ತಾಮಸನು ನಾಲ್ಕನೆಯವನು. ಅನಂತರ ರೇವತ, ಚಾಕ್ಷುಷಮನುಗಳು. ಈ ಆರುಜನ ಮನುಗಳೂ ಅತೀತರಾಗಿರುವರು. ಮುಂದೆ ಬರುವ ಎಂಟುಜನ ಮನುಗಳನ್ನು ಈಗ ತಿಳಿಸುವೆನು ಕೇಳಿರೆಂದನು.

೪. ಭಾವಿಮನುಗಳಲ್ಲಿ ಸಾವರ್ಣಮನುಗಳು ಐದುಜನ. ಮತ್ತು ರೌಚ್ಯ, ಭೌತ್ಯ, ವೈವಸ್ವತ ಇವರು ಮೂವರು ಒಟ್ಟಾಗಿ ಭವಿಷ್ಯನ್ಮನುಗಳು ಎಂಟುಜನಗಳಿರುವರು. ಈ ಎಂಟುಜನ ಮನುಗಳ ವಿಚಾರಗಳನ್ನು ಮುಂದೆ ತಿಳಿಸುವೆನು. ವೈವಸ್ವತ ಮನುವಿನ ವಿಷಯಗಳನ್ನು ಸಹ ಮುಂದೆ ನಿರೂಪಿಸುವೆನು ಎಂದನು.

೫. ಯಾವ ಐದುಜನ ಮನುಗಳು ಅತೀತರಾಗಿರುವರೋ, ಅವರ ವಿಷಯಗಳು ನಿಮಗೆ ವಿದಿತವಾಗಿಯೇ ಇವೆ. ಅವರಲ್ಲಿ ಸ್ವಾಯಂಭುವ ಮನುವಿನ ವಿಷಯವೂ ಕೂಡ ನಿಮಗೆ ನಾನು ಮೊದಲೇ ತಿಳಿಸಿರುವೆನು ಎಂದನು.

೬. ಎಲೈ ವಿಪ್ರೋತ್ತಮರೇ,! ಈಗ ನಾನು ನಿಮಗೆ ಎರಡನೆಯವನೂ, ಮಹಾತ್ಮನೂ ಆದ ಸ್ವಾರೋಚಿಷ ಮನುವಿನ ಪ್ರಜಾಸೃಷ್ಟಿಯನ್ನು ಪುನಃ ಸಂಕ್ಷೇಪವಾಗಿ ತಿಳಿಸುವೆನು ತಿಳಿಯಿರಿ ಎಂದನು.

ಆರ್ಸ ವೈ ತುಷಿತಾ ದೇವಾ ಮನುಸ್ಸ್ವಾರೋಚಿಷೇಂತರೇ ।
ಪಾರಾವತಾಶ್ಚ ವಿದ್ವಾಂಸೋ ದ್ವಾವೇವ ತು ಗಣೌ ಸ್ಮೃತೌ ॥ ೭ ॥

ತುಷಿತಾಯಾಂ ಸಮುತ್ಪನ್ನಾಃ ಕ್ರತೋಃ ಪುತ್ರಾಃ ಸ್ವರೋಚಿಷಃ ।
ಪಾರಾವತಾಶ್ಚ ಶಿಷ್ಟಾಶ್ಚ ದ್ವಾದಶೌ ತೌ ಗಣೌ ಸ್ಮೃತೌ ॥
ಛಂದಜಾಶ್ಚ ಚತುರ್ವಿಂಶದ್ದೇವಾಸ್ತೇ ವೈ ತದಾ ಸ್ಮೃತಾಃ ॥ ೮ ॥

ಧೈವಸ್ಯಶೋಽಥ ವಾಮಾನ್ಯೋ ಗೋಪಾ ದೇವಾಯತಸ್ತಥಾ ।
ಅಜಶ್ಚ ಭಗವಾರ್ನ ದೇವೋ ದುರೋಣಶ್ಚ ಮಹಾಬಲಃ ॥ ೯ ॥

ಆಪಶ್ಚಾಪಿ ಮಹಾಬಾಹುರ್ಮಹೌಜಾಶ್ಚಾಪಿ ವೀರ್ಯವಾರ್ನ ।
ಚಿಕಿತ್ವಾರ್ನ ನಿಭೃತೋ ಯಶ್ಚ ಅಂಶೋ ಯಶ್ಚೈವ ಪಠ್ಯತೇ ॥
ಇತ್ಯೇತೇ ಕ್ರತುಪುತ್ರಾಸ್ತು ತದಾರ್ಸ ಸೋಮಪಾಯಿನಃ ॥ ೧೦ ॥

---

೭. ಎರಡನೆಯ ಸ್ವಾರೋಚಿಷಮನ್ವಂತರದಲ್ಲಿ ತುಷಿತಾನಾಮಕರಾದ ದೇವತೆಗಳ ಸಂಘಗಳು ಇದ್ದುವು. ಅವುಗಳಲ್ಲಿ ಪಾರಾವತರು, ವಿದ್ವಾಂಸರೆಂದು ಎರಡು ಗುಂಪುಗಳು ಪ್ರಸಿದ್ಧವಾಗಿವೆ.

೮. ಸ್ವಾರೋಚಿಷಮನ್ವಂತರದಲ್ಲಿ ಕ್ರತುಃನಾಮಕ ಮುನಿಗೆ ತುಷಿತೆಯಲ್ಲಿ ಅನೇಕ ಪುತ್ರರು ಉತ್ಪನ್ನರಾದರು. ಉಳಿದವರು ಪಾರಾವತರೆಂದು ಪ್ರಖ್ಯಾತರಾಗಿರುವರು. ಅವರು ಹನ್ನೆರಡು ಗಣಗಳಾಗಿ ಏರ್ಪಟ್ಟಿರುವರು. ಆಕಾಲದ ಬ್ರಹ್ಮದೇವನ ಮಾನಸಿಕಪುತ್ರರೂ, ಇಚ್ಛಾಮಾತ್ರದಿಂದ ಜನ್ಯರೂ ಆದ ದೇವತೆಗಳು ಇಪ್ಪತ್ತು ನಾಲ್ಕು ಸಂಖ್ಯಾಕರಾಗಿರುವರು.

೯-೧೦. ಅನಂತರ ಮಹಾತ್ಮನಾದ ಕ್ರತುವಿಗೆ ಧೈವಸ್ಯಶ. ವಾಮಾನ್ಯ, ಗೋಪ, ದೇವಾಯತ, ಅಜ, ಪೂಜ್ಯನಾದದೇವ, ಮಹಾಬಲಶಾಲಿಯಾದ ದುರೋಣ, ಮಹಾಬಾಹುವಾದ ಆಪ, ಪರಾಕ್ರಮಿಯಾದ ಚಿಕಿತ್ವಂತ, ನಿಭೃತ, ಅಂಶ ಎಂಬ ಸೋಮಪಾನಮಾಡಿದಂತಹ ಮಕ್ಕಳು ಪ್ರಖ್ಯಾತರಾಗಿದ್ದರು.

**ಪ್ರಚೇತಾಶ್ಚೈವ ಯೋ ದೇವೋ ವಿಶ್ವೇದೇವಾಸ್ತಥೈವ ಚ ।**
**ಸಮಂಜೋ ವಿಶ್ರುತೋ ಯಶ್ಚ ಅಜಿಹ್ಮಶ್ಚಾರಿಮರ್ದನಃ ॥ ೧೧ ॥**

**ಅಜಿಹ್ಮಾನಮಹೀಯಾನೌ ವಿದ್ಯಾವಂತೌ ತಥೈವ ಚ ।**
**ಅಜೋಷೌ ಚ ಮಹಾಭಾಗೌ ಯವೀಯಶ್ಚ ಮಹಾಬಲಃ ॥ ೧೨ ॥**

**ಹೋತಾ ಯಜ್ವಾ ಚ ಇತ್ಯೇತೇ ಪರಾಕ್ರಾಂತಾಃ ಪರಾವತಾಃ ।**
**ಇತ್ಯೇತಾ ದೇವತಾ ಹ್ಯಾಸನ್ಮನುಃಸ್ವಾರೋಚಿಷೇಂತರೇ ॥ ೧೩ ॥**

**ಸೋಮಪಾಸ್ತು ತದಾ ಹ್ಯೇತಾಶ್ಚತುರ್ವಿಂಶತಿದೇವತಾಃ ।**
**ತೇಷಾಮಿಂದ್ರಸ್ತದಾ ಹ್ಯಾಸೀದ್ವೈಧಶ್ಚ ಲೋಕವಿಶ್ರುತಃ ॥ ೧೪ ॥**

**ಊರ್ಜೋರ್ ವಸಿಷ್ಠಪುತ್ರಸ್ತು ಸ್ತಂಭಃ ಕಾಶ್ಯಪ ಏವ ಚ ।**
**ಭಾರ್ಗವಶ್ಚ ತದಾ ದ್ರೋಣೋ ಋಷಭೋಂಗಿರಸಸ್ತಥಾ ॥ ೧೫ ॥**

**ಪೌಲಸ್ತ್ಯಶ್ಚೈವ ದತ್ತಾಲಿರಾತ್ರೇಯೋ ನಿಶ್ಚಲಸ್ತಥಾ ।**
**ಪೌಲಹಸ್ಯ ಚ ಧಾವಾಂಸ್ತು ಏತೇ ಸಪ್ತರ್ಷಯಃ ಸ್ಮೃತಾಃ ॥ ೧೬ ॥**

---

೧೧-೧೩. ಸ್ವಾರೋಚಿಷಮನ್ವಂತರದಲ್ಲಿ ವರುಣದೇವನು, ವಿಶ್ವೇದೇವತೆಗಳು, ಸಮಂಜ, ವಿಶ್ರುತ, ಶತ್ರುನಾಶಕವಾದ ಅರಿಮರ್ದನ, ವಿದ್ವಾಂಸರಾದ ಅಜಿಹ್ಮಾನ, ಮಹೀಯಾನ, ಮಹಾಭಾಗ್ಯಶಾಲಿಗಳಾದ ಅಜೋಷರು, ಕನಿಷ್ಠನಾದ ಮಹಾಬಲನು ಹೋತನು, ಯಾಗಶೀಲರೂ, ಮಹಾಶೂರರೂ, ಪರಾವತರು ಇವರೇ ಮೊದಲಾದವರು ದೇವತೆಗಳಾಗಿದ್ದರು.

೧೪. ಆ ಸ್ವಾರೋಚಿಷಮನ್ವಂತರದಲ್ಲಿ ಈ ಇಪ್ಪತ್ತುನಾಲ್ಕು ದೇವತೆಗಳೂ ಸೋಮಪಾಯಿಗಳೂ, ಸುಪ್ರಸಿದ್ಧರೂ ಆಗಿದ್ದರು. ಆಗ ಲೋಕವಿಶ್ರುತನಾದ ವೈಧನೆಂಬುವನು ಆ ಇಪ್ಪತ್ತುನಾಲ್ಕು ಜನಗಳಿಗೂ ಇಂದ್ರನಾಗಿದ್ದನು.

೧೫-೧೬. ಆ ಮನ್ವಂತರದಲ್ಲಿ ವಸಿಷ್ಠರ ಪುತ್ರನಾದ ಊರ್ಜನು, ಕಶ್ಯಪನ ಸುತನಾದ ಸ್ತಂಭನು, ಭೃಗುಗಳ ಪುತ್ರನಾದ ದ್ರೋಣನೂ, ಅಂಗಿರಸನ ಕುಮಾರನಾದ ಋಷಭನು, ಪುಲಸ್ತ್ಯನ ಆತ್ಮಜನಾದ ದತ್ತಾಲಿಯು, ಅತ್ರಿಯ ತನುಜನಾದ ನಿಶ್ಚಲನು, ಪುಲಸ್ತ್ಯನ ಕುಮಾರನಾದ ಧಾವಂತನು ಇವರು ಸಪ್ತರ್ಷಿಗಳೆಂದು ಸುಪ್ರಸಿದ್ಧರಾಗಿದ್ದರು.

ಚೈತ್ರಃ ಕವಿರುತಶ್ಚೈವ ಕೃತಾಂತೋ ವಿಭೃತೋ ರವಿಃ ।
ಬೃಹದ್ಗುಹೋ ನವಶ್ಚೈವ ಸುತಾಶ್ಚೈತೇ ನವ ಸ್ಮೃತಾಃ ॥ ೧೭ ॥

ಮನೋಃ ಸ್ವಾರೋಚಿಷಸ್ಯೈತೇ ಪುತ್ರಾ ವಂಶಕರಾಃ ಸ್ಮೃತಾಃ ।
ಪುರಾಣೇ ಪರಿಸಂಖ್ಯಾತಾ ದ್ವಿತೀಯಂ ಚೈತದಂತರಂ ॥ ೧೮ ॥

ಸಪ್ತರ್ಷಯೋ ಮನುರ್ದೇವಾಃ ಪಿತರಶ್ಚ ಚತುಷ್ಟಯಂ ।
ಮೂಲಂ ಮನ್ವಂತರಸ್ಯೈತೇ ತೇಷಾಂ ಚೈವಾಂತರೇ ಪ್ರಜಾಃ ॥ ೧೯ ॥

ಋಷೀಣಾಂ ದೇವತಾಃ ಪುತ್ರಾಃ ಪಿತರೋ ದೇವಸೂನವಃ ।
ಋಷಯೋ ದೇವಪುತ್ರಶ್ಚ ಇತಿ ಶಾಸ್ತ್ರವಿನಿಶ್ಚಯಃ ॥ ೨೦ ॥

---

೧೭. ಆ ಮನ್ವಂತರದಲ್ಲಿ ಚೈತ್ರ, ಕವಿರುತ, ಕೃತಾಂತ, ವಿಭೃತ, ರವಿ, ಬೃಹದ್ಗುಹ, ನವ ಇವರೇ ಮೊದಲಾದವರು ನವನಂದರಾಗಿ ಸುಪ್ರಸಿದ್ಧರಾಗಿದ್ದರು.

೧೮. ಸ್ವಾರೋಚಿಷಮನುವಿನಕಾಲದಲ್ಲಿ ಇವರು ಈ ಒಂಬತ್ತು ಜನ ಮಕ್ಕಳೂ ವಂಶಾಭಿವೃದ್ಧಿಕಾರಿಗಳೂ, ಸುಪ್ರಸಿದ್ಧರೂ, ಪುರಾಣಪ್ರತಿಪಾದ್ಯರೂ ಆಗಿ ಆದರ್ಶಪ್ರಾಯರಾಗಿದ್ದರು. ಇದು ಎರಡನೆಯ ಸ್ವಾರೋಚಿಷಮನ್ವಂತರದ ಸ್ಥಿತಿಗತಿಯಾಗಿದೆ.

೧೯. ಸಪ್ತರ್ಷಿಗಳು, ಮನುಗಳು, ದೇವತೆಗಳು, ಪಿತೃಗಳು ಈ ನಾಲ್ಕು ಜನರೂ ಸಕಲಮನ್ವಂತರಗಳಿಗೂ ಮೂಲಪುರುಷರಾಗಿರುವರು. ಇವರ ಮಕ್ಕಳೇ ಅವಾಂತರಪುರುಷರೆಂದು, ಪ್ರಜೆಗಳೆಂದು ಪ್ರಸಿದ್ಧಿಹೊಂದಿರುವರು.

೨೦. ಸ್ವಾಯಂಭುವಾದಿಮನ್ವಂತರದಲ್ಲಿ ದೇವತೆಗಳು ಋಷಿಪುತ್ರರಾಗಿಯೂ, ಪಿತೃಗಳು ದೇವಕುಮಾರರಾಗಿಯೂ, ಋಷಿಗಳೂ ಕೂಡ ದೇವತೆಗಳಿಗೆ ಕುಮಾರರಾಗಿ ಜನಿಸುವರೆಂದು ಶಾಸ್ತ್ರಸಮ್ಮತವಾದ ವಿಷಯವಾಗಿದೆ.

ಮನೋಃ ಕ್ಷತ್ರಂ ವಿಶಶ್ಚೈವ ಸಪ್ತರ್ಷಿಭ್ಯೋ ದ್ವಿಜಾತಯಃ ।
ಏತನ್ಮನ್ವಂತರಂ ಪ್ರೋಕ್ತಂ ಸಮಾಸಾನ್ನ ತು ವಿಸ್ತರಾತ್ ॥ ೨೧ ॥

ಸ್ವಾಯಂಭುವೇನ ವಿಸ್ತಾರೋ ಜ್ಞೇಯಃ ಸ್ವಾರೋಚಿಷಸ್ಯ ತು ।
ನ ಶಕ್ಯೋ ವಿಸ್ತರಸ್ತಸ್ಯ ವಕ್ತುಂ ವರ್ಷಶತೈರಪಿ ॥
ಪುನರುಕ್ತಬಹುತ್ವಾತ್ತು ಪ್ರಜಾನಾಂ ವೈ ಕುಲೇ ಕುಲೇ ॥ ೨೨ ॥

ತೃತೀಯಸ್ತ್ವಥ ಪರ್ಯಾಯ ಔತ್ತಮಸ್ಯಾಂತರೇ ಮನೋಃ ।
ಪಂಚ ಚೈವ ಗಣಾಃ ಪ್ರೋಕ್ತಾಸ್ತಾನ್ ವಕ್ಷ್ಯಾಮಿ ನಿಬೋಧತ ॥ ೨೩ ॥

ಸುಧಾಮಾನಶ್ಚ ದೇವಾಶ್ಚ ಯೇ ಚಾನ್ಯೇ ವಶವರ್ತಿನಃ ।
ಪ್ರತರ್ದನಾಃ ಶಿವಾಃ ಸತ್ಯಾ ಗಣಾ ದ್ವಾದಶ ವೈ ಸ್ಮೃತಾಃ ॥ ೨೪ ॥

---

೨೧. ಸ್ವಾರೋಚಿಷಮನ್ವಂತರದಲ್ಲಿ ಮನುವಿಗೆ ಕ್ಷತ್ರಿಯರೂ, ವೈಶ್ಯರೂ ಉತ್ಪನ್ನರಾದರು ಸಪ್ತರ್ಷಿಗಳಿಗೆ ಬ್ರಾಹ್ಮಣಾದಿಗಳು ಸಂಭವಿಸಿದರು. ಇದೇ ಈ ಮನ್ವಂತರದ ಸಾರವಾದ ವಿಚಾರವು. ಇದನ್ನು ಸಂಕ್ಷೇಪವಾಗಿ ತಿಳಿಸಿರುವೆನು. ವಿಸ್ತಾರವಾಗಿ ಹೇಳಲಿಲ್ಲವೆಂದು ಹೇಳಿದನು

೨೨. ಇತರ ವಿಷಯಗಳು ಸ್ವಾಯಂಭುವಮನ್ವಂತರದಂತೆಯೇ ಇರುತ್ತದೆ ಎಂದು ತಿಳಿಯಬೇಕು. ಇದನ್ನು ವಿಸ್ತಾರವಾಗಿ ಹೇಳಬೇಕಾದರೆ ನೂರಾರು ವರ್ಷ ಗಳೂ ಸಾಲದು. ಇದನ್ನು ಸ್ವಾರೋಚಿಷಮನ್ವಂತರದಲ್ಲಿಯೂ ಪುನಃ ಹೇಳಿದರೆ ಪುನರುಕ್ತಿಯಾಗುವುದು. ಆದುದರಿಂದ ಇಲ್ಲಿ ಪ್ರತಿಯೊಂದು ವಂಶವನ್ನೂ ನಿರೂಪಿಸು ವುದು ಅಸಾಧ್ಯವಾಗಿದೆ.

೨೩. ಹೀಗೆ ಸ್ವಾರೋಚಿಷಮನ್ವಂತರವು ಕಳೆಯಲು ಕ್ರಮವಾಗಿ ಮೂರನೆಯ ಔತ್ತಮಮನ್ವಂತರವು ಉಂಟಾಗುವುದು. ಆ ಔತ್ತಮಮನ್ವಂತರದಲ್ಲಿ ಐದೇ ದೇವತೆಗಳ ಗಣಗಳು ಇರುತ್ತವೆ. ಅವುಗಳನ್ನು ಈಗ ತಿಳಿಸುವೆನು ಕೇಳಿರಿ ಎಂದು ಸೂತ ಮುನಿಯು ಹೇಳಿದನು.

೨೪-೨೫. ಈ ಔತ್ತಮಮನ್ವಂತರದಲ್ಲಿ ಸುಧಾಮಾನರು, ದೇವತೆಗಳು ವಶ ವರ್ತಿಗಳಾದ ಇತರರೂ, ಪ್ರತರ್ದನರು ಶಿವರು, ಸತ್ಯರು, ಎಂಬುದಾಗಿ ಹನ್ನೆರಡು ಗಣ

ಸತ್ಯೋ ಧೃತಿರ್ದಮೋ ದಾಂತಃ ಕ್ಷಮಃ ಕ್ಷಾಮೋ ಭೃತಿಃ ಶುಚಿಃ ।
ಈಷೋರ್ಜಾಶ್ಚ ತಥಾ ಜ್ಯೇಷ್ಠೋ ವಪುಷ್ಮಾಂಶ್ಚೈವ ದ್ವಾದಶ ॥
ಇತ್ಯೇತೇ ನಾಮಭಿಃ ಕ್ರಾಂತಾಃ ಸುಧಾಮಾನಸ್ತು ದ್ವಾದಶ ॥ ೨೫ ॥

ಸಹಸ್ರಧಾರೋ ವಿಶ್ವಾತ್ಮಾ ಶಮಿತಾರೋ ಬೃಹದ್ವಸುಃ ।
ವಿಶ್ವಧಾ ವಿಶ್ವಕರ್ಮಾ ಚ ಮನಸ್ವಂತೋ ವಿರಾಡ್ಯಶಃ । ॥ ೨೬ ॥

ಜ್ಯೋತಿಶ್ಚೈವ ವಿಭಾವ್ಯಶ್ಚ ಕೀರ್ತಿಮಾನ್ ವಂಶಕಾರಿಣಃ ।
ಅನ್ಯಾನಾರಾಧಿತೇ ದೇವೋ ವಸುಧಿಷ್ಣೋ ವಿವಸ್ವಸುಃ ॥ ೨೭ ॥

ದಿನಕ್ರತುಃ ಸುಧರ್ಮಾ ಚ ಧೃತವರ್ಮಾ ಯಶಸ್ವಿನಃ ।
ಕೇತುಮಾಂಶ್ಚೈವ ಇತ್ಯೇತೇ ಕೀರ್ತಿತಾಸ್ತು ಪ್ರತರ್ದನಾಃ ॥ ೨೮ ॥

ಹಂಸಸ್ವರೋಽಹಿಹಾ ಚೈವ ಪ್ರತರ್ದನಯಶಸ್ಕರೌ ।
ಸುದಾನೋ ವಸುದಾನಶ್ಚ ಸುಮಂಜಸವಿಷಾವುಭೌ ॥ ೨೯ ॥

ಜಂತುವಾಹಯತಿಶ್ಚೈವ ಸುವಿತ್ತಸುನಯಸ್ತಥಾ ।
ಶಿವಾ ಹ್ಯೇತೇ ತು ವಿಜ್ಞೇಯಾ ಯಜ್ಞಿಯಾ ದ್ವಾದಶಾಪರಾಃ ॥ ೩೦ ॥

---

ಗಳು ಲೋಕವಿಖ್ಯಾತವಾಗಿದ್ದರು. ಅವರಲ್ಲಿ ಸುಧಾಮಾನರು ಸತ್ಯ, ಧೃತಿ, ದಮ, ದಾಂತ, ಕ್ಷಮ, ಕ್ಷಾಮ, ಭೃತಿ, ಶುಚಿ, ಈಷೋರ್ಜ, ಜ್ಯೇಷ್ಠ, ವಪುಷ್ಮಂತ, ಎಂಬ ದ್ವಾದಶನಾಮಗಳಿಂದ ಪ್ರಸಿದ್ಧರಾಗಿರುವರು.

೨೬-೨೮. ಸಹಸ್ರಧಾರ, ವಿಶ್ವಾತ್ಮಾನ, ಶಮಿತಾರ, ಬೃಹದ್ವಸು, ವಿಶ್ವಧಾತಾರ, ವಿಶ್ವಕರ್ಮ, ಮನಸ್ವಂತ, ವಿರಾಡ್ಯಶಸ, ಜ್ಯೋತಿ, ವಿಭಾವ್ಯ, ಕೀರ್ತಿಮಂತ, ವಂಶ ಕಾರಿ ಪೂಜ್ಯನಾದ ವಸುಧಿಷ್ಣ, ವಿವಸ್ವಸು, ದಿನಕ್ರತು, ಸುಧರ್ಮಾಣ, ಧೃತವರ್ಮ, ಯಶಸ್ವಂತ, ಕೇತುಮಂತ, ಇವರು ಪ್ರತರ್ದನನ ವಂಶದವರಾಗಿರುವರು.

೨೯-೩೦. ಹಂಸಸ್ವರ, ಅಹಿಹಾನ, ಪ್ರತರ್ದನ, ಯಶಸ್ಕರ, ಸುದಾನ, ವಸುದಾನ, ಸುಮಂಜಸ, ವಿಷ, ಜಂತುವಾಹ, ಯತಿ, ಸುವಿತ್ತ, ಸುನಯ, ಈ ಹನ್ನೆ ರಡು ಜನರೂ ಶಿವನ ವಂಶೀಕರೂ, ಯಜ್ಞಪ್ರವರ್ತಕರೂ, ಧರ್ಮಧುರೀಣರೂ ಆಗಿರುವರು.

ಸತ್ಯಾನಾಮಪಿ ನಾಮಾನಿ ನಿಬೋಧತ ಯಥಾಮತಂ ।
ದಿಕ್ಪತಿರ್ವಾಕ್ಪತಿಶ್ಚೈವ ವಿಶ್ವಃ ಶಂಭುಸ್ತಥೈವ ಚ ॥ ೩೧ ॥

ಸ ಮೃಡೀಕೋಽಧಿಪತಿಶ್ಚೈವ ವರ್ಚೋಽರ್ಥಾ ಮುಹ್ಯಸರ್ವಶಃ ।
ವಾಸವಶ್ಚ ಸದಾಶ್ವಶ್ಚ ಕ್ಷೇಮಾನಂದೌ ತಥೈವ ಚ ॥ ೩೨ ॥

ಸತ್ಯಾ ಹ್ಯೇತೇ ಪರಿಕ್ರಾಂತಾ ಯಜ್ಞಿಯಾ ದ್ವಾದಶಾಽಪರಾಃ ।
ಇತ್ಯೇತಾ ದೇವತಾ ಹ್ಯಾಸನ್ನೌತ್ತಮಸ್ಯಾಂತರೇ ಮನೋಃ ॥ ೩೩ ॥

ಅಜಶ್ಚ ಪರಶುಶ್ಚೈವ ದಿವ್ಯೋ ದಿವ್ಯೌಷಧಿರ್ನಯಃ ।
ದೇವಾನುಜಶ್ಚ ಪ್ರತಿಮೋ ಮಹೋತ್ಸಾಹೌ ಶಿಜಸ್ತಥಾ ॥ ೩೪ ॥

ವಿನೀತಶ್ಚ ಸುಕೇತುಶ್ಚ ಸುಮಿತ್ರಃ ಸುಬಲಃ ಶುಚಿಃ ।
ಔತ್ತಮಸ್ಯ ಮನೋಃ ಪುತ್ರಾಸ್ತ್ರಯೋದಶ ಮಹಾತ್ಮನಃ ॥
ಏತೇ ಕ್ಷತ್ರ ಪ್ರಣೇತಾರಸ್ತೃತೀಯಂ ಚೈತದಂತರಂ ॥ ೩೫ ॥

---

೩೧-೩೩. ಎಲೈ ಮುನಿವರ್ಯರೇ, ಈಗ ಸತ್ಯರ ನಾಮಗಳನ್ನು ಕ್ರಮವಾಗಿ ನಿರೂಪಿಸುವೆನು ಕೇಳಿರಿ. ಅವರು ದಿಕ್ಪತಿ, ವಾಕ್ಪತಿ, ವಿಶ್ವ, ಶಂಭು, ಸ್ವಮೃಡೀಕ, ಅಧಿಪ, ವರ್ಚೋಽರ್ಥಸ, ಮುಹ್ಯಸರ್ವಶ. ವಾಸವ, ಸದಾಶ್ವ, ಕ್ಷೇಮ, ಆನಂದ, ಎಂಬ ನಾಮಗಳಿಂದ ಸುಪ್ರಸಿದ್ಧರಾಗಿರುವರು. ಈ ಹನ್ನೆರಡು ಜನರೂ ಸತ್ಯನ ವಂಶದವರೂ, ಮಹಾಶೂರರೂ, ಯಾಗಪ್ರವರ್ತಕರೂ, ಧರ್ಮನಿಯಾಮಕರೂ, ಆಗಿದ್ದರು. ಮತ್ತು ಇವರು ಔತ್ತಮಮನ್ವಂತರದಲ್ಲಿ ಹನ್ನೆರಡು ದೇವತೆಗಳೆಂದು ಪ್ರಖ್ಯಾತರಾಗಿದ್ದರು.

೩೪-೩೫. ಅಜ, ಪರಶು, ದಿವ, ನೀತಿವಂತನಾದ ದಿವ್ಯೌಷಧಿ, ಅಪ್ರತಿಮನಾದ ದೇವಾನುಜ, ಮಹ, ಉತ್ಸಾಹ, ಶಿಜ, ವಿನೀತ, ಸುಕೇತು, ಸುಮಿತ್ರ, ಸುಬಲ ಶುಚಿ, ಎಂಬ ಈ ಹದಿಮೂರು ಜನರೂ ಮಹಾತ್ಮನಾದ ಔತ್ತಮಮನುಋಷಿಯ ಮಕ್ಕಳಾಗಿರುವರು. ಮಹಾತ್ಮರಾದ ಈ ಹದಿಮೂರು ಜನರೂ ಕ್ಷತ್ರಿಯರಾಗಿ ಧರ್ಮನಿಂದ ರಾಜ್ಯಪಾಲಕರಾಗಿದ್ದರು. ಇದೇ ಮೂರನೆಯ ಔತ್ತಮಮನುವಿನ ವೈಶಿಷ್ಟ್ಯವಾಗಿದೆ.

**ಔತ್ತಮೋ ಪರಿಸಂಖ್ಯಾತಃ ಸರ್ಗಃ ಸ್ವಾರೋಚಿಷೇಣ ತು ।**
**ವಿಸ್ತರಾಣೇನುಪೂರ್ವ್ಯಾ ಚ ತಾಮಸಾಸ್ತಾನ್ನಿಬೋಧತ ॥ ೩೬ ॥**

**ಚತುರ್ಥೇ ತ್ವಥ ಪರ್ಯಾಯೇ ತಾಮಸಸ್ಯಾಂತರೇ ಮನೋಃ ।**
**ಸತ್ಯಾಃ ಸ್ವರೂಪಾಃ ಸುಧಿಯೋ ಹರಯಶ್ಚತುರೋ ಗಣಾಃ ॥ ೩೭ ॥**

**ಪುಲಸ್ತ್ಯಪುತ್ರಸ್ಯ ಸುತಾಸ್ತಾಮಸಸ್ಯಾಂತರೇ ಮನೋಃ ।**
**ಗಣಸ್ತು ತೇಷಾಂ ದೇವಾನಾಮೇಕೈಕಃ ಪಂಚವಿಂಶಕಃ ॥ ೩೮ ॥**

**ಇಂದ್ರಿಯಾಣಾಂ ಶತಂ ಯದ್ಧಿ ಮುನಯಃ ಪ್ರತಿಜಾನತೇ ।**
**ಸತ್ಯಪ್ರಾಣಾಸ್ತು ಶೀರ್ಷ್ಯಣ್ಯಾಸ್ತಮಶ್ಚೈವಾಷ್ಟಮಸ್ತಥಾ ॥**
**ಇಂದ್ರಿಯಾಣಿ ತದಾ ದೇವಾ ಮನೋಸ್ತಸ್ಯಾಂತರೇ ಸ್ಮೃತಾಃ ॥ ೩೯ ॥**

---

೩೬. ಹೀಗೆ ಔತ್ತಮಮನ್ವಂತರದ ಸೃಷ್ಟಿಕ್ರಮವು, ಸ್ವಾರೋಚಿಷಮನ್ವಂತರದ ಸೃಷ್ಟಿಕ್ರಮಕ್ಕೆ ಸಮಾನವಾಗಿರುತ್ತದೆ ಈಗ ತಾಮಸಮನ್ವಂತರದ ಸೃಷ್ಟಿಕ್ರಮ ವನ್ನು ವಿಸ್ತಾರವಾಗಿಯೂ ಕ್ರಮವಾಗಿಯೂ ನಿರೂಪಿಸುವೆನು ಕೇಳಿರೆಂದನು.

೩೭. ಔತ್ತಮಮನ್ವಂತರವು ಕಳೆಯಲಾಗಿ ಕ್ರಮಪ್ರಾಪ್ತವಾದ ತಾಮಸ ಮನ್ವಂತರವು ಸರದಿಯಾಗಿ ಬರುವುದು. ಈ ತಾಮಸಮನ್ವಂತರದಲ್ಲಿ ಸತ್ಯರು, ಸ್ವರೂಪರು, ಸುಧಿಗಳು, ಹರಿಗಳು, ಎಂದು ದೇವಗಣಗಳು ನಾಲ್ಕು ಸುಪ್ರಸಿದ್ಧ ವಾಗಿರುವುವು.

೩೮. ತಾಮಸಮನ್ವಂತರದಲ್ಲಿ ಪುಲಸ್ತ್ಯಪುತ್ರನ ಕುಮಾರರಾದ ದೇವತೆಗಳ ಗಣಗಳು ಅನೇಕವಾಗಿರುವುವು. ಆ ಪ್ರತಿಯೊಂದು ದೇವಗಣದಲ್ಲಿಯೂ ಇಪ್ಪತ್ತೈದು ಜನರು ಸುಪ್ರಸಿದ್ಧರಾಗಿರುವರು.

೩೯ ತಾಮಸಮನ್ವಂತರದಲ್ಲಿ ಇಂದ್ರಿಯಾಭಿಮಾನಿದೇವತೆಗಳು ನೂರು ಸಂಖ್ಯಾಕರಾಗಿರುವರೆಂದು ಮುನಿಗಳು ಹೇಳುವರು. ಅವರು ಸತ್ಯಪ್ರಾಣರು, ಸತ್ಯ ಶಿರಸ್ಕರು, ಸತ್ಯತಮಸರೆಂದು ಪ್ರಸಿದ್ಧರಾಗಿರುವರು. ಇವರು ಎಂಟನೆಯವ ರಾಗಿರುವರು. ಹೀಗೆ ತಾಮಸಮನ್ವಂತರದಲ್ಲಿ ಇಂದ್ರಿಯಗಳೂ, ಇಂದ್ರಿಯಾಭಿಮಾನಿ ದೇವತೆಗಳೂ, ಪ್ರಸಿದ್ಧರಾಗಿರುವರು.

**ತೇಷಾಂ ಚ ಪ್ರಭುದೇವಾನಾಂ ಶಿಬಿರಿಂದ್ರಃ ಪ್ರತಾಪವಾನ್ ।**
**ಸಪ್ತರ್ಷಯೋಽಂತರೇ ಚೈವ ತಾನ್ನಿಬೋಧತ ಸತ್ತಮಾಃ ॥ ೪೦ ॥**

**ಕಾವ್ಯೋ ಹರ್ಷಸ್ತಥಾ ಚೈವ ಕಾಶ್ಯಪಃ ಪೃಥುರೇವ ಚ ।**
**ಆತ್ರೇಯಶ್ಚಾಗ್ನಿರಿತ್ಯೇವ ಜ್ಯೋತಿರ್ಧಾಮಾ ಚ ಭಾರ್ಗವಃ ॥ ೪೧ ॥**

**ಪೌಲಹೋ ವನಪೀಠಶ್ಚ ಗೋತ್ರೇ ವಾಸಿಷ್ಠ ಏವ ಚ ।**
**ಚೈತ್ರಸ್ತಥಾಪಿ ಪೌಲಸ್ತ್ಯ ಋಷಯಸ್ತಾಮಸೇಽಂತರೇ ॥ ೪೨ ॥**

**ಜನುದಂಡಸ್ತಥಾ ಶಾಂತಿರ್ನರಃ ಖ್ಯಾತಿರ್ಭಯಸ್ತಥಾ ।**
**ಪ್ರಿಯಭೃತ್ಯೋ ಹ್ಯವಕ್ಷಿಶ್ಚ ಪೃಷ್ಟಲೋಢೋ ದೃಢೋದ್ಯತಃ ॥**
**ಋತಶ್ಚ ಋತಬಂಧುಶ್ಚ ತಾಮಸಸ್ಯ ಮನೋಃ ಸುತಾಃ ॥ ೪೩ ॥**

**ಪಂಚಮೇ ತ್ವಥ ಪರ್ಯಾಯೇ ಮನೋಶ್ಚಾರಿಷ್ಣವೇಽಂತರೇ ।**
**ಗಣಾಸ್ತು ಸುಸುಮಾಖ್ಯಾತಾ ದೇವತಾನಾಂ ನಿಬೋಧತ ॥ ೪೪ ॥**

---

೪೦. ಎಲೈ ಮುನಿವರ್ಯರೇ, ಈ ತಾಮಸಮನ್ವಂತರದಲ್ಲಿ ಮೇಲೆ ನಿರೂಪಿಸಿರುವ ದೇವತೆಗಳಿಗೆ ಮಹಾಶೂರನೂ, ಅತ್ಯಂತ ಸಮರ್ಥನೂ, ಆದ ಶಿಬಿಯೇ ಇಂದ್ರನಾಗಿದ್ದನು. ಆಗ ಸಪ್ತರ್ಷಿಗಳೂ ಸುಪ್ರಸಿದ್ಧರಾಗಿರುವರು. ಅವರನ್ನು ಕ್ರಮವಾಗಿ ಹೇಳುವೆನು ಕೇಳಿರೆಂದನು.

೪೧. ಈ ತಾಮಸಮನ್ವಂತರದಲ್ಲಿ ಕಾವ್ಯ, ಹರ್ಷ, ಕಾಶ್ಯಪ, ಪೃಥು, ಆತ್ರೇಯ, ಅಗ್ನಿ, ಜ್ಯೋತಿರ್ಧಾಮ, ಭಾರ್ಗವ, ಪೌಲಹ, ವನಪೀರ, ವಸಿಷ್ಠಗೋತ್ರಜನಾದ ಚೈತ್ರ, ಪೌಲಸ್ತ್ಯ ಇವರು ಮಹರ್ಷಿಗಳಾಗಿರುವರು.

೪೨-೪೩. ತಾಮಸಮನ್ವಂತರದಲ್ಲಿ ಜನುದಂಡ, ಶಾಂತಿ, ಖ್ಯಾತಿ, ಭಯ, ಪ್ರಿಯಭೃತ್ಯ, ಅವಕ್ಷಿ, ಪೃಷ್ಟಲೋಢ, ದೃಢೋದ್ಯತ, ಋತ, ಋತಬಂಧು, ಇವರು ಮನುಪುತ್ರರೆಂದು ಪ್ರಸಿದ್ಧರಾಗಿರುವರು.

೪೪. ಹೀಗೆ ತಾಮಸಮನ್ವಂತರವು ಕಳೆದು ಹೋಗಲು, ಕ್ರಮವಾಗಿ ಐದನೆಯ ಚಾರಿಷ್ಣವಮನ್ವಂತರವು ಪ್ರಾಪ್ತವಾಯಿತು. ಆಗ ದೇವಗಣಗಳು ಸುಪ್ರಸಿದ್ಧವಾಗಿಯೂ, ಲೋಕಮಾನ್ಯವಾಗಿಯೂ ಇದ್ದುವು. ಅವುಗಳನ್ನು ನಿಮಗಾಗಿ ನಿರೂಪಿಸುವೆನು ಕೇಳಿರೆಂದನು.

ಅಮೃತಾಭಾ ಭೂತರಜೋ ವಿಕುಂಠಾಃ ಸಸುಮೇಧಸಃ ।
ಚರಿಷ್ಣೋಽಸ್ತು ಶುಭಾಃ ಪುತ್ರಾ ವಸಿಷ್ಠಸ್ಯ ಪ್ರಜಾಪತೇಃ ॥
ಚತುರ್ದಶ ಚ ಚತ್ವಾರೋ ಗಣಾಸ್ತೇಷಾಂ ತು ಭಾಸ್ವರಾಃ ॥ ೪೫ ॥

ಸ್ವತ್ರವಿಪ್ರೋಽಗ್ನಿಭಾಸಶ್ಚ ಪ್ರತ್ಯೇತಿಷ್ಯಾಮೃತಸ್ತಥಾ ।
ಸುಮತಿರ್ವಾವಿರಾವಶ್ಚ ವಾಚಿನೋದಃ ಸ್ರವಾಸ್ತಥಾ ॥ ೪೬ ॥

ಪ್ರವರಾಶೀ ಚ ವಾದಶ್ಚ ಸ್ರಾಶಶ್ಚೇತಿ ಚತುರ್ದಶ ।
ಅಮೃತಾಭಾಃ ಸ್ಮೃತಾ ಹ್ಯೇತೇ ದೇವಾಶ್ಚಾರಿಷ್ಣವೇಂತರೇ ॥ ೪೭ ॥

ಮತಿಶ್ಚ ಸುಮತಿಶ್ಚೈವ ಋತಸತ್ಯಾ ತಥೈವ ಚ ।
ಆವೃತಿರ್ವಿವೃತಿಶ್ಚೈವ ಮದೋ ವಿನಯ ಏವ ಚ ॥ ೪೮ ॥

ಜೇತಾ ಜಿಷ್ಣುಃ ಸಹಶ್ಚೈವ ದ್ಯುತಿರ್ಮಾ ಸ್ರವಸಸ್ತಥಾ ।
ಇತ್ಯೇತಾನೀಹ ನಾಮಾನಿ ಆಭೂತರಜಸಾಂ ವಿದುಃ ॥ ೪೯ ॥

---

೪೫. ಚಾರಿಷ್ಣವಮನ್ವಂತರದಲ್ಲಿ ಅಮೃತಭಾಸರು, ಭೂತರಜಸರು, ವಿಕುಂಠರು, ಸುಮೇಧಸರು, ಎಂಬುದಾಗಿ ಮಂಗಳಪ್ರದವಾದ ದೇವಗಣಗಳು ಅನೇಕ ಇದ್ದುವು. ಆಗ ವಸಿಷ್ಠಪ್ರಜಾಪತಿಯ ಸಂತಾನ ಪರಂಪರೆಗಳು ಹದಿನೆಂಟು ಭಾಗ ಗಳಾಗಿ ವಿಂಗಡಿಸಲ್ಪಟ್ಟು ದೇದೀಪ್ಯಮಾನಗಳಾಗಿರುವುವು.

೪೬-೪೭. ಈ ಮನ್ವಂತರದಲ್ಲಿ ಸ್ವತ್ರವಿಪ್ರ, ಅಗ್ನಿಭಾಸ, ಪ್ರತ್ಯೇತಿಷ್ಯ, ಅಮೃತ ಸುಮತಿ, ವಿರಾವ, ವಾಚಿನೋದ, ಸ್ರವಸ, ಪ್ರವಿರಾಶಿ, ವಾದ, ಪ್ರಾಶ, ಇವರೇ ಮೊದಲಾದ ಹದಿನಾಲ್ಕುದೇವತೆಗಳು ಪ್ರಸಿದ್ಧರಾಗಿರುವರು. ಚಾರಿಷ್ಣವಮನ್ವಂತರ ದಲ್ಲಿ ಈ ದೇವತೆಗಳು ಅಮೃತಾಭಾಸರೆಂದು ಪ್ರಸಿದ್ಧರಾಗಿರುವರು.

೪೮-೪೯. ಚಾರಿಷ್ಣವಮನ್ವಂತರದಲ್ಲಿದ್ದ ಮೇಲೆ ನಿರೂಪಿತವಾಗಿರುವ ಹದಿ ನಾಲ್ಕು ದೇವತೆಗಳಿಗೆ ಮತಿ, ಸುಮತಿ, ಋತ, ಸತ್ಯ, ಆವೃತಿ, ವಿವೃತಿ, ಮದ, ವಿನಯ, ಜೇತಾರ, ಜಿಷ್ಣು, ಸಹ, ದ್ಯುತಿಮಂತ, ಸ್ರವಸ, ಇವೇ ಮೊದಲಾದ ನಾಮಗಳು ಆಭೂತರಜಸರಿಗೆ (ಪ್ರಲಯಕಾಲದವರೆಗೂ) ಸುಪ್ರಸಿದ್ಧಗಳಾಗಿರುವುವು.

ವೃಷಭೇತ್ತಾ ಜಯೋ ಭೀಮಃ ಶುಚಿರ್ದಾಂತೋ ಯಶೋ ದಮಃ ।
ನಾಥೋ ವಿದ್ವಾನಜೇಯಶ್ಚ ಕೃಶೋ ಗೌರೋ ಧ್ರುವಸ್ತಥಾ ॥
ಕೀರ್ತಿತಾಸ್ತು ವಿಕುಂಠಾ ವೈ ಸುಮೇಧಾಸ್ತು ನಿಬೋಧತ ॥ ೫೦ ॥

ಮೇಧಾ ಮೇಧಾತಿಥಿಶ್ಚೈವ ಸತ್ಯಮೇಧಾಸ್ತಥೈವ ಚ ।
ಪೃಶ್ನಿಮೇಧಾಲ್ಪಮೇಧಾಶ್ಚ ಭೂಯೋ ಮೇಧಾದಯಃ ಪ್ರಭುಃ ॥ ೫೧ ॥

ದೀಪ್ತಿಮೇಧಾ ಯಶೋಮೇಧಾಃ ಸ್ಥಿರಮೇಧಾಸ್ತಥೈವ ಚ ।
ಸರ್ವಮೇಧಾಶ್ವಮೇಧಾಶ್ಚ ಪ್ರತಿಮೇಧಾಶ್ಚ ಯಃ ಸ್ಮೃತಃ ॥
ಮೇಧಾವಾನ್ ಮೇಧಹರ್ತಾ ಚ ಕೀರ್ತಿತಾಸ್ತು ಸುಮೇಧಸಃ ॥ ೫೨ ॥

ವಿಭುರಿಂದ್ರಸ್ತದಾ ತೇಷಾಮಾಸೀದ್ವಿಕ್ರಾಂತ ಪೌರುಷಃ ।
ಪೌಲಸ್ತ್ಯೋ ವೇದಬಾಹುಶ್ಚ ಯಜುರ್ನಾಮಾ ಚ ಕಾಶ್ಯಪಃ ॥ ೫೩ ॥

---

೫೦. ವೃಷಭೇತ್ತಾರ, ಜಯ, ಭೀಮ, ಶುಚಿ, ದಾಂತ, ಯಶಸ್ಸು, ದಮ, ನಾದ, ವಿದ್ವಾಂಸ, ಅಜೇಯ, ಕೃಶ, ಗೌರ, ಧ್ರುವ ಈ ದೇವತೆಗಳು ವಿಕುಂಠನ ವಂಶಜರೆಂದು, ವೈಕುಂಠರೆಂದು ಪ್ರಖ್ಯಾತರಾಗಿರುವರು. ತರುವಾಯ ಸುಮೇಧಸರ ವಿಷಯಗಳನ್ನು ತಿಳಿಸುವೆನು ಕೇಳಿ.

೫೧-೫೨. ಮೇಧಸ, ಮೇಧಾತಿಥಿ, ಸತ್ಯಮೇಧಸ, ಪೃಶ್ನಿಮೇಧಸ, ಅಲ್ಪಮೇಧಸ, ಭೂಯೋಮೇಧಸ, ಸರ್ವಮೇಧಸ, ದೀಪ್ತಿಮೇಧಸ, ಯಶೋಮೇಧಸ ಸರ್ವಮೇಧಸ, ಅಶ್ವಮೇಧಸ, ಪ್ರತಿಮೇಧಸ, ಮೇಧಾವಂತ, ಮೇಧಹರ್ತ ಇವರು ಸುಮೇಧಸರವಂಶದವರಾಗಿರುವರು.

೫೩-೫೪. ಆಗ ಅವರಿಗೆ ಅತಿಪರಾಕ್ರಮಿಯಾದ ವಿಭುವೇ ಇಂದ್ರನಾಗಿದ್ದನು. ತರುವಾಯ ರೈವತಮನ್ವಂತರದಲ್ಲಿ ಪುಲಸ್ತ್ಯನ ಪುತ್ರನಾದ ವೇದಬಾಹು, ಕಶ್ಯಪನ ಗೋತ್ರಜನಾದ ಯಜುಸ್ಸು, ಅಂಗಿರಸನ ಕುಮಾರನಾದ ಹಿರಣ್ಯರೋಮ, ಭೃಗು

ಹಿರಣ್ಯರೋಮಾಂಗಿರಸೋ ವೇದಶ್ರೀಶ್ಚೈವ ಭಾರ್ಗವಃ ।
ಊರ್ಧ್ವಬಾಹುಶ್ಚ ವಾಸಿಷ್ಠಃ ಪರ್ಜನ್ಯಃ ಪೌಲಹಸ್ತಥಾ ॥
ಸತ್ಯನೇತ್ರಸ್ತಥಾತ್ರೇಯ ಋಷಯೋ ರೈವತಾಂತರೇ ॥ ೩೪ ॥

ಮಹಾಪುರಾಣಸಂಭಾವ್ಯಃ ಪ್ರತ್ಯಂಗಪರಹಾ ಶುಚಿಃ ।
ಬಲಬಂಧುರ್ನಿರಾಮಿತ್ರಃ ಕೇತುಭೃಂಗೋ ದೃಢವ್ರತಃ ॥
ಚರಿಷ್ಣವಸ್ಯ ಪುತ್ರಾಸ್ತೇ ಪಂಚಮಂ ಚೈತದಂತರಂ ॥ ೩೫ ॥

ಸ್ವಾರೋಚಿಷೋತ್ತಮಶ್ಚೈವ ತಾಮಸೋ ರೈವತಸ್ತಥಾ ।
ಪ್ರಿಯವ್ರತಾನ್ವಯಾ ಹ್ಯೇತೇ ಚತ್ವಾರೋ ಮನವಸ್ತಥಾ ॥ ೩೬ ॥

ಷಷ್ಠೇ ಖಲ್ವಥ ಪರ್ಯಾಯೇ ದೇವಾ ಯೇ ಚಾಕ್ಷುಷೇಂತರೇ ।
ಆದ್ಯಾಃ ಪ್ರಸೂತಾ ಭಾವ್ಯಾಶ್ಚ ಪೃಥುಕಾಶ್ಚ ದಿವೌಕಸಃ ॥
ಮಹಾನುಭಾವಲೇಖಾಶ್ಚ ಪಂಚ ದೇವಗಣಾಃ ಸ್ಮೃತಾಃ ॥ ೩೭ ॥

---

ಕುಲೋತ್ಪನ್ನನಾದ ವೇದಶ್ರೀಯು, ವಸಿಷ್ಠವಂಶಜನಾದ ಊರ್ಧ್ವಬಾಹುವು, ಪುಲಹ ವಂಶಪ್ರಸೂತನಾದ ಪರ್ಜನ್ಯ, ಅತಿಗೋತ್ರಸಂಭೂತನಾದ ಸತ್ಯನೇತ್ರ ಇವರು ಮಹರ್ಷಿಗಳೆಂದು ಪ್ರಖ್ಯಾತರಾಗಿದ್ದರು.

೩೫. ಮಹಾಪುರಾಣಪ್ರತಿಪಾದ್ಯನೂ, ಜಿತೇಂದ್ರಿಯನೂ, ಶತ್ರುನಾಶಕನೂ ಆದ ಶುಚಿಯು, ಬಲಬಂಧುವು, ನಿರಾಮಿತ್ರನು, ಕೇತುಭೃಂಗನು, ದೃಢವ್ರತನು ಇವರು ಚಾರಿಷ್ಣವಮನುವಿನ ಪುತ್ರರಾಗಿರುವರು. ಇದೇ ಐದನೆಯ ಮನ್ವಂತರಕ್ಕೂ, ಚಾರಿಷ್ಣವಮನ್ವಂತರಕ್ಕೂ ಇರುವ ಭೇದವಾಗಿದೆ.

೩೬. ಸ್ವಾರೋಚಿಷ, ಉತ್ತಮ, ತಾಮಸ, ರೈವತರೆಂಬ ಈ ನಾಲ್ವರು ವಸುಗಳೂ ಪ್ರಿಯವ್ರತಮಹಾರಾಜನ ವಂಶದವರಾಗಿರುವರು.

೩೭. ಅನಂತರ ಕ್ರಮಪ್ರಾಪ್ತವಾದ ಐದನೆಯ ಚಾಕ್ಷುಷಮನ್ವಂತರದಲ್ಲಿ ಪೂರ್ವಕಲ್ಪದಲ್ಲಿದ್ದ ದೇವತೆಗಳೇ ಪುನಃ ಉತ್ಪನ್ನರಾದರು. ಜನ್ಯರಾದ ಆ ದೇವತೆಗಳು ಆದ್ಯರು, ಭಾವ್ಯರು, ಪ್ರಸೂತರು, ಪೃಥುಕರು, ಮಹಾನುಭಾವರಾದ ಲೇಖರು ಎಂದು ಐದು ದೇವಗಣಗಳಾಗಿ ಪ್ರಖ್ಯಾತರಾದರು.

ದಿವೌಕಸಃ ಸರ್ಗ ಏಷ ಪ್ರೋಚ್ಯತೇ ಮಾತೃನಾಮಭಿಃ ।
ಅತ್ರೇಃ ಪುತ್ರಸ್ಯ ನಪ್ತಾರ ಆರಣ್ಯಸ್ಯ ಪ್ರಜಾಪತೇಃ ॥

ಗಣಾಶ್ಚ ತೇಷಾಂ ದೇವಾನಾಮೇಕೈಕೋ ಹ್ಯಷ್ಟಕಃ ಸ್ಮೃತಃ ॥ ೫೮ ॥
ಅಂತರಿಕ್ಷೋ ವಸುಹಯೋ ಹ್ಯತಿಥಿಶ್ಚ ಪ್ರಿಯವ್ರತಃ ।
ಶ್ರೋತಾ ಮಂತಾ ಸುಮಂತ್ರಾ ಚ ಆದ್ಯಾ ಹ್ಯೇತೇ ಪ್ರಕೀರ್ತಿತಾಃ ॥ ೫೯ ॥

ಶ್ಯೇನಭದ್ರಸ್ತಥಾ ಪಶ್ಯಃ ಪಥ್ಯನೇತ್ರೋ ಮಹಾಯಶಾಃ ।
ಸುಮನಾಶ್ಚ ಸುವೇತಾಶ್ಚ ರೈವತಃ ಸುಪ್ರಚೇತಸಃ ॥
ದ್ಯುತಿಶ್ಚೈವ ಮಹಾಸತ್ವಃ ಪ್ರಸೂತಾಃ ಪರಿಕೀರ್ತಿತಾಃ ॥ ೬೦ ॥

ವಿಜಯಃ ಸುಜಯಶ್ಚೈವ ಮನೋದ್ಯಾನೌ ತಥೈವ ಚ ।
ಸುಮತಿಃ ಸುಪರಿಶ್ಚೈವ ವಿಜ್ಞಾತೋಽರ್ಥಪತಿಶ್ಚ ಯಃ ॥
ಭಾವ್ಯಾ ಹ್ಯೇತೇ ಸ್ಮೃತಾ ದೇವಾಃ ಪೃಥುಕಾಂಸ್ತು ನಿಬೋಧತ ॥ ೬೧ ॥

---

೫೮. ಇದು ದೇವತೆಗಳ ಸೃಷ್ಟಿಕ್ರಮವಾಗಿದೆ. ಆ ದೇವತೆಗಳು ತಮ್ಮ ಮಾತೃನಾಮಗಳಿಂದಲೇ ಪ್ರಖ್ಯಾತರಾಗಿರುವರು. ಅತ್ರಿಯ ಪುತ್ರನಾದ ಅರಣ್ಯಪ್ರಜಾಪತಿಯ ಮೊಮ್ಮಕ್ಕಳಾದ ಯಾವ ದೇವತೆಗಳ ಗಣಗಳಿವೆಯೋ ಅವು ಒಂದೊಂದೂ ಪ್ರತ್ಯೇಕವಾಗಿ ಎಂಟೆಂಟು ಭಾಗಗಳಾಗಿವೆ

೫೯. ಆ ಗಣಗಳಲ್ಲಿ ಅಂತರಿಕ್ಷ, ವಸುಹಯ, ಅತಿಥಿ, ಪ್ರಿಯವ್ರತ, ಶ್ರೋತ, ಮಂತ, ಸುಮಂತ, ಇವರು (ಆದ್ಯರ) ಮೊದಲನೆಯ ಪಂಗಡದವರಾಗಿರುವರು.

೬೦. ಶ್ಯೇನಭದ್ರ, ಪಶ್ಯ, ಪಥ್ಯನೇತ್ರ, ಸುಮನಸ, ಸುವೇತಸ, ರೈವತ, ಪ್ರಚೇತಸ, ದ್ಯುತಿ, ಎಂಬ ಮಹಾಕೀರ್ತಿವಂತರಾದ ಇವರು ಪ್ರಸೂತನ ವಂಶಜರಾಗಿರುವರು.

೬೧. ವಿಜಯ, ಸುಜಯ, ಮನೋದ್ಯಾನರು, ಸುಮತಿ, ಸುಪರಿ, ವಿಜ್ಞಾತ, ಅರ್ಥಪತಿ, ಎಂಬ ಈ ಎಂಟು ಜನರೂ ಭಾವ್ಯರೆಂದು ಪ್ರಖ್ಯಾತರಾಗಿರುವರು. ಈಗ ಪೃಥುಕರನ್ನು ನಿರೂಪಿಸುವೆನು ಕೇಳಿರೆಂದನು.

ಅಜಿಷ್ಠಃ ಶಾಕ್ಯನೋ ದೇವೋ ವಾನಪೃಷ್ಠಸ್ತಥೈವ ಚ ।
ಶಾಂಕರಃ ಸತ್ಯಧೃಷ್ಣುಶ್ಚ ವಿಷ್ಣುಶ್ಚ ವಿಜಯಸ್ತಥಾ ॥
ಅಜಿತಶ್ಚ ಮಹಾಭಾಗಃ ಪೃಥುಕಾಸ್ತೇ ದಿವೌಕಸಃ ॥ ೬೨ ॥

ಲೇಖಾಂಸ್ತಥಾ ಪ್ರವಕ್ಷ್ಯಾಮಿ ಬ್ರುವತೋ ಮೇ ನಿಬೋಧತ ।
ಮನೋಜವಃ ಪ್ರಘಾಸಸ್ತು ಪ್ರಚೇತಾಸ್ತು ಮಹಾಯಶಾಃ ॥ ೬೩ ॥

ವಾತೋ ಧ್ರುವಕ್ಷಿತಿಶ್ಚೈವ ಅದ್ಭುತಶ್ಚೈವ ವೀರ್ಯವಾನ್ ।
ಅವನೋ ಬೃಹಸ್ಪತಿಶ್ಚೈವ ಲೇಖಾಃ ಸಂಪರಿಕೀರ್ತಿತಾಃ ॥ ೬೪ ॥

ಮನೋಜವೋ ಮಹಾವೀರ್ಯಸ್ತೇಷಾಮಿಂದ್ರಸ್ತದಾಭವತ್ ।
ಉನ್ನತೋ ಭಾರ್ಗವಶ್ಚೈವ ಹವಿಷ್ಮಾನ್ನಂಗಿರಃ ಸುತಃ ॥ ೬೫ ॥

ಸುಧಾಮಾ ಕಾಶ್ಯಪಶ್ಚೈವ ವಾಸಿಷ್ಠೋ ವಿರಜಸ್ತಥಾ ।
ಅತಿಮಾನಶ್ಚ ಪೌಲಸ್ತ್ಯಃ ಸಹಿಷ್ಣುಃ ಪೌಲಹಸ್ತಥಾ ॥
ಮಧುರಾತ್ರೇಯ ಇತ್ಯೇತೇ ಸಪ್ತ ವೈ ಚಾಕ್ಷುಷೇಽಂತರೇ ॥ ೬೬ ॥

---

೬೨. ಅಜಿಷ್ಟ, ಶಾಕ್ಯನ, ವಾನಪೃಷ್ಠ, ಶಾಂಕರ, ಸತ್ಯಧೃಷ್ಣು, ವಿಷ್ಣು, ವಿಜಯ, ಅಜಿತವೆಂಬ ಮಹಾನುಭಾವರಾದ ದೇವತೆಗಳು ಪೃಥುಕರೆಂದು ಪ್ರಸಿದ್ಧರಾಗಿರುವರು.

೬೩-೬೪. ಎಲೈ ಮುನಿವರ್ಯರೇ, ಈಗ ಲೇಖರ ವಿಷಯಗಳನ್ನು ನಿರೂಪಿಸುವೆನು ಕೇಳಿರಿ. ಮನೋಜವ, ಪ್ರಘಾಸ, ಪ್ರಚೇತಸ, ಕೀರ್ತಿವಂತನಾದ ವಾತ, ಧ್ರುವಕ್ಷಿತಿ, ಶೂರನಾದ ಅದ್ಭುತ, ಅವನ, ಮತ್ತು ಬೃಹಸ್ಪತಿ, ಈ ಎಂಟು ದೇವತೆಗಳೂ ಲೇಖರೆಂದು ಪ್ರಖ್ಯಾತರಾಗಿರುವರು.

೬೫-೬೬. ಅತ್ಯಂತ ಶೂರನಾದ ಮನೋಜವನು ಅವರಿಗೆ ಇಂದ್ರನಾಗಿರುವನು. ಚಾಕ್ಷುಷಮನ್ವಂತರದಲ್ಲಿ ಭೃಗುಪುತ್ರನಾದ ಉನ್ನತನು, ಅಂಗಿರಸನ ಕುಮಾರನಾದ ಹವಿಷ್ಮಂತನು, ಕಶ್ಯಪನ ಸೂನುವಾದ ಸುಧಾಮನು, ವಸಿಷ್ಠನ ಆತ್ಮಜನಾದ ವಿರಜನು, ಪುಲಸ್ತ್ಯನ ತನೂಜನಾದ ಅತಿಮಾನನು, ಪುಲಹನ ಮಗನಾದ ಸಹಿಷ್ಣುವು, ಅತ್ರಿಜನಾದ ಮದುವೆಂಬುವನು, ಈ ಏಳು ಜನರೂ ಮಹರ್ಷಿಗಳಾಗಿರುವರು.

ಊರುಃ ಪೂರುಃ ಶತದ್ಯುಮ್ನಸ್ತಪಸ್ವೀ ಸತ್ಯವಾಕ್ ಕೃತಿಃ ।
ಅಗ್ನಿಷ್ಟುದತಿರಾತ್ರಶ್ಚ ಸುದ್ಯುಮ್ನಶ್ಚೇತಿ ತೇ ನವ ॥ ೬೭ ॥

ಅಭಿಮನ್ಯುಶ್ಚ ದಶಮೋ ನಾಡ್ವಲೇಯಾ ಮನೋಃ ಸುತಾಃ ।
ಚಾಕ್ಷುಷಸ್ಯ ಸುತಾ ಹ್ಯೇತೇ ಷಷ್ಠಂ ಚೈವ ತದಂತರಂ ॥ ೬೮ ॥

ವೈವಸ್ವತೇನ ಸಂಖ್ಯಾತಸ್ತಸ್ಯ ಸರ್ಗೋ ಮಹಾತ್ಮನಃ ।
ವಿಸ್ತರೇಣಾನುಪೂರ್ವ್ಯಾ ಚ ಕಥಿತಂ ವೈ ಮಯಾ ದ್ವಿಜಾಃ ॥ ೬೯ ॥

॥ ಋಷಯ ಊಚುಃ ॥

ಚಾಕ್ಷುಷಸ್ಯ ತು ದಾಯಾದಃ ಸಂಭೂತಃ ಕಶ್ಯಪಾನ್ವಯೇ ।
ತಸ್ಯಾನ್ವವಾಯೇ ಯೇಽಪ್ಯನ್ಯೇ ತನ್ನೋ ಬ್ರೂಹಿ ಯಥಾತಥಂ ॥ ೭೦ ॥

---

೬೭-೬೮. ಈ ಚಾಕ್ಷುಷಮನ್ವಂತರದಲ್ಲಿ ಊರು, ಪೂರು, ಶತದ್ಯುಮ್ನ, ತಪಸ್ವಿ, ಸತ್ಯವಾಕ್ಕು, ಕೃತಿ, ಅಗ್ನಿಷ್ಟುದ, ಅತಿರಾತ್ರ, ಸುದ್ಯುಮ್ನ, ಹತ್ತನೆಯವನಾದ ಅಭಿಮನ್ಯುವು ಇವರು ನಾಡ್ವಲೇಯರೆಂದೂ ಮನುಪುತ್ರರೆಂದೂ ಪ್ರಸಿದ್ಧರಾಗಿರುವರು ಇವರು ಚಾಕ್ಷುಷಮನ್ವಂತರದಲ್ಲಿ ಮನುಕುಮಾರರಾಗಿರುವರು. ಅದರ ತರುವಾಯ ಆರನೆಯ ಮನ್ವಂತರವು ಕ್ರಮವಾಗಿ ಬರುವುದು.

೬೯. ಮಹಾತ್ಮನಾದ ಚಾಕ್ಷುಷಮನುವಿನ ಸೃಷ್ಟಿಕ್ರಮವು ವೈವಸ್ವತಮನುವಿನ ಸೃಷ್ಟಿಗೆ ಅನುಗುಣವಾಗಿದೆ. ಎಲೈ ವಿಪ್ರೋತ್ತಮರೇ, ಆ ಸೃಷ್ಟಿಕ್ರಮವನ್ನು ವಿಸ್ತಾರವಾಗಿಯೂ, ಕ್ರಮವಾಗಿಯೂ, ನಿರೂಪಿಸಿರುವೆನೆಂದನು.

೭೦. ಋಷಿಗಳು ಹೇಳಿದರು:—ಎಲೈ ಸೂತಪುರಾಣಿಕನೇ, ಚಾಕ್ಷುಷ ಮನ್ವಂತರದಲ್ಲಿ ಕಶ್ಯಪರ ವಂಶದಲ್ಲಿ ಜ್ಞಾತಿಗಳು ಉತ್ಪನ್ನವಾದವೆಂದು ಹೇಳಿದಿರಿ. ಅವರ ವಂಶದಲ್ಲಿ ಮತ್ತೆ ಯಾರು ಯಾರು ಉತ್ಪನ್ನರಾದರು, ಈ ವಿಷಯವನ್ನು ನಮಗೆ ತಿಳಿಸಬೇಕೆಂದು ಕೇಳಿದರು.

## ॥ ಸೂತ ಉವಾಚ ॥

**ಚಾಕ್ಷುಷಸ್ಯ ನಿಸರ್ಗಂ ತು ಸಮಾಸಾಚ್ಛೃಣುತರ್ಹಥ ।**
**ತಸ್ಯಾನವಾಯೇ ಸಂಭೂತಃ ಪೃಥುರ್ವೈನ್ಯಃ ಪ್ರತಾಪವಾನ್ ॥ ೭೧ ॥**

**ಪ್ರಜಾನಾಂ ಪತಯಶ್ಚಾನ್ಯೇ ದಕ್ಷಃ ಪ್ರಾಚೇತಸಸ್ತಥಾ ।**
**ಉತ್ತಾನಪಾದಂ ಜಗ್ರಾಹ ಪುತ್ರಮತ್ರಿಃ ಪ್ರಜಾಪತಿಃ ॥ ೭೨ ॥**

**ದಕ್ಷಕಸ್ಯ ತು ಪುತ್ರೋಽಸ್ಯ ರಾಜಾ ಹ್ಯಾಸೀತ್ ಪ್ರಜಾಪತೇಃ ।**
**ಸ್ವಾಯಂಭುವೇನ ಮನುನಾ ದತ್ತೋಽತ್ರೇಃ ಕಾರಣಂ ಪ್ರತಿ ॥ ೭೩ ॥**

**ಮನ್ವಂತರಮಥಾಸಾದ್ಯ ಭವಿಷ್ಯಂ ಚಾಕ್ಷುಷಸ್ಯ ಹ ।**
**ಷಷ್ಠಂ ತದನುವಕ್ಷ್ಯಾಮಿ ಉಪೋದ್ಘಾತೇನ ವೈ ದ್ವಿಜಾಃ ॥ ೭೪ ॥**

---

೭೧. ಸೂತಮುನಿಯು ಹೇಳಿದನು :—ಎಲೈ ವಿಪ್ರೋತ್ತಮರೇ, ಚಾಕ್ಷುಷ ಮನ್ವಂತರದ ಸೃಷ್ಟಿಕ್ರಮವನ್ನು ಸಂಕ್ಷೇಪವಾಗಿ ಹೇಳುವೆನು ಕೇಳಿರಿ. ಆ ವಂಶದಲ್ಲಿ ಪರಾಕ್ರಮಿಯೂ ವೇನರಾಯನ ಪುತ್ರನೂ ಆದ ವೃಥುಮಹಾರಾಜನು ಉತ್ಪನ್ನ ನಾದನು.

೭೨. ಆ ಮನ್ವಂತರದಲ್ಲಿ ವೃಥುರಾಜನಂತೆ ಇತರರಾದ ಪ್ರಜಾಪತಿಗಳೂ ಪ್ರಚೇತಸಪುತ್ರನಾದ ದಕ್ಷಪ್ರಜಾಪತಿಯೂ ಉದ್ಭವಿಸಿದರು. ಕುಲಪತಿಗಳಾದ ಅತ್ರಿ ಮಹರ್ಷಿಗಳಿಗೆ ಧಾರ್ಮಿಕನಾದ ಉತ್ತಾನಪಾದರಾಜನು ಪುತ್ರನಾಗಿ ಜನಿಸಿದನು.

೭೩. ಇಂತಹ ದಕ್ಷಪ್ರಜಾಪತಿಗೆ ಉತ್ತಮನಾದ ರಾಜನು ಪುತ್ರನಾಗಿ ಜನಿಸಿ ದನು. ಸ್ವಾಯಂಭುವಮನುವು ಆ ಪುತ್ರನನ್ನು ಕಾರಣಾಂತರದಿಂದ ಅತ್ರಿಮಹರ್ಷಿ ಗಳಿಗೆ ಕೊಟ್ಟನು.

೭೪. ಮೊದಲು ಬೇರೊಂದು ಮನುವಿನ ವಿಷಯಗಳನ್ನು ಹೇಳಿ ತರುವಾಯ ಭಾವಿಯೂ ಆರನೆಯದೂ ಆದ ಚಾಕ್ಷುಷಮನ್ವಂತರದ ಸಂಗತಿಗಳನ್ನು ಉಪೋದ್ಘಾತ ಸಂಗತಿಯಿಂದ ಹೇಳುವೆನು ಕೇಳಿರೆಂದನು.

ಉತ್ತಾನಪಾದಾಚ್ಚತುರಾ ಸೂನೃತಾ ವಿತ್ತ ಭಾವಿನೀ ।
ಉತ್ಪನ್ನಾ ಚಾಧಿಧರ್ಮೇಣ ಧ್ರುವಸ್ಯ ಜನನೀ ಶುಭಾ ॥
ಧರ್ಮಸ್ಯ ಪತ್ನ್ಯಾಂ ಲಕ್ಷ್ಮ್ಯಾಂ ವೈ ಉತ್ಪನ್ನಾ ಸಾ ಶುಚಿಸ್ಮಿತಾ ॥ ೭೫ ॥

ಧ್ರುವಂ ಚ ಕೀರ್ತಿಮಂತಂ ಚ ಅಯಸ್ಮಂತಂ ವಸುಂ ತಥಾ ।
ಉತ್ತಾನಪಾದೋಽಜನಯತ್ ಕನ್ಯೇ ದ್ವೇ ಚ ಶುಚಿಸ್ಮಿತೇ ॥
ಮನಸ್ವಿನೀಂ ಸ್ವರಾಂ ಚೈವ ತಯೋಃ ಪುತ್ರಾಃ ಪ್ರಕೀರ್ತಿತಾಃ ॥ ೭೬ ॥

ಧ್ರುವೋ ವರ್ಷಸಹಸ್ರಾಣಿ ದಶ ದಿವ್ಯಾನಿ ವೀರ್ಯವಾನ್ ।
ತಪಸ್ತೇಪೇ ನಿರಾಹಾರಃ ಪ್ರಾರ್ಥಯನ್ ವಿಪುಲಂ ಯಶಃ ॥ ೭೭ ॥

ತ್ರೇತಾಯುಗೇ ತು ಪ್ರಥಮೇ ಪೌತ್ರಃ ಸ್ವಾಯಂಭುವಸ್ಯ ಸಃ ।
ಆತ್ಮಾನಂ ಧಾರಯನ್ ಯೋಗಾತ್ ಪ್ರಾರ್ಥಯನ್ ಸುಮಹದ್ಯಶಃ ॥ ೭೮ ॥

---

೭೫. ಧರ್ಮಪತ್ನಿಯಾದ ಲಕ್ಷ್ಮೀದೇವಿಯಲ್ಲಿ ಸುಂದರಿಯೂ, ಮಂಗಳಾಂಗಿಯೂ ಸತ್ಯವಂತಳೂ, ಚತುರಳೂ, ಮಂದಹಾಸಯುಕ್ತಳೂ, ದ್ರವ್ಯಾಭಿಮಾನಿಯೂ, ಧ್ರುವ ರಾಜನ ತಾಯಿಯೂ ಆದ ಸುನೀತಿಯು ಉತ್ತಾನಪಾದರಾಜನಿಗೆ ಭಾರ್ಯಳಾಗಿದ್ದಳು. ಆಕೆಯು ಧರ್ಮದೇವತೆಯ ಪುತ್ರಿಯಾಗಿದ್ದಳು.

೭೬. ಉತ್ತಾನಪಾದರಾಯನು ಸುನೀತಿಯಲ್ಲಿ ಧ್ರುವ, ಕೀರ್ತಿಮಂತ, ಅಯಸ್ಮಂತ ವಸುವೆಂಬ ನಾಲ್ಕುಜನ ಗಂಡುಮಕ್ಕಳನ್ನೂ, ಮನಸ್ವಿನೀ ಸ್ವರಾ ಎಂಬ ಇಬ್ಬರು ಪುತ್ರಿಯರನ್ನೂ ಪಡೆದನು. ಆ ಹೆಣ್ಣುಮಕ್ಕಳಿಗೆ ಕೀರ್ತಿವಂತರಾದ ಅನೇಕ ಕುಮಾರರು ಉತ್ಪನ್ನರಾದರು.

೭೭. ಅತ್ಯಂತ ಶೂರನಾದ ಧ್ರುವರಾಜನು ಮಹತ್ತಾದ ಕೀರ್ತಿಯನ್ನು ಪಡೆಯುವುದಕ್ಕಾಗಿ ಹತ್ತುಸಾವಿರ ದಿವ್ಯಸಹಸ್ರವರ್ಷಗಳವರೆಗೂ ನಿರಾಹಾರನಾಗಿ ತಪಸ್ಸನ್ನು ಮಾಡಿದನು.

೭೮. ಪ್ರಥಮ ತ್ರೇತಾಯುಗದಲ್ಲಿ ಸ್ವಾಯಂಭುವಮನುವಿನ ಪೌತ್ರನೂ, ಉತ್ತಾನಪಾದರಾಯನ ಮಗನೂ ಆದ ಧ್ರುವ ಮಹಾರಾಜನು ಮಹಾಕೀರ್ತಿಯನ್ನು ಪಡೆಯುವುದಕ್ಕಾಗಿ ಯೋಗಾರೂಢನಾಗಿ ಪರಮಾತ್ಮನನ್ನು ಧ್ಯಾನಮಾಡಿದನು.

ತಸ್ಮೈ ಬ್ರಹ್ಮಾ ದದೌ ಪ್ರೀತೋ ಜ್ಯೋತಿಷಾಂ ಸ್ಥಾನಮುತ್ತಮಂ ।
ಆಭೂತಸಂಪ್ಲವಂ ಹೃದ್ಯಮಸ್ತೋದಯವಿವರ್ಜಿತಂ ॥ ೭೯ ॥

ತಸ್ಯಾತಿಮಾತ್ರಾಮೃದ್ಧಿಂ ಚ ಮಹಿಮಾನಂ ನಿರೀಕ್ಷ್ಯ ಹ ।
ದೈತ್ಯಾಸುರಾಣಾಮಾಚಾರ್ಯಃ ಶ್ಲೋಕಮಪ್ಯುಶನಾ ಜಗೌ ॥ ೮೦ ॥

ಅಹೋಽಸ್ಯ ತಪಸೋ ವೀರ್ಯಮಹೋ ಶ್ರುತಮಹೋ ಹುತಂ ।
ಸ್ಥಿತಾಃ ಸಪ್ತರ್ಷಯಃ ಕೃತ್ವಾ ಯದೇನಮುಪರಿ ಧ್ರುವಂ ॥
ಧ್ರುವೇ ದಿವಂ ಸಮಾಸಕ್ತಮೀಶ್ವರಃ ಸ ದಿವಸ್ಪತಿಃ ॥ ೮೧ ॥

ಧ್ರುವಾತ್ಪುಷ್ಟಿಂ ಚ ಭವ್ಯಂ ಚ ಭೂಮಿಃ ಸಾ ಸುಷುವೇ ನೃಪೌ ।
ಸ್ವಾಂ ಛಾಯಾಮಾಹ ವೈ ಪುಷ್ಟಿರ್ಭವ ನಾರೀ ತು ತಾಂ ವಿಭುಃ ॥ ೮೨ ॥

---

೭೯. ಅವನ ತಪಸ್ಸಿನಿಂದ ಪ್ರೀತನಾದ ಬ್ರಹ್ಮದೇವನು ಜ್ಯೋತಿರ್ಮಂಡಲದಲ್ಲಿ ಅತ್ಯುತ್ತಮವೂ, ಮನೋಹರವೂ, ವೃದ್ಧಿಹ್ರಾಸರಹಿತವೂ, ಅತ್ಯಂತ ಸ್ಥಿರವೂ, ಆದ ಧ್ರುವಪದವಿಯನ್ನು ಅವನಿಗೆ ಕೊಟ್ಟನು.

೮೦. ಜ್ಞಾನಿಗಳೂ ದೈತ್ಯದಾನವರ ಗುರುಗಳೂ ಆದ ಶುಕ್ರಾಚಾರ್ಯರು ಆ ಧ್ರುವಮಹಾರಾಜನ ಅತ್ಯಧಿಕವಾದ ತಪಃಸಮೃದ್ಧಿಯನ್ನೂ ಮಹಾಮಹಿಮೆಯನ್ನೂ ನೋಡಿ ವಕ್ಷ್ಯಮಾಣರೀತಿಯಿಂದ ಶ್ಲೋಕಗಳ ಮೂಲಕ ವರ್ಣಿಸಿದರು.

೮೧. ಮಹಾಸ್ಥಿರಚಿತ್ತನಾದ ಈ ಧ್ರುವರಾಯನ ತಪಃಶಕ್ತಿಯೂ, ಅವನ ಜ್ಞಾನವೂ, ಹೋಮದ ಪ್ರಭಾವವೂ, ಭಗವನ್ನಿಷ್ಠತೆಯೂ ಅತ್ಯತಿಶಯವಾಗಿದೆ. ಏಕೆಂದರ, ಈ ಧ್ರುವನು ತನ್ನ ತಪೋಮಹಿಮೆಯಿಂದ ಸಪ್ತರ್ಷಿಮಂಡಲದ ಮೇಲ್ಭಾಗದಲ್ಲಿ ಹೊಳೆಯುತ್ತಿರುವನು ಆ ಸ್ವರ್ಗಲೋಕವೇ ಧ್ರುವನದಾಗಿದೆ. ಇವನೇ ಸ್ವರ್ಗಪತಿಯೂ ಇಂದ್ರನೂ ಆಗಿರುವನೆಂದು ಶುಕ್ರಾಚಾರ್ಯನು ಧ್ರುವವನ್ನು ಹೊಗಳಿದನು.

೮೨. ಭೂದೇವಿಯು ಧ್ರುವರಾಯನ ಅನುಗ್ರಹದಿಂದ ಪುಷ್ಟಿ ಭವ್ಯರೆಂಬ ಇಬ್ಬರು ಮಕ್ಕಳನ್ನು ಪಡೆದಳು. ತರುವಾಯ ಧ್ರುವಮಹಾರಾಜನ ಪುತ್ರನೂ ರಾಜನೂ ಆದ ಪುಷ್ಟಿಯು ತನ್ನ ಛಾಯೆಯನ್ನು ಕುರಿತು ನೀನು ನಾರಿಯಾಗೆಂದು ಆಶಿಸಿದನು.

**ಸತ್ಯಾಭಿವ್ಯಾಹೃತೇ ತಸ್ಯ ಸದ್ಯಃ ಸ್ತ್ರೀ ಸಾಽಭವತ್ತದಾ ।**
**ದಿವ್ಯಸಂಹನನಾಚ್ಛಾಯಾ ದಿವ್ಯಾಭರಣಭೂಷಿತಾ ॥ ೮೩ ॥**

**ಛಾಯಾಯಾಂ ಪುಷ್ಟಿರಾಧತ್ತ ಪಂಚ ಪುತ್ರಾನಕಲ್ಮಷಾನ್ ।**
**ಪ್ರಾಚೀನಗರ್ಭಂ ವೃಷಕಂ ವೃಕಂ ಚ ವೃಕಲಂ ಧೃತಿಂ ॥ ೮೪ ॥**

**ಪತ್ನೀ ಪ್ರಾಚೀನಗರ್ಭಸ್ಯ ಭೂವರ್ಚಾ ಸುಷುವೇ ನೃಪಂ ।**
**ನಾಮ್ನೋದಾರಥಿಯಂ ಪುತ್ರಮಿಂದ್ರೋ ಯಃ ಪೂರ್ವಜನ್ಮನಿ ॥ ೮೫ ॥**

**ಸಂವತ್ಸರಸಹಸ್ರಾಂತೇ ಸಕೃದಾಹಾರ ಮಾಹರತ್ ।**
**ಏವಂ ಮನ್ವಂತರಂ ಯುಕ್ತಮಿಂದ್ರತ್ವಂ ಪ್ರಾಪ್ತವಾನ್ವಿಭುಃ ॥ ೮೬ ॥**

---

೮೩. ಹೀಗೆ ಪುಷ್ಟಿಮಹಾರಾಜನು ಸತ್ಯವಾಗಿ ಮಾತನಾಡಲಾಗಿ, ಆ ಭೂದೇವಿಯು ತತ್‌ಕ್ಷಣದಲ್ಲಿಯೇ ದಿವ್ಯಾವಯವಗಳಿಂದ ಯುಕ್ತಳೂ, ದಿವ್ಯಾಭರಣ ಭೂಷಿತಳೂ ಆದ ದಿವ್ಯನಾರೀಮಣಿಯಾದಳು.

೮೪. ಅನಂತರ ಆ ಪುಷ್ಟಿಮಹಾರಾಜನು ತನ್ನ ಛಾಯಾದೇವಿಯಲ್ಲಿ ಪ್ರಾಚೀನಗರ್ಭ, ವೃಷಕ, ವೃಕ, ವೃಕಲ ಮತ್ತು ಧೃತಿಯೆಂಬ ನಿರ್ದೋಷಿಗಳೂ, ಶೂರರೂ ಆದ ಐದುಜನ ಮಕ್ಕಳನ್ನು ಪಡೆದನು.

೮೫. ಅವರಲ್ಲಿ ಪ್ರಾಚೀನಗರ್ಭನ ಪತ್ನಿಯಾದ ಭೂವರ್ಚೆಯೆಂಬುವಳು ಉದಾರಥಿಯನೆಂದು ಪುತ್ರನನ್ನು ಪಡೆದಳು. ಈ ಉದಾರಥಿಯನೇ ಪೂರ್ವಜನ್ಮದಲ್ಲಿ ಇಂದ್ರನಾಗಿ ಅವತರಿಸಿ ಸ್ವರ್ಗಕ್ಕೆ ಅಧಿಪತಿಯಾಗಿದ್ದನು.

೮೬. ವಿಭುವೆಂಬುವನು ಒಂದುಸಾವಿರ ವರ್ಷಗಳಿಗೆ ಒಂದುಸಲ ಆಹಾರ ವನ್ನು ತೆಗೆದುಕೊಳ್ಳುತ್ತಾ ಒಂದು ಮನುಕಲ್ಪದವರೆಗೂ ಘೋರವಾದ ತಪಸ್ಸನ್ನು ಮಾಡಿದನು. ಕೊನೆಗೆ ಅವನು ಇಂದ್ರಪದವಿಯನ್ನು ಹೊಂದಿದನು.

ಉದಾರಧೇಃ ಸುತಂ ಭದ್ರಾಜಿನಯತ್ಸಾ ದಿವಂಜಯಂ ।
ರಿಪುಂ ರಿಪುಂಜಯಂ ಜಜ್ಞೇ ವರಾಂಗೀ ಸಾ ದಿವಂಜಯಾತ್ ॥ ೮೭ ॥

ರಿಪೋರಾಧತ್ತ ಬೃಹತೀ ಚಾಕ್ಷುಷಂ ಸರ್ವತೇಜಸಂ ।
ವ್ಯಜೀಜನತ್ ಪುಷ್ಕರಿಣ್ಯಾಂ ವಾರುಣ್ಯಾಂ ಚಾಕ್ಷುಷೋ ಮನುಂ ॥
ಪ್ರಜಾಪತೇರಾತ್ಮಜಾಯಾಮರಣ್ಯಸ್ಯ ಮಹಾತ್ಮನಃ ॥ ೮೮ ॥

ಮನೋರಜಾಯಂತ ದಶ ನಡ್ವಲಾಯಾಂ ಶುಭಾಃ ಸುತಾಃ ।
ಕನ್ಯಾಯಾಂ ವೈ ಮಹಾಭಾಗಾ ವೈರಾಜಸ್ಯ ಪ್ರಜಾಪತೇಃ ॥ ೮೯ ॥

ಊರುಃ ಪೂರುಃ ಶತದ್ಯುಮ್ನಸ್ತಪಸ್ವೀ ಸತ್ಯವಾಕ್ ರವಿಃ ।
ಅಗ್ನಿಷ್ಟುದತಿರಾತ್ರಶ್ಚ ಸುದ್ಯುಮ್ನಶ್ಚೇತಿ ತೇ ನವ ॥
ಅಭಿಮನ್ಯುಶ್ಚ ದಶಮೋ ನಡ್ವಲಾಯಾಂ ಮನೋಃ ಸುತಾಃ ॥ ೯೦ ॥

---

೮೭. ಉದಧಿಯ ಪತ್ನಿಯಾದ ಭದ್ರಾ ಎಂಬುವಳು ದಿವಂಜಯನೆಂಬ ಪುತ್ರರನ್ನು ಪಡೆದಳು. ಆ ದಿವಂಜಯನ ಪತ್ನಿಯಾದ ಆ ಸುಂದರಾಂಗಿಯು ರಿಪು ರಿಪುಂಜಯರೆಂಬ ಇಬ್ಬರು ಮಕ್ಕಳನ್ನು ಪಡೆದಳು.

೮೮. ಆ ರಿಪುವಿಗೆ ಬೃಹತಿಯೆಂಬುವಳಲ್ಲಿ ಮಹಾತೇಜಸ್ವಿಯಾದ ಚಾಕ್ಷುಷನೆಂಬ ಪುತ್ರನು ಉತ್ಪನ್ನನಾದನು. ಆ ಚಾಕ್ಷುಷನಿಗೆ ಮಹಾತ್ಮನೂ ಪ್ರಜಾಪತಿಯೂ ಆದ ಅರಣ್ಯನ ಕುಮಾರಿಯೂ, ಪುಷ್ಕರಿಣೀನಾಮಕಳೂ ಆದ ವಾರುಣಿಯಲ್ಲಿ ವಸುವೆಂಬ ಕುಮಾರನು ಉದ್ಭವಿಸಿದನು.

೮೯. ಎಲೈ ಮಹಾತ್ಮನಾದ ಶಾಂಶಪಾಯನನೇ, ಅಂತಹ ಮನುವಿಗೆ ವೈರಾಜ ಪ್ರಜಾಪತಿಯ ಕುಮಾರಿಯಾದ ನಡ್ವಲಾದೇವಿಯಲ್ಲಿ ಮಂಗಳಕರರಾದ ಹತ್ತು ಜನ ಗಂಡುಮಕ್ಕಳು ಹುಟ್ಟಿದರು.

೯೦. ಮನುಮಹಾರಾಜನಿಗೆ ನಡ್ವಲಾದೇವಿಯಲ್ಲಿ ಊರು ಪೂರು, ಶತದ್ಯುಮ್ನ, ತಪಸ್ವಿ, ಸತ್ಯವಾಕ್ಕು, ಕವಿ, ಅಗ್ನಿಷ್ಟುತ, ಅತಿರಾತ್ರ, ಸುದ್ಯುಮ್ನ, ಅಭಿಮನ್ಯುವೆಂಬ ಹತ್ತು ಜನ ಸತ್ಪುತ್ರರು ಹುಟ್ಟಿದರು.

**ಊರೋರಜನಯತ್ ಪುತ್ರಾನ್ ಷಡಾಗ್ನೇಯಿಯಾ ಮಹಾಪ್ರಭಾನ್ ।**
**ಅಂಗಂ ಸುಮನಸಂ ಸ್ವಾತಿಂ ಕ್ರತುಮಂಗಿರಸಂ ಶಿವಂ ॥ ೯೧ ॥**

**ಅಂಗಾತ್ ಸುನೀಥಾಪತ್ಯಂ ವೈ ವೇನಮೇಕಂ ವ್ಯಜಾಯತ ।**
**ಅಪಚಾರೇಣ ವೇನಸ್ಯ ಪ್ರಕೋಪಃ ಸುಮಹಾನಭೂತ್ ॥ ೯೨ ॥**

**ಪ್ರಜಾರ್ಥಮೃಷಯಸ್ತಸ್ಯ ಮಮಂಥುರ್ದಕ್ಷಿಣಂ ಕರಂ ।**
**ವೇನಸ್ಯ ಪಾಣೌ ಮಥಿತೇ ಸಂಬಭೂವ ಮಹಾನ್ನೃಪಃ ॥**
**ವೈನ್ಯೋ ನಾಮ ಮಹೀಪಾಲೋ ಯಃ ಪೃಥುಃ ಪರಿಕೀರ್ತಿತಃ ॥ ೯೩ ॥**

**ಸ ಧನ್ವೀ ಕವಚೀ ಜಾತಸ್ತೇಜಸಾ ಪ್ರಜ್ವಲನ್ನಿವ ।**
**ಪೃಥುರ್ವೈನ್ಯಃ ಸರ್ವಲೋಕಾನ್ ರರಕ್ಷ ಕ್ಷತ್ರಪೂರ್ವಜಃ ॥ ೯೪ ॥**

---

೯೧. ಊರು ರಾಜನು ಆಗ್ನೇಯಿಯಲ್ಲಿ ಅಂಗ, ಸುಮನಸ, ಸ್ವಾತಿ, ಕ್ರತು, ಅಂಗಿರಸ, ಶಿವ ಎಂಬ ಅತ್ಯಂತ ಸಮರ್ಥರಾದ ಆರುಜನ ಮಕ್ಕಳನ್ನು ಪಡೆದನು.

೯೨. ಆ ಅಂಗರಾಜನಿಗೆ ಸುನೀಥಾದೇವಿಯಲ್ಲಿ ವೇನರಾಜನೊಬ್ಬನೇ ಹುಟ್ಟಿದನು. ಆ ವೇನರಾಜನು ಅತ್ಯಂತ ದುಷ್ಟನೂ, ಪ್ರಜಾಹಿಂಸಕನೂ ಆದುದರಿಂದ ಅವನ ಮೇಲೆ ತಂದೆಯಾದ ಅಂಗರಾಜನಿಗೆ ಬಹಳ ಕೋಪವುಂಟಾಯಿತು.

೯೩. ಆ ವೇನರಾಜನಿಗೆ ಮಕ್ಕಳಿರಲಿಲ್ಲ. ಅದರಿಂದ ಮಹರ್ಷಿಗಳು ಸಂತಾನಕ್ಕಾಗಿ ಅವನ ದಕ್ಷಿಣ ಹಸ್ತವನ್ನು ಮಥನಮಾಡಿದರು. ಹೀಗೆ ಮಹರ್ಷಿಗಳು ವೇನರಾಜನ ಹಸ್ತವನ್ನು ಮಥಿಸಲಾಗಿ, ಮಹಾತ್ಮನೂ ವೈನ್ಯನಾಮಕನೂ ಮಹೀಪಾಲ ಗುಣೋಪೇತನೂ ಆದ ಪೃಥುಮಹಾರಾಜನು ಆವಿರ್ಭವಿಸಿದನು. ಅವನು ಮೂರುಲೋಕ ಪ್ರಖ್ಯಾತನೂ ಮಹಾಶೂರನೂ ಆಗಿದ್ದನು.

೯೪ ವೇನರಾಜನ ಪುತ್ರನಾದ ಆ ಪೃಥುಮಹಾರಾಜನು ಧನುರ್ಧಾರಿಯೂ, ಕವಚಧಾರಿಯೂ, ಅಗ್ನಿಯಂತೆ ಅತಿತೇಜಸ್ವಿಯೂ, ಕ್ಷಾತ್ರಧರ್ಮೋಪೇತನೂ ಆಗಿ ಸಮಸ್ತ ಲೋಕಗಳನ್ನೂ ಧರ್ಮದಿಂದ ಪಾಲಿಸುತ್ತಿದ್ದನು.

ರಾಜಸೂಯಾಭಿಷಿಕ್ತಾನಾಮಾದ್ಯಃ ಸ ವಸುಧಾಧಿಪಃ ।
ತಸ್ಯ ಸ್ತವಾರ್ಥಮುತ್ಪನ್ನೌ ನಿಪುಣೌ ಸೂತಮಾಗಧೌ ॥ ೯೫ ॥

ತೇನೇಯಂ ಗೌರ್ಮಹಾರಾಜ್ಞಾ ದುಗ್ಧಾ ಸಸ್ಯಾನಿ ಧೀಮತಾ ।
ಪ್ರಜಾನಾಂ ವೃತ್ತಿಕಾಮಾನಾಂ ದೇವೈರ್ಋಷಿಗಣೈಃ ಸಹ ॥ ೯೬ ॥

ಪಿತೃಭಿರ್ದಾನವೈಶ್ಚೈವ ಗಂಧರ್ವೈರಪ್ಸರೋಗಣೈಃ ।
ಸರ್ವೈಃ ಪುಣ್ಯಜನೈಶ್ಚೈವ ವೀರುದ್ಭಿಃ ಪರ್ವತೈಸ್ತಥಾ ॥ ೯೭ ॥

ತೇಷು ತೇಷು ತು ಪಾತ್ರೇಷು ದುಹ್ಯಮಾನಾ ವಸುಂಧರಾ ।
ಪ್ರಾದಾದ್ಯಥೇಪ್ಸಿತಂ ಕ್ಷೀರಂ ತೇನ ಲೋಕಾಂಸ್ತ್ವಧಾರಯತ್ ॥ ೯೮ ॥

---

೯೫. ಚಕ್ರವರ್ತಿಯೂ, ಸಾರ್ವಭೌಮನೂ ಆದ ಆ ಪೃಥುಮಹಾರಾಜನು ರಾಜಸೂಯಯಾಗವನ್ನು ಮಾಡಿದವರಲ್ಲಿ ಅಗ್ರಗಣ್ಯನೂ, ಲೋಕಮಾನ್ಯನೂ ಆಗಿದ್ದನು. ಆಗ ಅವನನ್ನು ಹೊಗಳುವುದಕ್ಕಾಗಿ ಅತಿನಿಪುಣರಾದ ಸೂತಮಾಗಧಿಗಳು ಉತ್ಪನ್ನರಾದರು.

೯೬–೯೭. ಮಹಾತ್ಮನಾದ ಆ ಪೃಥುಮಹಾರಾಜನು ಈ ಭೂದೇವಿಯನ್ನು ಕಾಮಧೇನುವನ್ನಾಗಿಯೂ, ಮೇರುವನ್ನು ಕರುವನ್ನಾಗಿಯೂ ಮಾಡಿಕೊಂಡು, ಪ್ರಜಗಳ ಜೀವನಕ್ಕಾಗಿ ದೇವತೆಗಳು, ಮಹರ್ಷಿಗಳು, ಪಿತೃಗಳು, ದಾನವರು, ಗಂಧರ್ವರು, ಯಕ್ಷರಾಕ್ಷಸರು, ಸಮಸ್ತವಾದ ಮರಗಿಡಬಳ್ಳಿಗಳು, ಪರ್ವತಗಳು, ಇವುಗಳ ಸಂಗಡ ಕ್ಷೀರರೂಪವಾದ ಸಸ್ಯಗಳನ್ನು ಕರೆದನು.

೯೮ ಪೃಥುಮಹಾರಾಜನು ಗೋರೂಪಿಯಾದ ಭೂಮಾತೆಯನ್ನು ಕರೆಯಲಾಗಿ ಆಯಾ ಪಾತ್ರೆಗಳಲ್ಲಿ ಅವರವರಿಗೆ ಬೇಕಾಗುವ ಸಮಸ್ತ ವಸ್ತುಗಳೂ ಯಥೇಚ್ಛವಾಗಿ ದೊರೆತವು. ಆ ಕ್ಷೀರರೂಪವಾದ ಸಮಸ್ತ ವಸ್ತುಗಳಿಂದಲೂ ಸರ್ವರಿಗೂ ಆಹಾರವನ್ನೊದಗಿಸಿ ಉದ್ಧಾರಮಾಡಿದನು.

|| ಋಷಯ ಊಚುಃ ||

ವಿಸ್ತರೇಣ ಪೃಥೋರ್ಜನ್ಮ ಕೀರ್ತಯಸ್ವ ಮಹಾಮತೇ |
ಯಥಾ ಮಹಾತ್ಮನಾ ದುಗ್ಧಾ ಪೂರ್ವಂ ತೇನ ವಸುಂಧರಾ || ೯೯ ||

ಯಥಾ ದೇವೈಶ್ಚ ನಾಗೈಶ್ಚ ಯಥಾ ಬ್ರಹ್ಮರ್ಷಿಭಿಃ ಸಹ |
ಯಥಾ ಯಕ್ಷೈಃ ಸ ಗಂಧರ್ವೈರಪ್ಸರೋಭಿರ್ಯಥಾ ಪುರಾ || ೧೦೦ ||

ತೇಷಾಂ ಪಾತ್ರ ವಿಶೇಷಾಂಶ್ಚ ದೋಗ್ಧಾರಂ ಕ್ಷೀರಮೇವ ಚ |
ತಥಾ ವತ್ಸವಿಶೇಷಾಂಶ್ಚ ತನ್ನಃ ಪ್ರಬ್ರೂಹಿ ಪೃಚ್ಛತಾಂ || ೧೦೧ ||

ಯಸ್ಮಿಂಶ್ಚ ಕಾರಣೇ ಪಾಣಿರ್ವೇನಸ್ಯ ಮಥಿತಃ ಪುರಾ |
ಕ್ರುದ್ಧೈರ್ಮಹರ್ಷಿಭಿಃ ಪೂರ್ವಂ ತತ್ ಸರ್ವಂ ಕಥಯಸ್ವ ನಃ || ೧೦೨ ||

|| ಸೂತ ಉವಾಚ ||

ವರ್ಣಯಿಷ್ಯಾಮಿ ವೋ ವಿಪ್ರಾಃ ಪೃಥೋರ್ವೈನ್ಯಸ್ಯ ಸಂಭವಂ |
ಏಕಾಗ್ರಾಃ ಪ್ರಯತಾಶ್ಚೈವ ಶುಶ್ರೂಷಧ್ವಂ ದ್ವಿಜೋತ್ತಮಾಃ || ೧೦೩ ||

---

೯೯–೧೦೧. ಋಷಿಗಳು ಹೇಳಿದರು.—ಎಲೈ ಜ್ಞಾನಿಗಳಾದ ಸೂತಪುರಾಣಿಕರೇ, ನೀನು ದಯಪಾಲಿಸಿ ಪೃಥುಮಹಾರಾಜನ ಜನನವನ್ನು ವಿಸ್ತಾರವಾಗಿ ನಿರೂಪಿಸು. ಮಹಾತ್ಮನಾದ ಈ ಪೃಥುಮಹಾರಾಜನು ಪೂರ್ವದಲ್ಲಿ ದೇವದಾನವ, ಯಕ್ಷರಾಕ್ಷಸ, ಗಂಧರ್ವ, ಉರಗ, ಅಪ್ಸರಸ, ಬ್ರಹ್ಮರ್ಷಿ ಇವರ ಸಂಗಡ ಭೂಮಿಯನ್ನು ಹೇಗೆ ಕರೆದನು? ಯಾವ ಯಾವ ಪಾತ್ರೆಗಳಲ್ಲಿ ಕರೆದನು? ಯಾರು ಕರೆದರು? ಹಾಲು ಎಂತಹುದಾಗಿತ್ತು? ಕರವು ಯಾವುದು? ಹೇಗೆ ಕರೆದನು? ಇವೇ ಮೊದಲಾದವನ್ನು ವಿಸ್ತಾರವಾಗಿ ನಿರೂಪಿಸಬೇಕೆಂದು ಕೇಳಿಕೊಂಡರು.

೧೦೨. ಎಲೈ ಮಹಾತ್ಮನೇ, ಪೂರ್ವದಲ್ಲಿ ಮಹರ್ಷಿಗಳು ವೇನರಾಜನ ಮೇಲೆ ಸಿಟ್ಟಾಗಲು ಕಾರಣವಾವುದು? ಅವನ ಹಸ್ತವನ್ನು ಮಥಿಸಲು ಮುಖ್ಯವಾದ ಉದ್ದೇಶ್ಯವೇನು? ಇವೆಲ್ಲವನ್ನೂ ವಿಸ್ತಾರವಾಗಿ ಹೇಳಬೇಕೆಂದು ಮುನಿಗಳು ಕೇಳಿದರು.

೧೦೩. ಸೂತಮುನಿಯು ಹೇಳಿದನು:—ಎಲೈ ವಿಪ್ರವರ್ಯರೇ, ನಿಮಗೋಸ್ಕರ ವೇನನ ಮಗನಾದ ಪೃಥುಮಹಾರಾಜನ ಉತ್ಪತ್ತಿಯನ್ನು ಯಥಾಸ್ಥಿತವಾಗಿ ನಿರೂಪಿಸುವೆನು. ನೀವು ಸ್ಥಿರಮನಸ್ಕರಾಗಿ ಏಕಮನಸ್ಕತೆಯಿಂದ ಕೇಳಿರೆಂದು ಹೇಳಿದನು.

ನಾಶುಚೇರ್ನಾಪಿ ಪಾಪಾಯ ನಾಶಿಷ್ಯಾಯಾಹಿತಾಯ ಚ ।
ವರ್ಣಯೇಯಮಿಮಂ ಪುಣ್ಯಂ ನಾವ್ರತಾಯ ಕಥಂಚನ || ೧೦೪ ||

ಸ್ವರ್ಗ್ಯಂ ಯಶಸ್ಯಮಾಯುಷ್ಯಂ ಪುಣ್ಯಂ ವೇದೈಶ್ಚ ಸಮ್ಮಿತಂ ।
ರಹಸ್ಯಮೃಷಿಭಿಃ ಪ್ರೋಕ್ತಂ ಶೃಣುಯಾದ್ಯೋಽನಸೂಯಕಃ || ೧೦೫ ||

ಯಶ್ಚೇಮಂ ಶ್ರಾವಯೇನ್ಮರ್ತ್ಯಃ ಪೃಥೋರ್ವೈನ್ಯಸ್ಯ ಸಂಭವಂ ।
ಬ್ರಾಹ್ಮಣೇಭ್ಯೋ ನಮಸ್ಕೃತ್ಯ ನ ಸ ಶೋಚೇತ್ಕೃತಾಕೃತಂ ||
ಗೋಪ್ತಾ ಧರ್ಮಸ್ಯ ರಾಜಾಸೌ ಬಭೂವಾತ್ರಿಸಮಃ ಪ್ರಭುಃ || ೧೦೬ ||

ಅತ್ರಿವಂಶಸಮುತ್ಪನ್ನೋ ಹ್ಯಂಗೋ ನಾಮ ಪ್ರಜಾಪತಿಃ ।
ಯಸ್ಯ ಪುತ್ರೋಽಭವದ್ವೇನೋ ನಾತ್ಯರ್ಥಂ ಧಾರ್ಮಿಕಸ್ತಥಾ || ೧೦೭ ||

---

೧೦೪. ಎಲೈ ವಿಪ್ರರೇ, ಈ ಕಥೆಯನ್ನು ಅಶುಚಿಯೂ, ಪಾಪಿಷ್ಠನೂ, ಅಹಿತನೂ, ನಿಯಮರಹಿತನೂ ಆದ ಮನುಷ್ಯನಿಗೂ, ಅವಿಧೇಯನಾದ ಶಿಷ್ಯನಿಗೂ ಎಂದಿಗೂ ಹೇಳಬಾರದು.

೧೦೫ ಯಾವ ಪುರುಷನು ದ್ವೇಷಾಸೂಯವಿಲ್ಲದೆ ಋಷಿಪ್ರೋಕ್ತವೂ, ರಹಸ್ಯವೂ, ಪುಣ್ಯಕವೂ, ವೇದಗಳಿಗೆ ಸಮವೂ ಆದ ಪೃಥುಮಹಾರಾಜನ ಕಥೆಯನ್ನು ಕೇಳುವನೋ, ಅವನಿಗೆ ಸ್ವರ್ಗಾದಿ ಸರ್ವಸೌಖ್ಯವೂ, ಆಯುರಾರೋಗ್ಯಾದಿ ಸರ್ವ ಸೌಭಾಗ್ಯವೂ ಸಿದ್ಧವಾಗುವುವು

೧೦೬. ಯಾವ ಪುರುಷನು ಆದಿಯಲ್ಲಿ ಗುರುಗಳಿಗೆ ನಮಸ್ಕಾರಮಾಡಿ, ವಿಶ್ವಾಸದಿಂದ ವೇನರಾಜನ ಕುಮಾರನಾದ ಪೃಥುಮಹಾರಾಜನ ಚರಿತ್ರೆಯನ್ನು ಸತ್ಪುರುಷರಿಗೆ ಉಪದೇಶಮಾಡುವರೋ ಅವರಿಗೆ ಎಂದಿಗೂ ದುಃಖಗಳು ಸಂಭವಿಸುವುದಿಲ್ಲ. ಆ ಪೃಥುಮಹಾರಾಜನು ಧರ್ಮವ್ಯವಸ್ಥಾಪಕನೂ, ಅತ್ರಿಮಹರ್ಷಿಗಳಿಗೆ ಸಮನಾದ ರಾಜರ್ಷಿಯೂ, ಪ್ರಜಾರಂಜಕನೂ ಆಗಿದ್ದನು.

೧೦೭–೧೦೮. ಅತ್ರಿಮಹರ್ಷಿಗಳ ವಂಶದಲ್ಲಿ ಅಂಗನೆಂಬ ಮಹಾರಾಜನು ಉತ್ಪನ್ನನಾದನು. ಅವನಿಗೆ ವೇನರಾಜನು ಪುತ್ರನಾಗಿ ಜನಿಸಿದನು. ಅವನು ಅತ್ಯಂತ ಅಧಾರ್ಮಿಕನೂ ಪ್ರಜಾಕಂಟಕನೂ ಆಗಿದ್ದನು. ಆ ವೇನನು ಯಮದೇವನ ಕುಮಾರಿ

**ಜಾತೋ ಮೃತ್ಯುಸುತಾಯಾಂ ವೈ ಸುನೀಥಾಯಾಂ ಪ್ರಜಾಪತಿಃ ।**
**ಸ ಮಾತಾಮಹದೋಷೇಣ ವೇನಃ ಕಾಲಾತ್ಮಜಾತ್ಮಜಃ ॥ ೧೦೮ ॥**

**ಸ ಧರ್ಮಂ ಪೃಷ್ಠತಃ ಕೃತ್ವಾ ಕಾಮಾಲ್ಲೋಭೇ ವ್ಯವರ್ತತ ।**
**ಸ್ಥಾಪನಂ ಸ್ಥಾಪಯಾಮಾಸ ಧರ್ಮಾಪೇತಂ ಸ ಪಾರ್ಥಿವಃ ॥ ೧೦೯ ॥**

**ವೇದಶಾಸ್ತ್ರಾಣ್ಯತಿಕ್ರಮ್ಯ ಹ್ಯಧರ್ಮೇ ನಿರತೋಽಭವತ್ ।**
**ನಿಃಸ್ವಾಧ್ಯಾಯವಷಟ್ಕಾರಾಃ ಪ್ರಜಾಸ್ತಸ್ಮಿನ್ಪ್ರಶಾಸತಿ ॥**
**ಆಸನ್ನ ಚ ಪಪುಃ ಸೋಮಂ ಹುತಂ ಯಜ್ಞೇಷು ದೇವತಾಃ ॥ ೧೧೦ ॥**

**ನ ಯಷ್ಟವ್ಯಂ ನ ಹೋತವ್ಯಮಿತಿ ತಸ್ಯ ಪ್ರಜಾಪತೇಃ ।**
**ಆಸೀತ್ ಪ್ರತಿಜ್ಞಾ ಕ್ರೂರೇಯಂ ವಿನಾಶೋ ಪ್ರತ್ಯುಪಸ್ಥಿತೇ ॥ ೧೧೧ ॥**

---

ಯಾದ ಸುನೀಥಾದೇವಿಯಲ್ಲಿ ಜನಿಸಿದನು. ತಾತನಾದ ಅಂದರೆ ತಾಯಿಯ ತಂದೆ ಯಾದ ಯಮದೇವನಲ್ಲಿದ್ದ ಕ್ರೌರ್ಯಾದಿ ದುರ್ಗುಣಗಳೇ ಮೊಮ್ಮಗನಾದ ವೇನ ರಾಜನಲ್ಲಿ ವಿಶೇಷವಾಗಿದ್ದುವು.

೧೦೯. ಅಂತಹ ವೇನರಾಜನು ಧರ್ಮಗಳನ್ನು ತ್ಯಾಗಮಾಡಿ, ಸ್ವೇಚ್ಛಾಚಾರಿ ಯಾಗಿ ಅಧರ್ಮಸ್ಥಾಪಕನೂ, ಲೋಕನಿರೋಧಿಯೂ, ಜನಕಂಟಕನೂ, ಧರ್ಮ ದ್ವೇಷಿಯೂ ಆಗಿದ್ದನು.

೧೧೦ ಆ ವೇನರಾಜನು ವೇದಶಾಸ್ತ್ರಗಳನ್ನು ಮೀರಿ, ಅಧರ್ಮದಲ್ಲಿಯೇ ಬಹಳವಾಗಿ ನಿರತನಾಗಿದ್ದನು. ಅವನು ರಾಜ್ಯವಾಳುವ ಸಮಯದಲ್ಲಿಯೇ ಯಜ್ಞ ಯಾಗಾದಿ ಸತ್ಕಾರ್ಯಗಳಿಲ್ಲದೆಯೇ ವೇದಾಧ್ಯಯನ, ಸ್ವಾಹಾಕಾರ, ವಷಟ್ಕಾರಾದಿ ಗಳು ಸುತರಾಂ ನಿಂತುಹೋದವು. ದೇವತೆಗಳು ಯಜ್ಞಾದಿಗಳಲ್ಲಿ ಕೊಡತಕ್ಕ ಹವಿರ್ಭಾಗ ಸೋಮಪಾನವಿಲ್ಲದೇ ಖಿನ್ನರಾದರು.

೧೧೧. ವೇನರಾಜನು ತಾನು ರಾಜ್ಯವಾಳುವಾಗ ಯಾವನೂ ಯಾಗವನ್ನೂ ಹೋಮವನ್ನೂ ಮಾಡಬಾರದು. ಸತ್ಕರ್ಮಾದ್ಯನುಷ್ಠಾನಗಳನ್ನೂ ಮಾಡಬಾರದೆಂದು ಕ್ರೂರವಾದ ಅಪ್ಪಣೆಯನ್ನು ಕೊಟ್ಟಿದ್ದನು. ಇದರಿಂದ ಅವನಿಗೆ ವಿನಾಶಕಾಲವು ಸಮೀಪಿಸಿತೆಂದು ಜ್ಞಾನಿಗಳು ಹೇಳಿದರು.

ಅಹಮಿಜ್ಯಶ್ಚ ಪೂಜ್ಯಶ್ಚ ಸರ್ವಯಜ್ಞೇ ದ್ವಿಜಾತಿಭಿಃ ।
ಮಯಿ ಯಜ್ಞೋ ವಿಧಾತವ್ಯೋ ಮಯಿ ಹೋತವ್ಯಮಿತ್ಯಪಿ || ೧೧೨ ||

ತಮತಿಕ್ರಾಂತಮರ್ಯಾದಮಾದದಾನಮಸಾಂಪ್ರತಂ ।
ಊಚುರ್ಮಹರ್ಷಯಃ ಸರ್ವೇ ಮರೀಚಿಪ್ರಮುಖಾಸ್ತಥಾ || ೧೧೩ ||

ವಯಂ ದೀಕ್ಷಾಂ ಪ್ರವೇಕ್ಷ್ಯಾಮಃ ಸಂವತ್ಸರಶತಾ ಬಹೂ ।
ಮಾಧರ್ಮಂ ವೇನಕಾರ್ಷೀಸ್ತ್ವಂ ನೈಷಧರ್ಮಃ ಸನಾತನಃ ||
ನಿಧನೇ ಚ ಪ್ರಸೂತೋಽಸ್ಮಿ ಪ್ರಜಾಪತಿರಸಂಶಯಃ || ೧೧೪ ||

ಪಾಲಯಿಷ್ಯೇ ಪ್ರಜಾಶ್ಚೇತಿ ತ್ವಯಾ ಪೂರ್ವಂ ಪ್ರತಿಶ್ರುತಂ ।
ತಾಂಸ್ತಥಾವಾದಿನಃ ಸರ್ವಾ ಬ್ರಹ್ಮರ್ಷೀನಬ್ರವೀತ್ತದಾ || ೧೧೫ ||

---

೧೧೨. ಬ್ರಾಹ್ಮಣಾದಿಗಳು ನನಗಾಗಿಯೇ ಯಾಗವನ್ನು ಮಾಡಬೇಕು. ಯಾಗಾದಿಗಳಲ್ಲಿ ಅಗ್ರಪೂಜೆಯನ್ನು ನನಗೇ ಮಾಡಬೇಕು. ನನಗಾಗಿಯೇ ಯಜ್ಞವನ್ನೂ ಹೋಮಾದಿಗಳನ್ನೂ ಮಾಡಬೇಕೇ ವಿನಾ ದೇವತೋದ್ದೇಶ್ಯಕವಾಗಿ ಯಜ್ಞಯಾಗಾದಿಗಳನ್ನು ಮಾಡಬಾರದೆಂದು ಅಜ್ಞಾಪಿಸಿದನು

೧೧೩. ಆಗ ಮರೀಚಿಯೇ ಮೊದಲಾದ ಮಹರ್ಷಿಗಳು ಮರ್ಯಾದಾತೀತನೂ, ಅಧರ್ಮಪ್ರವರ್ತಕನೂ, ದುರಭಿಮಾನಿಯೂ, ದುರಾಚಾರಿಯೂ ಆದ ವೇನರಾಜನಿಗೆ ಇಂತೆಂದರು

೧೧೪. ಆಗ ಮಹರ್ಷಿಗಳೆಲ್ಲರೂ ಕೂಡಿ ವೇನನನ್ನು ಕರೆದು, ಎಲೈ ವೇನ ರಾಜನೇ, ನಾವು ನೂರಾರು ವರ್ಷಗಳವರೆಗೂ ಯಾಗಾದಿಗಳಲ್ಲಿ ದೀಕ್ಷೆಯನ್ನು ಹೊಂದಿರುತ್ತೇವೆ. ನೀನು ಮಾತ್ರ ಅಧರ್ಮವನ್ನು ಆಚರಿಸಬೇಡ. ಇದು ನಿನಗೆ ಯೋಗ್ಯವಲ್ಲ. ನೀನು ಮಾಡುವುದು ಸನಾತನ ಧರ್ಮವಲ್ಲ. ಬ್ರಹ್ಮನು ನೀನು ಬೇಗನೇ ಮೃತನಾಗಬೇಕೆಂದು ನಿನಗೆ ಈ ದುರ್ಬುದ್ಧಿಯನ್ನುಂಟುಮಾಡಿರುವನೆಂದು ಹೇಳಿದರು.

೧೧೫. ಆದುದರಿಂದ ನೀನು ನಿನ್ನ ಪೂರ್ವಿಕರಂತೆ ಪ್ರಜೆಗಳನ್ನು ಧರ್ಮದಿಂದ ಪಾಲಿಸುವವನಾಗು. ಅಧರ್ಮಪ್ರವರ್ತಕನಾಗಬೇಡವೆಂದು ಮುನಿಗಳು ವೇನನಿಗೆ ಉಪದೇಶಮಾಡಿದರು. ಆಗ ವೇನನು ಹೀಗೆ ಸದುಪದೇಶಮಾಡಿದ ಮುನಿಗಳಾದ ಬ್ರಹ್ಮರ್ಷಿಗಳನ್ನು ಕುರಿತು ಇಂತೆಂದನು.

**ನ ಪ್ರಹಸ್ಯ ತು ದುರ್ಬುದ್ಧಿರಿದಂ ವಚನಕೋವಿದಃ ।**
**ಸ್ರಷ್ಟಾ ಧರ್ಮಸ್ಯ ಕಶ್ಚಾನ್ಯಃ ಶ್ರೋತವ್ಯಂ ಕಸ್ಯ ವೈ ಮಯಾ ॥ ೧೧೬ ॥**

**ವೀರ್ಯಶ್ರುತತಪಃಸತ್ಯೈರ್ಮಯಾ ವಾ ಕಃ ಸಮೋ ಭುವಿ ।**
**ಮಹಾತ್ಮಾನಮನೂನಂ ಮಾಂ ಯೂಯಂ ಜಾನೀತ ತತ್ವತಃ ॥ ೧೧೭ ॥**

**ಪ್ರಭವಃ ಸರ್ವಲೋಕಾನಾಂ ಧರ್ಮಾಣಾಂ ಚ ವಿಶೇಷತಃ ।**
**ಇಚ್ಛನ್ದಹೇಯಂ ಪೃಥಿವೀಂ ಪ್ಲಾವಯೇಯಂ ಜಲೇನ ವಾ ।**
**ಸೃಜೇಯಂ ವಾ ಗ್ರಸೇಯಂ ವಾ ನಾತ್ರ ಕಾರ್ಯಾ ವಿಚಾರಣಾ ॥ ೧೧೮ ॥**

**ಯದಾ ನ ಶಕ್ಯತೇ ಸ್ತಂಭಾನ್ಮಾನಾಚ್ಚ ಭೃಶಮೋಹಿತಃ ।**
**ಅನುನೇತುಂ ನೃಪೋ ವೇನಸ್ತತಃ ಕ್ರುದ್ಧಾ ಮಹರ್ಷಯಃ ॥ ೧೧೯ ॥**

---

೧೧೬. ಆಗ ಮಾತಿನಲ್ಲಿ ಚತುರನೂ, ದುರ್ಬುದ್ಧಿಯುಳ್ಳವನೂ ಆದ ವೇನ ರಾಜನು ಆ ಮಹರ್ಷಿಗಳ ಮಾತನ್ನು ಕೇಳಿ ನಕ್ಕು, ಹಾಸ್ಯದಿಂದ ನನಗಿಂತಲೂ ಧರ್ಮಸ್ಥಾಪಕನು ಬೇರೆಯಾಗಿ ಯಾವನಿರುವನು? ನಾನು ಯಾರ ಮಾತನ್ನು ಕೇಳಬೇಕು? ಇತ್ಯಾದಿ ಆತ್ಮಶ್ಲಾಘನೆಯನ್ನು ಮಾಡಿಕೊಂಡನು

೧೧೭ ಎಲೈ ಮಹರ್ಷಿಗಳಿರಾ, ಈ ಸಮಸ್ತ ಜಗತ್ತುಗಳಲ್ಲಿಯೂ ವೀರ್ಯ, ಜ್ಞಾನ, ತಪಸ್ಸು, ಸತ್ಯ ಇವೇ ಮೊದಲಾದ ಗುಣಗಳಿಂದ ನನಗೆ ಸಮಾನರಾದವರು ಯಾರಿರುತ್ತಾರೆ? ನೀವು ನನ್ನನ್ನು ಮಹಾನುಭಾವನೆಂದೂ, ಶೌರ್ಯವೀರ್ಯಾದಿ ಗುಣಗಳಿಂದ ಅಸದೃಶನೆಂದೂ ಭಾವಿಸಿರೆಂದು ವೇನರಾಜನು ಮುನಿಗಳಿಗೆ ಹೇಳಿದನು.

೧೧೮. ಮತ್ತು ನಾನು ಸಮಸ್ತ ಲೋಕಗಳ ಸೃಷ್ಟಿಕರ್ತನೂ ವಿಶೇಷವಾಗಿ ಸರ್ವಧರ್ಮಪ್ರವರ್ತಕನೂ ಆಗಿರುತ್ತೇನೆ. ನಾನೇನಾದರೂ ಮನಸ್ಸುಮಾಡಿದರೆ ಈ ಲೋಕವನ್ನೇ ದಹಿಸಿಬಿಡುವೆನು. ಅಥವಾ ಜಲದಲ್ಲಿ ತೇಲಿಸುವೆನು. ಹಾಗಲ್ಲದಿದ್ದರೆ ನುಂಗಬಲ್ಲೆನು. ಅಥವಾ ಸೃಷ್ಟಿಯನ್ನು ಮಾಡುವೆನು. ಈ ವಿಷಯದಲ್ಲಿ ನಿಮಗೆ ಸಂದೇಹವೇ ಬೇಕಿಲ್ಲವೆಂದನು

೧೧೯. ಈ ಮಾತುಗಳನ್ನು ಕೇಳಿದ ಮಹರ್ಷಿಗಳು ಈ ವೇನರಾಜನು ಅಹಂಭಾವ, ಮಮಕಾರ, ಮೂರ್ಖತನ ಇವೇ ಮೊದಲಾದ ದುರ್ಗುಣಗಳಿಂದ ಕೊಬ್ಬಿಹೋಗಿರುವನು. ಇವನನ್ನು ನಯ ನೀತಿಗಳಿಂದ ಸಮಾಧಾನ ಮಾಡುವುದು ಅಶಕ್ಯವೆಂದು ತಿಳಿದು ಬಹಳವಾಗಿ ಕುಪಿತರಾದರು.

**ನಿಗೃಹ್ಯಂ ತಂ ಮಹಾಬಾಹುಂ ವಿಸ್ಫುರಂತಂ ಯಥಾನಲಂ ।**
**ತತೋಽಸ್ಯ ವಾಮಹಸ್ತಂ ತೇ ಮಮಂಥುರ್ಭೃಶಕೋಪಿತಾಃ ॥ ೧೨೦ ॥**

**ತಸ್ಮಾತ್ಪ್ರಮಥ್ಯಮಾನಾದ್ವೈ ಜಜ್ಞೇ ಪೂರ್ವಮಭಿಶ್ರುತಃ ।**
**ಹ್ರಸ್ವೋಽತಿಮಾತ್ರಂ ಪುರುಷಃ ಕೃಷ್ಣಶ್ಚಾಪಿ ತಥಾ ದ್ವಿಜಾಃ ॥ ೧೨೧ ॥**

**ಸ ಭೀತಃ ಪ್ರಾಂಜಲಿಶ್ಚೈವ ಸ್ಥಿತವಾನ್ ವ್ಯಾಕುಲೇಂದ್ರಿಯಃ ।**
**ತಮಾರ್ತಂ ವಿಹ್ವಲಂ ದೃಷ್ಟ್ವಾ ನಿಷೀದೇತ್ಯಬ್ರುವನ್ ಕಿಲ ॥ ೧೨೨ ॥**

**ನಿಷಾದವಂಶಕರ್ತಾಽಸೌ ಬಭೂವಾನಂತವಿಕ್ರಮಃ ।**
**ಧೀವರಾನಸೃಜತ್ಸೋಽಪಿ ವೇನಕಲ್ಮಷಸಂಭವಾನ್ ॥ ೧೨೩ ॥**

---

೧೨೦. ಆಗ ಆ ಮಹರ್ಷಿಗಳು ಅತ್ಯಂತ ಕುಪಿತರಾಗಿ ಅಗ್ನಿಯಂತೆ ಪ್ರಜ್ವಲಿಸುವನೂ, ಮಹಾ ಶೂರನೂ ಆದ ವೇನರಾಜನನ್ನು ತಮ್ಮ ಪ್ರಭಾವದಿಂದ ನಿಗ್ರಹಿಸಿ, ಅವನ ಎಡದ ಹಸ್ತವನ್ನು ಮಥಿಸಿದರು.

೧೨೧. ಎಲೈ ವಿಪ್ರವರ್ಯರೇ ಕೇಳಿ. ಹೀಗೆ ಆ ಮಹರ್ಷಿಗಳು ಕೋಪದಿಂದ ಆ ವೇನರಾಜನನ್ನು ಹಿಡಿದು ಯಾವಾಗ ಮಥನಮಾಡಿದರೋ, ಆಗ ಬಹುಕಾಲದಿಂದ ಸುಪ್ರಸಿದ್ಧನೂ, ಅತ್ಯಂತವಾಗಿ ವಾಮನನೂ, ಕೃಷ್ಣವರ್ಣನೂ ಆದ ಪುರುಷನು ಅವತರಿಸಿದನು.

೧೨೨. ಆಗ ಆ ವೇನರಾಜನು ಅತ್ಯಂತ ಭೀತನೂ, ಖಿನ್ನಹೃದಯನೂ, ವ್ಯಾಕುಲೇಂದ್ರಿಯನೂ, ಅಂಜಲಿಬದ್ಧನೂ ಆಗಿ ಸುಮ್ಮನೆ ನಿಂತನು. ಆಗ ಮಹರ್ಷಿಗಳು ಪೀಡಿತನೂ, ಖಿನ್ನಮನಸ್ಕನೂ ಆದ ಅವನನ್ನು ನೋಡಿ ಕೂತುಕೋ ಎಂದು ಹೇಳಿದರು.

೧೨೩. ಕಿರಾತವಂಶಪ್ರವರ್ತಕನೂ, ಅನಂತವಿಕ್ರಮನೂ ಆದ ಆ ವಾಮನನು ವೇನನ ದೋಷದಿಂದ ಅವನಿಗೆ ಸಮಾನರಾದ ಅನೇಕ ಬೆಸ್ತರನ್ನು ಸೃಷ್ಟಿಸಿದನು. ಅವರು ಗುಣದೋಷಗಳಿಂದ ವೇನನಿಗೆ ಸಮಾನರಾಗಿದ್ದರು.

**ಯೇ ಚಾನ್ಯೇ ವಿಂಧ್ಯನಿಲಯಾಸ್ತುಂಬುರಾಸ್ತುವರಾಃ ಖಸಾಃ ।**
**ಅಧರ್ಮರುಚಯಶ್ಚಾಪಿ ಸಂಭೂತಾ ವೇನಕಲ್ಮಷಾತ್ ॥ ೧೨೪ ॥**

**ಪುನರ್ಮಹರ್ಷಯಸ್ತಸ್ಯ ಪಾಣಿಂ ವೇನಸ್ಯ ದಕ್ಷಿಣಂ ।**
**ಅರಣೀಮಿವ ಸಂರಂಭಾನ್ಮಮಂಥುರ್ಜಾತಮನ್ಯವಃ ॥ ೧೨೫ ॥**

**ಪೃಥುಸ್ತಸ್ಮಾತ್ ಸಮುತ್ಪನ್ನಃ ಕರಾಸ್ಫಾಲನತೇಜಸಃ ।**
**ಪೃಥೋಃ ಕರತಲಾದ್ವಾಪಿ ಯಸ್ಮಾಜ್ಜಾತಃ ಪೃಥುಸ್ತತಃ ॥**
**ದೀಪ್ಯಮಾನಃ ಸ್ವವಪುಷಾ ಸಾಕ್ಷಾದಗ್ನಿರಿವೋಜ್ವಲ ॥ ೧೨೬ ॥**

**ಆದ್ಯಮಾಜಗವಂ ನಾಮ ಧನುರ್ಗೃಹ್ಯ ಮಹಾರವಂ ।**
**ಶರಾಂಶ್ಚ ಬಿಭ್ರದ್ರಕ್ಷಾರ್ಥಂ ಕವಚಂ ಚ ಮಹಾಪ್ರಭಂ ॥ ೧೨೭ ॥**

---

೧೨೪. ಆಗ ವೇನರಾಜನ ದೋಷದಿಂದ ವಿಂಧ್ಯಪರ್ವತವಾಸಿಗಳೂ ಅಧರ್ಮ ನಿರತರೂ ಆದ ತುಂಬುರರು, ತುವರರು, ಖಸರು ಇವರೇ ಮೊದಲಾದ ಅನೇಕ ಜಾತಿಯ ಜನರು ಉತ್ಪನ್ನರಾದರು.

೧೨೫. ಅನಂತರ ಮಹರ್ಷಿಗಳು ಬಹಳ ಕೋಪದಿಂದ ವೇನರಾಜನ ಬಲ ಗೈಯನ್ನು ಅರಣಿಯನ್ನಾಗಿ ಮಾಡಿಕೊಂಡು ಅತಿ ಸಂಭ್ರಮದಿಂದ ಪುನಃ ಮಥನ ಮಾಡಿದರು.

೧೨೬. ಹೀಗೆ ಮಥನಮಾಡಲಾಗಿ ಕರಾಸ್ಫಾಲನದಿಂದುಂಟಾದ ದಿವ್ಯತೇಜ ಸ್ಸಿನಿಂದ ಪೃಥುರಾಜನು ಉತ್ಪನ್ನನಾದನು. ಆ ವೇನರಾಜನ ವಿಶಾಲವಾದ ಹಸ್ತ ದಿಂದ ಉದ್ಭವಿಸಿದ ಪೃಥುರಾಜನು ಅಗ್ನಿಯಂತೆ ಹೊಳೆಯುವ ದಿವ್ಯದೇಹದಿಂದ ಪ್ರಜ್ವಲಿಸುತ್ತಿದ್ದನು.

೧೨೭. ಹೀಗೆ ಪೃಥುರಾಜನು ಅಪೂರ್ವವಾದ ಆಜಗವವೆಂಬ ಮಹಾಧ್ವನಿ ಯುಳ್ಳ ಧನುಸ್ಸನ್ನೂ, ಬಾಣಗಳನ್ನೂ, ದಿವ್ಯವಾದ ಕವಚಕುಂಡಲಗಳನ್ನೂ ಪ್ರಜಾ ರಕ್ಷಣೆಗಳಿಗಾಗಿ ಸ್ವೀಕರಿಸಿಕೊಂಡು ಉದ್ಭವಿಸಿದನು.

**ತಸ್ಮಿಂಜ್ಜಾತೇಽಥ ಭೂತಾನಿ ಸಂಪ್ರಹೃಷ್ಟಾನಿ ಸರ್ವಶಃ ।**
**ಸಮುತ್ಪನ್ನೇ ಮಹಾರಾಜ್ಞಿ ವೇನಶ್ಚ ತ್ರಿದಿವಂ ಗತಃ ॥ ೧೨೮ ॥**

**ಸಮುತ್ಪನ್ನೇನ ರಾಜರ್ಷಿಃ ಸ ಸತ್ಪುತ್ರೇಣ ಧೀಮತಾ ।**
**ಪುರುಷವ್ಯಾಘ್ರಂ ಪುನ್ನಾಮ್ನೋ ನರಕಾತ್ತ್ರಾಯತೇ ತತಃ ॥ ೧೨೯ ॥**

**ತಂ ನದ್ಯಶ್ಚ ಸಮುದ್ರಾಶ್ಚ ರತ್ನಾನ್ಯಾದಾಯ ಸರ್ವಶಃ ।**
**ಸಮಾಗಮ್ಯ ತದಾ ವೈನ್ಯಮಭ್ಯಷಿಂಚನ್ನರಾಧಿಪಂ ॥**
**ಮಹತಾ ರಾಜರಾಜ್ಯೇನ ಮಹಾರಾಜಂ ಮಹಾದ್ಯುತಿಂ ॥ ೧೩೦ ॥**

**ಸೋಽಭಿಷಿಕ್ತೋ ಮಹಾರಾಜಾ ದೇವೈರಂಗಿರಸಃ ಸುತೈಃ ।**
**ಆದಿರಾಜೋ ಮಹಾರಾಜಃ ಪೃಥುರ್ವೈನ್ಯಃ ಪ್ರತಾಪವಾನ್ ॥ ೧೩೧ ॥**

---

೧೨೮. ಆ ಪೃಥುಮಹಾರಾಜನು ಹುಟ್ಟಲಾಗಿ ಸರ್ವಭೂತಗಳೂ ಸಂಪೂರ್ಣವಾಗಿ ಸಂತೋಷವನ್ನು ಹೊಂದಿದುವು ಈ ಪೃಥುಮಹಾರಾಜನು ಹುಟ್ಟಿದಕೂಡಲೇ ವೇನನು ಮೃತನಾಗಿ ಸ್ವರ್ಗಲೋಕವನ್ನು ಹೊಂದಿದನು.

೧೨೯. ಜ್ಞಾನಿಯೂ, ಪರಮದಯಾಳುವೂ ಆದ ಸತ್ಪುತ್ರನಿಂದ ವೇನರಾಜನು ರಾಜರ್ಷಿಯಾದನು. ಅನಂತರ ಪುರುಷಶ್ರೇಷ್ಠನಾದ ಸತ್ಪುತ್ರನಿಂದ ಪುನ್ನಾಮಕ ನರಕದಿಂದ ರಕ್ಷಿಸಲ್ಪಟ್ಟನು. ಯಾವನು ಸತ್ಕರ್ಮಾನುಷ್ಠಾನದಿಂದ ತಂದೆತಾಯಿಗಳನ್ನು ಪುನ್ನಾಮಕ ನರಕದಿಂದ ರಕ್ಷಿಸುತ್ತಾನೆಯೋ ಅವನೇ ಪುತ್ರನಾಗುವನು.

೧೩೦. ಮಹಾಶೂರನೂ, ಅತಿಕಾಂತಿವಂತನೂ, ವೇನಕುಮಾರನೂ ಆದ ಪೃಥುಮಹಾರಾಜನ ಪಟ್ಟಾಭಿಷೇಕಕಾಲದಲ್ಲಿ ನದಿಗಳೂ, ಸಮುದ್ರಗಳೂ, ರಾಜರೂ ಸಹ ಅಮೂಲ್ಯವಾದ ರತ್ನಗಳನ್ನು ತಂದು ಕಾಣಿಕೆಯಾಗಿ ಒಪ್ಪಿಸಿ ರಾಜಾಧಿರಾಜನಾದ ಪೃಥುರಾಯನನ್ನು ಬಹಳವಾಗಿ ಹೊಗಳಿದರು.

೧೩೧. ಮಹಾಪರಾಕ್ರಮಿಯೂ, ವೇನಕುಮಾರನೂ, ರಾಜಾಧಿರಾಜನೂ ಆದ ಪೃಥುಮಹಾರಾಜನು ಅಂಗಿರಸ ಮಹರ್ಷಿಗಳ ಪುತ್ರರಾದ ದೇವತೆಗಳಿಂದ ಯಥಾವಿಧಿ ಪಟ್ಟಾಭಿಷಿಕ್ತನಾಗಿ ಆದಿರಾಜನೆಂದು ಪ್ರಸಿದ್ಧನಾದನು.

**ಪಿತ್ರಾಽಪರಾಂಜಿತಾಸ್ತಸ್ಯ ಪ್ರಜಾಸ್ತೇನಾನುರಂಜಿತಾಃ ।**
**ತತೋ ರಾಜೇತಿ ನಾಮಾಸ್ಯ ಅನುರಾಗಾದಜಾಯತ || ೧೩೨ ||**

**ಆಪಸ್ತಸ್ತಂಭಿರೇ ಚಾಸ್ಯ ಸಮುದ್ರಮಭಿಯಾಸ್ಯತಃ ।**
**ಪರ್ವತಾಶ್ಚ ವಿಶೀರ್ಯಂತೇ ಧ್ವಜಭಂಗಶ್ಚ ನಾಭವತ್ || ೧೩೩ ||**

**ಅಕೃಷ್ಟಪಚ್ಯಾ ಪೃಥಿವೀ ಸಿದ್ಧ್ಯಂತ್ಯನ್ನಾನಿ ಚಿಂತಯಾ ।**
**ಸರ್ವಕಾಮದುಘಾ ಗಾವಃ ಪುಟಕೇ ಪುಟಕೇ ಮಧು || ೧೩೪ ||**

**ಏತಸ್ಮಿನ್ನೇವ ಕಾಲೇ ಚ ಯಜ್ಞೇ ಪೈತಾಮಹೇ ಶುಭೇ ।**
**ಸೂತಃ ಸುತ್ಯಾಂ ಸಮುತ್ಪನ್ನಃ ಸೌತ್ಯೇಽಹನಿ ಮಹಾಮತಿಃ ||**
**ತಸ್ಮಿನ್ನೇವ ಮಹಾಯಜ್ಞೇ ಜಜ್ಞೇ ಪ್ರಾಜ್ಞೋಽಥ ಮಾಗಧಃ || ೧೩೫ ||**

---

೧೩೨. ತಂದೆಯಾದ ವೇನರಾಜನಿಂದ ಪ್ರೀತಿಯನ್ನು ಹೊಂದದ ಪ್ರಜೆಗಳು ಪೃಥುರಾಜನಿಂದ ರಂಜಿತರಾದರು. ಆದುದರಿಂದ ಅಂದರೆ ಪ್ರಜಗಳನ್ನು ರಂಜನೆ ಮಾಡಿದ್ದರಿಂದ ರಾಜನೆಂಬ ಶಬ್ದವು ಅವನಲ್ಲಿ ಅನ್ವರ್ಥಕವಾಗಿದ್ದಿತು.

೧೩೩. ವಿಜಯ ಯಾತ್ರೆಗಾಗಿ ಪೃಥುಮಹಾರಾಜನು ಸಮುದ್ರದ ಸಮೀಪಕ್ಕೆ ಬಂದಾಗ ಸಮುದ್ರವು ಭಯಪಟ್ಟು ಚಲನೆಯಿಲ್ಲದೆ ಸ್ತಬ್ಧವಾಯಿತು. ಪರ್ವತಗಳು ಭಯದಿಂದ ಬಿರುದುಹೋದುವು. ಧ್ವಜಪತಾಕೆಗಳ ಭಂಗವಾದರೋ ಯಾವಾಗಲೂ ಆಗಲಿಲ್ಲ ಅಂದರೆ ಎಲ್ಲಿಯೂ ಪರಾಜಯವಾಗಲಿಲ್ಲ

೧೩೪. ಪೃಥುರಾಜನು ರಾಜ್ಯವನ್ನು ಆಳುತ್ತಿರುವಾಗ ಭೂಮಿಯು ಕೃಷಿ ಯಿಲ್ಲದೇ ಕೇವಲ ಸ್ಮರಣೆಮಾತ್ರದಿಂದಲೇ ಸಕಲಧಾನ್ಯಗಳನ್ನೂ ಕೊಡುತ್ತಿದ್ದಿತು. ಗೋವುಗಳು ಕಾಮಧೇನುದಿನಂತೆ ಸಕಲೇಷ್ಟಾರ್ಥದಾಯಕಗಳಾಗಿದ್ದುವು. ವೃಕ್ಷಗಳ ಪ್ರತಿಯೆಲೆಗಳಿಂದಲೂ ಜೇನುತುಪ್ಪವು ಸುರಿಯುತ್ತಿತ್ತು.

೧೩೫. ಇಂತಹ ಸುಭಿಕ್ಷಕಾಲದಲ್ಲಿಯೇ ಬ್ರಹ್ಮದೇವನ ಅತಿಪವಿತ್ರವಾದ ಯಾಗವು ಪ್ರಾರಂಭವಾಯಿತು. ಮಹಾಮತಿಯಾದ ಸೂತನು ಸೋಮಾಭಿಷೇಕ ದಿವಸದಲ್ಲಿ ಸೋಮಯಾಗವನ್ನು ಮಾಡುವಾಗ ಉದ್ಭವಿಸಿದನು. ಅದರಿಂದ ಸೂತ ನೆಂಬ ನಾಮವು ಸಂಭವಿಸಿರುತ್ತದೆ. ಅದೇ ಮಹಾಯಾಗದ ದಿವಸದಲ್ಲಿಯೇ ಜ್ಞಾನಿಯಾದ ಮಗಧರಾಜನೂ ಸಹ ಉತ್ಪನ್ನನಾದನು.

ಐಂದ್ರೇಣ ಹವಿಷಾಚಾಪಿ ಹವಿಃ ಪೃಕ್ತಂ ಬೃಹಸ್ಪತೇಃ ।
ಜುಹಾವೇಂದ್ರಾಯ ದೇವೇನ ತತಃ ಸೂತೋ ವ್ಯಜಾಯತ ॥ ೧೩೬ ॥

ಪ್ರಮಾದಸ್ತತ್ರ ಸಂಜಜ್ಞೇ ಪ್ರಾಯಶ್ಚಿತ್ತಂ ಚ ಕರ್ಮಸು ।
ಶಿಷ್ಯಹವ್ಯೇನ ಯತ್ಪೃಕ್ತಂ ಅಭಿಭೂತಂ ಗುರೋರ್ಹವಿಃ ॥
ಅಧರೋತ್ತರಚಾರೇಣ ಜಜ್ಞೇ ತದ್ವರ್ಣವೈಕೃತಂ ॥ ೧೩೭ ॥

ಯಚ್ಚ ಕ್ಷತ್ರಾತ್ಸಮಭವದ್ಬ್ರಾಹ್ಮಣ್ಯಾಂ ಹೀನಯೋನಿತಃ ।
ಸೂತಃ ಪೂರ್ವೇಣ ಸಾ ಧರ್ಮ ತುಲ್ಯಧರ್ಮಃ ಪ್ರಕೀರ್ತಿತಃ ॥ ೧೩೮ ॥

ಮಧ್ಯಮೋ ಹ್ಯೇಷ ಸೂತಸ್ಯ ಧರ್ಮಃ ಕ್ಷತ್ರೋಪಜೀವನಂ ।
ರಥನಾಗಾಶ್ವ ಚರಿತಂ ಜಘನ್ಯಂ ಚ ಚಿಕಿತ್ಸಿತಂ ॥ ೧೩೯ ॥

---

೧೩೬. ಆ ಯಾಗದಲ್ಲಿ ದೇವತೆಗಳು ಇಂದ್ರನಿಗೆ ಹವಿಸ್ಸನ್ನು ಕೊಟ್ಟರು. ಬೃಹಸ್ಪತಿಗಳ ಹವಿಸ್ಸು ಇಂದ್ರನ ಹವಿಸ್ಸಿನೊಡನೇ ಮಿಶ್ರವಾಗಿತ್ತು. ಹೀಗೆ ದೇವತೆಗಳು ಹೋಮಮಾಡಲಾಗಿ ಆಗ ಸೂತನು ಉದ್ಭವಿಸಿದನು.

೧೩೭. ಹೀಗೆ ಆ ಯಾಗದಲ್ಲಿ ಗುರುಗಳ ಹವಿಸ್ಸು ಶಿಷ್ಯರ ಹವಿಸ್ಸಿನೊಡನೆ ಮಿಶ್ರವಾದುದರಿಂದ ತಿರಸ್ಕೃತವಾಯಿತು ಅಜ್ಞಾನದಿಂದ ನಡದ ಕಾರ್ಯಕ್ಕಾಗಿ ದೇವತೆಗಳು ಪ್ರಾಯಶ್ಚಿತ್ತವನ್ನು ಆಚರಿಸಿದರು. ಆ ಯಾಗದಲ್ಲಿ ಪೂರ್ವಾಪರೀಭಾವವಾದುದರಿಂದ ವರ್ಣವ್ಯತ್ಯಾಸವಾಗಿ ಸೂತನು ಉತ್ಪನ್ನನಾದನು.

೧೩೮. ಅಯೋಗ್ಯಳಾದ ಬ್ರಾಹ್ಮಣಸ್ತ್ರೀಯಲ್ಲಿ ಕ್ಷತ್ರಿಯ ಬೀಜದಿಂದ ಯಾವನು ಹುಟ್ಟುವನೋ, ಅವನು ಪೂರ್ವವರ್ಣದ ಸಾಧರ್ಮ್ಯದಿಂದ ಸೂತನಾಗುವನು ಎಂದು ಸ್ಮೃತಿಗಳು ಘೋಷಿಸುವುವು.

೧೩೯. ಹೀಗೆ ಸೂತನು ಹುಟ್ಟಿರುವುದರಿಂದ ಕ್ಷಾತ್ರವೃತ್ತಿಯಿಂದ ಜೀವಿಸುವುದು ಅವನಿಗೆ ಮಧ್ಯಮವಾಗಿರುವುದು. ಆನೆ, ಕುದುರೆ, ರಥ ಇವುಗಳನ್ನು ನಡೆಸುವುದೇ ಅವನ ಮುಖ್ಯ ವೃತ್ತಿಯಾಗಿದೆ. ಅವನಿಗೆ ವೈದ್ಯಕರ್ಮವಾದರೋ ದೂಷ್ಯವಾದ ವೃತ್ತಿಯಾಗಿರುವುದು.

ಪೃಥೋಃ ಸ್ತವಾರ್ಥಂ ತೌ ತತ್ರ ಸಮಾಹೂತೌ ಸುರರ್ಷಿಭಿಃ ।
ತಮೂಚುರ್ಮುನಯಃ ಸರ್ವೇ ಸ್ತೂಯತಾಮೇಷ ಪಾರ್ಥಿವಃ ॥
ಕರ್ಮೈತದನುರೂಪಂ ವಾಂ ಪಾತ್ರಂ ಸ್ತೋತ್ರಸ್ಯ ಚಾಪ್ಯಯಂ ॥ ೧೪೦ ॥

ತಾವೂಚತುಸ್ತದಾ ಸರ್ವಾಂಸ್ತಾನೃಷೀನ್ ಸೂತಮಾಗಧೌ ।
ಆವಾಂ ದೇವಾನೃಷೀಂಶ್ಚೈವ ಪ್ರೀಣಯಾವಃ ಸ್ವಕರ್ಮಭಿಃ ॥ ೧೪೧ ॥

ನ ಚಾಸ್ಯ ಕರ್ಮ ವೈ ವಿದ್ಮೋ ನ ತಥಾ ಲಕ್ಷಣಂ ಯಶಃ ।
ಸ್ತೋತ್ರಂ ಯೇನಾಸ್ಯ ಕುರ್ಯಾವೋ ರಾಜ್ಞಸ್ತೇಜಸ್ವಿನೋ ದ್ವಿಜಾಃ ॥೧೪೨॥

ಋಷಿಭಿಸ್ತೌ ನಿಯುಕ್ತೌ ತು ಭವಿಷ್ಯೈಃ ಸ್ತೂಯತಾಮಿತಿ ।
ದಾನಧರ್ಮರತೋ ನಿತ್ಯಂ ಸತ್ಯವಾಕ್ ಸ ಜಿತೇಂದ್ರಿಯಃ ॥
ಜ್ಞಾನಶೀಲೋ ವದಾನ್ಯಸ್ತು ಸಂಗ್ರಾಮೇಷ್ವಪರಾಜಿತಃ ॥ ೧೪೩ ॥

---

೧೪೦. ಆಗ ದೇವರ್ಷಿಗಳು, ಸೂತಮಾಗಧರಿಬ್ಬರನ್ನೂ ಕರೆದು ಈ ಪೃಥು ಮಹಾರಾಜನನ್ನು ಹೊಗಳಿ ಎಂದು ಹೇಳಿದರು. ನೀವು ಇವನನ್ನು ಹೊಗಳುವುದು ಯೋಗ್ಯವಾದ ಕರ್ಮವಾಗಿದೆ. ಈ ಪೃಥುಮಹಾರಾಜನೂ ಸಹ ನಿಮ್ಮ ಸ್ತೋತ್ರಗಳಿಗೆ ಮುಖ್ಯಪಾತ್ರನಾಗಿರುವನು ಎಂದರು.

೧೪೧. ಆಗ ಸೂತಮಾಗಧರಿಬ್ಬರೂ, ಸಮಸ್ತರಾದ ದೇವತೆಗಳು ಮತ್ತು ಋಷಿಗಳು ಇವರನ್ನು ಕುರಿತು ಎಲೈ ದೇವರ್ಷಿಗಳಿರಾ! "ನಾವು ದೇವತೆಗಳನ್ನೂ, ಮಹರ್ಷಿಗಳನ್ನೂ ಹೊಗಳುವೆವು. ನಾವು ನಮ್ಮ ಕರ್ಮಗಳಿಂದ ದೇವರ್ಷಿಗಳನ್ನು ಪ್ರೀತಿಸುವೆವು. ಇತರರನ್ನು ಸ್ತುತಿಸುವುದು ನಮಗೆ ಅರ್ಹವಲ್ಲವೆಂದರು."

೧೪೨. ಎಲೈ ಮುನಿವರ್ಯರೇ, ನಾವು ದೇವಋಷ್ಯಾದಿಗಳನ್ನು ಸ್ತೋತ್ರ ಮಾಡುವೆವಲ್ಲದೇ ಇತರರನ್ನು ಹೊಗಳುವುದು ಸೂಕ್ತವಲ್ಲ. ಆದುದರಿಂದ ತೇಜಸ್ವಿಯಾದ ರಾಜರನ್ನೂ ನಾವು ಹೊಗಳಲಾರೆವು ಎಂದರು.

೧೪೩. ಆಗ ಮಹರ್ಷಿಗಳು ಸೂತಮಾಗಧರನ್ನು ಕರೆದು ನೀವು ಈ ಪೃಥು ಮಹಾರಾಜನನ್ನು ಸ್ತೋತ್ರಮಾಡಿ ಎಂದು ಆಜ್ಞಾಪಿಸಿದರು. ಆಗ ಅವರು ಈ ರಾಯನು ನಿತ್ಯವೂ ದಾನಧರ್ಮರಹಿತನೂ, ಸತ್ಯವಾಕ್ಯನೂ, ಜಿತೇಂದ್ರಿಯನೂ, ಜ್ಞಾನಶೀಲನೂ, ದಾನಶೌಂಡನೂ, ಯುದ್ಧದಲ್ಲಿ ಅಪರಾಜಿತನೂ ಆಗಿರುವನೆಂದು ಹೊಗಳಿದರು.

ಯಾನಿ ಕರ್ಮಾಣಿ ಕೃತವಾನ್ ಪೃಥುಶ್ಚಾಪಿ ಮಹಾಬಲಃ ।
ತಾನಿ ಶೀಲೇನ ಬದ್ಧಾನಿ ಸ್ತುವದ್ಭಿಃ ಸೂತಮಾಗಧೈಃ ॥ ೧೪೪ ॥

ತತಃ ಸ್ತವಾಂತೇ ಸುಪ್ರೀತಃ ಪೃಥುಃ ಪ್ರಾದಾತ್ ಪ್ರಜೇಶ್ವರಃ ।
ಅನೂಪದೇಶಂ ಸೂತಾಯ ಮಗಧಂ ಮಾಗಧಾಯ ಚ ॥ ೧೪೫ ॥

ತದಾ ವೈ ಪೃಥಿವೀಪಾಲಾಃ ಸ್ತೂಯಂತೇ ಸೂತಮಾಗಧೈಃ ।
ಆಶೀರ್ವಾದೈಃ ಪ್ರಬೋಧ್ಯಂತೇ ಸೂತಮಾಗಧಬಂದಿಭಿಃ ॥ ೧೪೬ ॥

ತಂ ದೃಷ್ಟ್ವಾ ಪರಮಪ್ರೀತಾಃ ಪ್ರಜಾ ಊಚುರ್ಮಹರ್ಷಯಃ ।
ಏಷ ವೋ ವೃತ್ತಿದೋ ವೈನ್ಯೋ ಭವಂತ್ವಿತಿ ನರಾಧಿಪಃ ॥ ೧೪೭ ॥

---

೧೪೪. ಮಹಾಬಲಿಷ್ಠನಾದ ಪೃಥುಮಹಾರಾಜನು ಯಾವ ಯಾವ ಕಾರ್ಯಗಳನ್ನು ಮಾಡಿರುವನೋ ಅವುಗಳೆಲ್ಲವೂ ಅವನ ಶೀಲಸ್ವಭಾವಗಳಿಗೆ ಅನುಗುಣವಾಗಿಯೇ ಇವೆ. ಇವೇ ಮೊದಲಾದ ರೀತಿಯಿಂದ ಸ್ತೋತ್ರಮಾಡಿದರು.

೧೪೫. ಹೀಗೆ ಸೂತಮಾಗಧರು ಸ್ತೋತ್ರಮಾಡಿದ ತರುವಾಯ ಸುಪ್ರೀತನೂ ಪ್ರಜೇಶನೂ ಆದ ಪೃಥುಮಹಾರಾಜನು ಸೂತನಿಗೆ ಅನೂಪದೇಶವನ್ನೂ, ಮಗಧದೇಶವನ್ನು ಮಾಗಧನಿಗೂ ಬಹುಮಾನವಾಗಿ ಕೊಟ್ಟನು.

೧೪೬. ಆ ದಿವಸದಿಂದಲೂ ಸೂತಮಾಗಧರು ರಾಜರನ್ನು ಹೊಗಳುವ ಪದ್ಧತಿಯು ಲೋಕದಲ್ಲಿ ಪ್ರಖ್ಯಾತವಾಯಿತು. ಆ ಸೂತಮಾಗಧರು ಆಶೀರ್ವಾದಗಳಿಂದ ರಾಜನನ್ನು ಹೊಗಳುವರು.

೧೪೭. ಅದನ್ನು ನೋಡಿ ಪರಮಪ್ರೀತರಾದ ಮಹರ್ಷಿಗಳು ಪ್ರಜೆಗಳಿಗೆ ಇಂತೆಂದರು. ಈ ದೇವರಾಜನ ಕುಮಾರನಾದ ಪೃಥುರಾಜನು ಸೂತಮಾಗಧರಿಗೆ ವೃತ್ತಿಗಾಗಿ ಎರಡು ದೇಶಗಳನ್ನು ಕೊಟ್ಟಿರುವನು. ಇವನು ಪರಮ ಧರ್ಮಜ್ಞನು, ಮತ್ತು ಸತ್ಯವಂತನೆಂದು ಹೊಗಳಿದರು.

ತತೋ ವೈನ್ಯಂ ಮಹಾಭಾಗಂ ಪ್ರಜಾಃ ಸಮಭಿದುದ್ರುವುಃ ।
ತ್ವನ್ನೋವೃತ್ತಿಂ ವಿಧಸ್ತ್ವೇತಿ ಮಹರ್ಷೇರ್ವಚನಾತ್ತದಾ ॥
ಸೋಽಭಿದ್ರುತಃ ಪ್ರಜಾಭಿಸ್ತು ಪ್ರಜಾಹಿತಚಿಕೀರ್ಷಯಾ ॥ ೧೪೮ ॥

ಧನುರ್ಗೃಹೀತ್ವಾ ಬಾಣಾಂಶ್ಚ ವಸುಧಾಮಾರ್ದಯದ್ಬಲೀ ।
ಅಸ್ಮಾರ್ದನಭಯಸ್ತತ್ರಾ ಗೌರ್ಭೂತ್ವಾ ಪ್ರಾದ್ರವನ್ಮಹೀ ॥ ೧೪೯ ॥

ತಾಂ ಪೃಥುರ್ಧನುರಾದಾಯ ದ್ರುವಂತೀಮನ್ವಧಾವತ ।
ಸಾ ಲೋಕಾನ್ ಬ್ರಹ್ಮಲೋಕಾದೀನ್ ಗತ್ವಾ ವೈನ್ಯಭಯಾತ್ತದಾ ॥
ದದರ್ಶ ಚಾಗ್ರತೋ ವೈನ್ಯಂ ಕಾರ್ಮುಕೋದ್ಯತಧಾರಿಣಂ ॥ ೧೫೦ ॥

ಜ್ವಲದ್ಭಿರ್ನಿಶಿತೈರ್ಬಾಣೈರ್ದೀಪ್ತತೇಜಸಮುಚ್ಛ್ರಿತಂ ।
ಮಹಾಯೋಗಂ ಮಹಾತ್ಮಾನಂ ದುರ್ಧರ್ಷಮಮರೈರಪಿ ॥ ೧೫೧ ॥

---

೧೪೮. ಮಹರ್ಷಿಗಳು ಹೀಗೆ ಹೇಳಲಾಗಿ, ಪ್ರಜೆಗಳೆಲ್ಲರೂ ಜೀವನಕ್ಕಾಗಿ ಓಡಿಹೋಗಿ ಮಹಾಭಾಗ್ಯಶಾಲಿಯಾದ ಎಲೈ ಮಹಾರಾಯನೇ ನೀನು ನಮಗೆ ಪ್ರಭುವಾಗಿದ್ದೀಯೆ ಆದುದರಿಂದ ನಮಗೆ ಜೀವನವನ್ನು ಏರ್ಪಡಿಸು ಎಂದು ಕೇಳಿ ಕೊಂಡರು.

೧೪೯. ಹೀಗೆ ಪ್ರಜೆಗಳಿಂದ ಪ್ರಾರ್ಥಿತನಾದ ರಾಜನು ಪ್ರಜೆಗಳ ಹಿತಕ್ಕಾಗಿ ಧನುರ್ಬಾಣಗಳನ್ನು ಸ್ವೀಕರಿಸಿ ಮಹಾಶೂರನಾದ ಕಾರಣ ಭೂಮಿಯನ್ನೇ ಪೀಡಿಸಿದನು. ಅದರಿಂದ ಹೆದರಿದ ಭೂದೇವಿಯು ಗೋರೂಪವನ್ನು ಧರಿಸಿ ಓಡಿಹೋದಳು.

೧೫೦. ಆಗ ಪೃಥುರಾಜನೂ ಕೂಡ ಧನುರ್ಧಾರಿಯಾಗಿ, ಓಡಿಹೋಗುವ ಭೂಮಿಯನ್ನು ಅನುಸರಿಸಿ ಹೋದನು. ಆಗ ಭೂಮಿಯು ಪೃಥುವಿನ ಭಯದಿಂದ ಬ್ರಹ್ಮಲೋಕಾದಿಗಳಿಗೆ ಹೋದರೂ ರಕ್ಷಕರಿಲ್ಲದೆ ಧನುರ್ಧಾರಿಯೂ ಅತಿಭೀಷಣನೂ ಆದ ರಾಜನು ಅಭಿಮುಖವಾಗಿ ಬರುವುದನ್ನು ನೋಡಿದಳು

೧೫೧-೧೫೨. ತ್ರಿಲೋಕವಂದಿತಳೂ, ಪೂಜ್ಯಳೂ ಆದ ಭೂದೇವಿಯು ತೀಕ್ಷ್ಣವಾದ ಧನುರ್ಬಾಣಗಳಿಂದ ಅಚ್ಯುತನಂತೆ ಪ್ರಕಾಶಕನೂ, ಮಹಾಯೋಗಿಯೂ,

**ಅಲಭಂತೀ ತದಾ ತ್ರಾಣಂ ವೈನ್ಯಮೇವಾನ್ಯಪದ್ಯತ ।**
**ಕೃತಾಂಜಲಿಪುಟಾ ದೇವೀ ಪೂಜ್ಯಾ ಲೋಕೈಸ್ತ್ರಿಭಿಃ ಸದಾ ॥ ೧೫೨ ॥**

**ಉವಾಚ ವೈನ್ಯಂ ನಾಧರ್ಮಂ ಸ್ತ್ರೀವಧೇ ಪರಿಪಶ್ಯಸಿ ।**
**ಕಥಂ ಧಾರಯಿತಾ ಚಾಸಿ ಪ್ರಜಾ ರಾಜನ್ಮಯಾ ವಿನಾ ॥ ೧೫೩ ॥**

**ಮಯಿ ಲೋಕಾಃ ಸ್ಥಿತಾಃ ರಾಜನ್ ಮಯೇದಂ ಧಾರ್ಯತೇ ಜಗತ್ ।**
**ಮದ್ಕೃತೇ ಚ ವಿನಶ್ಯೇಯುಃ ಪ್ರಜಾಃ ಪಾರ್ಥಿವಸತ್ತಮ ॥ ೧೫೪ ॥**

**ನ ಮಾಮರ್ಹಸಿ ವೈ ಹಂತುಂ ಶ್ರೇಯಶ್ಚೇತ್ವಂ ಚಿಕೀರ್ಷಸಿ ।**
**ಪ್ರಜಾನಾಂ ಪೃಥಿವೀಪಾಲ ಶೃಣು ಚೇದಂ ವಚೋ ಮಮ ॥ ೧೫೫ ॥**

**ಉಪಾಯತಃ ಸಮಾರಬ್ಧಾಃ ಸರ್ವೇ ಸಿಧ್ಯಂತ್ಯುಪಕ್ರಮಾಃ ।**
**ಹತ್ವಾಪಿ ಮಾಂ ನ ಶಕ್ತಸ್ತ್ವಂ ಪ್ರಜಾನಾಂ ಪಾಲನೇ ನೃಪ ॥ ೧೫೬ ॥**

---

ಮಹಾತ್ಮನೂ, ದೇವತೆಗಳಿಂದಲೂ ಹೆದರಿಸಲಶಕ್ಯನೂ ಆದ ವೈನನನ್ನು ಬಿಟ್ಟರೆ ಬೇರೇ ರಕ್ಷಕರಿಲ್ಲವೆಂದು ತಿಳಿದು ಅಂಜಲಿಬದ್ಧಳಾಗಿ ಅವನನ್ನೇ ಮರೆಹೊಕ್ಕಳು.

೧೫೩-೧೫೪. ಎಲೈ ರಾಜನೇ, ಸ್ತ್ರೀಹತ್ಯವನ್ನು ಮಾಡಬಾರದೆಂದೂ ಅದು ಅಧರ್ಮವೆಂದೂ ನಿನಗೆ ಗೊತ್ತಿಲ್ಲವೇ ? ನಾನಿಲ್ಲದಿದ್ದರೆ ಪ್ರಜಗಳನ್ನು ಹೇಗೆ ಎಲ್ಲಿ (ಧರಿಸುವೆ) ನೀನು ಧರಿಸುತ್ತೀಯೇ. ಎಲೈ ರಾಜನೇ ಪ್ರಜೆಗಳೆಲ್ಲರೂ ನನ್ನಲ್ಲಿಯಲ್ಲವೇ ನಿಂತಿರುವುದು. ನಾನೇ ಪ್ರಜೆಗಳನ್ನು ಧರಿಸಿರುವೆನು. ಎಲೈ ರಾಜೇಂದ್ರನೇ ನಾನಿಲ್ಲದಿದ್ದರೆ ಪ್ರಜೆಗಳು ಆಶ್ರಯವಿಲ್ಲದೇ ಸಾಯುವರು. ಎಂದು ಭೂದೇವಿಯು ಪೃಥುರಾಜನಿಗೆ ಹೇಳಿದಳು.

೧೫೫. ಎಲೈ ಮಹಾರಾಜನೇ, ನೀನು ನಿಜವಾಗಿ ಪ್ರಜಾಹಿತಚಿಂತಕನಾಗಿದ್ದರೆ ನನ್ನನ್ನು ಕೊಲ್ಲುವುದು ಉಚಿತವಲ್ಲ. ಪ್ರಜಾಪಾಲಕನಾದ ಮಹಾರಾಜನೇ, ನನ್ನ ಹಿತವಚನಗಳನ್ನು ಲಾಲಿಸುವನಾಗು ಎಂದು ಹೇಳಿದಳು.

೧೫೬. ಎಲೈ ಪ್ರಭುವೇ, ಉಪಾಯದಿಂದ ಆರಬ್ಧವಾದ ಕಾರ್ಯಗಳೆಲ್ಲವೂ ಕೈಗೂಡುತ್ತವೆ. ನೀನು ನನ್ನನ್ನು ಸಂಹಾರಮಾಡಿದರೆ ಪ್ರಜೆಗಳನ್ನು ರಕ್ಷಿಸುವುದು ಅಶಕ್ಯವೆಂದೇ ತಿಳಿಯೆಂದಳು.

**ಅನ್ನಭೂತಾ ಭವಿಷ್ಯಾಮಿ ಜಹಿ ಕೋಪಂ ಮಹಾದ್ಯುತೇ ।**
**ಅವಧ್ಯಾಶ್ಚ ಸ್ತ್ರಿಯಃ ಪ್ರಾಹುಸ್ತಿರ್ಯಗ್ಯೋನಿಶತೇಷ್ವಪಿ ॥**
**ಮತ್ವೈವಂ ಪೃಥಿವೀಪಾಲಾ ಧರ್ಮಂ ನ ತ್ಯಕ್ತುಮರ್ಹಸಿ ॥ ೧೫೭ ॥**

**ಏವಂ ಬಹುವಿಧಂ ವಾಕ್ಯಂ ಶ್ರುತ್ವಾ ರಾಜಾ ಮಹಾಮನಾಃ**
**ಕ್ರೋಧಂ ನಿಗೃಹ್ಯ ಧರ್ಮಾತ್ಮಾ ವಸುಧಾಮಿದಮಬ್ರವೀತ್ ॥ ೧೫೮ ॥**

**ಏಕಸ್ಯಾರ್ಥಾಯ ಯೋ ಹನ್ಯಾದಾತ್ಮನೋ ವಾ ಪರಸ್ಯ ವಾ ।**
**ಏಕಂ ಪ್ರಾಣಂ ಬಹೂನ್ ವಾಪಿ ಕಾಮಂ ತಸ್ಯಾಸ್ತಿ ಪಾತಕಂ ॥ ೧೫೯ ॥**

**ಯಸ್ಮಿಂಸ್ತು ನಿಹತೇ ಭದ್ರೇ ಲಭಂತೇ ಬಹವಃ ಸುಖಂ ।**
**ತಸ್ಮಿನ್ಹತೇ ಶುಭೇ ನಾಸ್ತಿ ಪಾತಕಂ ಚೋಪಪಾತಕಂ ॥ ೧೬೦ ॥**

---

೧೫೭. ಶೂರನಾದ ಎಲೈ ಮಹಾರಾಜನೇ, ಕೋಪವನ್ನು ತ್ಯಜಿಸು. ನಾನು ಪ್ರಜೆಗಳಿಗೆ ಆಹಾರಪ್ರದಳಾಗುವೆನು ತಿರ್ಯಗ್ಜಾತಿಯಾದ ಹೆಣ್ಣು ಪ್ರಾಣಿಗಳನ್ನು ಕೊಲ್ಲಬಾರದೆಂದು ಶಾಸ್ತ್ರಗಳು ಘೋಷಿಸುವುವು. ಇವೆಲ್ಲವನ್ನೂ ಆಲೋಚಿಸಿ, ಧರ್ಮವನ್ನು ತ್ಯಜಿಸದೇ ಪ್ರಜಾಪಾಲಕನಾಗು ಎಂದು ಹೇಳಿದಳು.

೧೫೮. ಧರ್ಮಾತ್ಮನೂ, ಮಹಾನುಭಾವನೂ, ವಿಶಾಲಹೃದಯನೂ ಆದ ಪೃಥುಮಹಾರಾಜನು ಭೂದೇವಿಯ ಈ ವಿಧವಾದ ಅನೇಕ ಹಿತೋಕ್ತಿಗಳನ್ನು ಕೇಳಿ ಕೋಪವನ್ನು ಬಿಟ್ಟು ಅವಳಿಗೆ ಇಂತೆಂದನು.

೧೫೯. ಎಲೌ ಭೂದೇವಿಯೇ, ಯಾವ ಪುರುಷನು ಏಕಾಏಕಿಯಾಗಿ ತನ್ನ ಪ್ರಯೋಜನಕ್ಕಾಗಿಯೂ, ಅಥವಾ (ಅನ್ಯನಾದ) ಮತ್ತೊಬ್ಬನ ಹಿತಕ್ಕಾಗಿಯೂ ಒಂದು ಅಥವಾ ಅನೇಕ ಪ್ರಾಣಿಗಳ ಹನನವನ್ನು (ಕೊಲ್ಲು) ಮಾಡುವನೋ ಅವನು ಮಹಾ ಪಾತಕಿಯಾಗುವನು ಎಂದು ಹೇಳಿದನು.

೧೬೦. ಆಗ ಮಹಾರಾಜನು ಎಲೌ ಮಂಗಳಾಂಗಿಯೇ, ಯಾವನೊಬ್ಬನ ಸಂಹಾರದಿಂದ ಅನೇಕರು ಸುಖವನ್ನು ಹೊಂದುವರೋ, ಅಂತಹ ಪ್ರಾಣಿಯನ್ನು ಸಂಹಾರಮಾಡಿದರೆ ಮಹಾಪಾತಕವಾಗಲಿ ಉಪಪಾತಕಗಳಾಗಲಿ ಖಂಡಿತವಾಗಿಯೂ ಉಂಟಾಗುವುದಿಲ್ಲವೆಂದು ರಾಜನು ಹೇಳಿದನು.

**ಸೋಹಂ ಪ್ರಜಾನಿಮಿತ್ತಂ ತ್ವಾಂ ವಧಿಷ್ಯಾಮಿ ವಸುಂಧರೇ ।**
**ಯದಿ ಮೇ ವಚನಂ ನಾದ್ಯ ಕರಿಷ್ಯಸಿ ಜಗದ್ಧಿತಂ ॥ ೯೬೧ ॥**

**ತ್ವಾಂ ನಿಹತ್ಯಾದ್ಯ ಬಾಣೇನ ಮಚ್ಛಾಸನಪರಾಂಙ್ಮುಖೀಂ ।**
**ಆತ್ಮಾನಂ ಪ್ರಥಯಿತ್ವೇಹ ಧಾರಯಿಷ್ಯಾಮ್ಯಹಂ ಪ್ರಜಾಃ ॥ ೯೬೨ ॥**

**ಸ್ತ್ವಾತ್ವಂ ವಚನಮಾಸಾದ್ಯ ಮಮ ಧರ್ಮಭೃತಾಂ ವರೇ ।**
**ಸಂಜೀವಯ ಪ್ರಜಾ ನಿತ್ಯಂ ಶಕ್ತಾ ಹ್ಯಸಿ ನ ಸಂಶಯಃ ॥ ೯೬೩ ॥**

**ದುಹಿತೃತ್ವಂ ಚ ಮೇ ಗಚ್ಛ ಏವ ಮೇತಂ ಮಹದ್ವರಂ ।**
**ನಿಯಚ್ಛೇ ತ್ವಾಂ ತು ಧರ್ಮಾರ್ಥಂ ಪ್ರಯುಕ್ತಂ ಘೋರದರ್ಶನೇ ॥ ೯೬೪ ॥**

---

೯೬೧. ಎಲೌ ಭೂದೇವಿಯೇ, ಅಂತಹ ನಾನು ಪ್ರಜಾಪಾಲನೆಗಾಗಿ ನಿನ್ನನ್ನು ಸಂಹಾರಮಾಡುವೆನು. ಆದುದರಿಂದ ನೀನು ಲೋಕಕಲ್ಯಾಣಕ್ಕಾಗಿ ನನ್ನ ಮಾತನ್ನು ಕೇಳು ಎಂದು ರಾಜನು ಹೇಳಿದನು

೯೬೨. ಎಲೌ ಭೂದೇವಿಯೇ, ನನ್ನಾಜ್ಞೆಗಳನ್ನು ಮೀರಿರತಕ್ಕ ನಿನ್ನನ್ನು ಈಗ ಬಾಣದಿಂದ ಸಂಹರಿಸುವೆನು. ಮತ್ತು ಲೋಕದಲ್ಲಿ ನನ್ನ ಕೀರ್ತಿಯನ್ನು ಹರಡಿ ಪ್ರಜೆಗಳನ್ನು ರಕ್ಷಿಸುವುದಕ್ಕಾಗಿ ಧರಿಸುವೆನು ಎಂದು ಹೇಳಿದನು.

೯೬೩. ಎಲೌ ಭೂದೇವಿಯೇ, ನೀನು ಧರ್ಮಾತ್ಮರಲ್ಲಿ ಅಗ್ರೇಸರಳಾಗಿರುತ್ತೀಯೆ. ಆದುದರಿಂದ ನನ್ನ ಮಾತನ್ನು ಕೇಳಿ ಲೋಕಕಲ್ಯಾಣವನ್ನು ಮಾಡು. ಪ್ರಜೆಗಳನ್ನು ಕಷ್ಟಗಳಿಂದ ಪಾರಮಾಡಿ ರಕ್ಷಿಸು. ಪ್ರಜೆಗಳನ್ನು ರಕ್ಷಣೆಮಾಡುವ ಶಕ್ತಿಯು ನಿನ್ನಲ್ಲಿದೆ. ಈ ವಿಷಯದಲ್ಲಿ ಸಂದೇಹಬೇಡವೆಂದನು.

೯೬೪. ಭಯಂಕರಸ್ವರೂಪಿಯಾದ ಭೂದೇವಿಯೇ, ನೀನು ನನಗೆ ಪುತ್ರಿಯಾಗು. ಇದೇ ಉತ್ತಮವಾದ ವರವಾಗಿರುತ್ತದೆ. ನಿನ್ನನ್ನು ಧರ್ಮಕಾರ್ಯದಲ್ಲಿ ನಾನು ಪ್ರೇರಿಸುವೆನು. ನನ್ನ ಮಾತನ್ನು ಲಾಲಿಸು ಎಂದು ರಾಜನು ಹೇಳಿದನು.

ಪ್ರತ್ಯುವಾಚ ತತೋ ವೈನ್ಯಂ ಏವಮುಕ್ತ್ವಾ ಸತೀ ಮಹೀ ।
ಏವಮೇತದಹಂ ರಾಜನ್ ವಿಧಾಸ್ಯಾಮಿ ನ ಸಂಶಯಃ ॥ ೧೬೫ ॥

ವತ್ಸಂ ತು ಮಮ ತಂ ಯಚ್ಛ ಕ್ಷರೇಯಂ ಯೇನ ವತ್ಸಲಾ ।
ಸಮಾಂ ಚ ಕುರು ಸರ್ವತ್ರ ಮಾಂ ತ್ವಂ ಧರ್ಮಭೃತಾಂ ವರ ॥
ಯಥಾ ವಿಷ್ಯಂದಮಾನಂ ಚ ಕ್ಷೀರಂ ಸರ್ವತ್ರ ಭಾವಯೇ ॥ ೧೬೬ ॥

ತತ ಉತ್ಸಾರಯಾಮಾಸ ಶಿಲಾಜಾಲಾನಿ ಸರ್ವಶಃ ।
ಧನುಷ್ಕೋಟ್ಯಾ ತತೋ ವೈನ್ಯಸ್ತೇನ ಶೈಲಾ ವಿವರ್ಧಿತಾಃ ॥ ೧೬೭ ॥

ಮನ್ವಂತರೇಷ್ವತೀತೇಷು ವಿಷಮಾಸೀದ್ವಸುಂಧರಾ ।
ಸ್ವಭಾವೇನಾಭವಂ ಸ್ತಸ್ಯಾಃ ಸಮಾನಿ ವಿಷಮಾಣಿ ಚ ॥ ೧೬೮ ॥

---

೧೬೫. ಅನಂತರ ಸಾಧ್ವೀಮಣಿಯಾದ ಭೂಮಿಯು ವೈನ (ಪೃಥು) ನನ್ನು ಕುರಿತು ಎಲೈ ಮಹಾರಾಜನೇ, ನಿನ್ನ ಮಾತಿನಂತೆಯೇ ನಾನು ನಡೆದುಕೊಳ್ಳುತ್ತೇನೆ. ಈ ವಿಷಯದಲ್ಲಿ ಸಂದೇಹ ಬೇಕಿಲ್ಲವೆಂದು ಹೇಳಿದಳು.

೧೬೬. ಎಲೈ ರಾಜನೇ, ಯಾವ ಕರುವಿನಲ್ಲಿರುವ ಪ್ರೀತಿಯಿಂದ ನಾನು ಯಥೇಚ್ಛವಾದ ಕ್ಷೀರವನ್ನು ಕೊಡುವೆನೋ, ಅಂತಹ ಕರುವನ್ನು ನನಗೆ ಕೊಡು. ಧನುರ್ಧಾರಿಗಳಲ್ಲಿ ನೀನು ಉತ್ತಮನಾದ ಕಾರಣ ಹಳ್ಳ ದಿಣ್ಣೆಗಳಿಲ್ಲದೆ ಭೂಮಿಯನ್ನು ಸಮನಾಗಿ ಮಾಡು ಎಂದು ಭೂಮಿಯು ರಾಜನಿಗೆ ಹೇಳಿದಳು. ಭೂಮಿಯು ಸರ್ವತ್ರ ಸಮನಾಗಿದ್ದರೆ ನಾನು ಸರ್ವತ್ರ ಕ್ಷೀರವನ್ನು ಸೇಚನಮಾಡುವೆನೆಂದಳು.

೧೬೭ ಅನಂತರ ವೇನಪುತ್ರನಾದ ಪೃಥುಮಹಾರಾಯನು ಪರ್ವತಗಳೆಲ್ಲ ವನ್ನೂ ಧನುಸ್ಸಿನ ತುದಿಯಿಂದ ದೂರವಾಗಿ ನೂಕಿದನು. ಅದರಿಂದ ಭೂಮಿಯು ಸಮವಾಗಿ ಕೃಷಿಗೆ ಅನುಕೂಲವಾಯಿತು. ಪರ್ವತಗಳೂ ಕೂಡ ಅನ್ಯತ್ರ ವೃದ್ಧಿ ಯಾದುವು.

೧೬೮. ಹೀಗೆ ಕೆಲವು ಮನ್ವಂತಗಳು ಕಳೆಯಲಾಗಿ ಭೂಮಿಯು ಪುನಃ ವಿಷಮವಾಯಿತು. ಸಮ ವಿಷಮ ಭಾವಗಳು ಭೂಮಿಯ ಸಹಜವಾದ ಗುಣ ವಾಗಿರುತ್ತವೆ.

ನ ಹಿ ಪೂರ್ವನಿಸರ್ಗೇ ವೈ ವಿಷಮೇ ಪೃಥಿವೀತಲೇ ।
ಪ್ರವಿಭಾಗಃ ಪುರಾಣಾಂ ವಾ ಗ್ರಾಮಾಣಾಂ ವಾಪಿ ವಿದ್ಯತೇ ॥ ೧೬೯ ॥

ನ ಸಸ್ಯಾನಿ ನ ಗೋರಕ್ಷ್ಯಾ ನ ಕೃಷಿರ್ನ ವಣಿಕ್‌ಪಥಃ ।
ಚಾಕ್ಷುಷಸ್ಯಾಂತರೇ ಪೂರ್ವಮೇತದಾಸೀತ್ಪುರಾ ಕಿಲಾ ॥
ವೈವಸ್ವತೇಽಂತರೇ ತಸ್ಮಿನ್ ಸರ್ವಸ್ಯೈತಸ್ಯ ಸಂಭವಃ ॥ ೧೭೦ ॥

ಸಮತ್ವಂ ಯತ್ರ ಯತ್ರಾಸೀದ್ಭೂಮ್ಯಸ್ತಸ್ಮಿಂಸ್ತದೇವ ಹಿ ।
ತತ್ರ ತತ್ರ ಪ್ರಜಾಸ್ತಾ ವೈ ನಿವಸಂತಿ ಸ್ಮ ಸರ್ವದಾ ॥ ೧೭೧ ॥

ಆಹಾರಃ ಫಲಮೂಲಂ ತು ಪ್ರಜಾನಾಮಭವತ್ಕಿಲ ।
ವೈನ್ಯಾತ್ಪ್ರಭೃತಿ ಲೋಕೇಽಸ್ಮಿನ್ ಸರ್ವಸ್ಯೈತಸ್ಯ ಸಂಭವಃ ॥ ೧೭೨ ॥

---

೧೬೯. ಪೂರ್ವದ ಸೃಷ್ಟಿಕ್ರಮದಲ್ಲಿ ಭೂಭಾಗವು ಅತ್ಯಂತ ವಿಷಮವಾಗಿತ್ತು. ಆದುದರಿಂದ ಆ ಕಾಲದಲ್ಲಿ ನಗರ, ಗ್ರಾಮ, ಹಳ್ಳಿ ಮೊದಲಾದ ವಿಭಾಗಗಳೇ ಭೂಮಿಯಲ್ಲಿ ಇರಲಿಲ್ಲ.

೧೭೦. ಪುರಾತನವಾದ ಚಾಕ್ಷುಷಮನ್ವಂತರದ ಪೂರ್ವಯುಗದಲ್ಲಿ ಕೃಷಿಗಳು ಸಸ್ಯಗಳು, ವ್ಯಾಪಾರದ ಕ್ರಮ, ಗೋರಕ್ಷಣ ಇವೇ ಮೊದಲಾದ ಯಾವ ಕಾರ್ಯಗಳೂ ಇರಲಿಲ್ಲ. ವೈವಸ್ವತ ಮನ್ವಂತರದಲ್ಲಿ ಮಾತ್ರ ಅದರಲ್ಲಿಯೂ ಪೃಥುಮಹಾರಾಜನಿಂದಲೇ ಈ ಕಾರ್ಯಗಳು ಉಂಟಾದುವು.

೧೭೧. ಪೃಥುಮಹಾರಾಜನ ಧನುಷ್ಕೋಟಿಯಿಂದ ಭೇದಿಸಲ್ಪಟ್ಟ ಭೂಮಿಯು ಎಲ್ಲೆಲ್ಲಿ ಸಮವಾಯಿತೋ ಅಲ್ಲಲ್ಲಿ ಪ್ರಜೆಗಳು ಗ್ರಾಮನಗರಾದಿಗಳನ್ನು ನಿರ್ಮಿಸಿಕೊಂಡು ಸದಾಕಾಲದಲ್ಲಿ ಸುಖವಾಗಿ ವಾಸಮಾಡುತ್ತಾರೆ.

೧೭೨. ಪೂರ್ವದ ಮನ್ವಂತರದಲ್ಲಿ ಪ್ರಜೆಗಳಿಗೆ ಫಲಮೂಲಗಳೇ ಆಹಾರ ವಾಗಿದ್ದವು. ಪ್ರಜೆಗಳಿಗೆ ಸಕಲ ಧಾನ್ಯಗಳೂ ಬೇಕಾದ ಪದಾರ್ಥಗಳೂ ಉಂಟಾದುವು.

ಕೃಚ್ಛ್ರೇಣ ಮಹತಾ ಸೋಪಿ ಪ್ರನಷ್ಟಾ ಸ್ವೋಷಧೀಷು ವೈ ।
ಸ ಕಲ್ಪಯಿತ್ವಾ ವತ್ಸಂ ತು ಚಾಕ್ಷುಷಂ ಮನುಮೀಶ್ವರಃ ॥

ಪೃಥುರ್ದುದೋಹ ಸಸ್ಯಾನಿ ಸ್ವತಲೇ ಪೃಥಿವೀಂ ತತಃ ॥ ೧೭೩ ॥
ಸಸ್ಯಾನಿ ತೇನ ದುಗ್ಧಾನಿ ವೈನ್ಯೇನ ತು ವಸುಂಧರಾಂ ।

ಮನುಂ ಚ ಚಾಕ್ಷುಷಂ ಕೃತ್ವಾ ವತ್ಸಂಪಾತ್ರೇ ಚ ಭೂಮಯೇ ॥
ತೇನಾನ್ನೇನ ತದಾ ತಾ ವೈ ವರ್ತಯಂತೇ ಪ್ರಜಾಃ ಸದಾ ॥ ೧೭೪ ॥

ಋಷಿಭಿಃ ಸ್ತೂಯತೇ ವಾಪಿ ಪುನರ್ದುಗ್ಧಾ ವಸುಂಧರಾ ।
ವತ್ಸಃ ಸೋಮಸ್ತ್ವಭೂತ್ತೇಷಾಂ ದೋಗ್ಧಾ ಚಾಪಿ ಬೃಹಸ್ಪತಿಃ ॥ ೧೭೫ ॥

ಪಾತ್ರಮಾಸೀತ್ತು ಛಂದಾಂಸಿ ಗಾಯತ್ರ್ಯಾದೀನಿ ಸರ್ವಶಃ ।
ಕ್ಷೀರಮಾಸೀತ್ತದಾ ತೇಷಾಂ ತಪೋ ಬ್ರಹ್ಮ ಚ ಶಾಶ್ವತಂ ॥ ೧೭೬ ॥

---

೧೭೩–೧೭೪ ಪೃಥುರಾಜನ ಕಾಲದಲ್ಲಿ ಸಮಸ್ತ ಓಷಧಿಗಳೂ ನಷ್ಟವಾಗಲು ರಾಜನು ಅತಿಪ್ರಯಾಸದಿಂದ ಚಾಕ್ಷುಷಮನುವನ್ನೇ ಕರುವನ್ನಾಗಿ ಮಾಡಿಕೊಂಡು ತನ್ನ ರಾಜ್ಯದಲ್ಲಿ ಸಸಿಗಳನ್ನು ಭೂಮಿಯಿಂದ ಬಹಳವಾಗಿ ದೋಹನಮಾಡಿದನು. ವೇನರಾಜನ ಕುಮಾರನ ಕಾಲದಲ್ಲಿ ಭೂಮಿಯಲ್ಲಿ ದವಸಧಾನ್ಯಗಳು ಯಥೇಚ್ಛೆಯಾಗಿ ಬೆಳೆದವು. ಗೋರೂಪಿಯಾದ ಭೂಮಾತೆಯಿಂದ ಪೃಥುರಾಜನು ಹಾಲನ್ನು ಕರೆಯುವಾಗ ಚಾಕ್ಷುಷಮನುವೇ ಕರುವಾದನು. ಭೂಮಿಯೇ ಪಾತ್ರೆಯಾಯಿತು. ಆಗ ಧಾನ್ಯರೂಪವಾದ ಅನ್ನದಿಂದ ಪ್ರಜೆಗಳು ಸರ್ವಕಾಲದಲ್ಲಿಯೂ ಸುಖವಾಗಿ ಜೀವನವನ್ನು ಮಾಡುತ್ತಿದ್ದರು.

೧೭೫-೧೭೬. ಅನಂತರ ಋಷಿಗಳು ಭೂದೇವಿಯನ್ನು ಹೊಗಳಿದರು. ಆಗ ಭೂಮಿಯು ಚಂದ್ರನನ್ನು ವತ್ಸನನ್ನಾಗಿಯೂ, ಗಾಯತ್ರ್ಯಾದಿ ಸಕಲ ಛಂದಸ್ಸುಗಳನ್ನೂ ಪಾತ್ರೆಯನ್ನಾಗಿಯೂ ಮಾಡಿಕೊಂಡು ತಪಸ್ಸು ಶಾಶ್ವತವಾದ ಬ್ರಹ್ಮಸ್ವರೂಪವಾದ ಕ್ಷೀರವನ್ನೂ ಕರೆದಳು. ಅಂದರೆ ಮಹರ್ಷಿಗಳಿಗೆ ಕೊಟ್ಟಳು.

ಪುನಃ ಸ್ತುತ್ವಾ ದೇವಗಣೈಃ ಪುರಂದರ ಪುರೋಗಮೈಃ ।
ಸೌವರ್ಣಂ ಪಾತ್ರಮಾದಾಯ ಅಮೃತಂ ದುದುಹೇ ತದಾ ॥
ತೇನೈವ ವರ್ತಯಂತೇ ಚ ದೇವಾ ಇಂದ್ರಪುರೋಗಮಾಃ ॥ ೧೭೭ ॥

ನಾಗೈಶ್ಚ ಸ್ತೂಯತೇ ದುಗ್ಧಾ ವಿಷಂ ಕ್ಷೀರಂ ತದಾ ಮಹೀ ।
ತೇಷಾಂ ಚ ವಾಸುಕಿರ್ದೋಗ್ಧಾ ಕಾದ್ರವೇಯಾ ಮಹೌಜಸಃ ॥ ೧೭೮ ॥

ನಾಗಾನಾಂ ವೈ ದ್ವಿಜಶ್ರೇಷ್ಠ ಸರ್ಪಾಣಾಂ ಚೈವ ಸರ್ವಶಃ ।
ತೇನೈವ ವರ್ತಯಂತ್ಯುಗ್ರಾ ಮಹಾಕಾಯಾ ಮಹೋಲ್ಬಣಾಃ ॥
ತದಾಹಾರಾಸ್ತದಾಚಾರಾಸ್ತದ್ವೀರ್ಯಾಸ್ತು ಸದಾಶ್ರಯಾಃ ॥ ೧೭೯ ॥

ಶ್ರಾಮಪಾತ್ರೇ ಪುನರ್ದುಗ್ಧಾ ತ್ವಂತರ್ಧಾನಮಿಯಂ ಮಹೀ ।
ವತ್ಸಂ ವೈಸ್ರವಣಂ ಕೃತ್ವಾ ಯಕ್ಷೈಃ ಪುಣ್ಯಜನೈಸ್ತಥಾ ॥ ೧೮೦ ॥

---

೧೭೭. ಅನಂತರ ಇಂದ್ರನೇ ಮೊದಲಾದ ದೇವತೆಗಳು, ಭೂಮಾತೆಯನ್ನು ಸ್ತೋತ್ರಮಾಡಿ, ಸುವರ್ಣಮಯವಾದ ಪಾತ್ರೆಯಲ್ಲಿ ಅಮೃತರೂಪವಾದ ಕ್ಷೀರವನ್ನು ಕರೆದು ಆ ಅಮೃತದಿಂದಲೇ ಜೀವನವನ್ನು ಮಾಡುತ್ತಿದ್ದರು.

೧೭೮. ತರುವಾಯ ಸರ್ಪಗಳು ಭೂಮಿಯನ್ನು ಹೊಗಳಿ ಕ್ಷೀರವನ್ನು ಕರೆಯಲಾಗಿ, ವಿಷವು ಉತ್ಪನ್ನವಾಯಿತು. ಮಹಾತೇಜಸ್ವಿಗಳಾದ ಕಾದ್ರವೇಯರಲ್ಲಿ ಶ್ರೇಷ್ಠನಾದ ವಾಸುಕಿಯು ಹಾಲನ್ನು ಕರೆದನು. ಹೀಗೆ ವಿಷವು ಉದ್ಭವಿಸಿತು.

೧೭೯. ಎಲೈ ವಿಪ್ರೋತ್ತಮನೇ ಸರ್ಪಗಳೂ ಅವುಗಳ ಭೇದವುಳ್ಳ ನಾಗಗಳೂ ಕೂಡ ಆ ವಿಷದಿಂದಲೇ ಜೀವಿಸುತ್ತಿದ್ದುವು. ಆ ವಿಷದಿಂದಲೇ ಅವರು ಅತಿಭೀಷಣರೂ ಮಹಾಕಾಯರೂ, ಮಹಾಕ್ರೂರಿಗಳೂ ಆದರು. ಆ ವಿಷವೇ, ಅವರಿಗೆ ಆಹಾರವೂ ವೀರ್ಯಜನಕವೂ, ಸ್ಥಿತಿಕಾರಿಯೂ ಆಗಿತ್ತು.

೧೮೦. ಅನಂತರ ಯಕ್ಷರಾಕ್ಷಸರು ಕೂಡಿ ಕುಬೇರನನ್ನು ವತ್ಸನನ್ನಾಗಿ ಮಾಡಿಕೊಂಡು, ಕಾಲವೆಂಬ ಪಾತ್ರೆಯಲ್ಲಿ ಅಂತರ್ಧಾನರೂಪವಾದ ಹಾಲನ್ನು ಕರೆದರು. ಅದರಿಂದ ಯಕ್ಷರಾಕ್ಷಸರು ಜೀವನಮಾಡಿದರು.

ದೋಗ್ಧಾ ಚ ಜತುನಾಭಸ್ತು ಪಿತಾ ಮಣಿವರಸ್ಯ ಸಃ ।
ಯಕ್ಷಾತ್ಮಜೋ ಮಹಾತೇಜಾ ವಶೀ ಸ ಸುಮಹಾಬಲಃ ॥
ತೇನ ತೇ ವರ್ತಯಂತೀತಿ ಪರಮರ್ಷಿರುವಾಚ ಹ ॥ ೧೮೧ ॥

ರಾಕ್ಷಸೈಶ್ಚ ಪಿಶಾಚೈಶ್ಚ ಪುನರ್ದುಗ್ಧಾ ವಸುಂಧರಾ ।
ಬ್ರಹ್ಮೋಪೇತಸ್ತು ದೋಗ್ಧಾ ವೈ ತೇಷಾಮಾಸೀತ್ಕುಬೇರಕಃ ॥ ೧೮೨ ॥

ರಕ್ಷಃ ಸುಮಾಲೀ ಬಲವಾನ್ ಕ್ಷೀರಂ ರುಧಿರಮೇವ ಚ ।
ಕಪಾಲಪಾತ್ರೇ ನಿರ್ದುಗ್ಧಾ ಅಂತರ್ಧಾನಂ ಚ ರಾಕ್ಷಸೈಃ ॥
ತೇನ ಕ್ಷೀರೇಣ ರಕ್ಷಾಂಸಿ ವರ್ತಯಂತೀಹ ಸರ್ವಶಃ ॥ ೧೮೩ ॥

ಪದ್ಮಪಾತ್ರೇ ಪುನರ್ದುಗ್ಧಾ ಗಂಧರ್ವೈರಪ್ಸರೋಗಣೈಃ ।
ವತ್ಸಂ ಚಿತ್ರರಥಂ ಕೃತ್ವಾ ಶುಚೀನ್ ಗಂಧಾಂಸ್ತಥೈವ ಚ ॥ ೧೮೪ ॥

---

೧೮೧. ಅತಿಬಲಶಾಲಿಯೂ, ಸ್ವತಂತ್ರನೂ, ಮಹಾತೇಜಸ್ವಿಯೂ, ಯಕ್ಷಕುಮಾರನೂ, ಮಣಿವರನ ತಂದೆಯೂ ಆದ ಜತುನಾಭನೆಂಬುವನು ಕ್ಷೀರವನ್ನು ದೋಹಕಮಾಡಿದನು. ಯಕ್ಷರಾಕ್ಷಸಾದಿಗಳು ಅದರಿಂದ ಜೀವಿಸುತ್ತಿದ್ದರು. ಎಂದು ಮಹರ್ಷಿಗಳು ಹೇಳಿದರು.

೧೮೨-೧೮೩. ರಾಕ್ಷಸರೂ, ಪಿಶಾಚಗಳೂ ಕೂಡಿ ಪುನಃ ಗೋರೂಪಿಯಾದ ಭೂಮಿಯನ್ನು ಕರೆದರು. ಆಗ ಬ್ರಹ್ಮೋಪೇತನಾಮಕನಾದ ಕುಬೇರನು, ಬಲಿಷ್ಠನೂ ರಾಕ್ಷಸರ ಪತಿಯೂ ಆದ ಸುಮಾಲಿಯನ್ನು ಕರುವನ್ನಾಗಿಯೂ, ಕಪಾಲವನ್ನು ಪಾತ್ರೆಯನ್ನಾಗಿಯೂ, ಮಾಡಿಕೊಂಡು ರಕ್ತವೆಂಬ ಕ್ಷೀರವನ್ನು ದೋಹನಮಾಡಿದನು. ಅನಂತರ ಆ ರಾಕ್ಷಸಾದಿಗಳು ಆ ರಕ್ತದಿಂದ ಜೀವಿಸುತ್ತಿದ್ದರು.

೧೮೪-೧೮೫. ಅನಂತರ ಗಂಧರ್ವರೂ, ಅಪ್ಸರೋಗಣಗಳೂ, ಕೂಡಿ ಚಿತ್ರರಥನನ್ನು ಕರುವನ್ನಾಗಿ ಮಾಡಿಕೊಂಡು ಅತ್ಯಂತ ಪರಿಶುದ್ಧವಾದ ಗಂಧವೆಂಬ ಕ್ಷೀರವನ್ನು ಕಮಲವೆಂಬ ಪಾತ್ರೆಯಲ್ಲಿ ಕರೆದರು. ಆಗ ಅವರಲ್ಲಿ ಉತ್ತಮನೂ, ಮುನಿ

ತೇಷಾಂ ವಿಶ್ವಾವಸುಸ್ತ್ವಾಸೀದ್ದೋಗ್ಧಾ ಪುತ್ರೋ ಮುನೇಃ ಶುಚಿಃ ।
ಗಂಧರ್ವರಾಜೋಽತಿಬಲೋ ಮಹಾತ್ಮಾ ಸೂರ್ಯಸನ್ನಿಭಃ ॥ ೧೮೫ ॥

ಶೈಲೈಶ್ಚ ಸ್ತೂಯತೇ ದುಗ್ಧಾ ಪುನರ್ದೇವೀ ವಸುಂಧರಾ ।
ತತ್ರೌಷಧೀರ್ಮೂರ್ತಿಮತೀ ರತ್ನಾನಿ ವಿವಿಧಾನಿ ಚ । ॥ ೧೮೬ ॥

ವತ್ಸಸ್ತು ಹಿಮವಾಂಸ್ತೇಷಾಂ ಮೇರುರ್ದೋಗ್ಧಾ ಮಹಾಗಿರಿಃ ।
ಪಾತ್ರಂ ತು ಶೈಲಮೇವಾಸೀತ್ತೇನ ಶೈಲಃ ಪ್ರತಿಷ್ಠಿತಃ ॥ ೧೮೭ ॥

ಸ್ತೂಯತ್ತೇ ವೃಕ್ಷವೀರುದ್ಭಿಃ ಪುನರ್ದುಗ್ಧಾ ವಸುಂಧರಾ ।
ಪಲಾಶಪಾತ್ರಮಾದಾಯ ದುಗ್ಧಂ ಛಿನ್ನಪ್ರರೋಹಣಂ ॥ ೧೮೮ ॥

ಕಾಮಧುಕ್ ಪುಷ್ಪಿತಃ ಶೈಲಃ ಪ್ಲಕ್ಷೋ ವತ್ಸೋ ಯಶಸ್ವಿನೀ ।
ಸರ್ವಕಾಮದುಘಾ ದೋಗ್ಧ್ರೀ ಪೃಥಿವೀ ಭೂತಭಾವಿನೀ ॥ ೧೮೯ ॥

---

ಕುಮಾರನೂ, ಪರಿಶುದ್ಧನೂ, ಸೂರ್ಯನಿಗೆ ಸಮಾನವಾದ ಕಾಂತಿಯುಳ್ಳವನೂ, ಮಹಾತ್ಮನೂ, ಅತಿಬಲಿಷ್ಠನೂ, ಗಂಧರ್ವರಿಗೆ ರಾಜನೂ ಆದ ವಿಶ್ವಾವಸುವು ದೋಹನವನ್ನು ಮಾಡಿದನು.

೧೮೬-೧೮೭. ಅನಂತರ ಪರ್ವತಗಳೆಲ್ಲವೂ ಕೂಡಿ ಭೂಮಾತೆಯಾದ ದೇವಿಯನ್ನು ಹೊಗಳಿ ಹಾಲುಕರೆದರು ಆಗ ನಾನಾ ವಿಧಗಳಾದ ಔಷಧಗಳೂ ನಾನಾ ರತ್ನಗಳೂ ಸಹ ಉತ್ಪನ್ನವಾದವು ಆಗ ಹಿಮಾಲಯವೇ ಕರುವಾಯಿತು. ಮಹಾಮೇರುಪರ್ವತವೇ ಹಾಲನ್ನು ಕರೆಯುವನಾದನು. ಅಂದರೆ ದೋಹಕನಾದನು. ಆಗ ಪರ್ವತಗಳೇ ಪಾತ್ರಗಳಾದುವು. ಇದರಿಂದ ಭೂಮಿಯ ಆಯಾ ಭಾಗಗಳಲ್ಲಿ ಪರ್ವತಗಳು ಸ್ಥಾಪಿತಗಳಾದುವು.

೧೮೮-೧೮೯ ಅನಂತರ ಮರಗಿಡಬಳ್ಳಿಗಳು ಕೂಡಿ ಭೂದೇವಿಯನ್ನು ಹೊಗಳಿ ಹಾಲನ್ನು ಕರೆದರು ಮುತ್ತುಗದ ಎಲೆಯೇ ಪಾತ್ರವಾಯಿತು. ಅವಿಚ್ಛಿನ್ನವಾದ ವೃಕ್ಷಗಳು ಪುನಃ ಚಿಗುರಿ ಫಲಪುಷ್ಪಗಳೆಂಬ ಹಾಲನ್ನು ಕೊಟ್ಟುವು. ಆಲದ ಮರವೇ ಕರುವಾಯಿತು. ಈ ರೀತಿಯಾಗಿ ಭೂದೇವಿಯು ಸರ್ವರಿಗೂ ಬೇಕಾಗುವ ಸಕಲೇಷ್ಟಾರ್ಥಗಳನ್ನೂ ಕೊಟ್ಟಳು.

**ಸೈಷಾ ಧಾತ್ರಿ ವಿಧಾತ್ರೀ ಚ ಧಾರಣೀ ಚ ವಸುಂಧರಾ ।**
**ದುಗ್ಧಾ ಹಿತಾರ್ಥಂ ಲೋಕಾನಾಂ ಪೃಥುನಾ ಇತಿ ನ ಶ್ರುತಂ ॥**
**ಚರಾಚರಸ್ಯ ಲೋಕಸ್ಯ ಪ್ರತಿಷ್ಠಾ ಯೋನಿರೇವ ಚ ॥ ೧೯೦ ॥**

**ಇತಿ ಶ್ರೀ ಮಹಾಪುರಾಣೇ ವಾಯುಪ್ರೋಕ್ತೇ "ಪೃಥಿವೀದೋಹನಂ" ನಾಮ ಪ್ರಥಮೋಽಧ್ಯಾಯಃ**

---

೧೯೦. ಹೀಗೆ ಭೂದೇವಿಯು ಸಕಲ ಲೋಕಗಳಿಗೂ ಹಿತಕರವಾದ ಸಕಲ ವಸ್ತುಗಳನ್ನೂ ಧರಿಸಿರುವುದರಿಂದ ತಾಯಿಯಾಗಿಯೂ, ಸಕಲೇಷ್ಟಾರ್ಥಗಳನ್ನು ಕೊಡುವುದರಿಂದ ಬ್ರಹ್ಮನಾಗಿಯೂ, ಸಕಲ ಲೋಕಗಳ ಹಿತಸಾಧಕಳಾದುವರಿಂದ ಪೃಥುನಾಮಕಳೂ, ಚರಾಚರಾತ್ಮಕವಾದ ಸಕಲ ಲೋಕಗಳ ಪ್ರತಿಷ್ಠೆಗೆ ಮುಖ್ಯ ಕಾರಣಳೂ ಆಗಿರುವಳೆಂದು ಸೂತಮುನಿಯು ಮಹರ್ಷಿಗಳಿಗೆ ನಿರೂಪಿಸಿದರು.

ಹೀಗೆ ವಾಯುಪ್ರೋಕ್ತವಾದ ಶ್ರೀ ಮಹಾಪುರಾಣದಲ್ಲಿ "ಪೃಥಿವೀದೇವಿಯ ಕ್ಷೀರದೋಹನ" ವರ್ಣನವೆಂಬ ಮೊದಲನೆಯ ಅಧ್ಯಾಯವು ಸಮಾಪ್ತವಾದುದು.



## ಒಂದನೆಯ ಅಧ್ಯಾಯದ ಸಾರಾಂಶವು



ಈ ಅಧ್ಯಾಯದಲ್ಲಿ ಹದಿನಾಲ್ಕುಜನ ಮನುಗಳನ್ನು ಸಂಕ್ಷೇಪವಾಗಿ ವರ್ಣಿಸಿರುವರು. ಅವರಲ್ಲಿ ಮೊದಲನೆಯವನು ಸ್ವಾಯಂಭುವಮನುವು. ಎರಡನೆಯವನು ಸ್ವಾರೋಚಿಷನು ಮೂರನೆಯವನು ಔತ್ತಮನು. ನಾಲ್ಕನೆಯವನು ತಾಮಸನು. ಐದನೆಯವನು ರೈವತನು. ಆರನೆಯವನು ಚಾಕ್ಷುಷಮನುವು. ಏಳನೆಯವನೇ ವೈವಸ್ವತಮನುವಾಗಿರುವನು. ಚಾಕ್ಷುಷಮನ್ವಂತರದಲ್ಲಿ ದಕ್ಷಪ್ರಜಾಪತಿಗೆ ಉತ್ತಾನಪಾದರಾಜನೂ, ಅವನ ವಂಶದ ಕೊನೆಯಲ್ಲಿ ವೇನರಾಜನೂ ಜನಿಸಿದರು. ಅವನು ಲೋಕಕಂಟಕನಾಗಿರಲು ಮಹರ್ಷಿಗಳು ಅವನ ಬಲಹಸ್ತವನ್ನು ಮಥಿಸಿದರು. ಆಗ ಪೃಥುಮಹಾರಾಜನು ಜನಿಸಿದನು. ತರುವಾಯ ಲೋಕಕಲ್ಯಾಣಕ್ಕಾಗಿ ಭೂದೇವಿಯನ್ನು ಪ್ರಾರ್ಥಿಸಿ, ವಿಷಮವಾದ ಭೂಮಿಯನ್ನು ಸಮವಮಾಡಿ, ಸಕಲ ವಸ್ತುಗಳನ್ನು ಪಡೆದನು. ಆ ದಿವಸದಿಂದ ಭೂಮಿಯಲ್ಲಿ ಸಸ್ಯಗಳು ಬೆಳೆದು ಧಾನ್ಯಗಳು ಯಥೇಚ್ಛವಾಗಿ ಸಿಕ್ಕಿದುವು. ಆಗಲೇ ದೇವತೆಗಳಿಗೆ ಅಮೃತವೂ, ಸಕಲ ಮನುಷ್ಯರಿಗೂ ಬೇಕಾದ ಆಹಾರಗಳೂ ದೊರೆತವು. ಒಟ್ಟಿನಲ್ಲಿ ಪೃಥುಮಹಾರಾಜನು ಭೂಮಾತೆಯಿಂದ ಕ್ಷೀರರೂಪವಾದ ಸಕಲ ವಸ್ತುಗಳನ್ನೂ ಪಡೆದು, ಸರ್ವರಿಗೂ ಸಕಲೇಷ್ಟಾರ್ಥಗಳನ್ನು ಕೊಡಿಸಿ ತೃಪ್ತಿಯನ್ನುಂಟುಮಾಡಿದನು. ಹೀಗೆ ಭೂದೇವಿಯಿಂದ ದೇವಋಷ್ಯಾದಿ ಸರ್ವರಿಗೂ ಸಕಲ ಮನೋರಥಗಳು ಸಿದ್ಧವಾದುವು ಎಂಬ ವಿಷಯಗಳು ಈ ಅಧ್ಯಾಯದಲ್ಲಿ ನಿರೂಪಿತವಾಗಿವೆ.



—|| ಹರಿಃ ಓಂ ||—

—ಶ್ರೀ ಗಣೇಶಾಯ ನಮಃ—

# ಶ್ರೀಮದ್ವಾಯು ಮಹಾಪುರಾಣಂ

## ದ್ವಿತೀಯೋಽಧ್ಯಾಯಃ

|| ಸೂತ ಉವಾಚ ||

ಆಸೀದಿಯಂ ಸಮುದ್ರಾಂತಾ ಮೇದಿನೀತಿ ಪರಿಶ್ರುತಾ |
ವಸುಧಾರಯತೇ ಯಸ್ಮಾದ್ವಸುಧಾ ತೇನ ಚೋಚ್ಯತೇ || ೧ ||

ಮಧುಕೈಟಭಯೋಃ ಪೂರ್ವಂ ಮೇಧಸಾ ಸಂಪರಿಪ್ಲುತಾ ||
ತತೋಭ್ಯುಪಗಮಾದ್ರಾಜ್ಞಃ ಪೃಥೋರ್ವೈನ್ಯಸ್ಯ ಧೀಮತಃ || ೨ ||

ಇಯಂಚಾಸೀತ್ ಸಮುದ್ರಾಂತಾ ಮೇದಿನೀತಿ ಪರಿಶ್ರುತಾ |
ದುಹಿತೃತ್ವಮನುಪ್ರಾಪ್ತಾ ಪೃಥಿವೀತ್ಯುಚ್ಯತೇ ತತಃ || ೩ ||

---

## ಎರಡನೆಯ ಅಧ್ಯಾಯವು

೧. ಸೂತಮುನಿಯು ಹೇಳಿದನು :—ಎಲೈ ವಿಪ್ರವರ್ಯರೇ, ಈ ಭೂಮಿಯು ಚತುಸ್ಸಮುದ್ರದವರೆಗೂ ವ್ಯಾಪ್ತವಾಗಿರುವುದರಿಂದ ಮೇದಿನಿಯೆಂದೂ, ಸಕಲ ರಕ್ತವೇ ಮೊದಲಾದ ದ್ರವ್ಯಗಳನ್ನು ಧರಿಸುವುದರಿಂದ ವಸುಧೆಯೆಂಬುದಾಗಿಯೂ ಲೋಕದಲ್ಲಿ ಪ್ರಖ್ಯಾತಿಗೊಂಡಿದೆ.

೨-೩. ಪೂರ್ವದಲ್ಲಿ ಈ ಭೂಮಿಯು ಮಧುಕೈಟಭರೆಂಬ ರಾಕ್ಷಸರ ಮೇಧಸ್ಸಿನಿಂದ ವ್ಯಾಪ್ತವಾಗಿತ್ತು. ಅನಂತರ ಜ್ಞಾನಿಯಾದ ಪೃಥುಮಹಾರಾಜನ ಆಳುವಿಕೆಯಿಂದ ಸಮುದ್ರದವರೆಗೂ ಮೇದಿನಿಯೆಂದು ಪ್ರಖ್ಯಾತವಾಯಿತು. ತರುವಾಯ ಪೃಥುಮಹಾರಾಜನ ಪ್ರೇಮಪುತ್ರಿಯಾದ ಕಾರಣ ಪೃಥಿವೀಯೆಂಬ ನಾಮವನ್ನು ಪಡೆದಳು.

ಪ್ರಥಿತಾ ಪ್ರವಿಭಕ್ತಾ ಚ ಶೋಭಿತಾ ಚ ವಸುಂಧರಾ ।
ಸಸ್ಯಾಕಾರವತೀ ರಾಜ್ಞಾ ಪತ್ತನಾ ಕರಮಾಲಿನೀ ॥
ಚಾತುರ್ವರ್ಣ್ಯಸಮಾಕೀರ್ಣಾ ರಕ್ಷಿತಾ ತೇನ ಧೀಮತಾ ॥ ೪ ॥

ಏವಂ ಪ್ರಭಾವೋ ರಾಜಾಸೀದ್ವೈನ್ಯಃ ಸ ನೃಪಸತ್ತಮಃ ॥
ನಮಸ್ಯಶ್ಚೈವ ಪೂಜ್ಯಶ್ಚ ಭೂತಗ್ರಾಮೇಣ ಸರ್ವಶಃ ॥ ೫ ॥

ಬ್ರಾಹ್ಮಣೈಶ್ಚ ಮಹಾಭಾಗೈರ್ವೇದವೇದಾಂಗ ಪಾರಗೈಃ ।
ಪೃಥುರೇವ ನಮಸ್ಕಾರ್ಯೋ ಬ್ರಹ್ಮಯೋನಿಃ ಸನಾತನಃ ॥ ೬ ॥

ಪಾರ್ಥಿವೈಶ್ಚ ಮಹಾಭಾಗೈಃ ಪಾರ್ಥಯದ್ಭಿರ್ಮಹದ್ಯಶಃ ।
ಆದಿರಾಜಾ ನಮಸ್ಕಾರ್ಯಃ ಪೃಥುರ್ವೈನ್ಯಃ ಪ್ರತಾಪವಾನ್ ॥ ೭ ॥

---

೪. ಈ ಭೂದೇವಿಯು ಮಹಾಜ್ಞಾನಿಯಾದ ಪೃಥುಮಹಾರಾಜನಿಂದ ಸಸ್ಯ ಕ್ಷೇತ್ರಗಳಾಗಿ ವಿಭಾಗಿಸಲ್ಪಟ್ಟು ಶೋಭಿತಳಾದಳು. ತರುವಾಯ ಸಸ್ಯಕ್ಷೇತ್ರವನೋಪವನಗಳಿಂದ ರಮ್ಯಳೂ, ನಗರಗ್ರಾಮಾದಿಗಳಿಂದಲಂಕೃತಳೂ, ಬ್ರಾಹ್ಮಣ ಕ್ಷತ್ರಿಯಾದಿ ಚಾತುರ್ವರ್ಣ್ಯಗಳಿಂದ ಮಂಡಿತಳೂ, ಚತುರನಾದ ರಾಜನಿಂದ ಪೋಷಿತಳೂ ಆದಳು.

೫. ವೇನರಾಜನ ಪುತ್ರನಾದ ಪೃಥುಮಹಾರಾಜನು ಈ ರೀತಿಯಾದ ಪ್ರಖ್ಯಾತಿಯಿಂದ ಮಂಡಿತನೂ, ನೃಪೋತ್ತಮನೂ, ಸರ್ವರಿಂದ ಪೂಜ್ಯನೂ, ವಂದ್ಯನೂ, ಸಕಲ ಪ್ರಾಣಿಗಳಿಂದ ಸ್ತುತ್ಯನೂ, ಪ್ರಭಾವಶಾಲಿಯೂ, ಧರ್ಮಸ್ಥಾಪಕನೂ, ನೂತನ ಯುಗಪ್ರವರ್ತಕನೂ ಆಗಿದ್ದನು.

೬. ದಕ್ಷಪ್ರಜಾಪತಿಯ ವಂಶದವನೂ, ಸನಾತನನೂ, ಮಹಾತ್ಮನೂ ಆದ ಪೃಥುಮಹಾರಾಜನು ಮಹಾನುಭಾವರೂ, ವೇದವೇದಾಂಗಪಾರಂಗತರೂ ಆದ ಬ್ರಾಹ್ಮಣರಿಂದಲೂ ಕೂಡ ನಮಸ್ಕಾರಾರ್ಹನಾಗಿರುವನು.

೭. ವೇನರಾಯನ ಕುಮಾರನೂ, ಪ್ರತಾಪಶಾಲಿಯೂ, ಆದಿರಾಜನೂ ಆದ ಪೃಥುರಾಜನು ಕೀರ್ತಿವಂತರೂ, ಮಹಾನುಭಾವರೂ, ಪ್ರಾರ್ಥಿಸಲ್ಪಡುವರೂ ಆದ ರಾಜರಿಂದ ನಮಸ್ಕರಿಸಲರ್ಹನಾಗಿರುವನು.

**ಯೋಧೈರಪಿ ಚ ಸಂಗ್ರಾಮೇ ಪಾರ್ಥಯಾನ್ನೈರ್ಜಯಂ ಯುಧಿ ।**
**ಆದಿಕರ್ತಾ ನರಾಣಾಂ ವೈ ನಮಸ್ಯಃ ಪೃಥುರೇವ ಹಿ ॥ ೮ ॥**

**ಯೋ ಹಿ ಯೋದ್ಧಾ ರಣಂ ಯಾತಿ ಕೀರ್ತಯಿತ್ವಾ ಪೃಥುನ್ನೃಪಂ ।**
**ಸ ಘೋರರೂಪೇ ಸಂಗ್ರಾಮೇ ಕ್ಷೇಮೀ ತರತಿ ಕೀರ್ತಿಮಾನ್ ॥ ೯ ॥**

**ವೈಶ್ಯೈರಪಿ ಚ ರಾಜರ್ಷಿರ್ವೈಶ್ಯವೃತ್ತಿಸಮಾಸ್ಥಿತೈಃ ।**
**ಪೃಥುರೇವ ನಮಸ್ಕಾರ್ಯೋ ವೃತ್ತಿದಾತಾ ಮಹಾಯಶಾಃ ॥ ೧೦ ॥**

**ಏತೇ ವತ್ಸವಿಶೇಷಾಶ್ಚ ದೋಗ್ಧಾರಃ ಕ್ಷೀರಮೇವ ಚ ।**
**ಪಾತ್ರಾಣಿ ಚ ಮಯೋಕ್ತಾನಿ ಸರ್ವಾಣ್ಯೇವ ಯಥಾಕ್ರಮಂ ॥ ೧೧ ॥**

---

೮. ಯುದ್ಧದಲ್ಲಿ ಜಯಾಕಾಂಕ್ಷಿಗಳಾದ ಯೋಧರಿಂದಲೂ, ಮಹಾತ್ಮರಾದ ಮನುಷ್ಯರಿಂದಲೂ ಆದಿಕರ್ತನಾದ ಪೃಥುರಾಜನೇ ವಂದ್ಯನಾಗಿರುವನು.

೯. ಯಾವ ಯೋಧನು ರಣಾಂಗಣಕ್ಕೆ ಹೋಗಿ ಜಯಶಾಲಿಯಾದ ಪೃಥು ರಾಜನನ್ನು ಪ್ರಶಂಸೆಮಾಡಿ ಅನಂತರ ಯುದ್ಧದಲ್ಲಿ ಆಸಕ್ತನಾಗಿರುವನೋ, ಅವನು ಘೋರವಾದ ಯುದ್ಧದಲ್ಲಿಯೂ ಕೂಡ ಜಯಶೀಲನಾಗಿ ಕೀರ್ತಿಯನ್ನು ಪಡೆದು ಪಾರಾಗುವನು.

೧೦. ರಾಜರ್ಷಿಯೂ, ಮಹಾಯಶಸ್ಕನೂ, ಜೀವನಪ್ರದನೂ ಆದ ಪೃಥು ಮಹಾರಾಜನು ವಾಣಿಜ್ಯವೃತ್ತಿಯಲ್ಲಿ ಆಸಕ್ತರಾಗಿರುವ ವೈಶ್ಯರಿಂದಲೂ ಕೂಡ ಸದಾ ನಮಸ್ಕರಿಸಲ್ಪಡತಕ್ಕವನಾಗಿರುವನು.

೧೧. ಎಲೈ ವಿಪ್ರವರ್ಯರೇ, ಹೀಗೆ ಪ್ರಶಂಸಿಸುವ ಬ್ರಾಹ್ಮಣ ಕ್ಷತ್ರಿಯಾದಿಗಳನ್ನೂ, ವತ್ಸವಿಶೇಷಗಳನ್ನೂ, ಹಾಲುಕರೆಯುವವರನ್ನೂ, ಕ್ಷೀರವಿಶೇಷವನ್ನೂ, ಪಾತ್ರಗಳನ್ನೂ ಕೂಡ ನಿಮಗೋಸ್ಕರ ನಾನು ನಿರೂಪಿಸಿರುವೆನೆಂದು ಸೂತಮುನಿಯು ಹೇಳಿರುವನು.

ಬ್ರಹ್ಮಣಾ ಪ್ರಥಮಂ ದುಗ್ಧಾ ಪುರಾ ಪೃಥ್ವೀ ಮಹಾತ್ಮನಾ ।
ವಾಯುಂ ಕೃತ್ವಾ ತದಾ ವತ್ಸಂ ಬೀಜಾನಿ ವಸುಧಾತಲೇ ॥ ೧೨ ॥

ತತಃ ಸ್ವಾಯಂಭುವೇ ಪೂರ್ವಂ ತದಾ ಮನ್ವಂತರೇ ಪುನಃ ।
ವತ್ಸಂ ಸ್ವಾಯಂಭುವಂ ಕೃತ್ವಾ ದುಗ್ಧಾ ಗ್ರೀಷ್ಮೇಣ ವೈ ಮಹೀ ॥ ೧೩ ॥

ಮನೌ ಸ್ವಾರೋಚಿಷೇ ದುಗ್ಧಾ ಮಹೀ ಚೈತ್ರೇಣ ಧೀಮತಾ ।
ಮನುಂ ಸ್ವಾರೋಚಿಷಂ ಕೃತ್ವಾ ವತ್ಸಂ ಸಸ್ಯಾನಿ ವೈ ಪುರಾ ॥ ೧೪ ॥

ಉತ್ತಮೇಽನುತ್ತಮೇನಾಪಿ ದುಗ್ಧಾ ದೇವಭುಜೇನ ತು ।
ಮನುಂ ಕೃತ್ವೋತ್ತಮಂ ವತ್ಸಂ ಸರ್ವಸಸ್ಯಾಸಿ ಧೀಮತಾ ॥ ೧೫ ॥

---

೧೨. ಮಹಾನುಭಾವನೂ, ಸೃಷ್ಟಿಕರ್ತನೂ ಆದ ಬ್ರಹ್ಮದೇವನು ಆದಿಯಲ್ಲಿ ವಾಯುದೇವನನ್ನು ಕರುವನ್ನಾಗಿಯೂ, ಭೂತಲವನ್ನೇ ಪಾತ್ರವನ್ನಾಗಿಯೂ ಮಾಡಿಕೊಂಡು ಗೋರೂಪಿಯಾದ ಭೂದೇವಿಯಿಂದ ಬೀಜರೂಪವಾದ ಹಾಲನ್ನು ಕರೆದನು.

೧೩. ಅನಂತರ ಸ್ವಾಯಂಭುವಮನ್ವಂತರದಲ್ಲಿ ಮೊದಲು ಗ್ರೀಷ್ಮಋತುವೆಂಬ ಯಜಮಾನನು ಸ್ವಾಯಂಭುವಮನುವನ್ನು ಕರುವನ್ನಾಗಿಮಾಡಿಕೊಂಡು ಭೂಮಾತೆಯಿಂದ ಧಾನ್ಯರೂಪವಾದ ಹಾಲನ್ನು ಕರೆದನು.

೧೪. ತರುವಾಯ ಪೂರ್ವದ ಸ್ವಾರೋಚಿಷಮನ್ವಂತರದಲ್ಲಿ ಜ್ಞಾನಿಯಾದ ಚೈತ್ರನು ಸ್ವಾರೋಚಿಷಮನುವನ್ನು ಕರುವನ್ನಾಗಿಮಾಡಿಕೊಂಡು ಭೂಮಿಯಿಂದ ಸಸ್ಯಗಳೆಂಬ ಹಾಲನ್ನು ಕರೆದನು.

೧೫. ಉತ್ತಮಮನ್ವಂತರದಲ್ಲಿ ಅತ್ಯುತ್ತಮನೂ, ಮಹಾಜ್ಞಾನಿಯೂ ಆದ ದೇವಭುಜನು ಉತ್ತಮಮನುವನ್ನು ಕರುವನ್ನಾಗಿಮಾಡಿಕೊಂಡು ಭೂಮಿಯಿಂದ ಸರ್ವಸಸ್ಯಗಳೆಂಬ ಹಾಲನ್ನು ಕರೆದನು.

**ಪುನಶ್ಚ ಪಂಚಮೇ ಪ್ರಾಪ್ತೇ ತಾಮಸಸ್ಯಾಂತರೇ ಮನೋಃ ।**
**ದುಗ್ಧೇಯಂ ತಾಮಸಂ ವತ್ಸಂ ಕೃತ್ವಾ ತು ಬಲಬಂಧುನಾ ॥ ೧೬ ॥**

**ಚಾರಿಷ್ಣವಸ್ಯ ದೇವಸ್ಯ ಸಂಪ್ರಾಪ್ತೇ ಚಾಂತರೇ ಮನೋಃ ।**
**ದುಗ್ಧಾ ಮಹೀಪುರಾಣೇನ ವತ್ಸಂ ಚಾರಿಷ್ಣವಂ ಪ್ರತಿ ॥ ೧೭ ॥**

**ಚಾಕ್ಷುಷೇಽಪಿ ಚ ಸಂಪ್ರಾಪ್ತೇ ತದಾ ಮನ್ವಂತರೇ ಪುನಃ ।**
**ದುಗ್ಧಾ ಮಹೀ ಪುರಾಣೇನ ವತ್ಸಂ ಕೃತ್ವಾ ತು ಚಾಕ್ಷುಷಂ ॥ ೧೮ ॥**

**ಚಾಕ್ಷುಷಸ್ಯಾಂತರೇಽತೀತೇ ಪ್ರಾಪ್ತೇ ವೈವಸ್ವತೇ ಪುನಃ ।**
**ವೈನ್ಯೇನೇಯಂ ಮಹೀ ದುಗ್ಧಾ ಯಥಾ ತೇ ಕೀರ್ತಿತಂ ಮಯಾ ॥ ೧೯ ॥**

---

೧೬. ಅದಾದನಂತರ ಪಶ್ಚಿಮತಾಮಸಮನ್ವಂತರದಲ್ಲಿ ಬಲಬಂಧುವು ತಾಮಸಮನುವನ್ನು ಕರುವನ್ನಾಗಿಮಾಡಿಕೊಂಡು ಸಮಸ್ತವಾದ ಸಸ್ಯಗಳೆಂಬ ಹಾಲನ್ನು ಕರೆದನು

೧೭. ಅನಂತರ ಚಾರಿಷ್ಣವಮನ್ವಂತರದಲ್ಲಿ ಪುರಾಣಪುರುಷನು ಚಾರಿಷ್ಣವ ಮನುವನ್ನು ಕರುವನ್ನಾಗಿಮಾಡಿಕೊಂಡು ಭೂಮಿಯಿಂದ ಸಕಲಸಮೃದ್ಧಿಯನ್ನೂ ಪಡೆದನು.

೧೮. ಅನಂತರ ಕ್ರಮವಾಗಿ ಚಾಕ್ಷುಷಮನ್ವಂತರವು ಪ್ರಾಪ್ತವಾಗಲು ಆ ಮನ್ವಂತರದಲ್ಲಿಯೂ ಸಹ ಪುರಾಣಪುರುಷನು ಆ ಮನುವನ್ನು ಕರುವನ್ನಾಗಿ ಮಾಡಿಕೊಂಡು ಸಸ್ಯರೂಪವಾದ ಕ್ಷೀರವನ್ನು ಭೂರೂಪವಾದ ಹಸುವಿನಿಂದ ಕರೆದನು.

೧೯. ಆ ಚಾಕ್ಷುಷಮನ್ವಂತರವು ಕಳೆದು ವೈವಸ್ವತಮನ್ವಂತರವು ಬರಲಾಗಿ ವೇನಪುತ್ರನಾದ ಪೃಥುಮಹಾರಾಜನು ಈ ಭೂಮಿಯನ್ನು ಕರೆದು ಪ್ರಜೆಗಳನ್ನು ರಕ್ಷಿಸಿದನೆಂಬ ವಿಷಯವನ್ನು ನಾನು ಪೂರ್ವದಲ್ಲಿಯೇ ಹೇಳಿರುವೆನು.

ಏತೈರ್ದುಗ್ಧಾ ಪುರಾ ಪೃಥ್ವೀ ವ್ಯತೀತೇಷ್ವಂತರೇಷು ವೈ ।
ದೇವಾದಿಭಿರ್ಮನುಷ್ಯೈಶ್ಚ ತಥಾ ಭೂತಾದಿಭಿಶ್ಚ ಯಾ ॥ ೨೦ ॥

ಏವಂ ಸರ್ವೇಷು ವಿಜ್ಞೇಯಾ ಹ್ಯತೀತಾನಾಗತೇಷ್ವಿಹ ।
ದೇವಾ ಮನ್ವಂತರೇಷ್ವಸ್ಯ ಪೃಥೋಸ್ತು ಶ್ರುಣುತ ಪ್ರಜಾಃ ॥ ೨೧ ॥

ಪೃಥೋಸ್ತು ಪುತ್ರೌ ವಿಕ್ರಾಂತೌ ಜಜ್ಞಾತೇಂತರ್ಧಿಪಾಲಿನೌ ।
ಶಿಖಂಡಿನೀ ಹವಿರ್ಧಾನಮಂತರ್ಧಾನಾದ್ವ್ಯಜಾಯತ ॥ ೨೨ ॥

ಹವಿರ್ಧಾನಾತ್ ಷಡಾಗ್ನೇಯೀ ಧಿಷಣಾಜನಯತ್ಸುತಾನ್ ।
ಪ್ರಾಚೀನಬರ್ಹಿಷಂ ಶುಕ್ರಂ ಗಯಂ ಕೃಷ್ಣಂ ವ್ರಜಾಜಿನೌ ॥ ೨೩ ॥

---

೨೦. ಈ ರೀತಿಯಾಗಿ ಅತೀತಗಳಾದ ಮನ್ವಂತರಗಳಲ್ಲಿ ದೇವತೆಗಳು, ಮನುಷ್ಯರು, ಭೂತಗಳು ಇವೇ ಮೊದಲಾದವರಿಂದ ಈ ಭೂಮಿಯು ಕರೆಯಲ್ಪಟ್ಟು, ಅವರವರಿಗೆ ಬೇಕಾದ ಸಕಲ ವಸ್ತುಗಳನ್ನೂ ಕೊಟ್ಟಳು ಎಂಬ ವಿಷಯಗಳನ್ನು ಮೊದಲೇ ತಿಳಿಸಿರುವೆನು ಎಂದನು.

೨೧. ಎಲೈ ವಿಪ್ರೋತ್ತಮರೇ, ಹೀಗೆಯೇ ಅತೀತಾನಾಗತವಾದ ಸಕಲ ಮನ್ವಂತರಗಳಲ್ಲಿಯೂ ದೇವಾದಿಗಳು ಅವತರಿಸಿ ಲೋಕಕಲ್ಯಾಣವನ್ನುಂಟುಮಾಡುವರು. ಈ ವೈವಸ್ವತ ಮನ್ವಂತರಗಳಲ್ಲಿ ಹುಟ್ಟಿದ ಪೃಥುಮಹಾರಾಜನ ಸಂತಾನವನ್ನು ಈಗ ಹೇಳುವೆನು ಕೇಳಿರೆಂದನು.

೨೨. ಇಂತಹ ಪೃಥುಮಹಾರಾಜರಿಗೆ ಮಹಾಶೂರರಾದ ಅಂತರ್ಧಿ, ಪಾಲಿನರೆಂಬ ಇಬ್ಬರು ಮಕ್ಕಳು ಹುಟ್ಟಿದರು. ಅಂತರ್ಧನಿಗೆ ಶಿಖಂಡಿನಿಯಲ್ಲಿ ಹವಿರ್ಧಾನನೆಂಬ ಪುತ್ರನು ಜನಿಸಿದನು.

೨೩. ಜ್ಞಾನಿಯಾದ ಆಗ್ನೇಯಿಯು ಹವಿರ್ಧಾನನಿಂದ ಪ್ರಾಚೀನಬರ್ಹಿಷ, ಶುಕ್ರ, ಗಯ, ಕೃಷ್ಣ, ವ್ರಜ, ಅಜಿನರೆಂಬ ಆರುಜನ ಮಕ್ಕಳನ್ನು ಪಡೆದಳು.

**ಪ್ರಾಚೀನಬರ್ಹಿರ್ಭಗವಾನ್ ಮಹಾನಾಸೀತ್ ಪ್ರಜಾಪತಿಃ ।**
**ಬಲಶ್ರುತತಪೋವೀರ್ಯೈಃ ಪೃಥಿವ್ಯಾಮೇಕರಾಢಸೌ ॥**
**ಪ್ರಾಚೀನಾಗ್ರಾಃ ಕುಶಾಸ್ತಸ್ಯ ತಸ್ಮಾತ್ಪ್ರಾಚೀನಬರ್ಹ್ಯಸೌ ॥ ೨೪ ॥**

**ಸಮುದ್ರತನಯಾನಾಂ ತು ಕೃತದಾರಃ ಸ ವೈ ಪ್ರಭುಃ ।**
**ಮಹತಸ್ತಮಸಃ ಪಾರೇ ಸವರ್ಣಾಯಾಂ ಪ್ರಜಾಪತೇಃ ॥**
**ಸವರ್ಣಾಽಧತ್ತ ಸಾಮುದ್ರೀ ದಶ ಪ್ರಾಚೀನಬರ್ಹಿಷಃ ॥ ೨೫ ॥**

**ಸರ್ವೇ ಪ್ರಚೇತಸೋ ನಾಮ ಧನುರ್ವೇದಸ್ಯ ಪಾರಗಾಃ ।**
**ಅಪೃಥಗ್ಧರ್ಮಚರಣಾಸ್ತೇಽತಪ್ಯಂತ ಮಹತ್ತಪಃ ॥**
**ದಶವರ್ಷಸಹಸ್ರಾಣಿ ಸಮುದ್ರಸಲಿಲೇಶಯಾಃ ॥ ೨೬ ॥**

**ತಪಶ್ಚರತ್ಸು ಪೃಥಿವೀಂ ಪ್ರಚೇತಸ್ಸು ಮಹೀರುಹಾಃ ।**
**ಅರಕ್ಷ್ಯಮಾಣಾಮಾವವ್ರುರ್ಬಭೂವಾಥ ಪ್ರಜಾಕ್ಷಯಃ ॥ ೨೭ ॥**

---

೨೪. ಮಹಾತ್ಮನೂ ಪೂಜ್ಯನೂ ಆದ ಪ್ರಾಚೀನ ಬರ್ಹಿಷನು ಶಕ್ತಿ, ಜ್ಞಾನ, ತಪಸ್ಸು, ವೀರ್ಯ ಇವುಗಳಿಂದ ಈ ಭೂಮಿಯಲ್ಲಿ ಪ್ರಜಾಪತಿಯೂ ಚಕ್ರವರ್ತಿಯೂ ಆಗಿ ಲೋಕವಿಖ್ಯಾತನಾಗಿದ್ದನು ಆ ಮಹಾರಾಜನು ಹುಟ್ಟುವಾಗ ಕುಶಗಳು ಪೂರ್ವಾಭಿಮುಖಗಳಾಗಿದ್ದುವು. ಅದುದರಿಂದ ಅವನಿಗೆ ಪ್ರಾಚೀನಬರ್ಹಿಷನೆಂಬ ನಾಮವು ಪ್ರಾಪ್ತವಾಗಿದೆ.

೨೫. ಪ್ರಭುವಾದ ಪ್ರಾಚೀನ ಬರ್ಹಿಷನು ಸಮುದ್ರರಾಜನ ಕುಮಾರಿಯಾದ ಸವರ್ಣೆಯನ್ನು ಮದುವೆಯಾದನು ಅತ್ಯಂತ ತಮೋಗುಣಾತೀತಳೂ, ಸಮುದ್ರರಾಜ ಕುಮಾರಿಯೂ ಆದ ಸವರ್ಣೆಯು ಪ್ರಾಚೀನಬರ್ಹಿಷನಾಮಕರಾದ ಹತ್ತು ಜನ ಮಕ್ಕಳನ್ನು ಪಡೆದಳು.

೨೬. ಪ್ರಚೇತಸನಾಮಕರೂ, ಧನುರ್ವೇದಪಾರಂಗತರೂ. ಸಾಂಘಿಕವಾಗಿ ತಪಸ್ಸನ್ನು ಮಾಡುವವರೂ ಆದ ಆ ಕುಮಾರರೆಲ್ಲರೂ ಸಮುದ್ರದ ಜಲದಲ್ಲಿ ಹತ್ತು ಸಹಸ್ರ ವರ್ಷಗಳವರೆಗೂ ಅತಿ ಘೋರವಾದ ಮಹಾತಪಸ್ಸನ್ನು ಮಾಡಿದರು.

೨೭. ಪ್ರಚೇತಸನಾಮಕರಾದ ಆ ಹತ್ತು ಜನರೂ ಅತಿಘೋರವಾದ ತಪಸ್ಸನ್ನು ಮಾಡಲಾಗಿ, ಭೂಮಿಯೆಲ್ಲವೂ ವೃಕ್ಷಗಳಿಂದ ಆವರಿಸಲ್ಪಟ್ಟು, ರಕ್ಷಕರಿಲ್ಲದೆ ಅನಾಯಕ ವಾಗಿ ಪ್ರಜಾನಾಶವು ಸಂಭವಿಸಿತು.

ಪ್ರತ್ಯಾಹತೇ ತದಾ ತಸ್ಮಿಂಶ್ಚಾಕ್ಷುಷಸ್ಯಾಂತರೇ ಮನೋಃ ।
ನಾಶಕತ್ ಮಾರುತೋ ವಾತುಂ ವೃತಂ ಖಮಭವದ್‌ದ್ರುಮೈಃ ॥
ದಶವರ್ಷಸಹಸ್ರಾಣಿ ನ ಶೇಕುಶ್ಚೇಷ್ಟಿತುಂ ಪ್ರಜಾಃ ॥ ೨೮ ॥

ತದುಪಶ್ರುತ್ಯ ತಪಸಾ ಸರ್ವೇ ಯುಕ್ತಾಃ ಪ್ರಚೇತಸಃ ।
ಮುಖೇಭ್ಯೋ ವಾಯುಮಗ್ನಿಂ ಚ ಸಸೃಜುರ್ಜಾತಮನ್ಯವಃ ॥ ೨೯ ॥

ಉನ್ಮೂಲಾನಥ ತಾನ್ ವೃಕ್ಷಾನ್ ಕೃತ್ವಾ ವಾಯುರಶೋಷಯತ್ ।
ತಾನಗ್ನಿರದಹದ್ಘೋರ ಏವಮಾಸೀದ್ ದ್ರುಮಕ್ಷಯಃ ॥ ೩೦ ॥

ದ್ರುಮಕ್ಷಯಮಥೋ ಬುದ್ಧ್ವಾ ಕಿಂಚಿಚ್ಛೇಷೇಷು ಶಾಖಿಷು ।
ಉಪಗಮ್ಯಾಬ್ರವೀದೇತಾನ್ ರಾಜಾ ಸೋಮಃ ಪ್ರಚೇತಸಃ ॥ ೩೧ ॥

---

೨೮. ಹೀಗೆ ಚಾಕ್ಷುಷಮನ್ವಂತರದಲ್ಲಿ ಲೋಕವೆಲ್ಲವೂ ವೃಕ್ಷಗಳಿಂದ ಆವೃತವಾಗಿ ಪ್ರಜಾಕ್ಷಯವಾಗಲು, ಗಾಳಿಯು ಬೀಸುವುದಕ್ಕೂ ಅವಕಾಶವಿಲ್ಲದೆ ಹೋಯಿತು. ಹೀಗೆ ಮರವು ದಟ್ಟವಾಗಿ ಬೆಳೆಯಲು, ಹತ್ತುಸಾವಿರ ವರ್ಷಗಳವರೆಗೂ ಪ್ರಜೆಗಳು ಸಂಚರಿಸುವುದಕ್ಕೂ ಅವಕಾಶವಿಲ್ಲದೇಹೋಯಿತು.

೨೯. ಹೀಗೆ ಪ್ರಜಾಕ್ಷಯವು ಆಗಲು, ತಪಸ್ಸಿನಲ್ಲಿಯೇ ನಿರತರಾದ ಆ ಪ್ರಚೇತಸರು ತಮ್ಮ ತಪೋಮಹಿಮೆಗಳಿಂದ ಈ ವಿಷಯವನ್ನು ಅರಿತು ಅತ್ಯಂತ ಕೋಪಗೊಂಡು, ತಮ್ಮ ಮುಖಗಳಿಂದ ಗಾಳಿಯನ್ನೂ ಮತ್ತು ಅಗ್ನಿಯನ್ನೂ ಸೃಷ್ಟಿಸಿದರು.

೩೦. ಹೀಗೆ ಅವರ ತಪಶ್ಶಕ್ತಿಯಿಂದ ಸೃಷ್ಟವಾದ ಗಾಳಿಯು ಮರಗಳೆಲ್ಲವನ್ನೂ ಆಮೂಲಾಗ್ರವಾಗಿ ಶೋಷಣಮಾಡಿತು. ತರುವಾಯ ಅಗ್ನಿಯು ಅವುಗಳನ್ನು ಸುಟ್ಟು ಭಸ್ಮಮಾಡಿತು. ಈ ರೀತಿಯಾಗಿ ವೃಕ್ಷಗಳೆಲ್ಲವೂ ನಾಶವಾದುವು.

೩೧. ಹೀಗೆ ವೃಕ್ಷಗಳೆಲ್ಲವೂ ನಾಶವಾಗಲಾಗಿ ಅವುಗಳನ್ನು ನೋಡಿದ ವೃಕ್ಷಗಳ ರಾಜನಾದ ಸೋಮನು ವೃಕ್ಷಗಳೆಲ್ಲವೂ ನಾಶವಾಗಿ ಅಲ್ಪಾವಶಿಷ್ಟವಾಗಲಾಗಿ ಆ ಪ್ರಚೇತಸರನ್ನು ಹೊಂದಿ ಹೀಗೆ ಹೇಳಿದನು.

**ದೃಷ್ಟ್ವಾ ಪ್ರಯೋಜನಂ ಸರ್ವಂ ಲೋಕಸಂತಾನಕಾರಣಾತ್ ।**
**ಕೋಪಂ ತ್ಯಜತ ರಾಜಾನಃ ಸರ್ವಂ ಪ್ರಾಚೀನಬರ್ಹಿಷಃ ॥ ೩೨ ॥**

**ವೃಕ್ಷಾಃ ಕ್ಷಿತ್ಯಾಂ ಜನಿಷ್ಯಂತಿ ಶಾಮ್ಯೇ ತಾಮಗ್ನಿಮಾರುತೌ ।**
**ರತ್ನಭೂತಾ ತು ಕನ್ಯೇಯಂ ವೃಕ್ಷಾಣಾಂ ವರವರ್ಣಿನೀ ॥ ೩೩ ॥**

**ಭವಿಷ್ಯಂ ಜಾನತಾ ಹ್ಯೇಷಾ ಮಯಾ ಗೋಭಿರ್ವಿವರ್ಧಿತಾ ।**
**ಮಾರಿಷಾ ನಾಮ ನಾಮ್ನೈಷಾ ವೃಕ್ಷೈರೇವ ವಿನಿರ್ಮಿತಾ ॥**
**ಭಾರ್ಯಾ ಭವತು ವೋ ಹ್ಯೇಷಾ ಸೋಮಗರ್ಭವಿವರ್ಧಿತಾ ॥ ೩೪ ॥**

**ಯುಷ್ಮಾಕಂ ತೇಜಸೋರ್ಧೇನ ಮಮ ಚಾರ್ಧೇನ ತೇಜಸಃ ।**
**ಅಸ್ಯಾಮುತ್ಪತ್ಸ್ಯತೇ ವಿದ್ವಾನ್ ದಕ್ಷೋ ನಾಮ ಪ್ರಜಾಪತಿಃ ॥ ೩೫ ॥**

---

೩೨. ಆಗ ಸೋಮನು ಪ್ರಾಚೀನ ಬರ್ಹಿಷನ ಪುತ್ರರಾದ ಎಲೈ ರಾಜರೇ, ನೀವು ಲೋಕಸಂತಾನಕಾರಣಕ್ಕಾಗಿ ಸರ್ವಪ್ರಯೋಜನಗಳನ್ನು ಅರಿತು, ಕೋಪವನ್ನು ಬಿಡಿರೆಂದು ಪ್ರಾರ್ಥಿಸಿಕೊಂಡನು.

೩೩. ಎಲೈ ಪ್ರಚೇತಸರೇ, ಈ ವೃಕ್ಷಗಳು ಭೂಮಿಯಲ್ಲಿ ಸುಂದರಿಯಾದ ಕುಮಾರಿಯನ್ನು ಪಡೆಯುತ್ತವೆ ಆದುದರಿಂದ ಅಗ್ನಿವಾಯುಗಳು ಶಮನವಾಗಿ ಲೋಕಕ್ಕೆ ಹಿತವಾಗಲಿ. ಸಾಧ್ವೀಮಣಿಯಾದ ಈ ಸುಂದರಿಯು ವೃಕ್ಷಗಳಿಗೆ ರತ್ನಪ್ರಾಯಳಾದ ಕುಮಾರಿಯಾಗಿಯೂ ಇರುವಳು.

೩೪. ಮುಂದೆ ನಡೆಯುವ ವೃತ್ತಾಂತವನ್ನರಿತ ನಾನು ನನ್ನ ಕಾಂತಿಗಳಿಂದ ಮಾರಿಷೆಯೆಂಬ ಈ ಕನ್ಯೆಯನ್ನು ಅಭಿವೃದ್ಧಿಮಾಡಿರುವೆನು. ಈ ಮಾರಿಷೆಯು ವೃಕ್ಷಾಭಿಮಾನಿಯಾದ ದೇವಕನ್ನಿಕೆಯಾಗಿರುವಳು. ಸೋಮಕುಮಾರಿಯಾದ ಈಕೆಯು ನಿಮಗೆ ಗೃಹಣಿಯಾಗುವಳು. ದಯಪಾಲಿಸಿ ಇವಳನ್ನು ಸ್ವೀಕರಿಸಬೇಕೆಂದು ಹೇಳಿದನು.

೩೫. ನಿಮ್ಮ ತಪೋಬಲದಿಂದಲೂ, ನನ್ನ ಶಕ್ತಿಯಿಂದಲೂ ಅಂದರೆ ನಾನು ಕೊಡುವ ವರದಿಂದಲೂ ಸಹ ಇವಳಲ್ಲಿ ಜ್ಞಾನಿಯೂ ಪ್ರಜಾಪತಿಯೂ ಆದ ದಕ್ಷನೆಂಬ ಪುತ್ರನು ಉದ್ಭವಿಸುವನು.

ಸ ಇಮಾಂ ದಗ್ಧಭೂಯಿಷ್ಠಾಂ ಯುಷ್ಮತ್ತೇಜೋಮಯೇನ ವೈ ।
ಅಗ್ನಿನಾಗ್ನಿಸಮೋ ಭೂಯಃ ಪ್ರಜಾಃ ಸಂವರ್ದ್ಧಯಿಷ್ಯಸಿ ॥ ೩೬ ॥

ತತಃ ಸೋಮಸ್ಯ ವಚನಾಜ್ಜಗೃಹುಸ್ತೇ ಪ್ರಚೇತಸಃ ।
ಸಹೃತ್ಯ ಕೋಪಂ ವೃಕ್ಷೇಭ್ಯಃ ಪತ್ನೀಂ ಧರ್ಮೇಣ ಮಾರಿಷಾಂ ॥ ೩೭ ॥

ಮಾರಿಷಾಯಾಂ ತತಸ್ತೇ ವೈ ಮನಸಾ ಗರ್ಭಮಾದಧುಃ ।
ದಶಭ್ಯಸ್ತು ಪ್ರಚೇತೋಭ್ಯೋ ಮಾರಿಷಾಯಾಂ ಪ್ರಜಾಪತಿಃ ॥ ೩೮ ॥

ದಕ್ಷೋ ಜಜ್ಞೇ ಮಹಾತೇಜಾಃ ಸೋಮಸ್ಯಾಂಶೇನ ವೀರ್ಯವಾನ್ ।
ಅಸೃಜನ್ಮಾನಸಾನಾದೌ ಪ್ರಜಾ ದಕ್ಷೋಽಥ ಮೈಥುನಾತ್ ॥ ೩೯ ॥

ಅಚರಾಂಶ್ಚ ಚರಾಂಶ್ಚೈವ ದ್ವಿಪದೋಽಥ ಚತುಷ್ಪದಾನ್ ।
ವಿಸೃಜ್ಯ ಮನಸಾ ದಕ್ಷಃ ಪಶ್ಚಾದಸೃಜತ ಸ್ತ್ರಿಯಃ ॥ ೪೦ ॥

---

೩೬. ಅಗ್ನಿಗೆ ಸಮಾನ ತೇಜಸ್ವಿಯಾದ ಆ ದಕ್ಷೇಶ್ವರನು ಪ್ರಾಯಿಕವಾಗಿ ದಗ್ಧವಾಗಿರುವ ಈ ಭೂಮಂಡಲದಲ್ಲಿ ನಿಮ್ಮ ತಪೋಮಹಿಮೆಯಿಂದ ಪುನಃ ಪ್ರಜೆಗಳನ್ನು ಪೂರ್ವದ ಹಾಗೆಯೇ ವೃದ್ಧಿಗೊಳಿಸುವನೆಂದನು.

೩೭. ಅನಂತರ ಸೋಮದೇವನ ಮಾತಿನಂತೆ ಆ ಪ್ರಚೇತಸರು ಕೋಪವನ್ನು ತ್ಯಜಿಸಿ, ವೃಕ್ಷರಾಜನಿಂದ ದತ್ತಳಾದ ಮಾರಿಷಾನಾಮಕುಮಾರಿಯನ್ನು ಶಾಸ್ತ್ರೋಕ್ತ ಕ್ರಮದಿಂದ ಪತ್ನೀಯನ್ನಾಗಿ ಸ್ವೀಕರಿಸಿದರು.

೩೮. ಅನಂತರ ಆ ಹತ್ತು ಜನ ಪ್ರಚೇತಸರೂ ತಮ್ಮ ತಪೋಮಹಿಮೆಯಿಂದ ಮಾರಿಷೆಯು ಗರ್ಭವತಿಯಾಗಲಿಯೆಂದು ಸಂಕಲ್ಪಮಾಡಿದರು. ಅವರ ಮನಃಸಂಕಲ್ಪ ಮಾತ್ರದಿಂದಲೇ ಮಾರಿಷೆಯು ಗರ್ಭವತಿಯಾದಳು.

೩೯–೪೦. ಅನಂತರ ಮಾರಿಷೆಯಲ್ಲಿ ಪ್ರಚೇತಸರ ತಪೋಮಹಿಮೆಯಿಂದಲೂ, ಸೋಮದೇವನ ಅಂಶದಿಂದಲೂ, ಮಹಾತೇಜಸ್ವಿಯೂ ಅತಿಪರಾಕ್ರಮಿಯೂ ಪ್ರಜೇಶನೂ ಆದ ದಕ್ಷಪ್ರಜಾಪತಿಯು ಉತ್ಪನ್ನನಾದನು. ಆ ದಕ್ಷನೂ ಕೂಡ ಮೊದಲು ತನ್ನ ಶಕ್ತಿಯಿಂದ ಮಾನಸಪ್ರಜೆಗಳನ್ನೂ, ಚರಾಚರಾತ್ಮಕವಾದ ಪ್ರಾಣಿಗಳನ್ನೂ, ಅನಂತರ ಪುರುಷಧರ್ಮದಿಂದ ದ್ವಿಪಾದ ಮತ್ತು ಚತುಷ್ಪಾದ ಪ್ರಾಣಿಗಳನ್ನೂ ಸೃಷ್ಟಿಸಿ, ಪುನಃ ಮನಃಸಂಕಲ್ಪದಿಂದ ಸ್ತ್ರೀಯರನ್ನೂ ಸಹ ನಿರ್ಮಿಸಿದನು.

ದದೌ ಸ ದಶ ಧರ್ಮಾಯ ಕಶ್ಯಪಾಯ ತ್ರಯೋದಶ ।
ಕಾಲಸ್ಯ ನಯನೇ ಯುಕ್ತಾಃ ಸಪ್ತವಿಂಶತಿಮಿಂದವೇ ॥ ೪೧ ॥

ಏಭ್ಯೋ ದತ್ವಾ ತತೋನ್ಯಾ ವೈ ಚತಸ್ರೋರಿಷ್ಟನೇಮಿನೇ ।
ದ್ವೇ ಚೈವ ಬಹುಪುತ್ರಾಯ ದ್ವೇ ಚೈವಾಂಗಿರಸೇ ತಥಾ ॥
ಕನ್ಯಾಮೇಕಾಂ ಕೃಶಾಶ್ವಾಯ ತೇಭ್ಯೋಪತ್ಯಂ ನಿಬೋಧತ ॥ ೪೨ ॥

ಅಂತರಂ ಚಾಕ್ಷುಷಸ್ಯಾತ್ರ ಮನೋಃ ಷಷ್ಠಂ ತು ಹೀಯತೇ ।
ಮನೋರ್ವೈವಸ್ವತಸ್ಯಾಪಿ ಸಪ್ತಮಸ್ಯ ಪ್ರಜಾಪತೇಃ ॥ ೪೩ ॥

ತಾಸು ದೇವಾಃ ಖಗಾ ಗಾವೋ ನಾಗಾ ದಿತಿಜದಾನವಾಃ ।
ಗಂಧರ್ವಾಪ್ಸರಸಶ್ಚೈವ ಜಜ್ಞಿರೇನ್ಯಾಶ್ಚ ಜಾತಯಃ ॥ ೪೪ ॥

---

೪೧ ದಕ್ಷೇಶನು ಆ ಕನ್ನಿಕೆಯಲ್ಲಿ ಹತ್ತು ಕನ್ಯೆಯರನ್ನು ಧರ್ಮದೇವನಿಗೂ, ಹದಿಮೂರು ಕುಮಾರಿಯರನ್ನು ಕಶ್ಯಪರಿಗೂ, ವಿಶಾಲನೇತ್ರೆಯರಾದ ಇಪ್ಪತ್ತೇಳು ಪುತ್ರಿಯರನ್ನು ಚಂದ್ರನಿಗೂ ಕೊಟ್ಟು ವಿಧಿಪೂರ್ವಕವಾಗಿ ವಿವಾಹವನ್ನು ಮಾಡಿ ಕೊಟ್ಟನು.

೪೨. ತರುವಾಯ ದಕ್ಷೇಶ್ವರನು ಮೇಲೆ ಹೇಳಿದವರಿಗೆ ಕೊಟ್ಟು, ಉಳಿದವರಲ್ಲಿ ನಾಲ್ವರು ಕುಮಾರಿಯರನ್ನು ಅರಿಷ್ಟನೇಮಿಗೂ, ಬಹುಪುತ್ರರಾಗಿರುವ ಅಂಗಿರಸ ಮಹರ್ಷಿಗಳಿಗೆ ಇಬ್ಬರು ಕನ್ಯೆಯರನ್ನೂ, ಒಬ್ಬಳು ಕುಮಾರಿಯನ್ನು ಕೃಶಾಶ್ವನಿಗೂ ಕೊಟ್ಟು ವಿವಾಹವನ್ನು ಬೆಳಸಿದನು. ಈಗ ಅವರಿಗೆ ಉತ್ಪನ್ನರಾದ ಮಕ್ಕಳ ವಿಚಾರ ವನ್ನು ಹೇಳುವೆನು ಕೇಳಿರೆಂದನು.

೪೩. ತರುವಾಯ ಆರನೆಯ ಚಾಕ್ಷುಷಮನ್ವಂತರಕ್ಕಿಂತಲೂ ಏಳನೆಯ ವೈವಸ್ವತಮನ್ವಂತರದ ಪ್ರಜಾಪತಿಗಳ ಸೃಷ್ಟಿಕ್ರಮವು ಹೀನವಾಗಿರುವುದು.

೪೪. ಚಾಕ್ಷುಷಮನ್ವಂತರದಂತೆ ವೈವಸ್ವತಮನ್ವಂತರದಲ್ಲಿಯೂ ಕೂಡ ಆ ದಕ್ಷಕುಮಾರಿಯರಲ್ಲಿ ದೇವತೆಗಳು, ಪಕ್ಷಿಗಳು, ಗೋವುಗಳು, ಸರ್ಪಗಳು, ದೈತ್ಯರು, ದಾನವರು, ಗಂಧರ್ವರು, ಅಪ್ಸರಸಿಯರು ಇವರೇ ಮೊದಲಾದ ಅನೇಕ ಜಾತಿಯರು ಉತ್ಪನ್ನರಾದರು.

ತತಃ ಪ್ರಭೃತಿ ಲೋಕೇಽಸ್ಮಿನ್ ಪ್ರಜಾ ಮೈಥುನಸಂಭವಾಃ ।
ಸಂಕಲ್ಪಾದ್ದರ್ಶನಾತ್ಸ್ಪರ್ಶಾತ್ಪೂರ್ವೇಷಾಂ ಸೃಷ್ಟಿರುಚ್ಯತೇ ॥ ೪೫ ॥

॥ ಋಷಯ ಊಚುಃ ॥

ದೇವಾನಾಂ ದಾನವಾನಾಂ ಚ ದೇವರ್ಷೀಣಾಂ ಚ ತೇ ಶುಭಃ ।
ಸಂಭವಃ ಕಥಿತಃ ಪೂರ್ವಂ ದಕ್ಷಸ್ಯ ಚ ಮಹಾತ್ಮನಃ ॥ ೪೬ ॥

ಪ್ರಾಣಾತ್ಪ್ರಜಾಪತೇರ್ಜನ್ಮ ದಕ್ಷಸ್ಯ ಕಥಿತಂ ತ್ವಯಾ ।
ಕಥಂ ಪ್ರಾಚೇತಸತ್ವಂ ಚ ಪುನರ್ಲೇಭೇ ಮಹಾತಪಾಃ ॥ ೪೭ ॥

ಏತನ್ನಃ ಸಂಶಯಂ ಸೂತ ವ್ಯಾಖ್ಯಾತಂ ತ್ವಮಿಹಾರ್ಹಸಿ ।
ಸ ದೌಹಿತ್ರಶ್ಚ ಸೋಮಸ್ಯ ಕಥಂ ಶ್ವಶುರತಾಂ ಗತಃ ॥ ೪೮ ॥

---

೪೫ ಆ ದಿವಸ ಮೊದಲುಗೊಂಡು ಈ ಲೋಕದಲ್ಲಿ ಪ್ರಜಾಸೃಷ್ಟಿಯು ಸ್ತ್ರೀಪುರುಷರ ಸಂಬಂಧದಿಂದ ಉಂಟಾಯಿತು ಪೂರ್ವಿಕರಾದ ಮಹಾತ್ಮರ ಸೃಷ್ಟಿ ಕ್ರಮವಾದರೋ, ಸಂಕಲ್ಪದಿಂದಲೂ, ದರ್ಶನಮಾತ್ರದಿಂದಲೂ, ಸ್ಪರ್ಶದಿಂದಲೂ ಉಂಟಾದವೆಂಬುದಾಗಿ ತಿಳಿಯಬೇಕು.

೪೬–೪೭. ಮಹರ್ಷಿಗಳು ಕೇಳಿದರು.—ಎಲೈ ಸೂತಮುನಿಯೇ, ನೀನು ದಯವಿಟ್ಟು ನಮಗೆ ದೇವತೆಗಳು, ದಾನವರು, ದೇವರ್ಷಿಗಳು ದಕ್ಷಪ್ರಜಾಪತಿಯು ಇವರ ಸೃಷ್ಟಿಕ್ರಮವನ್ನು ಯಥಾಸ್ಥಿತವಾಗಿ ಹೇಳಿರುತ್ತೀರಿ ಮತ್ತು ಪ್ರಾಣದೇವನಿಂದ ದಕ್ಷಪ್ರಜಾಪತಿಯ ಉತ್ಪತ್ತಿಯನ್ನೂ ನಿರೂಪಿಸಿರುತ್ತೀರಿ. ಆದರೆ ಮಹಾತಪಸ್ವಿಯಾದ ದಕ್ಷೇಶ್ವರನು ಪ್ರಚೇತಸರ ಮಗನಾಗಿ ಜನಿಸಲು ಕಾರಣವೇನು ? ಎಂದರು.

೪೮. ಮತ್ತು ಆ ದಕ್ಷಪ್ರಜಾಪತಿಯು ಸೋಮವಂಶದಲ್ಲಿ ಜನಿಸಿ ಅವನಿಗೆ ಹೇಗೆ ಮಾವನಾದನು. ಈ ವಿಷಯಗಳಲ್ಲಿ ನಮಗೆ ಬಹಳವಾಗಿ ಅನುಮಾನ ಉಂಟಾಗಿದೆ. ಇದನ್ನು ಪರಿಹರಿಸಬೇಕೆಂದು ಕೇಳಿಕೊಂಡರು.

|| ಸೂತ ಉವಾಚ ||

**ಉತ್ಪತ್ತಿಶ್ಚ ನಿರೋಧಶ್ಚ ನಿತ್ಯಂ ಭೂತೇಷು ಸತ್ತಮಾಃ |**
**ಋಷಯೋಽತ್ರ ನ ಮುಹ್ಯಂತಿ ವಿದ್ಯಾವಂತಶ್ಚ ಯೇ ನರಾಃ || ೪೯ ||**

**ಯುಗೇ ಯುಗೇ ಭವಂತ್ಯೇತೇ ಸರ್ವೇ ದಕ್ಷಾದಯೋ ದ್ವಿಜಾಃ |**
**ಪುನಶ್ಚೈವ ನಿರುಧ್ಯಂತೇ ವಿದ್ವಾಂಸ್ತತ್ರ ನ ಮುಹ್ಯತಿ || ೫೦ ||**

**ಜೇಷ್ಠ್ಯಂ ಕನಿಷ್ಠ್ಯಮಪ್ಯೇಷಾಂ ಪೂರ್ವಂ ನಾಸೀದ್ದ್ವಿಜೋತ್ತಮಾಃ |**
**ತಪ ಏವ ಗರೀಯೋಽಭೂತ್ ಪ್ರಭಾವಶ್ಚೈವ ಕಾರಣಂ || ೫೧ ||**

**ಇಮಾಂ ವಿಸೃಷ್ಟಿಂ ಯೋ ವೇದ ಚಾಕ್ಷುಷಸ್ಯ ಚರಾಚರಂ |**
**ಪ್ರಜಾನಾಮಾಯುರುತ್ತೀರ್ಣಃ ಸ್ವರ್ಗಲೋಕೇ ಮಹೀಯತೇ || ೫೨ ||**

---

೪೯. ಸೂತಮುನಿಯು ಹೇಳಿದನು :—ಎಲೈ ಮುನಿವರ್ಯರೇ, ಸರ್ವಭೂತಗಳಲ್ಲಿಯೂ ಜನನ ಮರಣಗಳು ನಿತ್ಯವಾಗಿಯೂ ಸಹಜವಾಗಿಯೂ ಇವೆ. ಈ ವಿಷಯದಲ್ಲಿ ಮಹಾತ್ಮರಾದ ಮುನಿಗಳೂ, ಜ್ಞಾನಿಗಳಾದ ಮಾನವರೂ ಸಹ ಭ್ರಾಂತರಾಗುವುದಿಲ್ಲ.

೫೦. ಪ್ರತಿಯೊಂದು ಯುಗಗಳಲ್ಲಿಯೂ ಕೂಡ ದೇವಋಷ್ಯಾದಿಗಳು ಮಹಾತ್ಮರಾದ ದಕ್ಷನೇ ಮೊದಾಲದ ಪ್ರಜಾಪತಿಗಳು ಹುಟ್ಟಿ, ಮಹಾಕಾರ್ಯಗಳನ್ನು ನಡಿಸಿ, ಪುನಃ ಲಯವನ್ನು ಹೊಂದುವರು. ಈ ವಿಷಯದಲ್ಲಿ ಜ್ಞಾನಿಗಳು ಭ್ರಾಂತರಾಗುವುದಿಲ್ಲ.

೫೧. ಪೂರ್ವದಲ್ಲಿ ಎಲೈ ಮುನಿವರ್ಯರೇ, ಹಿರಿಯರು, ಕಿರಿಯರು ಎಂಬ ಭೇದವಿರಲಿಲ್ಲ. ಪೂಜ್ಯತೆಗೆ ಉತ್ತಮವಾದ ತಪಸ್ಸು, ಪ್ರಭಾವಾತಿಶಯ ಇವುಗಳೇ ಕಾರಣಗಳಾಗಿದ್ದುವು. ಲೋಕದಲ್ಲಿ ಯಾವನು ತಪೋವಿಶೇಷವನ್ನೂ, ಮಹಿಮಾತಿಶಯವನ್ನೂ ಹೊಂದಿರುವನೋ ಅವನೇ ಪೂಜ್ಯನಾಗಿರುವನು.

೫೨. ಚಾಕ್ಷುಷಮನ್ವಂತರದ ಚರಾಚರಾತ್ಮಕವಾದ ಜಗತ್ತಿನ ಈ ಸೃಷ್ಟಿಕ್ರಮವನ್ನು ಯಾವನು ತಿಳಿಯುವನೋ, ಅವನು ಈ ಲೋಕದಲ್ಲಿ ಪರಮಸುಖವನ್ನು ಹೊಂದಿ, ಆಯುಷ್ಯವು ಕಳೆದ ಮೇಲೆ ಸ್ವರ್ಗಲೋಕವನ್ನು ಹೊಂದಿ ದಿವ್ಯಸುಖವನ್ನು ಪಡೆಯುವನು.

ಏಷ ಸರ್ಗಃ ಸಮಾಖ್ಯಾತಶ್ಚಾಕ್ಷುಷಸ್ಯ ಸಮಾಸತಃ |
ಇತ್ಯೇತೇ ಷಡ್ವಿಸರ್ಗಾ ಹಿ ಕ್ರಾಂತಾ ಮನ್ವಂತರಾತ್ಮಕಾಃ ||
ಸ್ವಾಯಂಭುವಾದ್ಯಾಃ ಸಂಕ್ಷೇಪಾಚ್ಚಾಕ್ಷುಷಾಂತಾ ಯಥಾಕ್ರಮಂ || ೫೩ ||

ಏತೇ ಸರ್ಗಾ ಯಥಾಪ್ರಜ್ಞಂ ಪ್ರೋಕ್ತಾ ವೈ ದ್ವಿಜಸತ್ತಮಾಃ |
ವೈವಸ್ವತನಿಸರ್ಗೇಣ ತೇಷಾಂ ಜ್ಞೇಯಸ್ತು ವಿಸ್ತರಃ || ೫೪ ||

ಅನಂತಾ ನಾತಿರಿಕ್ತಾಶ್ಚ ಸರ್ವೇ ಸರ್ಗಾ ವಿವಸ್ವತಃ |
ಆರೋಗ್ಯಾಯುಷ್ಪ್ರಮಾಣೇನ ಧರ್ಮತಃ ಕಾಮತೋಽರ್ಥತಃ ||
ಏತಾನೇವ ಗುಣಾನೇತಿ ಯಃ ಪಠತ್ಯನಸೂಯಕಃ || ೫೫ ||

---

೫೩. ಇದು ಚಾಕ್ಷುಷಮನ್ವಂತರದ ಸೃಷ್ಟಿಕ್ರಮವು. ಇವನ್ನು ವಿಸ್ತಾರವಾಗಿ ನಿಮಗೆ ತಿಳಿಸಿರುವೆನು. ಸ್ವಾಯಂಭುವಮನುವೇ ಮೊದಲಾದ ಚಾಕ್ಷುಷಮನುವಿನ ವರೆಗೂ ಇರುವ ಆರುಮನುಗಳ ಸೃಷ್ಟಿಕ್ರಮವನ್ನು ಕ್ರಮವಾಗಿ ನಿರೂಪಿಸಿರುವೆನು. ಇವರು ಆರುಜನ ಮನುಗಳೂ ಅತೀತರಾಗಿರುವರು.

೫೪. ಎಲೈ ಮುನಿವರ್ಯರೇ, ವೈವಸ್ವತಮನುವಿನ ಮೊದಲುಗೊಂಡು ಆರು ಮನುಗಳ ಸೃಷ್ಟಿಕ್ರಮವನ್ನು ನನ್ನ ಶಕ್ತ್ಯನುಗುಣವಾಗಿ ಕ್ರಮವಾಗಿ ನಿರೂಪಿಸಿರು ವೆನು. ವೈವಸ್ವತಮನ್ವಂತರದ ಸೃಷ್ಟಿಕ್ರಮವನ್ನು ವಿಶೇಷವಾಗಿ ತಿಳಿಯುವುದರಿಂದ ಇತರ ಮನುಗಳ ಸೃಷ್ಟಿಸರ್ಗಗಳು ವಿಶೇಷವಾಗಿ ಗೊತ್ತಾಗುವುವು.

೫೫ ಎಲೈ ವಿಪ್ರೋತ್ತಮರೇ, ವೈವಸ್ವತಮನುವಿನ ಸೃಷ್ಟಿಕ್ರಮಕ್ಕಿಂತಲೂ ಇತರ ಮನುಗಳ ಸೃಷ್ಟಿಕ್ರಮಗಳು ಅತ್ಯಧಿಕವಾಗಿಯೂ, ವ್ಯತಿರಿಕ್ತವಾಗಿಯೂ ಇರುವು ದಿಲ್ಲ ಆರೋಗ್ಯ, ಆಯುಷ್ಯ, ಧರ್ಮ, ಅರ್ಥ, ಕಾಮ ಇವುಗಳು ಸಹ ವೈವಸ್ವತ ಮನುವಿನ ಸೃಷ್ಟಿಯಲ್ಲಿ ಅತಿಶಯವಾಗಿರುತ್ತದೆ. ಯಾವ ಪುರುಷನು ದ್ವೇಷಾಸೂಯೆ ಗಳನ್ನು ತ್ಯಜಿಸಿ ಈ ಪುರಾಣವನ್ನು ಪಠಿಸುವನೋ ಅವನು ಆಯುರಾರೋಗ್ಯಾದಿ ಸಕಲಾಭೀಷ್ಟಗಳನ್ನೂ ಹೊಂದುವನು.

**ವೈವಸ್ವತಸ್ಯ ವಕ್ಷ್ಯಾಮಿ ಸಾಂಪ್ರತಸ್ಯ ಮಹಾತ್ಮನಃ ।**
**ಸಮಾಸಾದ್ವ್ಯಾಸತಃ ಸರ್ಗಂ ಬ್ರುವತೋ ಮೇ ನಿಬೋಧತ ॥ ೫೬ ॥**

**ಇತಿ ಶ್ರೀ ಮಹಾಪುರಾಣೇ ವಾಯುಪ್ರೋಕ್ತೇ "ಪೃಥುವಂಶಾನುಕೀರ್ತನಂ" ನಾಮ ದ್ವಿತೀಯೋಽಧ್ಯಾಯಃ**

---

೫೬. ಈಗ ಮಹಾತ್ಮನೂ, ವರ್ತಮಾನಕಾಲಗತನೂ ಆದ ವೈವಸ್ವತ ಮನುವಿನ ಸೃಷ್ಟಿಕ್ರಮವನ್ನು ಸಂಕ್ಷೇಪವಿಸ್ತಾರಗಳಿಂದ ನಿರೂಪಿಸುವೆನು ಕೇಳಿರೆಂದು ಸೂತಮುನಿಯು ಮಹರ್ಷಿಗಳಿಗೆ ಹೇಳಿದನು.

ಹೀಗೆ ವಾಯುಪ್ರೋಕ್ತವಾದ ಮಹಾಪುರಾಣದಲ್ಲಿ "ಪೃಥುಮಹಾರಾಜನವಂಶ ವರ್ಣನೆ" ಯೆಂಬ ಎರಡನೆಯ ಅಧ್ಯಾಯವು ಸಮಾಪ್ತವಾದುದು.



## ಎರಡನೆಯ ಅಧ್ಯಾಯದ ಸಾರಾಂಶವು

ಈ ಅಧ್ಯಾಯದಲ್ಲಿ ಪೃಧುಮಹಾರಾಯನವಂಶವು ವರ್ಣಿತವಾಗಿದೆ. ಭೂದೇವಿಗೆ ಮೇದಿನೀ, ವಸುಧಾ ಎಂಬ ನಾಮಗಳೂ, ಪೃಧುಮಹಾರಾಜನ ಪುತ್ರಿಯಾದುದರಿಂದ ಪೃಥಿವೀ ಎಂಬ ನಾಮವೂ ಕೂಡ ಪ್ರಾಪ್ತವಾಗಿರುತ್ತವೆ. ಈ ಭೂಮಾತೆಗೆ ಸಕಲ ವೈಭವಗಳೂ, ಸೌಂದರ್ಯ, ಧನಧಾನ್ಯಾದಿ ಸಕಲಸಮೃದ್ಧಿ, ಗ್ರಾಮನಗರೋಪವನಾದಿ ಗಳಿಂದಲಂಕಾರ ಇವುಗಳು ಪೃಧುರಾಜನಿಂದಲೇ ಉಂಟಾಗಿವೆ. ಆದುದರಿಂದ ಈ ರಾಜನು ಬ್ರಾಹ್ಮಣಾದಿ ಸರ್ವರಿಂದ ಪೂಜ್ಯನೂ, ವಂದ್ಯನೂ ಆಗಿರುವನು. ಪೂರ್ವದಲ್ಲಿ ಬ್ರಹ್ಮಾದಿದೇವತೆಗಳೂ ಕೂಡ ಭೂವೇವಿಯನ್ನು ಕರದು ಸಕಲೇಷ್ಟಾರ್ಥಗಳನ್ನೂ ಪಡೆದರು. ಸ್ವಾಯಂಭುವಾದಿಮನ್ವಂತರಗಳಲ್ಲಿಯೂ ಕೂಡ ಪೃಥಿವೀ ದೋಹನವು ಆಗಿರುತ್ತದೆ. ವೈವಸ್ವತಮನುವಿನ ಕಾಲದಲ್ಲಿ ಪೃಧುರಾಜನೂ ಕೂಡ ದೋಹನಮಾಡಿ ಸಕಲೇಷ್ಟಾರ್ಥಗಳನ್ನು ಹೊಂದಿದನು. ಪೃಧುರಾಜನಿಗೆ ಅಂತರ್ಧ, ಪಾಲಿಯೆಂಬ ಮಕ್ಕಳೂ, ಅಂತರ್ಧಾನನಿಗೆ ಹವಿರ್ಧಾನನೂ, ಅವನಿಗೆ ಪ್ರಾಚೀನಬರ್ಹಿಷರೇ ಮೊದಲಾದ ಮಕ್ಕಳೂ ಜನಿಸಿದ್ದರು. ಪ್ರಾಚೀನಬರ್ಹಿಷರು ತಪೋಮಹಿಮೆಯಿಂದ ಪ್ರಖ್ಯಾತರಾಗಿರಲು ಸೋಮದೇವನು ವೃಕ್ಷರಾಜಕುಮಾರಿಯಾದ ಮಾರಿಷೆಯೆಂಬು ವಳನ್ನು ಅವರಿಗೆ ಕೊಟ್ಟು ವಿವಾಹವನ್ನು ನೆರವೇರಿಸಿದನು. ಆ ಮಾರಿಷೆಯು ದಕ್ಷಪ್ರಜಾಪತಿಯನ್ನು ಪಡೆದಳು. ದಕ್ಷೇಶ್ವರನಿಗೆ ಅನೇಕ ಹೆಣ್ಣುಮಕ್ಕಳು ಹುಟ್ಟಿದರು. ಅವರಲ್ಲಿ ಕೆಲವರನ್ನು ಧರ್ಮನಿಗೂ, ಹತ್ತು ಕುಮಾರಿಯರನ್ನು ಕಶ್ಯಪನಿಗೂ, ಇತರ ರನ್ನು ಅರಿಷ್ಟಿಯೇ ಮೊದಲಾದವರಿಗೂ ಕೊಟ್ಟು ಲಗ್ನಮಾಡಿದನು. ಆ ಕುಮಾರಿಯ ರಲ್ಲಿ ದೇವದಾನವಯಕ್ಷರಾಕ್ಷಸಾದಿಗಳು ಜನಿಸಿ ಲೋಕವೆಲ್ಲವೂ ವ್ಯಾಪ್ತವಾಯಿತು. ಪೂರ್ವದಲ್ಲಿ ಮನಃಸಂಕಲ್ಪ, ದರ್ಶನ, ಸ್ಪರ್ಶನಾದಿಗಳಿಂದ ಸಂತಾನಾಭಿವೃದ್ಧಿ ಯಾಗುತ್ತಿತ್ತು. ಈ ರೀತಿಯಾದ ಸೃಷ್ಟಿಸಂಹಾರ ವಿಷಯದಲ್ಲಿ ಜ್ಞಾನಿಗಳು ಭ್ರಾಂತ ರಾಗಿರಲಿಲ್ಲ. ಲೋಕದಲ್ಲಿ ತಪೋಮಹಿಮೆ, ಜ್ಞಾನ ಇವುಗಳಿಗೆ ವಿಶೇಷ ಮರ್ಯಾದೆಯು ದೊರೆಯುತ್ತಿತ್ತು. ಪೃಥುಮಹಾರಾಜನ ಸೃಷ್ಟಿಕ್ರಮಾದಿಗಳ ಪಠನಾದಿಗಳನ್ನು ಮಾಡುವನು. ಸಕಲಾಭೀಷ್ಟಗಳನ್ನೂ ಹೊಂದುವನು. ಎಂಬಿವೇ ಮೊದಲಾದ ವಿಷಯಗಳು ವರ್ಣಿತವಾಗಿವೆ.

—॥ ಹರಿಃ ಓಂ ॥—

---

—ಶ್ರೀ ಗಣೇಶಾಯ ನಮಃ—

# ಶ್ರೀಮದ್ವಾಯು ಮಹಾಪುರಾಣಂ

## ತೃತೀಯೋಽಧ್ಯಾಯಃ

---

॥ ಸೂತ ಉವಾಚ ॥

**ಸಪ್ತಮೇ ತ್ವಥ ಪರ್ಯಾಯೇ ಮನೋರ್ವೈವಸ್ವತಸ್ಯ ಹ ।**
**ಮಾರೀಚಾತ್ಕಶ್ಯಪಾದ್ದೇವಾ ಜಜ್ಞಿರೇ ಪರಮರ್ಷಯಃ ॥ ೧ ॥**

**ಆದಿತ್ಯಾ ವಸವೋ ರುದ್ರಾ ಸಾಧ್ಯಾ ವಿಶ್ವೇ ಮರುದ್ಗಣಾಃ ।**
**ಭೃಗವೋಂಗಿರಸಶ್ಚೈವ ಹ್ಯಷ್ಟೌ ದೇವಗಣಾಃ ಸ್ಮೃತಾಃ ॥ ೨ ॥**

---

### ಮೂರನೆಯ ಅಧ್ಯಾಯವು

೧. ಸೂತಪುರಾಣೀಕನು ಹೇಳಿದನು :—ಎಲೈ ಮುನಿವರ್ಯರೇ, ಚಾಕ್ಷುಷ ಮನ್ವಂತರವು ಕಳೆದು ಏಳನೆಯ ವೈವಸ್ವತಮನ್ವಂತರ ಉಪಕ್ರಮವಾಗಲು ಆ ವೈವಸ್ವತಮನ್ವಂತರದಲ್ಲಿ ಮರೀಚಿ ಪುತ್ರರಾದ ಕಶ್ಯಪರಿಗೆ ದೇವತೆಗಳೂ, ಪರಮ ಮಹರ್ಷಿಗಳೂ ಉತ್ಪನ್ನರಾದರು.

೨. ಆದಿತ್ಯರು, ವಸುಗಳು, ರುದ್ರರು, ಸಾಧ್ಯರು, ವಿಶ್ವೇದೇವತೆಗಳು, ಮರುದ್ಗಣಗಳು, ಭೃಗುಗಳು, ಅಂಗಿರಸು ಈ ಎಂಟು ಗಣಗಳೂ ದೇವಗಣಗಳಾಗಿವೆ ಎಂದು ಲೋಕವಿಖ್ಯಾತವಾಗಿವೆ.

ಆದಿತ್ಯಾ ಮರುತೋ ರುದ್ರಾ ವಿಜ್ಞೇಯಾಃ ಕಶ್ಯಪಾತ್ಮಜಾಃ ।
ಸಾಧ್ಯಾಶ್ಚ ವಸವೋ ವಿಶ್ವೇ ಧರ್ಮಪುತ್ರಾಸ್ತ್ರಯೋ ಗಣಾಃ ॥ ೩ ॥

ಭೃಗೋಸ್ತು ಭಾರ್ಗವೋ ದೇವೋ ಹ್ಯಂಗಿರೋಂಗಿರಸಃ ಸುತಃ ।
ವೈವಸ್ವತೇಂತರೇ ಹ್ಯಸ್ಮಿನ್ ನಿತ್ಯಂ ತೇ ಛಂದಜಾಃ ಸುರಾಃ ॥ ೪ ॥

ಏಷ ಸರ್ಗಸ್ತು ಮಾರೀಚೋ ವಿಜ್ಞೇಯಃ ಸಾಂಪ್ರತಃ ಶುಭಃ ।
ತೇಜಸ್ವೀ ಸಾಂಪ್ರತಸ್ತೇಷಾಮಿಂದ್ರೋ ನಾಮ್ನಾ ಮಹಾಬಲಃ ॥ ೫ ॥

ಅತೀತಾನಾಗತಾ ಯೇ ಚ ವರ್ತಂತೇ ಯೇ ಚ ಸಾಂಪ್ರತಂ ।
ಸರ್ವೇ ಮನ್ವಂತರೇಂದ್ರಾಸ್ತು ವಿಜ್ಞೇಯಾಸ್ತುಲ್ಯಲಕ್ಷಣಾಃ ॥ ೬ ॥

---

೩. ಈ ಎಂಟು ಗಣಗಳಲ್ಲಿ ಆದಿತ್ಯರು, ಮರುತ್ತುಗಳು, ರುದ್ರರು ಎಂಬ ಮೂರು ಗಣದವರು, ಕಶ್ಯಪವಂಶೋದ್ಭೂತರಾಗಿರುವರು. ಉಳಿದವರಲ್ಲಿ ಸಾಧ್ಯರು, ವಸುಗಳು, ವಿಶ್ವೇದೇವತೆಗಳು ಈ ಮೂರು ಗಣಗಳು ಧರ್ಮದೇವನ ಪುತ್ರರಾಗಿರುವುವು.

೪. ಭೃಗುಗಳಿಗೆ ಭಾರ್ಗವರೆಂಬ ಮಕ್ಕಳೂ, ಅಂಗಿರಸನಿಗೆ ಆಂಗಿರಸರೆಂಬ ಪುತ್ರರೂ ಸಂಭೂತರಾಗಿರುವರು. ವೈವಸ್ವತಮನ್ವಂತರದಲ್ಲಿ ಆ ದೇವತೆಗಳು ತಮ್ಮ ಇಚ್ಛಾನುಸಾರವಾಗಿ ಅವತರಿಸಿರುವರು.

೫. ಈ ವೈವಸ್ವತಮನ್ವಂತರದ ಸೃಷ್ಟಿಕ್ರಮವು ಅತ್ಯಂತ ಮಂಗಳದಾಯಕವೂ ಮರೀಚಿಸಂಬಂಧಿಯೂ ಆಗಿರುತ್ತದೆ. ಈಗಿನ ಸೃಷ್ಟಿಗೆ ವಿಷಯರಾದವರೆಲ್ಲರಿಗೂ ಅತಿತೇಜಸ್ವಿಯಾದ ಮಹಾಬಲನು ಇಂದ್ರನಾಗಿರುವನು. ಎಲ್ಲರಿಗೂ ಇವನೇ ದೊರೆಯಾಗಿದ್ದನು.

೬. ಭೂತಭವಿಷ್ಯದ್ವರ್ತಮಾನಕಾಲದಲ್ಲಿರುವ ಸಮಸ್ತರಾದ ಮನ್ವಂತರಗಳ ಇಂದ್ರರು ಏಕರೀತಿಯಾದ ಲಕ್ಷಣೋಪೇತರಾಗಿಯೂ, ಶೌರ್ಯ, ಧೈರ್ಯ ಗಾಂಭೀರ್ಯಾದಿ ಗುಣಗಳುಳ್ಳವರಾಗಿಯೂ ಇರುವರು.

ಭೂತಭವ್ಯಭವನ್ನಾಥಾಃ ಸಹಸ್ರಾಕ್ಷಾಃ ಪುರಂದರಾಃ ।
ಮಘವಂತಶ್ಚ ತೇ ಸರ್ವೇ ಶೃಂಗಿಣೋ ವಜ್ರಪಾಣಯಃ ॥
ಸರ್ವೈ ಕ್ರತುಶತೇನೇಷ್ಟಂ ಪೃಥಕ್ ಶತಗುಣೇನ ತು ॥ ೭ ॥

ತ್ರೈಲೋಕ್ಯೇ ಯಾನಿ ಸತ್ವಾನಿ ಗತಿಮಂತ್ಯಬಲಾನಿ ಚ ।
ಅಭಿಭೂಯಾವತಿಷ್ಠಂತೇ ಧರ್ಮಾದ್ಯೈಃ ಕಾರಣೈರಪಿ ॥ ೮ ॥

ತೇಜಸಾ ತಪಸಾ ಬುದ್ಧ್ಯಾ ಬಲಶ್ರುತ ಪರಾಕ್ರಮೈಃ ।
ಭೂತಭವ್ಯಭವನ್ನಾಥಾ ಯಥಾ ತೇ ಪ್ರಭವಿಷ್ಣವಃ ॥
ಏತತ್ಸರ್ವಂ ಪ್ರವಕ್ಷ್ಯಾಮಿ ಬ್ರುವತೋ ಮೇ ನಿಬೋಧತ ॥ ೯ ॥

---

೭. ಅತೀತಾನಾಗತವರ್ತಮಾನಕಾಲದಲ್ಲಿರುವ ಸರ್ವಪ್ರಾಣಿಗಳೂ ಸಹಸ್ರಾಕ್ಷನಾದ ದೇವೇಂದ್ರನೇ ಪ್ರಭುವಾಗಿರುವನು. ಪ್ರತಿಯೊಂದು ಮನ್ವಂತರದ ಇಂದ್ರರೆಲ್ಲರೂ ಧನುರ್ಧಾರಿಗಳೂ, ವಜ್ರಪಾಣಿಗಳೂ, ನೂರಾರು ಯಾಗಗಳಿಂದ ಇಂದ್ರಪದವಿಯನ್ನು ಸಂಪಾದಿಸಿದವರೂ, ಪ್ರತ್ಯೇಕವಾಗಿ ಶತಗಣೋತ್ತಮರೂ ಆಗಿರುವರು.

೮. ಮೂರು ಲೋಕಗಳಲ್ಲಿ ಯಾವ ಪ್ರಾಣಿಗಳು ಸಂಚಾರಮಾಡುವುದಾಗಿಯೂ, ಬಲಿಷ್ಠವಾಗಿಯೂ, ಧರ್ಮಿಷ್ಠವಾಗಿಯೂ, ಬಲಹೀನವಾಗಿಯೂ ಇವೆಯೋ ಅವುಗಳನ್ನು ಈ ಇಂದ್ರರು ಶೌರ್ಯ, ಧೈರ್ಯಾದಿ ಗುಣಗಳಿಂದಲೂ, ಧರ್ಮಾದಿಗಳಿಂದಲೂ ಅತಿಕ್ರಮಿಸಿರುತ್ತಾರೆ.

೯. ಮತ್ತು ಆ ಇಂದ್ರರು ತೇಜಸ್ಸು, ತಪಸ್ಸು, ಬುದ್ಧಿ, ಬಲ, ಜ್ಞಾನ, ಶೌರ್ಯ ಇವುಗಳಿಂದ ಸರ್ವಪ್ರಾಣಿಗಳಿಗೂ ಶ್ರೇಷ್ಠರಾಗಿಯೂ, ವಂದ್ಯರಾಗಿಯೂ, ಸಮರ್ಥರಾಗಿಯೂ ಇರುವರೆಂಬ ವಿಷಯಗಳೆಲ್ಲವನ್ನೂ ತಿಳಿಸುವೆನು ಕೇಳಿರೆಂದು ಸೂತಮುನಿಯು ಹೇಳಿದನು.

ಭೂತಂ ಭವ್ಯಂ ಭವಿಷ್ಯಂ ತತ್ ಸ್ಮೃತಂ ಲೋಕತ್ರಯಂ ದ್ವಿಜೈಃ ।
ಭೂರ್ಲೋಕೋಽಯಂ ಸ್ಮೃತೋ ಭೂಮಿರಂತರಿಕ್ಷಂ ಭುವಂ ಸ್ಮೃತಂ ॥
ಭವ್ಯಂ ಸ್ಮೃತಂ ದಿವಂ ಹ್ಯೇತತ್ತೇಷಾಂ ವಕ್ಷ್ಯಾಮಿ ಸಾಧನಂ ॥ ೧೦ ॥

ಧ್ಯಾಯತಾ ಪುತ್ರಕಾಮೇನ ಬ್ರಹ್ಮಣಾಗ್ರೇ ವಿಭಾಷಿತಂ ।
ಭೂರಿತಿ ವ್ಯಾಹೃತಂ ಪೂರ್ವಂ ಭೂರ್ಲೋಕೋಽಯಮಭೂತ್ತದಾ ॥ ೧೧ ॥

ಭೂ ಸತ್ತಾಯಾಂ ಸ್ಮೃತೋ ಧಾತುಸ್ತಥಾಸೌ ಲೋಕದರ್ಶನೇ ।
ಭೂತತ್ವಾದ್ದರ್ಶತ್ವಾಚ್ಚ ಭೂರ್ಲೋಕೋಽಯಮಭೂತ್ತತಃ ॥
ಅತೋಽಯಂ ಪ್ರಥಮೋ ಲೋಕೋ ಭೂತತ್ವಾದ್ಭೂರ್ದ್ವಿಜೈಃ ಸ್ಮೃತಃ ॥೧೨॥

---

೧೦. ವಿಪ್ರೋತ್ತಮರು ಅತೀತಾನಾಗತವರ್ತಮಾನಕಾಲಗಳಲ್ಲಿರುವ ಲೋಕಗಳನ್ನು ಲೋಕತ್ರಯವೆನ್ನುವರು. ಈ ಭೂಮಿಗೆ ಭೂಲೋಕವೆಂದೂ, ಅಂತರಿಕ್ಷಕ್ಕೆ ಭುವರ್ಲೋಕವೆಂದೂ, ಭವ್ಯವಾದ ಇಂದ್ರಲೋಕಕ್ಕೆ ಸ್ವರ್ಗಲೋಕವೆಂದೂ ಸಂಜ್ಞೆಯು ಉಂಟಾಗಿವೆ. ಈ ಲೋಕಗಳನ್ನು ಪಡೆಯಲು ಯೋಗ್ಯವಾದ ಕಾರಣಗಳನ್ನು ಹೇಳುವೆನು ಕೇಳಿರೆಂದನು.

೧೧. ಎಲೈ ಮುನಿವರ್ಯರೇ, ಸೃಷ್ಟಿಯ ಪೂರ್ವದಲ್ಲಿ ಸೃಷ್ಟಿಕರ್ತನಾದ ಬ್ರಹ್ಮದೇವನು ಲೋಕಗಳನ್ನು ಸೃಷ್ಟಿಸಬೇಕೆಂಬ ಇಚ್ಛೆಯಿಂದ ಮೊದಲು ಭೂ ಎಂಬ ವ್ಯಾಹೃತಿಯನ್ನು ಉಚ್ಚರಿಸಿದನು. ಆದರಿಂದ ಭೂಲೋಕವು ಉತ್ಪನ್ನವಾಯಿತು.

೧೨. ಭೂ ಎಂಬ ಧಾತುವಿಗೆ ಸತ್ತಾರ್ಥವೂ, ಲೋಕೃ ಎಂಬ ಧಾತುವಿಗೆ ದರ್ಶನವೆಂಬ ಅರ್ಥವೂ ಲೋಕಸಮ್ಮತವಾಗಿವೆ. ಅಂದರೆ ಈ ಲೋಕವು ಮೊದಲು ಇದ್ದು ತರುವಾಯ ದೃಷ್ಟಿಗೆ ವಿಷಯವಾದುದರಿಂದ ಭೂಲೋಕವೆಂದು ಪ್ರಸಿದ್ಧವಾಗಿದೆ. ಈ ಕಾರಣದಿಂದ ಈ ಭೂಮಿಯು ಭೂಲೋಕವೆಂದೂ ಪ್ರಥಮ ಲೋಕವೆಂದೂ ಪ್ರಸಿದ್ಧವಾಗಿದೆ ಎಂಬುದಾಗಿ ಬ್ರಾಹ್ಮಣರು ಹೇಳುತ್ತಾರೆ.

ಭೂತೇಸ್ಮಿನ್ ಭವದಿತ್ಯುಕ್ತದ್ವಿತೀಯಂ ಬ್ರಹ್ಮಣಾ ಪುನಃ |
ಭವತ್ಯುತ್ಪದ್ಯಮಾನೇನ ಕಾಲಶಬ್ದೋಽಯಮುಚ್ಯತೇ || ೧೩ ||

ಭವನಾತ್ತು ಭುವರ್ಲೋಕೋ ನಿರುಕ್ತಜ್ಞೈರ್ನಿರುಚ್ಯತೇ |
ಅಂತರಿಕ್ಷಂ ಭುವಸ್ತಸ್ಮಾದ್ದ್ವಿತೀಯೋ ಲೋಕ ಉಚ್ಯತೇ || ೧೪ ||

ಉತ್ಪನ್ನೇ ತು ಭುವರ್ಲೋಕೇ ತೃತೀಯಂ ಬ್ರಹ್ಮಣಾ ಪುನಃ |
ಭವ್ಯೇತಿ ವ್ಯಾಹೃತಂ ಯಸ್ಮಾದ್ಭವ್ಯೋ ಲೋಕಸ್ತದಾಭವತ್ || ೧೫ ||

ಅನಾಗತೇ ಭವ್ಯ ಇತಿ ಶಬ್ದ ಏಷ ವಿಭಾವ್ಯತೇ |
ತಸ್ಮಾದ್ಭವ್ಯೋ ಹ್ಯಸೌ ಲೋಕೋ ನಾಮತಸ್ತು ದಿವಂ ಸ್ಮೃತಂ || ೧೬ ||

---

೧೩. ಹೀಗೆ ಭೂಮಿಯು ಉತ್ಪನ್ನವಾಗಲು, ಬ್ರಹ್ಮದೇವನು ಪುನಃ ಭವವೆಂಬ ದ್ವಿತೀಯ ವ್ಯಾಹೃತಿಯನ್ನು ಉಚ್ಚರಿಸಿದನು ಉತ್ಪದ್ಯಮಾನವಾದ ಭವಶಬ್ದದಿಂದ ಕಾಲರೂಪವಾದ ಅರ್ಥವು ತೋರುವುದು.

೧೪. ಜ್ಞಾನಿಗಳು ಅಂತರಿಕ್ಷಲೋಕವು ಭಾವನಾವಿಷಯವಾದುದರಿಂದ ಅದನ್ನು ಭುವರ್ಲೋಕವೆಂದು ಹೇಳುವರು. ಆದುದರಿಂದ ಅಂತರಿಕ್ಷಲೋಕವು ಭುವರ್ಲೋಕವೆಂದೂ, ದ್ವಿತೀಯಲೋಕವೆಂದೂ ಪ್ರಖ್ಯಾತವಾಗಿದೆ.

೧೫. ಭುವರ್ಲೋಕವು ಹುಟ್ಟಿದ ತರುವಾಯ ಬ್ರಹ್ಮದೇವನು ಮೂರನೆಯ ಆವೃತ್ತಿ ಭವ್ಯವೆಂಬುದಾಗಿ ಉಚ್ಚರಿಸಿದನು. ಅದರಿಂದ ಭವ್ಯನಾಮಕವಾದ ಮೂರನೆಯ ಲೋಕವು ಉತ್ಪನ್ನವಾಯಿತು.

೧೬. ಭವಿಷ್ಯದರ್ಥದಲ್ಲಿ ಜ್ಞಾನಿಗಳು ಭವ್ಯಶಬ್ದವನ್ನು ಉಚ್ಚರಿಸುವರು. ಆದುದರಿಂದ ಸ್ವರ್ಲೋಕವು ಭವ್ಯನಾಮಕವಾಗಿಯೂ, ಮೂರನೆಯ ಲೋಕವಾಗಿಯೂ, ದಿವ ಎಂಬುದಾಗಿಯೂ ಪ್ರಖ್ಯಾತವಾಗಿದೆ.

ಸ್ವರಿತ್ಯುಕ್ತಂ ತೃತೀಯೋಽನ್ಯೋ ಭಾವ್ಯೋ ಲೋಕಸ್ತದಾಭವತ್ ।
ಭಾವ್ಯ ಇತ್ಯೇಷ ಧಾತುರ್ವೈ ಭಾವ್ಯೇ ಕಾಲೇ ವಿಭಾವ್ಯತೇ ॥ ೧೭ ॥

ಭೂರಿತೀಯಂ ಸ್ಮೃತಾ ಭೂಮಿರಂತರಿಕ್ಷಂ ಭುವಂ ಸ್ಮೃತಂ ।
ದಿವಂ ಸ್ಮೃತಂ ತಥಾ ಭಾವ್ಯಂ ತ್ರೈಲೋಕ್ಯಸ್ಯೈಷ ಸಂಗ್ರಹಃ ॥ ೧೮ ॥

ತ್ರೈಲೋಕ್ಯಯುಕ್ತೈರ್ವ್ಯಾಹಾರೈಸ್ತಿಸ್ರೋ ವ್ಯಾಹೃತಯೋಽಭವನ್ ।
ನಾಥ ಇತ್ಯೇಷ ಧಾತುರ್ವೈ ಧಾತುಜ್ಞೈಃ ಪಾಲನೇ ಸ್ಮೃತಃ ॥ ೧೯ ॥

ಯಸ್ಮಾದ್ಭೂತಸ್ಯ ಲೋಕಸ್ಯ ಭವ್ಯಸ್ಯ ಭವತಸ್ತದಾ ।
ಲೋಕತ್ರಯಸ್ಯ ನಾಥಾಸ್ತೇ ತಸ್ಮಾದಿಂದ್ರಾ ದ್ವಿಜೈಃ ಸ್ಮೃತಾಃ ॥ ೨೦ ॥

---

೧೭. ಸ್ವರ್ಲೋಕವೆಂದು ಪ್ರಖ್ಯಾತವಾದ ತೃತೀಯ ಲೋಕಕ್ಕೆ ಭಾವ್ಯಲೋಕವೆಂದು ಪ್ರಸಿದ್ಧಿಯಿದೆ. ಭಾವ್ಯ ಎಂಬ ಶಬ್ದವು ಭವಿಷ್ಯತ್ಕಾಲದಲ್ಲಿ ಪ್ರಯುಕ್ತವಾಗಿದೆ.

೧೮. ಈ ಭೂಮಿಗೆ ಭೂಃ ಎಂಬ ಸಂಜ್ಞೆಯೂ, ಅಂತರಿಕ್ಷಕ್ಕೆ ಭುವರ್ಲೋಕವೆಂಬ ನಾಮವೂ, ಸ್ವರ್ಗಲೋಕಕ್ಕೆ ಭಾವ್ಯವೆಂಬ ಸಂಜ್ಞೆಯೂ ಸಂಭವಿಸಿವೆ. ಭೂಲೋಕ, ಭುವರ್ಲೋಕ, ಸ್ವರ್ಗಲೋಕವೆಂಬ ಈ ಮೂರು ಲೋಕಗಳಿಗೂ ತ್ರೈಲೋಕ್ಯವೆಂಬ ನಾಮಧೇಯವು ಸಿದ್ಧವಾಗಿದೆ.

೧೯. ಮೂರು ಲೋಕೋಕ್ತವಾದ ವ್ಯವಹಾರದಿಂದ ಭೂರ್ಭುವಃ ಸ್ವಃ ಎಂಬ ಈ ಮೂರು ವ್ಯಾಹೃತಿಗಳುಂಟಾದುವು. ನಾಥ ಶಬ್ದವು ಪಾಲನಾರ್ಥಕವಾದ ನಾಥ್ ಧಾತುವಿನಿಂದ ಉತ್ಪನ್ನವಾಗಿದೆ. ನಾಥರೆಂದರೆ ಪಾಲಕರೆಂದು ಅರ್ಥವಾಗುವುದೆಂದು ಜ್ಞಾನಿಗಳು ಹೇಳುವರು.

೨೦. ಆದುದರಿಂದ ಭೂತಭವಿಷ್ಯದ್ವರ್ತಮಾನಕಾಲಿಕಗಳಾದ ಸ್ವರ್ಗ, ಅಂತರಿಕ್ಷ, ಭೂಲೋಕವೆಂಬ ಮೂರು ಲೋಕಗಳಿಗೂ ಇಂದ್ರಾದಿಗಳು ಪಾಲಕರಾಗಿರುವರೆಂದು ಶ್ರುತಿ ಸ್ಮೃತಿಗಳಲ್ಲಿ ಉಕ್ತವಾಗಿದೆ.

**ಪ್ರಧಾನಭೂತಾ ದೇವೇಂದ್ರಾ ಗುಣಭೂತಾಸ್ತಥೈವ ಚ ।**
**ಮನ್ವಂತರೇಷು ಯೇ ದೇವಾ ಯಜ್ಞಭಾಜೋ ಭವಂತಿ ಹಿ ॥ ೨೧ ॥**

**ಯಕ್ಷಗಂಧರ್ವರಕ್ಷಾಂಸಿ ಪಿಶಾಚೋರಗದಾನವಾಃ ।**
**ಮಹಿಮಾನಃ ಸ್ಮೃತಾ ಹ್ಯೇತೇ ದೇವೇಂದ್ರಾಣಾಂ ತು ಸರ್ವಶಃ ॥ ೨೨ ॥**

**ದೇವೇಂದ್ರಾ ಗುರವೋ ನಾಥಾ ರಾಜಾನಃ ಪಿತರೋ ಹಿ ತೇ ।**
**ರಕ್ಷಂತೀಮಾಃ ಪ್ರಜಾಃ ಸರ್ವಾ ಧರ್ಮೇಣೇಹ ಸುರೋತ್ತಮಾಃ ॥ ೨೩ ॥**

**ಇತ್ಯೇತಲ್ಲಕ್ಷಣಂ ಪ್ರೋಕ್ತಂ ದೇವೇಂದ್ರಾಣಾಂ ಸಮಾಸತಃ ।**
**ಸಪ್ತರ್ಷೀನ್ ಸಂಪ್ರವಕ್ಷ್ಯಾಮಿ ಸಾಂಪ್ರತಂ ಯೇ ದಿವಿ ಸ್ಥಿತಾಃ ॥ ೨೪ ॥**

---

೨೧. ಮೂರು ಲೋಕಗಳಲ್ಲಿಯೂ, ಮೂರು ಕಾಲಗಳಲ್ಲಿಯೂ ಪ್ರಸಿದ್ಧರಾದ ಪ್ರಧಾನರಾದ ದೇವೇಂದ್ರರೂ, ಅಮುಖ್ಯರಾದ ದೇವತೆಗಳು ಯಾರಿರುವರೋ, ಆ ದೇವತೆಗಳೆಲ್ಲರೂ ಯಜ್ಞಭೋಕ್ತೃಗಳಾಗಿಯೂ, ಲೋಕಕಲ್ಯಾಣಕಾರಕರಾಗಿಯೂ ಇರುವರು.

೨೨. ಯಕ್ಷರು, ಗಂಧರ್ವರು, ರಾಕ್ಷಸರು, ಪಿಶಾಚಿಗಳು, ಸರ್ಪಗಳು, ದಾನವರು ಇವರು ಮಹಿಮೋತ್ತಮರಾಗಿ ತ್ರಿಕಾಲದಲ್ಲಿಯೂ ದೇವೇಂದ್ರನ ಮಹಿಮೆಯನ್ನು ವರ್ಣಿಸುವರಾಗಿರುವರು.

೨೩. ಅಂತಹ ದೇವೇಂದ್ರರು ಲೋಕತ್ರಯಗಳಿಗೂ ಗುರುಗಳಾಗಿಯೂ, ಪಾಲಕರಾಗಿಯೂ, ದೊರೆಗಳಾಗಿಯೂ, ಪಿತೃಗಳಾಗಿಯೂ ಇರುವರು. ಮತ್ತು ಈ ದೇವೋತ್ತಮರು ಸಮಸ್ತರಾದ ಪ್ರಜೆಗಳನ್ನೂ ಧರ್ಮದಿಂದ ಸದಾಕಾಲದಲ್ಲಿಯೂ ರಕ್ಷಿಸುವರು.

೨೪. ಈ ಕ್ರಮದಲ್ಲಿ ದೇವೇಂದ್ರರ ಸಂಪೂರ್ಣವಾದ ಲಕ್ಷಣಗಳನ್ನು ಸಂಕ್ಷೇಪವಾಗಿ ತಿಳಿಸಿರುವೆನು. ಈ ಯುಗದಲ್ಲಿ ಯಾರು ಸ್ವರ್ಗಲೋಕದಲ್ಲಿರುವರೋ ಅಂತಹ ಸಪ್ತರ್ಷಿಗಳನ್ನು ಹೇಳುವೆನು ಕೇಳಿರೆಂದನು.

**ಗಾಧಿಜಃ ಕೌಶಿಕೋ ಧೀಮಾನ್ ವಿಶ್ವಾಮಿತ್ರೋ ಮಹಾತಪಾಃ ।**
**ಭಾರ್ಗವೋ ಜಮದಗ್ನಿಶ್ಚ ಊರುಪುತ್ರಃ ಪ್ರತಾಪವಾನ್ ॥ ೨೫ ॥**

**ಬೃಹಸ್ಪತಿಸುತಶ್ಚಾಪಿ ಭಾರದ್ವಾಜೋ ಮಹಾತಪಾಃ ।**
**ಔತಥ್ಯೋ ಗೌತಮೋ ವಿದ್ವಾನ್ ಶರದ್ವಾನ್ನಾಮ ಧಾರ್ಮಿಕಃ ॥ ೨೬ ॥**

**ಸ್ವಾಯಂಭುವೋಽತ್ರಿರ್ಭಗವಾನ್ ಬ್ರಹ್ಮಕೋಶಸ್ತು ಪಂಚಮಃ ।**
**ಷಷ್ಠೋ ವಾಸಿಷ್ಠಪುತ್ರಸ್ತು ವಸುಮಾನ್ ಲೋಕವಿಶ್ರುತಃ ॥ ೨೭ ॥**

**ವತ್ಸಾರಃ ಕಾಶ್ಯಪಶ್ಚೈವ ಸಪ್ತೈತೇ ಸಾಧುಸಂಮ್ಮತಾಃ ।**
**ಏತೇ ಸಪ್ತರ್ಷಯಃ ಸಿದ್ಧಾ ವರ್ತಂತೇ ಸಾಂಪ್ರತೇಂತರೇ ॥ ೨೮ ॥**

**ಇಕ್ಷ್ವಾಕುಶ್ಚೈವ ನಾಭಾಗೋ ಧೃಷ್ಟಃ ಶರ್ಯಾತಿರೇವ ।**
**ನಿರಿಷ್ಯಂತಶ್ಚ ವಿಖ್ಯಾತೋ ನಾಭ ಉದ್ದಿಷ್ಟ ಏವ ಚ ॥ ೨೯ ॥**

---

೨೫-೨೮. ಗಾಧಿಪುತ್ರನೂ, ಕೌಶಿಕಗೋತ್ರಜನೂ, ಜ್ಞಾನಿಯೂ, ಮಹಾತಪಸ್ವಿಯೂ ಆದ ವಿಶ್ವಾಮಿತ್ರನು, ಭೃಗವಂಶಜನೂ, ಊರುಕುಮಾರನೂ, ಪ್ರತಾಪಶಾಲಿಯೂ ಆದ ಜಮದಗ್ನಿಯು, ಬೃಹಸ್ಪತಿಪುತ್ರನೂ, ಮಹಾತಪಸ್ವಿಯೂ ಆದ ಭಾರದ್ವಾಜನೂ, ಉತಥ್ಯವಂಶೋತ್ಪನ್ನನೂ, ಗೌತಮಗೋತ್ರವುಳ್ಳವನೂ, ಪಂಡಿತನೂ, ಧಾರ್ಮಿಕನೂ ಆದ ಶರದ್ವಂತನು, ಬ್ರಹ್ಮದೇವನ ಮಾನಸಪುತ್ರನೂ, ಪೂಜ್ಯನೂ, ಬ್ರಹ್ಮಕೋಶಜನೂ, ಐದನೈವನೂ ಆದ ಅತ್ರಿಯು, ವಸಿಷ್ಠಗೋತ್ರಜನೂ, ಲೋಕವಿಖ್ಯಾತನೂ, ಆರನೆಯವನೂ ಆದ ವಸುಮಂತನೂ, ಕಶ್ಯಪರ ವಂಶಜನಾದ ವತ್ಸಾರನೂ ಎಂಬ ಈ ಏಳು ಜನಗಳೂ ಸಪ್ತರ್ಷಿಗಳಾಗಿರುವರು ಮತ್ತು ಲೋಕಸಮ್ಮತರಾಗಿರುವರು. ಈಗಿನ ವೈವಸ್ವತಮನ್ವಂತರದಲ್ಲಿ ಈ ಏಳು ಮುನಿಗಳೂ ಸಪ್ತರ್ಷಿಗಳೆಂದು ಪ್ರಸಿದ್ಧರಾಗಿರುವರು.

೨೯. ಈ ವೈವಸ್ವತ ಮನ್ವಂತರದಲ್ಲಿ ಇಕ್ಷ್ವಾಕುವಂಶಜನಾದ ನಾಭಾಗ, ಧೃಷ್ಟ, ಶರ್ಯಾತಿ, ನಿರಿಷ್ಯಂತ, ನಾಭ, ಪ್ರಖ್ಯಾತನಾದ ಉದ್ದಿಷ್ಟ, ಕರುಷ, ಪೃಷಧ್ರ ಮತ್ತು ವಸುಮಂತ ಇವರು ಮನುವಿನ ನವಪುತ್ರರೆಂದು ಪ್ರಸಿದ್ಧರಾಗಿರುವರು.

**ಕರುಷಶ್ಚ ಪೃಷಧ್ರಶ್ಚ ವಸುಮಾನ್ನವಮಃ ಸ್ಮೃತಃ ।**
**ಮನೋರ್ವೈವಸ್ವತಸ್ಯೈತೇ ನವ ಪುತ್ರಾಃ ಪ್ರಕೀರ್ತಿತಾಃ ।**
**ಕೀರ್ತಿತಾ ವೈ ಮಹಾ ಹ್ಯೇತೇ ಸಪ್ತಮಂ ಚೈತದಂತರಂ ॥ ೩೦ ॥**

**ಇತ್ಯೇಷ ವೈ ಮಯಾ ಪಾದೋ ದ್ವಿತೀಯಃ ಕಥಿತೋ ದ್ವಿಜಾಃ ।**
**ವಿಸ್ತರೇಣಾನುಪೂರ್ವ್ಯಾ ಚ ಭೂಯಃ ಕಿಂ ವರ್ಣಯಾಮ್ಯಹಂ ॥ ೩೧ ॥**

**ಇತಿ ಶ್ರೀ ಮಹಾಪುರಾಣೇ ವಾಯುಪ್ರೋಕ್ತೇ "ವೈವಸ್ವತಸರ್ಗವರ್ಣನಂ" ನಾಮ ತೃತೀಯೋಽಧ್ಯಾಯಃ**

---

೩೦. ಈ ಏಳನೆಯ ವೈವಸ್ವತಮನ್ವಂತರದ ವಿಚಾರವನ್ನು ನಾನು ನಿಮಗಾಗಿ ನಿರೂಪಿಸುವೆನು ಎಂದನು.

೩೧. ಎಲೈ ವಿಪ್ರೋತ್ತಮರೇ, ಪೂರ್ವೋಕ್ತರೀತಿಯಲ್ಲಿ ನಾನು ನಿಮಗಾಗಿ ದ್ವಿತೀಯ ಪಾದದ ವಿಷಯಗಳನ್ನು ಕ್ರಮವಾಗಿಯೂ ವಿಸ್ತಾರವಾಗಿಯೂ ನಿರೂಪಿಸಿರುವೆನು. ಈಗ ಯಾವ ವಿಷಯವು ತಿಳಿಯಬೇಕಾಗಿದೆ ಅದನ್ನು ತಿಳಿಸಿದರೆ ಹೇಳುವೆನೆಂದು ಸೂತಮುನಿಯು ಮಹರ್ಷಿಗಳಿಗೆ ತಿಳಿಸಿದನು.

ಹೀಗೆ ವಾಯುಪ್ರೋಕ್ತವಾದ ಮಹಾಪುರಾಣದಲ್ಲಿ ವೈವಸ್ವತ
ಮನುವಿನ "ಸೃಷ್ಟಿನಿರೂಪಣ"ವೆಂಬ
ಮೂರನೆಯ ಅಧ್ಯಾಯವು ಸಮಾಪ್ತವಾದುದು.



## ಮೂರನೆಯ ಅಧ್ಯಾಯದ ಸಾರಾಂಶವು



ಈ ಅಧ್ಯಾಯದಲ್ಲಿ ವೈವಸ್ವತಮನುವಿನ ಸೃಷ್ಟಿಕ್ರಮವು ನಿರೂಪಿತವಾಗಿದೆ. ಏಳನೆಯ ಮನ್ವಂತರದಲ್ಲಿ ಬ್ರಹ್ಮದೇವನಿಗೆ ಮರೀಚಿಮುನಿಯೂ, ಅವನಿಗೆ ಕಶ್ಯಪನೂ, ಅವನಿಗೆ ಆದಿತ್ಯ, ವಸು, ರುದ್ರ, ಸಾಧ್ಯ, ವಿಶ್ವೇದೇವ, ಮರುದ್ಗಣ, ಭೃಗು, ಅಂಗಿರಸವೆಂಬ ಎಂಟು ದೇವಗಣಗಳು ಉತ್ಪನ್ನವಾದವು. ಇದಕ್ಕೆ ಮರೀಚಿಸರ್ಗವೆಂಬ ನಾಮವು ಪ್ರಾಪ್ತವಾಗಿದೆ. ಇವರು ಮನ್ವಂತರದ ಇಂದ್ರರಾಗಿರುವರು. ಬ್ರಹ್ಮ ದೇವನ ಭೂಃ, ಭುವಃ, ಸ್ವಃ ಎಂಬ ವ್ಯಾಹೃತಿಯಿಂದ ಭೂಲೋಕ, ಭುವರ್ಲೋಕ, ಸ್ವರ್ಗಲೋಕಗಳು ಉತ್ಪನ್ನವಾದುವು. ಮೇಲೆ ಹೇಳಿದ ದೇವಗಣಗಳೇ ಇವುಗಳ ಪಾಲಕರಾಗಿರುವರು. ದೇವದಾನವ, ಯಕ್ಷರಾಕ್ಷಸಾದಿಗಳು ಆ ದೇವೇಂದ್ರರ ಮಹಿಮೆ ಗಳನ್ನು ಹೊಗಳುವರು. ಈ ಮನ್ವಂತರದಲ್ಲಿ ವಿಶ್ವಾಮಿತ್ರ, ಜಮದಗ್ನಿ, ಭರದ್ವಾಜ, ಗೌತಮ, ಅತ್ರಿ, ವಸಿಷ್ಠ, ಕಶ್ಯಪ ಈ ಏಳು ಮುನಿಗಳು ದೇವರ್ಷಿಗಳೆಂದು ಪ್ರಸಿದ್ಧ ರಾಗಿರುವರು. ಇವರಂತೆಯೇ ಇಕ್ಷ್ವಾಕು, ನಾಭಾಗ, ಧೃಷ್ಟ, ಶರ್ಯಾತಿ, ನಿರಿಷ್ಯಂತ, ನಾಭ, ಕರುಷ, ಪೃಷಧ್ರ, ವಸುವಂತ ಈ ಒಂಭತ್ತು ಜನರು ಮನುಪುತ್ರರಾಗಿರು ವರು. ಈ ವೈವಸ್ವತಮನ್ವಂತರದಂತೆಯೇ ಅತೀತಾನಾಗತ ಮನ್ವಂತರಗಳಲ್ಲಿಯೂ ದೇವ ಋಷ್ಯಾದಿ ಗಣಗಳು ಸುಪ್ರಸಿದ್ಧಗಳಾಗಿವೆ. ಇವೇ ಮೊದಲಾದ ವಿಷಯಗಳು ವರ್ಣಿತವಾಗಿವೆ.



*

—|| ಹರಿಃ ಓಂ ||—

—ಶ್ರೀ ಗಣೇಶಾಯ ನಮಃ—

# ಶ್ರೀಮದ್ವಾಯು ಮಹಾಪುರಾಣಂ

## ಚತುರ್ಥೋಽಧ್ಯಾಯಃ

**|| ಋಷಯ ಊಚುಃ ||**

**ಶ್ರುತ್ವಾ ಪಾದಂ ದ್ವಿತೀಯಂ ತು ಕ್ರಾಂತಂ ಸೂತೇನ ಧೀಮತಾ ।**
**ಅತಸ್ತೃತೀಯಂ ಪಪ್ರಚ್ಛ ಪಾದಂ ವೈ ಶಾಂಶಪಾಯನಃ || ೧ ||**

**ಪಾದಃ ಕ್ರಾಂತೋ ದ್ವಿತೀಯೋಽಯಮನುಷಂಗೇಣ ಯಸ್ತ್ವಯಾ ।**
**ತೃತೀಯಂ ವಿಸ್ತರಾತ್ಪಾದಂ ಸೋಪೋದ್ಘಾತಂ ಪ್ರಕೀರ್ತಯ ||**
**ಏವಮುಕ್ತೋಽಬ್ರವೀತ್ಸೂತಃ ಪ್ರಹೃಷ್ಟೇನಾಂತರಾತ್ಮನಾ || ೨ ||**

---

## ನಾಲ್ಕನೆಯ ಅಧ್ಯಾಯವು

೧. ಮುನಿಗಳು ಹೇಳಿದರು :—ನೈಮಿಷಾರಣ್ಯವಾಸಿಗಳಾದ ಮಹರ್ಷಿಗಳು ಜ್ಞಾನಿಯಾದ ಸೂತಮುನಿಯು ಹೇಳಿದ ಎರಡನೆಯದಾದ ಉಪೋದ್ಘಾತಪಾದದ ಅಭಿಪ್ರಾಯವನ್ನು ಕೇಳಿ ಮೂರನೆಯದಾದ ಅನುಷಂಗಪಾದದ ಅರ್ಥವನ್ನು ತಿಳಿಸಬೇಕೆಂದ ಕೇಳಿದರು. ಪೂರ್ವದಲ್ಲಿ ಶಾಂಶಪಾಯನ ಮುನಿಯು ವಾಯುದೇವನನ್ನು ಕೇಳಿದ ವಿಷಯವನ್ನು ಮುನಿಗಳು ಸೂತರನ್ನು ಕೇಳಿದರು.

೨. ಎಲೈ ಸೂತಮುನಿಯೇ ನೀನು ಸಂಪೂರ್ಣವಾಗಿ ಎರಡನೆಯ ಪಾದವನ್ನು ತಿಳಿಸಿರುತ್ತೀಯೆ. ಈಗ ಮೂರನೆಯ ಪಾದದ ವಿಷಯಗಳನ್ನು ವಿಸ್ತಾರವಾಗಿ ತಿಳಿಸಬೇಕೆಂದು ಕೇಳಿದರು. ಹೀಗೆ ಮುನಿಗಳು ಕೇಳಲಾಗಿ ಸಂತುಷ್ಟನಾದ ಸೂತಮುನಿಯು ಹೇಳಲುಪಕ್ರಮಿಸಿದನು.

|| ಸೂತ ಉವಾಚ ||

ಕೀರ್ತಯಿಷ್ಯೇ ತೃತೀಯಂ ಚ ಸೋಪೋದ್ಘಾತಂ ಸವಿಸ್ತರಂ ।
ಪಾದಂ ಸಮುದಯಾದ್ವಿಪ್ರಾ ಗದತೋ ಮೇ ನಿಬೋಧತ || ೩ ||

ಮನೋರ್ವೈವಸ್ವತಸ್ಯೇಮಂ ಸಾಂಪ್ರತಸ್ಯ ಮಹಾತ್ಮನಃ ।
ವಿಸ್ತರೇಣಾನುಪೂರ್ವ್ಯಾ ಚ ನಿಸರ್ಗಂ ಶ್ರುಣುತ ದ್ವಿಜಾಃ || ೪ ||

ಚತುರ್ಯುಗೈಕಸಪ್ತತ್ಯಾ ಸಂಖ್ಯಾತಃ ಪೂರ್ವಮೇವ ತು ।
ಸಹ ದೇವಗಣೈಶ್ಚೈವ ಋಷಿಭಿರ್ದಾನವೈಃ ಸಹ || ೫ ||

ಪಿತೃಗಂಧರ್ವಯಕ್ಷೈಶ್ಚ ರಕ್ಷೋಭೂತಗಣೈಸ್ತಥಾ ।
ಮಾನುಷ್ಯೈಃ ಪಶುಭಿಶ್ಚೈವ ಪಕ್ಷಿಭಿಃ ಸ್ಥಾವರೈಃ ಸಹ || ೬ ||

---

೩. ಸೂತಮುನಿಯು ಹೇಳಿದನು :—ಎಲೈ ವಿಪ್ರವರ್ಯರೇ, ನಿಮಗಾಗಿ ನಾನು ಮೂರನೆಯ ಪಾದವನ್ನು ಉಪೋದ್ಘಾತಪೂರ್ವಕವಾಗಿಯೂ, ವಿಸ್ತಾರವಾಗಿಯೂ ವರ್ಣಿಸುವೆನು. ಹೀಗೆ ತಿಳಿಸುವ ಮೂರನೆಯ ಪಾದದ ಅಭಿಪ್ರಾಯವನ್ನು ಏಕಮನಸ್ಕರಾಗಿ ಕೇಳಿರೆಂದು ಹೇಳಿದನು.

೪. ಭೋ-ಬ್ರಾಹ್ಮಣೋತ್ತಮರೇ, ಮಹಾತ್ಮನೂ, ವರ್ತಮಾನದವನೂ ಆದ ವೈವಸ್ವತಮನುವಿನ ಮನ್ವಂತರವನ್ನು ವಿಸ್ತಾರವಾಗಿಯೂ ಕ್ರಮವಾಗಿಯೂ ನಿರೂಪಿಸುವೆನು. ಆ ಸೃಷ್ಟಿಕ್ರಮವನ್ನು ಸಾವಧಾನವಾಗಿ ಕೇಳಿರೆಂದನು.

೫-೬. ಎಪ್ಪತ್ತೊಂದು ಚತುರ್ಯುಗಗಳಾದರೆ ಒಬ್ಬ ಮನುವಿನ ಕಾಲವು ಮುಗಿಯುವುದೆಂದು ಮೊದಲೇ ತಿಳಿಸಿರುವೆನು. ಆ ಮನುಕಲ್ಪಗಳಲ್ಲಿ ದೇವಗಣಗಳು, ಋಷಿಗಳು, ದಾನವರು, ಪಿತೃಗಳು, ಗಂಧರ್ವ, ಯಕ್ಷ, ರಾಕ್ಷಸರು, ಭೂತಗಳು, ಮನುಷ್ಯರು, ಪಶುಪಕ್ಷಿಗಳು, ಸ್ಥಾವರಗಳು ಇವುಗಳು ಉತ್ಪನ್ನವಾದುವು ಎಂಬ ವಿಷಯಗಳನ್ನು ತಿಳಿಸಿರುವೆನು.

ಮನ್ವಾದಿಕಂ ಭವಿಷ್ಯಾಂತಮಾಖ್ಯಾನೈರ್ಬಹುವಿಸ್ತರಂ ।
ವಕ್ಷ್ಯೇ ವೈವಸ್ವತಂ ಸರ್ಗಂ ನಮಸ್ಕೃತ್ಯ ವಿವಸ್ವತೇ ॥ ೭ ॥

ಆದ್ಯೇ ಮನ್ವಂತರೇತೀತಾಃ ಸರ್ಗಾಃ ಪ್ರಾವರ್ತಕಾಶ್ಚ ಯೇ ।
ಸ್ವಾಯಂಭುವೇಂತರೇ ಪೂರ್ವಂ ಸಪ್ತಾರ್ಸ ಯೇ ಮಹರ್ಷಯಃ ॥
ಚಾಕ್ಷುಷಸ್ಯಾಂತರೇತೀತೇ ಪ್ರಾಪ್ತೆ ವೈವಸ್ವತೇ ಪುನಃ ॥ ೮ ॥

ದಕ್ಷಸ್ಯ ಚ ಋಷೀಣಾಂ ಚ ಭೃಗ್ವಾದೀನಾಂ ಮಹೌಜಸಾಂ ।
ಶಾಪಾನ್ಮಹೇಶ್ವರಸ್ಯಾಸೀತ್ ಪ್ರಾದುರ್ಭಾವೋ ಮಹಾತ್ಮನಾಂ ॥ ೯ ॥

ಭೂಯಃ ಸಪ್ತರ್ಷಯಸ್ತೇ ಚ ಉತ್ಪನ್ನಾಃ ಸಪ್ತಮಾನಸಾಃ ।
ಪುತ್ರತ್ವೇಕಲ್ಪಿತಾಶ್ಚೈವ ಸ್ವಯಮೇವ ಸ್ವಯಂಭುವಾ ॥ ೧೦ ॥

---

೭. ಓ ವಿಪ್ರರೇ ಮೊದಲು ಮೂಲಪುರುಷನಾದ ಸೂರ್ಯದೇವನಿಗೆ ನಮಸ್ಕರಿಸಿ ಭಾವಿಯಾದ ಅನೇಕೋಪಾಖ್ಯಾನಗಳಿಂದ ಕೂಡಿದ ಅತಿವಿಸ್ತಾರವಾದ ವೈವಸ್ವತ ಮನುವಿನ ಸೃಷ್ಟಿಕ್ರಮವನ್ನು ಹೇಳುವೆನು ಸಾವಧಾನದಿಂದ ಕೇಳಿರೆಂದನು.

೮-೯. ಮೊದಲನೆಯ ಸ್ವಾಯಂಭುವಮನ್ವಂತರದಲ್ಲಿ ಸೃಷ್ಟಿಪ್ರವರ್ತಕರಾದ ಯಾವ ಸಪ್ತಮಹರ್ಷಿಗಳು ಅತೀತರಾಗಿರುವರೋ ಅವರೇ ಚಾಕ್ಷುಷಮನ್ವಂತರದಲ್ಲಿ ಪುನಃ ಜನಿಸಿ ಸೃಷ್ಟಿಕರ್ತರಾಗಿರುವರು. ಅವರೇ ಮತ್ತು ವೈವಸ್ವತಮನ್ವಂತರವು ಪ್ರಾಪ್ತವಾಗಲು ಈಶ್ವರನ ಶಾಪದಿಂದ ಪುನಃ ಆವಿರ್ಭವಿಸುವರು. ಅವರು ಯಾರೆಂದರೆ– ದಕ್ಷಪ್ರಜಾಪತಿಯೂ, ಮಹಾತ್ಮರೂ, ಮಹಾತೇಜಸ್ವಿಗಳೂ ಆದ ಭೃಗ್ವಾದಿ ಮಹರ್ಷಿಗಳಾಗಿರುವರು. ಇವರು ಈಶ್ವರನ ಶಾಪದಿಂದ ಭೂಮಿಯಲ್ಲಿ ಪುನಃ ಅವತರಿಸುವರು.

೧೦. ಆ ಸಪ್ತರ್ಷಿಗಳೇ ಈ ಸ್ವಾಯಂಭುವಮನ್ವಂತರದಲ್ಲಿ ಬ್ರಹ್ಮದೇವನ ಮಾನಸಪುತ್ರರಾಗಿ ಪುನಃ ಅವತರಿಸಿ ಅವಾಂತರ ಸೃಷ್ಟಿಗೆ ಮುಖ್ಯಪ್ರವರ್ತರಾಗಿರುವರು.

ಪ್ರಜಾಸಂತಾನಕೃದ್ಭಿಸ್ತೈರುತ್ಪದ್ಯದ್ಭಿರ್ಮಹಾತ್ಮಭಿಃ ।
ಪುನಃ ಪ್ರವರ್ತಿತಃ ಸರ್ಗೋ ಯಥಾಪೂರ್ವಂ ಯಥಾಕ್ರಮಮ್ ॥ ೧೧ ॥

ತೇಷಾಂ ಪ್ರಸೂತಿಂ ವಕ್ಷ್ಯಾಮಿ ವಿಶುದ್ಧಜ್ಞಾನಕರ್ಮಣಾಮ್ ।
ಸಮಾಸವ್ಯಾಸಯೋಗಾಭ್ಯಾಂ ಯಥಾವದನುಪೂರ್ವಶಃ ॥ ೧೨ ॥

ಯೇಷಾಮನ್ವಯಸಂಭೂತೈರ್ಲೋಕೋಽಯಂ ಸಚರಾಚರಃ ।
ಪುನಃ ಸ ಪೂರಿತಃ ಸರ್ಗೋ ಗ್ರಹನಕ್ಷತ್ರಮಂಡಿತಃ ॥ ೧೩ ॥

ಏತಚ್ಛ್ರುತ್ವಾ ವಚಸ್ತಸ್ಯ ಮುನೀನಾಂ ಸಂಶಯೋಽಭವತ್ ।
ತತಸ್ತಂ ಸಂಶಯಾವಿಷ್ಟಾಃ ಸೂತಂ ಸಂಶಯನಿಶ್ಚಯೇ ॥
ಸತ್ಕೃತ್ಯ ಪರಿಪಪ್ರಚ್ಛುರ್ಮುನಯಃ ಶಂಸಿತವ್ರತಾಃ ॥ ೧೪ ॥

---

೧೧. ಎಲೈ ವಿಪ್ರರೇ ಪ್ರಜಾಸಂತಾನಜನಕರೂ, ಸತ್ಪುರುಷರೂ, ಮಹಾತ್ಮರೂ ಆದ ದೇವಋಷ್ಯಾದಿಗಳು ಪುನಃ ಅವತರಿಸಿ, ಪೂರ್ವದ ಹಾಗೆ ಯಥಾಕ್ರಮವಾಗಿ ಸೃಷ್ಟಿಕ್ರಮವನ್ನು ಮಾಡುವರು.

೧೨. ಅತ್ಯಂತ ಪರಿಶುದ್ಧವಾದ ಜ್ಞಾನಕರ್ಮಗಳುಳ್ಳವರೂ, ಮಹಾತ್ಮರೂ ಆದ ಆ ದೇವಋಷ್ಯಾದಿಗಳ ಅವತಾರವನ್ನು ಯಥಾಸ್ಥಿತವಾಗಿಯೂ, ಕ್ರಮವಾಗಿಯೂ, ಸಂಪೂರ್ಣವಾಗಿಯೂ, ಸಂಕ್ಷೇಪ ವಿಸ್ತಾರವಾಗಿಯೂ ನಿರೂಪಿಸುವೆನು ಕೇಳಿರೆಂದನು.

೧೩. ಸ್ಥಾವರಜಂಗಮರೂಪವೂ, ಗ್ರಹನಕ್ಷತ್ರಗಳಿಂದಲಂಕೃತವೂ ಆದ ಈ ಮೂರು ಲೋಕಗಳು ಆ ದೇವಋಷ್ಯಾದಿಗಳ ವಂಶಗಳಲ್ಲಿ ಉತ್ಪನ್ನರಾದ ಮಹಾತ್ಮರಿಂದ ಪುನಃ ಪೂರ್ಣವಾದುವು.

೧೪. ಮಹಾತ್ಮರಾದ ಮುನಿಗಳು ಸೂತಪುರಾಣೀಕನ ಆ ಮಾತುಗಳನ್ನು ಕೇಳಿ ಸಂಶಯಾವಿಷ್ಟರಾದರು. ಅನಂತರ ಸಂಶಯಾಕ್ರಾಂತರಾದ ಮುನಿಗಳು ಸಂಶಯ ಪರಿಹಾರಕ್ಕಾಗಿ ಆ ಸೂತಮುನಿಯನ್ನು ಸತ್ಕರಿಸಿ ಅತ್ಯಂತ ನಿಯಮದಿಂದ ಕೇಳಿದರು.

॥ ಋಷಯ ಊಚುಃ ॥

ಕಥಂ ಸಪ್ತರ್ಷಯಃ ಪೂರ್ವಮುತ್ಪನ್ನಾಃ ಸಪ್ತಮಾನಸಾಃ ।
ಪುತ್ರತ್ವೇ ಕಲ್ಪಿತಾಶ್ಚೈವ ತನ್ನೋ ನಿಗದ ಸತ್ತಮ ॥
ತತೋಽಬ್ರವೀನ್ಮಹಾತೇಜಾಃ ಸೂತಃ ಪೌರಾಣಿಕಃ ಶುಭಂ ॥ ೧೫ ॥

ಕಥಂ ಸಪ್ತರ್ಷಯಃ ಸಿದ್ಧಾಃ ಯೇ ವೈ ಸ್ವಾಯಂಭುವೇಽಂತರೇ ।
ಮನ್ವಂತರಂ ಸಮಾಸಾದ್ಯ ಪುನರ್ವೈವಸ್ವತಂ ಕಿಲ ॥ ೧೬ ॥

ಭವಾಭಿಶಾಪಾತ್ಸಂವಿದ್ಧಾ ಹ್ಯಪ್ರಾಪ್ತಾಸ್ತೇ ತದಾ ತಪಃ ।
ಉಪಪನ್ನಾ ಜನೇ ಲೋಕೇ ಸಕೃದಾಗಾಮಿನಸ್ತು ತೇ ॥ ೧೭ ॥

ಊಚುಃ ಸರ್ವೇ ತತೋಽನ್ಯೋಽನ್ಯಂ ಜನಲೋಕೇ ಮಹರ್ಷಯಃ ।
ಊಚುರೇವ ಮಹಾಭಾಗಾ ವಾರುಣೇ ವಿತತೇ ಕ್ರತೌ ॥ ೧೮ ॥

---

೧೫. ಮುನಿಗಳು ಹೇಳಿದರು :—ಪೂರ್ವದಲ್ಲಿ ಸಪ್ತರ್ಷಿಗಳು ಬ್ರಹ್ಮದೇವನಿಗೆ ಮಾನಸಪುತ್ರರಾಗಿ ಹೇಗೆ ಹುಟ್ಟಿದರು. ಬ್ರಹ್ಮದೇವನು ಅವರನ್ನು ಮಾನಸಪುತ್ರರನ್ನಾಗಿ ಸೃಷ್ಟಿಸಲು ಕಾರಣವೇನು ? ಇದನ್ನು ಜ್ಞಾನಿಯಾದ ನೀನು ದಯಮಾಡಿ ತಿಳಿಸು ಎಂದು ಕೇಳಿದರು. ತರುವಾಯ ಮಹಾತೇಜಸ್ವಿಯೂ, ಪೌರಾಣಿಕೋತ್ತಮನೂ ಆದ ಸೂತಮುನಿಯು ಮಂಗಳಕರವಾದ ವಿಷಯವನ್ನು ಹೇಳಲುಪಕ್ರಮಿಸಿದನು.

೧೬. ಪೂರ್ವದ ಸ್ವಾಯಂಭುವಮನ್ವಂತರದಲ್ಲಿದ್ದ ಸಪ್ತರ್ಷಿಗಳು, ಅನಂತರ ವೈವಸ್ವತಮನ್ವಂತರವು ಪ್ರಾಪ್ತವಾಗಲು ಪುನಃ ಅವತರಿಸಲು ಕಾರಣವೇನೆಂಬುದನ್ನು ಹೇಳುವೆನು ಕೇಳಿರೆಂದನು.

೧೭. ದಕ್ಷಪ್ರಜೇಶ್ವರನ ಅಳಿಯಿಂದರಾಗಿದ್ದ ಮಹರ್ಷಿಗಳು ಈಶ್ವರನ ಶಾಪದಿಂದ ಗ್ರಸ್ತರಾದ ಕಾರಣ ತಪಸ್ಸುಮಾಡದೆ ಸುಮ್ಮನಿದ್ದು, ಜನನ ಮರಣಗಳಿಂದ ಪೂರ್ಣವಾದ ಜನಲೋಕದಲ್ಲಿ ಉತ್ಪನ್ನರಾದರು.

೧೮–೧೯. ಹೀಗೆ ಜನಲೋಕದಲ್ಲಿ ಅವತರಿಸಿದ್ದ ಮಹರ್ಷಿಗಳು ಏಕತ್ರ ಮಿಳಿತರಾಗಿ ಪರಸ್ಪರವಾಗಿ ಇಂತೆಂದರು. ಮಹಾಭಾಗ್ಯಶಾಲಿಗಳಾದ ಆ ಮಹರ್ಷಿಗಳು

ಸರ್ವೇ ವಯಂ ಪ್ರಸೂಯಾಮಶ್ಚಾಕ್ಷುಷಸ್ಯಾಂತರೇ ಮನೋಃ ।
ಪಿತಾಮಹಾತ್ಮಜಾಃ ಸರ್ವೇ ತತಃ ಶ್ರೇಯೋ ಭವಿಷ್ಯತಿ ॥ ೧೯ ॥

ಸ್ವಾಯಂಭುವೇಂತರೇ ಶಪ್ತಾಃ ಸಪ್ತಾರ್ಥಂ ತೇ ಭವೇನ ತು ।
ಜಜ್ಞಿರೇ ವೈ ಪುನಸ್ತ್ವೇಹ ಜನಲೋಕಾದ್ದಿವಂ ಗತಾಃ ॥ ೨೦ ॥

ದೇವಸ್ಯ ಮಹತೋ ಯಜ್ಞೇ ವಾರುಣೀಂ ಬಿಭ್ರತಸ್ತನುಂ ।
ಬ್ರಹ್ಮಣೋ ಜುಹ್ವತಃ ಶುಕ್ರ ಮಗ್ನೌ ಪೂರ್ವಂ ಪ್ರಜೇಪ್ಸಯಾ ॥
ಋಷಯೋ ಜಜ್ಞಿರೇ ಪೂರ್ವಂ ದ್ವಿತೀಯಮಿತಿ ನಃ ಶ್ರುತಂ ॥ ೨೧ ॥

ಭೃಗುರಂಗಿರಾ ಮರೀಚಿಃ ಪುಲಸ್ತ್ಯಃ ಪುಲಹಃ ಕ್ರತುಃ ।
ಅತ್ರಿಶ್ಚೈವ ವಸಿಷ್ಠಶ್ಚ ಅಷ್ಟೌ ತೇ ಬ್ರಹ್ಮಣಃ ಸುತಾಃ ॥ ೨೨ ॥

---

ನಾವೆಲ್ಲರೂ ಚಾಕ್ಷುಷಮನ್ವಂತರದಲ್ಲಿ ವರುಣದೇವನ ಸುಪ್ರಸಿದ್ಧವಾದ ಯಾಗವು ನಡೆಯುವುದರಿಂದ ಬ್ರಹ್ಮದೇವನ ಮಾನಸಪುತ್ರರಾಗಿ ಅವತರಿಸೋಣ. ಆಗ ನಮಗೆ ಮಹಾಶ್ರೇಯಸ್ಸುಂಟಾಗುವುದು ಎಂದು ಆಲೋಚನೆ ಮಾಡಿದರು.

೨೦. ಎಲೈ ವಿಪ್ರರೇ, ಸ್ವಾಯಂಭುವಮನ್ವಂತರದಲ್ಲಿ ಈಶ್ವರನಿಂದ ಶಪ್ತರಾದ ಮಹರ್ಷಿಗಳು ಯಾಗಮಾಡುವುದಕ್ಕಾಗಿ ಪುನಃ ಅವತರಿಸಿದರು. ಅನಂತರ ಅವರು ಜನಲೋಕದಿಂದ ಸ್ವರ್ಗಲೋಕಕ್ಕೆ ಹೋದರು.

೨೧. ಮಹಾತ್ಮನಾದ ಬ್ರಹ್ಮದೇವನ ಯಾಗದಲ್ಲಿ ಬ್ರಹ್ಮದೇವನು ವಾರುಣೀ ಶರೀರವನ್ನು ಧರಿಸಿ, ಪ್ರಜಾಕಾಂಕ್ಷೆಯಿಂದ ಅಗ್ನಿಯಲ್ಲಿ ಶುಕ್ರವನ್ನು ಹೋಮಮಾಡಲಾಗಿ ಮಹರ್ಷಿಗಳು ಎರಡನೆಯಸಲ ಅವತರಿಸಿದರೆಂದು ನಾವು ಕೇಳುತ್ತೇವೆಯೆಂದು ಹೇಳಿದರು.

೨೨. ಆಗ ಭೃಗು, ಅಂಗಿರಸ, ಮರೀಚಿ, ಪುಲಸ್ತ್ಯ, ಪುಲಹ, ಕ್ರತು, ಅತ್ರಿ, ವಸಿಷ್ಠರೆಂಬ ಈ ಅಷ್ಟಮಹರ್ಷಿಗಳು ಬ್ರಹ್ಮದೇವನ ಮಾನಸಪುತ್ರರಾಗಿ ಹುಟ್ಟಿದರು.

**ತಥಾಸ್ಯ ವಿತತೇ ಯಜ್ಞೇ ದೇವಾಃ ಸರ್ವೇ ಸಮಾಗತಾಃ ।**
**ಯಜ್ಞಾಂಗಾನಿ ಚ ಸರ್ವಾಣಿ ವಷಟ್ಕಾರಶ್ಚ ಮೂರ್ತಿಮಾ ॥ ೨೩ ॥**

**ಮೂರ್ತಿಮಂತಿ ಚ ಸಾಮಾನಿ ಯಜೂಂಷಿ ಚ ಸಹಸ್ರಶಃ ।**
**ಋಗ್ವೇದಶ್ಚಾಭವತ್ತತ್ರ ಪದಕ್ರಮವಿಭೂಷಿತಃ ॥ ೨೪ ॥**

**ಯಜುರ್ವೇದಶ್ಚ ವೃತ್ತಾಢ್ಯ ಓಂಕಾರವದನೋಜ್ವಲಃ ।**
**ಸ್ಥಿತೋ ಯಜ್ಞಾರ್ಥಸಂಪೃಕ್ತಸೂಕ್ತಬ್ರಾಹ್ಮಣಮಂತ್ರವಾ ॥ ೨೫ ॥**

**ಸಾಮವೇದಶ್ಚ ವೃತ್ತಾಢ್ಯಃ ಸರ್ವಗೇಯಪುರಃಸರಃ ।**
**ವಿಶ್ವಾವಸ್ವಾದಿಭಿಃ ಸಾರ್ಧಂ ಗಂಧರ್ವೈಃ ಸಂಭೃತೋಭವತ್ ॥ ೨೬ ॥**

**ಬ್ರಹ್ಮ ವೇದಸ್ತಥಾ ಘೋರೈಃ ಕೃತ್ಯಾವಿಧಿಭಿರನ್ವಿತಃ ।**
**ಪ್ರತ್ಯಂಗಿರಸಯೋಗ್ಯೈಶ್ಚ ದ್ವಿಶರೀರಶಿರೋಭವತ್ ॥ ೨೭ ॥**

---

೨೩-೨೪. ಹಾಗೆಯೇ ಅತಿಮಹತ್ತಾದ ಆ ಯಾಗಕ್ಕಾಗಿ ಸಮಸ್ತರಾದ ದೇವತೆಗಳೂ ಬಂದಿದ್ದರು. ಯಜ್ಞಸಾಧನೆಗಳೆಲ್ಲವೂ ಸಂಪೂರ್ಣವಾಗಿದ್ದುವು. ವಷಟ್ಕಾರಗಳು ಮೂರ್ತಿವತ್ತಾಗಿದ್ದುವು. ಸಾಮವೇದಗಳು, ಯಜುರ್ವೇದಗಳು ಸಹಸ್ರಾರು ಮೂರ್ತಿಗಳನ್ನು ಹೊಂದಿ ಪ್ರಕಾಶಿಸುತ್ತಿದ್ದುವು. ಋಗ್ವೇದವಾದರೋ ಪದಕ್ರಮಗಳಿಂದ ಭೂಷಿತವಾಗಿ ಆಕಾರವನ್ನು ಪಡೆದಿತ್ತು.

೨೫. ಯಜುರ್ವೇದವಾದರೋ ವೃತ್ತಗಳಿಂದ ಪೂಜ್ಯವೂ ಓಂಕಾರವೆಂಬ ಮುಖದಿಂದ ಪ್ರಜ್ವಲಿತವೂ ಯಜ್ಞಾರ್ಥಗಳಾದ ಸೂಕ್ತಬ್ರಾಹ್ಮಣ ಮಂತ್ರ ಇವುಗಳಿಂದ ಸಹಿತವೂ ಆಗಿರುತ್ತದೆ.

೨೬. ಆ ಯಾಗದಲ್ಲಿ ವಿಶ್ವಾವಸುವೇ ಮೊದಲಾದ ಸಮಸ್ತರಾದ ಗಂಧರ್ವರೂ ಸೇರಿ ಸಾಮವೇದವನ್ನು ಸಮಸ್ತ ವೃತ್ತಗಳಿಂದ ಕೂಡಿ ನಾನಾ ರೀತಿಯಲ್ಲಿ ಸರ್ವರಿಗೂ ಆನಂದವಾಗುವಂತೆ ಗಾನಮಾಡಿದರು.

೨೭. ಪರಬ್ರಹ್ಮಪ್ರತಿಪಾದಕ ವೇದವು ಘೋರರೂಪವಾದ ಕೃತ್ಯಾದಿಗಳಿಂದ ಕೂಡಿ ಪ್ರತ್ಯವಯವಗಳಲ್ಲಿ ರಸಭರಿತವಾಗಿ ದ್ವಿಶರೀರ ಎರಡು ಶಿರಸ್ಸು ಉಳ್ಳ ಆಕಾರವನ್ನು ಧರಿಸಿ ಪ್ರಕಾಶಿಸಿತು.

ಲಕ್ಷಣಾನಿ ಸ್ವರಾಃ ಸ್ತೋಭಾ ನಿರುಕ್ತಸ್ವರಭಕ್ತಯಃ ।
ಆಶ್ರಯಸ್ತು ವಷಟ್‌ಕಾರೋ ನಿಗ್ರಹಪ್ರಗ್ರಹಾವಪಿ ॥ ೨೮ ॥

ದೀಪ್ತಾ ದೀಪ್ತಿರಿಲಾದೇವೀ ದಿಶಃ ಪ್ರದಿಶಗೀಶ್ವರಾಃ ।
ದೇವಕನ್ಯಾಶ್ಚ ಪತ್ನಶ್ಚ ತಥಾ ಮಾತರ ಏವ ಚ ॥ ೨೯ ॥

ಆಯುಃ ಸರ್ವತ ಏವೈತೇ ದೇವಸ್ಯ ಯಜತೋ ಮುಖೇ ।
ಮೂರ್ತಿಮಂತಃ ಸ್ವರೂಪಾಖ್ಯಾ ವರುಣಸ್ಯ ವಪುರ್ಭೃತಃ ॥ ೩೦ ॥

ಸ್ವಯಂಭುವಸ್ತು ತಾ ದೃಷ್ಟ್ವಾ ರೇತಃ ಸಮುಪತದ್ಭುವಿ ।
ಬ್ರಹ್ಮರ್ಷೇರ್ಭಾವಭೂತಸ್ಯ ವಿಧಾನಾಚ್ಚ ನ ಸಂಶಯಃ ॥ ೩೧ ॥

---

೨೮. ಆ ಮಹಾಯಾಗದಲ್ಲಿ ಲಕ್ಷಣಗಳೂ, ಸ್ವರಗಳೂ, ವೇದಭಾಗಗಳಾದ ಸ್ತೋಭಗಳೂ, ನಿರುಕ್ತಸ್ವರಭಕ್ತಿಗಳೂ, ಆಶ್ರಯವಷಟ್ಕಾರಗಳೂ, ನಿಗ್ರಹಪ್ರಗ್ರಹಗಳೂ ಸಹ ಮೂರ್ತಿವತ್ತಾಗಿದ್ದುವು

೨೯–೩೦ ಆ ಬ್ರಹ್ಮದೇವನ ಯಾಗದಲ್ಲಿ ಕಾಂತಿಯುತಳಾದ ಭೂದೇವಿಯೂ, ದಿಗ್ದೇವತೆಗಳೂ, ವಿದಿಕ್ಕಭಿಮಾನಿಗಳೂ, ದೇವಕನ್ಯೆಯರೂ, ದೇವಪತ್ನಿಯರೂ, ದೇವಮಾತೃಗಳೂ, ಆಯುರಭಿಮಾನಿದೇವತೆಗಳೂ, ಮೂರ್ತಿಮಂತರಾದ ಸ್ವರೂಪ ದೇವತೆಗಳೂ, ಶರೀರಧಾರಿಯಾದ ವರುಣದೇವನೂ ಸಹ ಸನ್ನಿಹಿತನಾಗಿದ್ದನು.

೩೧. ಹೀಗೆ ಯಾಗಕ್ಕಾಗಿ ಬಂದಿರುವ ಅಪ್ಸರಸಿಯರೇ ಮೊದಲಾದ ದೇವಕನ್ನಿಕೆಯನ್ನು ನೋಡಿದ ಸ್ವಯಂಭುವನಾದ ಬ್ರಹ್ಮನ ರೇತಸ್ಸು ಸ್ಖಲನವಾಗಿ ಭೂಮಿಯಲ್ಲಿ ಪತನವಾಯಿತು. ಬ್ರಹ್ಮರ್ಷಿಗಳು ಜನಿಸಬೇಕೆಂದು ಬ್ರಹ್ಮದೇವನು ಸಂಕಲ್ಪಮಾಡಿರುವುದರಿಂದಲೂ, ಅದೇ ಭಾವದಿಂದ ಕಾರ್ಯಗಳು ವಿಧಾಯಕಗಳಾಗಿರುವುದರಿಂದಲೂ ನಿಃಸಂದೇಹವಾಗಿ ಮಹಾತ್ಮರೇ ಉದ್ಭವಿಸುವರು.

ಕೃತ್ವಾ ಜುಹಾವ ಸೃಗ್ಭ್ಯಾಂ ಚ ಸುವೇಣ ಪರಿಗೃಹ್ಯ ಚ |
ಆಜ್ಯವಜ್ಜುಹುವಾಂಚಕ್ರೇ ಮಂತ್ರವಚ್ಚ ಪಿತಾಮಹಃ || ೩೨ ||

ತತಃ ಸ ಜನಯಾಮಾಸ ಭೂತಗ್ರಾಮಂ ಪ್ರಜಾಪತಿಃ |
ತಸ್ಮಾರ್ವಾಕ್ ತೇಜಸಸ್ತಸ್ಯ ಯಜ್ಞೇ ಲೋಕೇಷು ತೈಜಸಂ ||
ತಮಸಾಭಾವವ್ಯಾಪ್ಯತ್ವಂ ತಥಾ ಸತ್ವಂ ತಥಾ ರಜಃ || ೩೩ ||

ಸುಗಣಾತ್ತೇಜಸೋ ನಿತ್ಯಂ ಆಕಾಶೇ ತಮಸಿ ಸ್ಥಿತಂ |
ತಮಸಸ್ತೇಜಸತ್ವಾಚ್ಚ ಸರ್ವಭೂತಾನಿ ಜಜ್ಞಿರೇ || ೩೪ ||

ಯದಾ ತಸ್ಮಿನ್ನ ಜಾಯಂತ ಕಾಲೇ ಪುತ್ರಾಸ್ತು ಕರ್ಮಜಾಃ |
ಆಜ್ಯಸ್ಥಾಲ್ಯಾಮುಪಾದಾಯ ಸ್ವಶುಕ್ರಂ ಹುತವಾಂಶ್ಚ ಹ || ೩೫ ||

---

೩೨. ಅನಂತರ ಬ್ರಹ್ಮದೇವನು ಸ್ರುಕ್ಸ್ರುವಗಳಿಂದ ಆ ಶುಕ್ರವನ್ನು ತೆಗೆದುಕೊಂಡು ಮಂತ್ರೋಚ್ಚಾರ ಪುರಸ್ಸರವಾಗಿ ಆಜ್ಯಾಹುತಿಗಳಂತೆ ಅಗ್ನಿಯಲ್ಲಿ ಹೋಮಮಾಡಿದನು.

೩೩. ಅನಂತರ ಆ ಬ್ರಹ್ಮದೇವನು ಎಲ್ಲಕ್ಕಿಂತಲೂ ಮೊದಲು ಪಂಚಭೂತಗಳ ಸೃಷ್ಟಿಯನ್ನು ಮಾಡಿದನು. ಆ ಭೂತಸೃಷ್ಟಿಗಿಂತಲೂ ಮೊದಲೇ ಯಾಗದಲ್ಲಿ ಅದರ ತೇಜಸ್ಸಿನಿಂದ ಲೋಕಗಳಲ್ಲಿ ದಿವ್ಯತೇಜಸ್ಸು ಉತ್ಪನ್ನವಾಯಿತು. ಏವಂಚ ಬ್ರಹ್ಮನು ಭೂತಸೃಷ್ಟಿಗಿಂತಲೂ ಪೂರ್ವದಲ್ಲಿ ಸತ್ವರಜಸ್ತಮೋಗುಣಗಳನ್ನು ಸೃಷ್ಟಿಸಿದನು.

೩೪. ಸಗುಣವಾದ ತೇಜಸ್ಸಿಗಿಂತಲೂ ಪೂರ್ವದಲ್ಲಿ ನಿತ್ಯವಾದ ಅಂಧಕಾರದಲ್ಲಿ ಆಕಾಶವು ಮಗ್ನವಾಗಿತ್ತು. ಅಂತಹ ತಮಸ್ಸು ಮತ್ತು ತೇಜಸ್ಸು ಇವುಗಳಿಂದ ಸರ್ವಭೂತಗಳೂ ಉತ್ಪನ್ನವಾದುವು.

೩೫. ಯಾವಾಗ ಆ ಕಾಲದಲ್ಲಿ ಕರ್ಮಜರಾದ ಪುತ್ರರು ಉತ್ಪನ್ನರಾಗ ಲಿಲ್ಲವೋ, ಆಗ ಬ್ರಹ್ಮದೇವನು ಆಜ್ಯದ ಪಾತ್ರೆಯಿಂದ ಸ್ವಶುಕ್ರವನ್ನು ತೆಗೆದು ವಿಧಿಪೂರ್ವಕವಾಗಿ ಹೋಮಮಾಡಿದನು.

**ಶುಕ್ರೇ ಹುತೇಽಥ ತಸ್ಮಿಂಸ್ತು ಪ್ರಾದುರ್ಭೂತಾ ಮಹರ್ಷಯಃ ।**
**ಜ್ವಲಂತೋ ವಪುಷಾ ಯುಕ್ತಾಃ ಸಪ್ತ ವೈ ಪ್ರಸವೈರ್ಗುಣೈಃ ॥ ೩೬ ॥**

**ಹುತೇ ಚಾಗ್ನೌ ಸಕೃಚ್ಛುಕ್ರೇ ಜ್ವಾಲಾಯಾ ನಿಃಸೃತಃ ಕವಿಃ ।**
**ಹಿರಣ್ಯಗರ್ಭಸ್ತಂ ದೃಷ್ಟ್ವಾ ಜ್ವಾಲಾಂ ಭಿತ್ವಾ ವಿನಿಃಸೃತಂ ॥**
**ಭೃಗುಸ್ತ್ವಮಿತಿ ಹೋವಾಚ ಯಸ್ಮಾತ್ತಸ್ಮಾತ್ಸ ವೈ ಭೃಗುಃ ॥ ೩೭ ॥**

**ಮಹಾದೇವಸ್ತಥೋದ್ಭೂತಂ ದೃಷ್ಟ್ವಾ ಬ್ರಹ್ಮಾಣಮಬ್ರವೀತ್ ।**
**ಮಮೈಷ ಪುತ್ರಕಾಮಸ್ಯ ದೀಕ್ಷಿತಸ್ಯ ತ್ವಯಂ ಪ್ರಭೋ ॥**
**ವಿಜಜ್ಞೇಽಥ ಭೃಗುರ್ದೇವೋ ಮಮ ಪುತ್ರೋ ಭವತ್ವಯಂ ॥ ೩೮ ॥**

---

೩೬. ಬ್ರಹ್ಮದೇವನು ಯಾಗದಲ್ಲಿ ಕ್ರಮವಾಗಿ ಆ ಶುಕ್ರವನ್ನು ಹೋಮ ಮಾಡಲಾಗಿ, ಪ್ರಕಾಶಿಸುವ ದಿವ್ಯತೇಜಸ್ಸುಗಳಿಂದ ಯುಕ್ತರೂ ಉತ್ತಮವಾದ ಪ್ರಸವ ಗುಣಗಳಿಂದ ಯುಕ್ತರೂ ಆದ ಸಪ್ತರ್ಷಿಗಳು ಆವಿರ್ಭೂತರಾದರು

೩೭. ಹೀಗೆ ಯಾಗದಲ್ಲಿ ಬ್ರಹ್ಮನು ಶುಕ್ರವನ್ನು ಒಂದುಸಲ ಅಗ್ನಿಯಲ್ಲಿ ಹೋಮಮಾಡಲು, ಆ ಅಗ್ನಿಜ್ವಾಲೆಗಳನ್ನು ಭೇದಿಸಿಕೊಂಡು ಶುಕ್ರಾಚಾರ್ಯನು (ಕಾಣಿಸಿಕೊಂಡನು) ಉತ್ಪನ್ನನಾದನು. ಹೀಗೆ ಅಗ್ನಿಜ್ವಾಲೆಗಳನ್ನು ಭೇದಿಸಿಕೊಂಡು ಬರುವ ಶುಕ್ರನನ್ನು ಬ್ರಹ್ಮದೇವನು ನೋಡಿ ನೀನು ಭೃಗುವಾಗಿರುತ್ತೀಯೆ ಎಂದನು. ಅದರಿಂದ ಅವನು ಭೃಗುವಾದನು.

೩೮. ಆಗ ಮಹೇಶ್ವರನು ಹಾಗೆ ಉತ್ಪನ್ನನಾದ ಅವನನ್ನು ನೋಡಿ ಬ್ರಹ್ಮದೇವನನ್ನು ಕುರಿತು ಇಂತೆಂದನು ಎಲೈ ಸ್ವಾಮಿಯಾದ ಬ್ರಹ್ಮದೇವನೇ, ಈಗ ಜನಿಸಿದ ಈ ಕುಮಾರನು ದೀಕ್ಷಿತನೂ ಪುತ್ರಕಾಮನೂ ಆಗಿರುವ ನನ್ನ ಪುತ್ರನಾಗಿರುವನು. ಈ ಉದ್ಭವಿಸಿದ ಭೃಗುದೇವನು ನನ್ನ ಕುಮಾರನಾಗಲಿ ಎಂದು ಹೇಳಿದನು.

ತಥೇತಿ ಸಮನುಜ್ಞಾತೋ ಮಹಾದೇವಃ ಸ್ವಯಂಭುವಾ ।
ಪುತ್ರತ್ವೇ ಕಲ್ಪಯಾಮಾಸ ಮಹಾದೇವಸ್ತಥಾ ಭೃಗುಂ ॥
ವಾರುಣಾ ಭೃಗವಸ್ತಸ್ಮಾತ್ತದಪತ್ಯಂ ಚ ಸ ಪ್ರಭುಃ ॥ ೩೯ ॥

ದ್ವಿತೀಯಂ ತು ತತಃ ಶುಕ್ರಮಂಗಾರಷ್ವೇಪತತ್ಪ್ರಭುಃ ।
ಅಂಗಾರೇಷ್ವಂಗಿರೋಽಂಗಾನಿ ಸಂಹಿತಾನಿ ತತೋಽಂಗಿರಾಃ ॥ ೪೦ ॥

ಸಂಭೂತಿಂ ತಸ್ಯ ತಾಂ ದೃಷ್ಟ್ವಾ ವಹ್ನಿಬ್ರಹ್ಮಾಣಮಬ್ರವೀತ್ ।
ರೇತೋಧಾಸ್ತುಭ್ಯಮೇವಾಹಂ ದ್ವಿತೀಯೋಽಯಂ ಮಮಾಸ್ತ್ವಿತಿ ॥ ೪೧ ॥

ಏವಮಸ್ತ್ವಿತಿ ಸೋಽಪ್ಯುಕ್ತೋ ಬ್ರಹ್ಮಣಾ ಸದಸಸ್ಪತಿಃ ।
ತಸ್ಮಾದಂಗಿರಸಶ್ಚಾಪಿ ಆಗ್ನೇಯಾ ಇತಿ ನ ಶ್ರುತಂ ॥ ೪೨ ॥

---

೩೯. ಮಹಾದೇವನ ಈ ಮಾತುಗಳನ್ನು ಕೇಳಿದ ಬ್ರಹ್ಮದೇವನು ಹಾಗೆಯೇ ಆಗಬಹುದೆಂದನು. ತರುವಾಯ ಪರಮೇಶ್ವರನು ಬ್ರಹ್ಮದೇವನ ಮಾತಿನಂತೆಯೇ ಆ ಭೃಗುಮುನಿಯನ್ನು ಸ್ವಪುತ್ರನನ್ನಾಗಿ ಭಾವಿಸಿದನು. ಹೀಗೆ ಭೃಗುಮುನಿಯು ಈಶ್ವರನ ಪುತ್ರನಾದುದರಿಂದ ವರುಣನ ಸಂಬಂಧಿಗಳಾದ ಭೃಗುಗಳೆಲ್ಲರೂ ಮಹಾದೇವನ ಪುತ್ರರಾದರು.

೪೦. ಅನಂತರ ಬ್ರಹ್ಮದೇವನು ಆ ಶುಕ್ರವನ್ನು ಹೋಮಪಾತ್ರೆಯಿಂದ ತೆಗದು ಎರಡನೆಯಸಲ ಆಹುತಿಯನ್ನು ಕೊಟ್ಟನು. ಆಗ ಆ ಶುಕ್ರವು ಅಂಗಾರದಲ್ಲಿ (ಅಗ್ನಿಯಿಲ್ಲದ ಸ್ಥಳದಲ್ಲಿ) ಬಿತ್ತು. ಆಗ ಉತ್ಪನ್ನರಾದ ಕುಮಾರರ ಅಂಗಗಳು ಅಂಗಾರಕ್ಕೆ ಸಂಬಂಧವಾದುದರಿಂದ ಅವರು ಅಂಗಿರಸನಾಮಕರಾದರು.

೪೧–೪೨. ಅನಂತರ ಅಗ್ನಿದೇವನು ಆ ಅಂಗಿರಸನ ಉತ್ಪತ್ತಿಯನ್ನು ನೋಡಿ ಬ್ರಹ್ಮದೇವನನ್ನು ಕುರಿತು ಇಂತೆಂದನು. ಎಲೈ ಬ್ರಹ್ಮದೇವನೇ, ಈ ಕುಮಾರನು ನಿನ್ನ ಶುಕ್ರನಿಂದ ಉತ್ಪನ್ನನಾಗಿರುವನು. ಆದರೂ ಎರಡನೆಯ ಆವೃತ್ತಿ ಜನ್ಯನಾದ ಇವನು ನಮ್ಮವನಾಗಲೆಂದು ಬೇಡಿಕೊಂಡನು. ಹೀಗೆ ಯಜ್ಞಪುರುಷನ ಮಾತನ್ನು ಕೇಳಿದ ಬ್ರಹ್ಮದೇವನು ಹಾಗೆಯೇ ಆಗಲೆಂದು ಸಮ್ಮತಿಸಿದನು. ಅದರಿಂದ ಅಂಗಿರಸರೆಲ್ಲರೂ ಆಗ್ನೇಯರೆಂದು ಪ್ರಖ್ಯಾತರಾಗಿರುವರೆಂದು ನಾವು ಕೇಳುತ್ತೇವೆಯೆಂದನು.

ಷಟ್ ಕೃತ್ಯಸ್ತು ಪುನಃ ಶುಕ್ರೇ ಬ್ರಹ್ಮಣಾ ಲೋಕಕಾರಿಣಾ ।
ಹುತೇ ಸಮುಭವಂಸ್ತತ್ರ ಷಡ್ಬ್ರಹ್ಮಾಣ ಇತಿ ಶ್ರುತಿಃ ॥ ೪೩ ॥

ಮರೀಚಿಃ ಪ್ರಥಮಸ್ತತ್ರ ಮರೀಚಿಭ್ಯಃ ಸಮುತ್ಥಿತಃ ।
ಕ್ರತೌ ತಸ್ಮಿನ್ ಸುತೋ ಜಜ್ಞೇ ಯತಸ್ತಸ್ಮಾತ್ಸ ವೈ ಕ್ರತುಃ ॥ ೪೪ ॥

ಅಹಂ ತೃತೀಯ ಇತ್ಯರ್ಥಸ್ತಸ್ಮಾದತ್ರಿಃ ಸ ಕೀರ್ತ್ಯತೇ ।
ಕೇಶೈಶ್ಚ ನಿಶಿತೈರ್ಭೂತಃ ಪುಲಸ್ತ್ಯಸ್ತೇನ ಸ ಸ್ಮೃತಃ ॥ ೪೫ ॥

ಕೇಶೈರ್ಲಂಬೈಃ ಸಮುದ್ಭೂತಸ್ತಸ್ಮಾತ್ತು ಪುಲಹಃ ಸ್ಮೃತಃ ।
ವಸುಮಧ್ಯಾತ್ಸಮುತ್ಪನ್ನೋ ವಸುಮಾನ್ ವಸುಧಾಶ್ರಯಃ ॥ ೪೬ ॥

ವಸಿಷ್ಠ ಇತಿ ತತ್ವಜ್ಞೈಃ ಪ್ರೋಚ್ಯತೇ ಬ್ರಹ್ಮವಾದಿಭಿಃ ।
ಇತ್ಯೇತೇ ಬ್ರಹ್ಮಣಃ ಪುತ್ರಾ ಮಾನಸಾ ಷಣ್ಮಹರ್ಷಯಃ ॥ ೪೭ ॥

---

೪೩. ಲೋಕಕಾರಕನಾದ ಬ್ರಹ್ಮದೇವನು ಪುನಃ ಶುಕ್ರವನ್ನು ಆರುಸಲ ಹೋಮಮಾಡಲು, ತರುವಾಯ ಬ್ರಹ್ಮದೇವನ ಆರುಜನ ಮಾನಸಪುತ್ರರು ಜನಿಸಿದರು ಎಂಬುದಾಗಿ ಶ್ರುತಿಗಳು ಸಾರಿ ಹೇಳಿದುವು

೪೪–೪೫. ಆ ಕುಮಾರರಲ್ಲಿ ಮೊದಲನೆಯವನು ಅಗ್ನಿಯ ಕಿರಣಗಳಿಂದ ಉತ್ಪನ್ನನಾದುದರಿಂದ ಮರೀಚಿಯೆಂದು ಪ್ರಖ್ಯಾತನಾದನು. ಆ ಯಾಗದಲ್ಲಿ ಉತ್ಪನ್ನನಾದುದರಿಂದ ಎರಡನೆಯವನಿಗೆ ಕ್ರತುವೆಂಬ ನಾಮವು ಸಂಭವಿಸಿರುತ್ತದೆ. ನಾನು ಮೂರನೆಯವನೆಂದು ಹೇಳಿದ್ದರಿಂದ ತೃತೀಯ ಕುಮಾರನಿಗೆ ಅತ್ರಿಯೆಂಬ ನಾಮವು ಉಂಟಾಗಿರುವುದು. ನಾಲ್ಕನೆಯ ಕುಮಾರನು ತೀಕ್ಷ್ಣವಾದ ಕೇಶವುಳ್ಳವನಾದುದರಿಂದ ಪುಲಸ್ತ್ಯನೆಂದು ಪ್ರಸಿದ್ಧನಾದನು.

೪೬–೪೭. ಐದನೆಯ ಕುಮಾರನು ನೇತಾಡುತ್ತಿರುವ ಕೇಶಗಳಿಂದ ಯುಕ್ತನಾದುದರಿಂದ ಪುಲಹನೆಂದು ಪ್ರಖ್ಯಾತನಾದನು. ಆರನೆಯ ಪುತ್ರನು ದ್ರವ್ಯರಾಶಿಯ ಮಧ್ಯದಲ್ಲಿ ಸಂಭೂತನಾದುದರಿಂದ ವಸುಮಂತನೆಂದು ಖ್ಯಾತಿಗೊಂಡನು. ಮತ್ತು ಶ್ರೀಮಂತನಾಗಿದ್ದನು. ಬ್ರಹ್ಮವಾದಿಗಳೂ, ತತ್ವಜ್ಞರೂ ಆದ ಮಹಾತ್ಮರು ಆ ವಸುಮಂತನನ್ನು ವಸಿಷ್ಠರೆಂದು ಕರೆಯುವರು. ಹೀಗೆ ಈ ಆರು ಕುಮಾರರು ಬ್ರಹ್ಮದೇವನಿಗೆ ಮಾನಸಿಕ ಕುಮಾರರಾಗಿಯೂ ಪರಮರ್ಷಿಗಳಾಗಿಯೂ ಅವತರಿಸಿದರು.

ಲೋಕಸ್ಯ ಸಂತಾನಕರಾಸ್ತ್ವೈರಿಮಾ ವರ್ಧಿತಾಃ ಪ್ರಜಾಃ |
ಪ್ರಜಾಪತಯ ಇತ್ಯೇವಂ ಪಠ್ಯಂತೇ ಬ್ರಹ್ಮಣಃ ಸುತಾಃ || ೪೮ ||

ಅಪರೇ ಪಿತರೇ ನಾಮ ಏತ್ಯೈರೇವ ಮಹರ್ಷಿಭಿಃ |
ಉತ್ಪಾದಿತಾ ಋಷಿಗಣಾಃ ಸಪ್ತ ಲೋಕೇಷು ವಿಶ್ರುತಾಃ || ೪೯ ||

ಮಾರೀಚಾ ಭಾರ್ಗವಾಶ್ಚೈವ ತಥೈವಾಂಗಿರಸೋಽಪರೇ |
ಪೌಲಸ್ತ್ಯಾಃ ಪೌಲಹಾಶ್ಚೈವ ವಾಸಿಷ್ಠಾಶ್ಚೈವ ವಿಶ್ರುತಾಃ |
ಆತ್ರೇಯಾಶ್ಚ ಗಣಾಃ ಪ್ರೋಕ್ತಾಃ ಪಿತ್ರ್ಯಾಣಾಂ ಲೋಕವಿಶ್ರುತಾಃ || ೫೦ ||

ಏತೇ ಸಮಾಸತಸ್ತಾತ ಪುರ್ವೈವ ತು ಗಣಸ್ತ್ರಯಃ |
ಅಪೂರ್ವಾಶ್ಚ ಪ್ರಕಾಶಾಶ್ಚ ಜ್ಯೋತಿಷ್ಮಂತಶ್ಚ ವಿಶ್ರುತಾಃ || ೫೧ ||

---

೪೮. ಬ್ರಹ್ಮದೇವನ ಆ ಆರುಜನ ಮಾನಸಕುಮಾರರೂ, ಲೋಕಸಂತಾನ ಕಾರಕರೂ, ಪ್ರಜಾವೃದ್ಧಿಕರರೂ, ಲೋಕಪೂಜಕರೂ, ಪ್ರಜಾಪತಿಗಳೂ ಆಗಿರುವ ರೆಂದು ಜ್ಞಾನಿಗಳು ಹೇಳಿರುವರು. ಅವರು ಬ್ರಹ್ಮದೇವನ ಮಾನಸಪುತ್ರರಾಗಿರುವರು.

೪೯. ಬ್ರಹ್ಮದೇವನ ಮಾನಸಪುತ್ರರಾದ ಈ ಸಪ್ತರ್ಷಿಗಳಿಂದಲೇ ಇತರರಾದ ಪಿತೃದೇವತೆಗಳೂ ಋಷಿಗಳೂ ಉತ್ಪನ್ನರಾದರು. ಈ ಸಪ್ತರ್ಷಿಗಳು ಲೋಕಪ್ರಖ್ಯಾತರೂ ಆಗಿರುವರು.

೫೦. ಆ ಪಿತೃದೇವತೆಗಳೂ, ಮಹರ್ಷಿಗಳೂ, ಮಾರೀಚರೂ, ಭಾರ್ಗವರೂ, ಆಂಗಿರಸರೂ, ಪೌಲಸ್ತ್ಯರೂ, ಪೌಲಹರೂ, ವಾಸಿಷ್ಠರೂ, ಆತ್ರೇಯರೂ ಎಂಬ ಸಪ್ತಗಣಗಳಾಗಿ ಲೋಕಸಮ್ಮತರಾಗಿರುವರು.

೫೧. ಎಲೈ ಶಾಂಶಪಾಯನನೇ, ಸಪ್ತರ್ಷಿಗಳ ವಿಷಯವನ್ನೂ, ಸತ್ವರಜಸ್ತಮೋಗುಣಗಳ ವಿಷಯವನ್ನೂ ನಾನು ನಿಮಗಾಗಿ ಸಂಕ್ಷೇಪವಾಗಿ ಪೂರ್ವದಲ್ಲಿಯೇ ತಿಳಿಸಿರುವೆನು. ಅವರು ಅಪೂರ್ವರೂ, ಕಾಂತಿಯುತರೂ, ತೇಜೋವಂತರೂ, ಲೋಕ ವಿಖ್ಯಾತರೂ ಆಗಿರುವರು.

ತೇಷಾಂ ರಾಜಾ ಯಮೋ ದೇವೋ ಯಮೈರ್ವಿಹಿತಕಲ್ಮಷಾಃ ।
ಅಪರೇ ಪ್ರಜಾನಾಂ ಪತಯಸ್ತಾಚ್ಛೃಣುಧ್ವಮತಂದ್ರಿತಾಃ ॥ ೫೨ ॥

ಕರ್ದಮಃ ಕಶ್ಯಪಃ ಶೇಷೋ ವಿಕ್ರಾಂತಃ ಸುಶ್ರುವಾಸ್ತಥಾ ।
ಬಹುಪುತ್ರಃ ಕುಮಾರಶ್ಚ ವಿವಸ್ವಾನ್ ಸಶುಚಿಶ್ರವಾಃ ॥ ೫೩ ॥

ಪ್ರಚೇತಸೋಽರಿಷ್ಟನೇಮಿರ್ಬಹುಲಶ್ಚ ಪ್ರಜಾಪತಿಃ ।
ಇತ್ಯೇವಮಾದಯೋಽನ್ಯೇಪಿ ಬಹವಶ್ಚ ಪ್ರಜೇಶ್ವರಾಃ ॥ ೫೪ ॥

ಕುಶೋಚ್ಚಯಾ ವಾಲಖಿಲ್ಯಾಃ ಸಂಭೂತಾಃ ಪರಮರ್ಷಯಃ ।
ಮನೋಜವಾಃ ಸರ್ವಗತಾಃ ಸಾರ್ವಭೌಮಾಶ್ಚ ತೇಽಭವನ್ ॥ ೫೫ ॥

ಜಾತಾ ಭಸ್ಮವ್ಯಪೋಹಿನ್ಯಾಂ ಬ್ರಹ್ಮರ್ಷಿಗಣಸಂಮತಾಃ ।
ವೈಖಾನಸಾ ಮುನಿಗಣಾಸ್ತಪಃಶ್ರುತಪರಾಯಣಾಃ ॥ ೫೬ ॥

---

೫೨. ಅವರೆಲ್ಲರಿಗೂ ಯಮದೇವನೇ ರಾಜನಾಗಿದ್ದನು. ಅವರು ಜಿತೇಂದ್ರಿಯರಾಗಿಯೂ, ಪಾಪರಹಿತರಾಗಿಯೂ, ಪ್ರಜಾಪತಿಗಳಾಗಿಯೂ, ತಂದ್ರಾದಿದೋಷ ಶೂನ್ಯರಾಗಿಯೂ ಇರುವರು. ಅವರ ಸಂಗತಿಗಳನ್ನು ವರ್ಣಿಸುವೆನು ಸಾವಧಾನವಾಗಿ ಕೇಳಿರೆಂದನು.

೫೩–೫೪. ಎಲೈ ಮುನಿವರ್ಯರೇ, ಕರ್ದಮ, ಕಶ್ಯಪ, ಶೇಷ, ವಿಕ್ರಾಂತ, ಸುಶ್ರುವಸ, ಬಹುಪುತ್ರ, ಕುಮಾರ, ವಿವಸ್ವಂತಿ, ಶುಚಿಶ್ರವಸ, ಪ್ರಚೇತಸ, ಅರಿಷ್ಟನೇಮಿ, ಬಹುಲನೆಂಬ ಪ್ರಜೇಶ್ವರ ಇವರೇ ಮೊದಲಾದವರೂ ಅನ್ಯರೂ ಸಹ ಆಗ ಪ್ರಜೇಶ್ವರರಾಗಿರುವರು.

೫೫. ಮಹರ್ಷಿಗಳು ಕುಶೋಚ್ಚಯರೂ, ವಾಲಖಿಲ್ಯರೂ ಎಂಬುದಾಗಿ ಅವತರಿಸಿದರು. ಮನೋಜವರು, ಸರ್ವಗತರು ಎಂಬುವರು ಚಕ್ರವರ್ತಿಗಳಾಗಿದ್ದರು.

೫೬. ಬ್ರಹ್ಮರ್ಷಿಗಳಲ್ಲಿ ಉತ್ತಮರೂ, ವೈಖಾನಸರೂ, ತಪಸ್ಸು, ಜ್ಞಾನ ಇವುಗಳಿಂದ ಅತ್ಯಂತ ಶ್ರೇಷ್ಠರೂ ಆದ ಮುನಿವರ್ಯರು ಭಸ್ಮವ್ಯಪೋಹಿನೀ ಎಂಬುವಳಲ್ಲಿ ಜನಿಸಿ ಲೋಕವಿಖ್ಯಾತರಾದರು.

**ಸ್ರೋತೋಭ್ಯಸ್ತಸ್ಯ ಚೋತ್ಪನ್ನಾವಶ್ವಿನೌ ರೂಪಸಮ್ಮಿತೌ ।**
**ವಿದುರ್ಜನ್ಮಾಕ್ಷರಜಸೋ ವಿಮಲಾ ನೇತ್ರಸಂಭವಾಃ ॥ ೫೭ ॥**

**ಜ್ಯೇಷ್ಠಾಃ ಪ್ರಜಾನಾಂ ಪತಯಃ ಸ್ರೋತೋಭ್ಯಸ್ತಸ್ಯ ಜಜ್ಞಿರೇ ।**
**ಋಷಯೋ ರೋಮಕೂಪೇಭ್ಯಸ್ತಥಾ ಸ್ವೇದಮಲೋದ್ಭವಾಃ ॥ ೫೮ ॥**

**ದಾರುಣಾ ಹಿ ಋತೇ ಮಾಸಾ ನಿರ್ಯಾಸಾಃ ಪಕ್ಷಸಂಧಯಃ ।**
**ವತ್ಸರಾ ಯೇ ತ್ವಹೋರಾತ್ರಾಃ ಪಿತ್ರಂ ಜ್ಯೋತಿಶ್ಚ ದಾರುಣಂ ॥ ೫೯ ॥**

**ರೌದ್ರಂ ಲೋಹಿತಮಿತ್ಯಾಹುರ್ಲೋಹಿತಂ ಕನಕಂ ಸ್ಮೃತಂ ।**
**ತನ್ಮೈತ್ರಮಿತಿ ವಿಜ್ಞೇಯಂ ಧೂಮಶ್ಚ ಪಶವಃ ಸ್ಮೃತಾಃ ॥ ೬೦ ॥**

---

೫೭. ಆ ಬ್ರಹ್ಮದೇವನ ಇಂದ್ರಿಯಗಳಿಂದ ಅತ್ಯಂತ ಸುಂದರರಾದ ಅಶ್ವಿನೀ ದೇವತೆಗಳು ಉತ್ಪನ್ನರಾದರು. ರಜೋಗುಣಾತೀತರೂ ವಿಮಲರೂ ಆದ ಕೆಲವು ಮಹರ್ಷಿಗಳು ಬ್ರಹ್ಮದೇವನ ನೇತ್ರದಿಂದ ಉದ್ಭವಿಸಿದರು.

೫೮. ಆ ಬ್ರಹ್ಮನ ಇಂದ್ರಿಯಗಳಿಂದ ಶ್ರೇಷ್ಠರಾದ ಪ್ರಜಾಪತಿಗಳು ಅವತರಿಸಿದರು. ಇವರಂತೆಯೇ ಬ್ರಹ್ಮದೇವನ ರೋಮಕೂಪಗಳಿಂದ ಕೆಲವು ಮಹರ್ಷಿಗಳೂ ಸ್ವೇದ ಮಲಗಳಿಂದ ಕೆಲವು ಮುನಿಗಳೂ ಸಂಭೂತರಾದರು.

೫೯. ಭಯಂಕರವಾದ ಮಾಸಗಳು, ಪಕ್ಷಸಂಧಿಗಳು ಇವುಗಳೂ ಉತ್ಪನ್ನವಾದುವು. ಮಕರಗಳೂ, ಅಹೋರಾತ್ರಗಳೂ, ಪಿತೃಸಂಬಂಧಿಯೂ, ಭಯಂಕರವೂ ಆದ ತೇಜಸ್ಸು ಇವುಗಳೂ ಸಹ ಉತ್ಪನ್ನವಾದುವು.

೬೦. ಆ ಬ್ರಹ್ಮನ ಕೋಪವೇ ಲೋಹಿತಮಯವಾಯಿತು. ಅದೇ ಲೋಹಿತ್ಯವೇ (ಕೆಂಬಣ್ಣವೇ) ಸುವರ್ಣವಾಗಿ ಪರಿಣಮಿಸಿತು. ಬ್ರಹ್ಮದೇವನ ಪ್ರೇಮವೇ ಉತ್ತಮವಾದ ವಸ್ತುಗಳು, ಧೂಮ, ಪಶುಗಳು ಇವುಗಳಾಗಿ ಪರಿಣಾಮವಾಯಿತು.

**ಯೇಽರ್ಚಿಷಸ್ತಸ್ಯ ತೇ ರುದ್ರಾಸ್ತಥಾದಿತ್ಯಾಃ ಸಮುದ್ಭವಾಃ ।**
**ಅಂಗಾರೇಭ್ಯಃ ಸಮುತ್ಪನ್ನಾ ಜ್ಯೋತಿಷೋ ದಿವ್ಯಮಾನುಷಾಃ ॥ ೬೧ ॥**

**ಆದಿಮಾನಸ್ಯ ಲೋಕಸ್ಯ ಬ್ರಹ್ಮಾ ಬ್ರಹ್ಮಸಮುದ್ಭವಃ ।**
**ಸರ್ವಕಾಮದಮಿತ್ಯಾಹುಸ್ತತ್ರ ಕನ್ಯಾಮುದಾಹರ್ರ ॥ ೬೨ ॥**

**ಬ್ರಹ್ಮಾ ಸುರಗುರಸ್ತತ್ರ ತ್ರಿದಿಶ್ಯೈಃ ಸಂಪ್ರಸೀದತಿ ।**
**ಇಮೇ ವೈ ಜನಯಿಷ್ಯಂತಿ ಪ್ರಜಾಃ ಸರ್ವಾಃ ಪ್ರಜೇಶ್ವರಾಃ ॥ ೬೩ ॥**

**ಸರ್ವೇ ಪ್ರಜಾನಾಂ ಪತಯಃ ಸರ್ವೇ ಚಾಪಿ ತಪಸ್ವಿನಃ ।**
**ತತ್ಪ್ರಸಾದಾದಿಮಾಲ್ಲೋಕಾಂಧಾರಯೇಯುರಿಮಾಃ ಕ್ರಿಯಾಃ ॥ ೬೪ ॥**

---

೬೧. ಬ್ರಹ್ಮದೇವನಿಗೆ ಯಾವ ದಿವ್ಯತೇಜಸ್ಸುಗಳಿವೆಯೋ ಅವುಗಳಿಂದ ಏಕಾದಶರುದ್ರರೂ ದ್ವಾದಶಾದಿತ್ಯರೂ ಆವಿರ್ಭವಿಸಿದರು ಬ್ರಹ್ಮದೇವನು ಮಾಡಿದ ಯಾಗದ ಅಂಗಾರಗಳಿಂದ ಜ್ಯೋತಿರ್ಮಂಡಲವೂ, ದಿವ್ಯಪುರುಷರೂ, ಉದ್ಭೂತ ರಾದರು

೬೨ ಪರಬ್ರಹ್ಮನಿಂದ ಉತ್ಪನ್ನನಾದ ಚತುರ್ಮುಖಬ್ರಹ್ಮನು ಲೋಕದ ಆದಿಯಲ್ಲಿ ವ್ಯಕ್ತನಾದನು. ಆ ಪರಬ್ರಹ್ಮನು ಸಕಲೇಷ್ಟಾರ್ಥಪ್ರದನೂ ಆದಿಸೃಷ್ಟಿ ಕರ್ತನೂ ಆದ ಕಾರಣ ಸ್ತ್ರೀರೂಪಿಯೂ ಆಗಿರುವನೆಂದು ಮಹಾತ್ಮರು ಹೇಳುವರು.

೬೩. ಆಗ ಸುರಗುರುವಾದ ಬೃಹಸ್ಪತಿಯು ದೇವತೆಗಳೊಡನೆ ಬ್ರಹ್ಮದೇವನನ್ನು ಹೊಗಳಿದನು. ಈ ಪ್ರಜೇಶ್ವರರು ಸರ್ವಪ್ರಜೆಗಳನ್ನೂ ಸೃಷ್ಟಿಮಾಡುವರೆಂದು ತಿಳಿಸಿದನು. ಈ ಪ್ರಜೇಶ್ವರರಿಗೂ ಕೂಡ ನೀನೇ ಮೂಲಕಾರಣನಾಗಿರುತ್ತಿ ಎಂದು ಪ್ರಶಂಸಿದರು.

೬೪. ಎಲೈ ಬ್ರಹ್ಮದೇವನೇ, ಇವರೆಲ್ಲರೂ ಪ್ರಜಾಪತಿಗಳೂ, ಮಹಾತಪಸ್ವಿಗಳೂ ಆಗಿರುವರು. ಈ ಪ್ರಜೇಶ್ವರರು ನಿನ್ನ ಅನುಗ್ರಹದಿಂದ ಈ ಸಮಸ್ತ ಲೋಕಗಳನ್ನೂ ಧರಿಸುವರು. ಮತ್ತು ಈ ಲೋಕಗಳಲ್ಲಿ ಸಮಸ್ತ ಕಾರ್ಯಗಳೂ ಇವರಿಂದಲೇ ಉಂಟಾಗುವುವು.

ದ್ವಂದ್ವಂ ಸಂವರ್ಧಯಾಮಾಸ ತವ ತೇಜೋ ವಿವರ್ಧನಂ ।
ದೇವೇಷು ವೇದವಿದ್ವಾಂಸಃ ಸರ್ವೇ ರಾಜರ್ಷಯಸ್ತಥಾ ॥ ೬೫ ॥

ವೇದಮಂತ್ರಪರಾಃ ಸರ್ವೇ ಪ್ರಜಾಪತಿಗುಣೋದ್ಭವಾಃ ।
ಅನಂತಂ ಬ್ರಹ್ಮ ಸತ್ಯಂ ಚ ತಪಶ್ಚ ಪರಮಂ ಭುವಿ ॥ ೬೬ ॥

ಸರ್ವೇ ಹಿ ವಯಮೇತೇ ಚ ತವೈವ ಪ್ರಸವಃ ಪ್ರಭೋ ।
ಬ್ರಹ್ಮ ಚ ಬ್ರಾಹ್ಮಣಾಶ್ಚೈವ ಲೋಕಾಶ್ಚೈವ ಚರಾಚರಾಃ ॥ ೬೭ ॥

ಮರೀಚಿಮಾದಿತಃ ಕೃತ್ವಾ ದೇವಾಶ್ಚ ಋಷಿಭಿಃ ಸಹ ।
ಅಪತ್ಯಾನೀಹ ಸಂಚಿತ್ಯ ತೇಽಪತ್ಯಂ ಕಾಮಯಾಮಹೇ ॥ ೬೮ ॥

---

೬೫. ಎಲೈ ಬ್ರಹ್ಮದೇವನೇ. ಈ ಮಹರ್ಷಿಗಳು ನಿನ್ನ ಮಹಿಮೆಗಳನ್ನು ಕೊಂಡಾಡತಕ್ಕ ಸ್ತ್ರೀ ಪುರುಷ ರೂಪವಾದ ದ್ವಂದ್ವಗಳನ್ನು ಸೃಷ್ಟಿಮಾಡಿದರು. ಅವರೆಲ್ಲರೂ ವೇದಗಳಲ್ಲಿಯೂ ವೇದಾಂಗಗಳಾದ ಸಕಲ ಶಾಸ್ತ್ರಗಳಲ್ಲಿಯೂ ಪಾರಂಗತ ರಾಗಿಯೂ, ರಾಜರ್ಷಿಗಳಾಗಿಯೂ ಇರುವರೆಂದು ಹೊಗಳಿದರು.

೬೬. ಅವರೆಲ್ಲರೂ ವೇದಮಂತ್ರಪರಾಯಣರೂ, ಬ್ರಹ್ಮದೇವನ ಗುಣಗಳಿಗೆ ಸಮಾನಗುಣವುಳ್ಳವರೂ, ಆದ್ಯಂತರಹಿತನಾದ ಪರಬ್ರಹ್ಮನನ್ನು ತಿಳಿದವರೂ, ಸತ್ಯವಂತರೂ, ತಪೋವಂತರೂ ಆಗಿ ಭೂಮಿಯಲ್ಲಿ ಪ್ರಖ್ಯಾತರಾಗಿರುವರು.

೬೭. ಎಲೈ ಸ್ವಾಮಿಯಾದ ಬ್ರಹ್ಮದೇವನೇ, ಈಗ ನಾವೆಲ್ಲರೂ ನಿನ್ನ ಮಕ್ಕಳಾಗಿರುತ್ತೇವೆ. ವೇದವೇತ್ತೃಗಳಾವ ಬ್ರಾಹ್ಮಣರು ಚರಾಚರಾತ್ಮಕವಾದ ಸಮಸ್ತ ಲೋಕಗಳು ಎಲ್ಲವೂ ನಿನ್ನಿಂದಲೇ ಉತ್ಪನ್ನಗಳಾಗಿವೆ.

೬೮. ಎಲೈ ಪರಮಪುರುಷನೇ, ನಾವು, ದೇವತೆಗಳು, ಋಷಿಗಳೂ ಇವರಿಂದ ಕೂಡಿ ಮರೀಚಿಮುನಿಯನ್ನು ಮುಂದಾಳಾಗಿ ಮಾಡಿಕೊಂಡು ಪುತ್ರರನ್ನು ಸಮಾ ಲೋಚಿಸಿ ಪಡೆಯುತ್ತೇವೆ ಎಂದು ಹೇಳಿದರು.

ತಸ್ಮಿನ್ ಯಜ್ಞೇ ಮಹಾಭಾಗಾ ದೇವಾಶ್ಚ ಋಷಿಭಿಃ ಸಹ ।
ಏತದ್ವಂಶಸಮುದ್ಭೂತಾಃ ಸ್ಥಾನಕಾಲಾಭಿಮಾನಿನಃ ॥ ೧೯ ॥

ನ ಚ ತೇನೈವ ರೂಪೇಣ ಸ್ಥಾಪಯೇಯುರಿಮಾಃ ಪ್ರಜಾಃ ।
ಯುಗಾದಿನಿಧನಾಚ್ಚೈವ ಸ್ಥಾಪಯೇಯುರಿಮಾಃ ಪ್ರಜಾಃ ॥ ೨೦ ॥

ತತೋಽಬ್ರವೀಲ್ಲೋಕಗುರುಃ ಪರಮಿತ್ಯವಿಚಾರಯನ್ ।
ಏವಂ ದೇವಾ ವಿನಿಶ್ಚಿತ್ಯ ಮಯಾ ಸೃಷ್ಟಾ ನ ಸಂಶಯಃ ॥
ಭವತಾಂ ವಂಶಸಂಭೂತಾಃ ಪುನರೇತೇ ಮಹರ್ಷಯಃ ॥ ೨೧ ॥

ತೇಷಾಂ ಭೃಗೋಃ ಕೀರ್ತಯಿಷ್ಯೇ ವಂಶಂ ಪೂರ್ವಮಹಾತ್ಮನಃ ।
ವಿಸ್ತರೇಣಾನುಪೂರ್ವ್ಯಾ ಚ ಪ್ರಥಮಸ್ಯ ಪ್ರಜಾಪತೇಃ ॥ ೨೨ ॥

---

೧೯. ಅನಂತರ ಆ ಬ್ರಹ್ಮದೇವನ ಯಾಗವು ನಡೆಯಲು, ದೇವತೆಗಳು ಮಹರ್ಷಿಗಳೊಡನೆ ದೇಶಕಾಲಾಭಿಮಾನಿಗಳಾಗಿ ಸಂತಾನಾಭಿವೃದ್ಧಿಗೋಸ್ಕರ ಆಯಾ ವಂಶಗಳಲ್ಲಿ ಅವತರಿಸಿದರು.

೨೦. ದೇವಋಷ್ಯಾದಿಗಳು ಮೊದಲು ಯಾವ ವಿಧವಾದ ಪ್ರಜೆಗಳನ್ನು ಸೃಷ್ಟಿ ಮಾಡಿದರೋ. ಯಾವಾಗಲೂ ಅವರು ಒಂದೇಸಮನಾಗಿರದೆ, ಯುಗಾನುಸಾರವಾಗಿ ಜನನ ಮರಣಗಳಿಗೆ ವಿಷಯರಾಗಿ ನಾನಾರೀತಿಯಾಗಿರುವರು. ಯುಗಾನುಗುಣವಾಗಿ ಪ್ರಜೆಗಳನ್ನು ಸೃಷ್ಟಿಸುವರು.

೨೧. ಅನಂತರ ಲೋಕಗುರುವಾದ ಬ್ರಹ್ಮದೇವನು ಮುನಿಗಳನ್ನು ಕುರಿತು, ನೀವು ಹೇಳಿದ ವಿಷಯಗಳು ಬಹಳ ಉತ್ತಮಗಳಾಗಿವೆ. ನಾನು ಹೀಗೆ ನಿಶ್ಚಯ ಮಾಡಿಕೊಂಡು ದೇವತೆಗಳನ್ನು ಸೃಷ್ಟಿಮಾಡಿರುವೆನು. ಈ ಮಹರ್ಷಿಗಳು ನಿಮ್ಮ ವಂಶದಲ್ಲಿ ಸಂಭೂತರಾಗಿರುವರು. ಇದರಲ್ಲಿ ಸಂದೇಹವಿಲ್ಲವೆಂದು ಹೇಳಿದನು.

೨೨. ಆ ಮಹರ್ಷಿಗಳ ಮಧ್ಯದಲ್ಲಿ ಮಹಾತ್ಮನೂ ಪ್ರಥಮ ಪ್ರಜಾಪತಿಯೂ ಆದ ಭೃಗುಮುನಿಯ ವಂಶವನ್ನು ವಿಸ್ತಾರವಾಗಿಯೂ, ಕ್ರಮವಾಗಿಯೂ ನಿರೂಪಿಸುವೆನು ಕೇಳಿರೆಂದನು.

ಭಾರ್ಯೇ ಭೃಗೋರಪ್ರತಿಮೇ ಉತ್ತಮೇಽಭಿಜನೇ ಶುಭೇ ।
ಹಿರಣ್ಯಕಶಿಪೋಃ ಕನ್ಯಾ ದಿವ್ಯಾ ನಾಮ ಪರಿಶ್ರುತಾ ॥
ಪುಲೋಮ್ನಶ್ಚಾಪಿ ಪೌಲೋಮೀ ದುಹಿತಾ ವರವರ್ಣಿನೀ ॥ ೭೩ ॥

ಭೃಗೋಸ್ತ್ವಜನಯದ್ದಿವ್ಯಾ ಕಾವ್ಯಂ ವೇದವಿದಾಂ ವರಂ ।
ದೇವಾಸುರಾಣಾಮಾಚಾರ್ಯಂ ಶುಕ್ರಂ ಕವಿಸುತಂ ಗ್ರಹಂ ॥ ೭೪ ॥

ಸ ಶುಕ್ರಶ್ಚೋಶನಾ ಖ್ಯಾತಃ ಸ್ಮೃತಃ ಕಾವ್ಯೋಽಪಿ ನಾಮತಃ ।
ಪಿತೄಣಾಂ ಮಾನಸೀ ಕನ್ಯಾ ಸೋಮಪಾನಾಂ ಯಶಸ್ವಿನೀ ॥

ಶುಕ್ರಸ್ಯ ಭಾರ್ಯಾಂಗೀ ನಾಮ ವಿಜಜ್ಞೇ ಚತುರಃ ಸುತಾನ್ ॥ ೭೫ ॥
ಬ್ರಾಹ್ಮೇಣ ತೇಜಸಾ ಯುಕ್ತಃ ಸ ಜಾತೋ ಬ್ರಹ್ಮವಿತ್ತಮಃ ।
ತಸ್ಯಾಮೇವ ತು ಚತ್ವಾರಃ ಪುತ್ರಾಃ ಶುಕ್ರಸ್ಯ ಜಜ್ಞಿರೇ ॥ ೭೬ ॥

---

೭೩. ಭೃಗುಮುನಿಗೆ ಅಸದೃಶರೂ, ಉತ್ತಮರೂ, ಸತ್ಕುಲಪ್ರಸೂತರೂ, ಮಂಗಳಾಂಗಿಯರೂ ಆದ ಇಬ್ಬರು ಹೆಂಡತಿಯರಿದ್ದರು. ಅವರಲ್ಲೊಬ್ಬ ಪತ್ನಿಯು ಹಿರಣ್ಯಕಶಿಪುವಿನ ಪುತ್ರಿಯೂ, ದಿವ್ಯೆಯೆಂಬ ನಾಮದಿಂದ ಪ್ರಖ್ಯಾತಳೂ, ಅತಿ ಸುಂದರಿಯೂ ಆಗಿದ್ದಳು ಅವಳು ದೇವೇಂದ್ರನಿಗೆ ಶಚೀದೇವಿಯಂತೆ ಪ್ರಖ್ಯಾತಳಾಗಿದ್ದಳು.

೭೪. ಆ ದಿವ್ಯೆಯು ಭೃಗುವಿನಿಂದ ವೇದವೇತ್ತೃಗಳಲ್ಲಿ ಉತ್ತಮನೂ, ದೇವಾಸುರರಿಗೆ ಗುರುಗಳೂ, ಕಾವ್ಯಜ್ಞನೂ, ಕವಿಪುತ್ರನೂ, ಗ್ರಹಾಭಿಮಾನಿಯೂ, ಆದ ಶುಕ್ರಾಚಾರ್ಯನೆಂಬ ಕುಮಾರನನ್ನು ಪಡೆದಳು.

೭೫. ಆ ಶುಕ್ರನು ಉಶನಸ ಮತ್ತು ಕಾವ್ಯವೆಂಬ ಎರಡು ನಾಮಗಳಿಂದ ಲೋಕವಿಖ್ಯಾತವಾಗಿರುವರು. ಸೋಮಪಾನ ಮಾಡಿದವರಲ್ಲಿ ಉತ್ತಮರಾದ ಪಿತೃದೇವತೆಗಳಿಗೆ ಮಾನಸಿಕಪುತ್ರಿಯೂ ಕೀರ್ತಿವಂತಳೂ ಆದ ಅಂಗೀನಾಮಕ ಕನ್ಯೆಯು ಶುಕ್ರಾಚಾರ್ಯರ ಪತ್ನಿಯಾಗಿರುವಳು. ಅವಳು ಸಮರ್ಥರಾದ ನಾಲ್ಕು ಮಕ್ಕಳನ್ನು ಪಡೆದಳು.

೭೬. ಆ ಶುಕ್ರಾಚಾರ್ಯನು ಬ್ರಹ್ಮದೇವನ ತೇಜಸ್ಸಿನಿಂದ ಯುಕ್ತನಾಗಿಯೂ ಬ್ರಹ್ಮಜ್ಞಾನಿಗಳಲ್ಲಿ ಉತ್ತಮನಾಗಿಯೂ ಇರುವನು. ಅಂತಹ ಶುಕ್ರನಿಗೆ ಅಂಗಿನಾಮಕಳಾದ ಪತ್ನಿಯಲ್ಲಿ ಜ್ಞಾನಿಗಳಾದ ನಾಲ್ವರು ಕುಮಾರರು ಜನಿಸಿದರು.

ತ್ವಷ್ಟಾ ವರೂತ್ರೀ ಧ್ಯಾನೇತೌ ಶಂಡಾಮರ್ಕೌ ಚ ತಾವುಭೌ ।
ತೇ ತದಾದಿತ್ಯಸಂಕಾಶಾ ಬ್ರಹ್ಮಕಲ್ಪಾಃ ಪ್ರಭಾವತಃ ॥ ೭೭ ॥

ರಂಜನಃ ಪೃಥುರಶ್ಮಿಶ್ಚ ವಿದ್ವಾನ್ಯಶ್ಚ ಬೃಹದ್ಗಿರಾಃ ।
ವರೂತ್ರಿಣಃ ಸುತಾ ಹ್ಯೇತೇ ಬ್ರಹ್ಮಿಷ್ಠಾಃ ಸುರಯಾಜಕಾಃ ॥ ೭೮ ॥

ಇಜ್ಯಾಧರ್ಮವಿನಾಶಾರ್ಥಂ ಮನುಮೇತ್ಯಾಭ್ಯಯೋಜಯನ್ ।
ನಿರಸ್ಯಮಾನಂ ವೈ ಧರ್ಮಂ ದೃಷ್ಟ್ವೇಂದ್ರೋ ಮನುಮಬ್ರವೀತ್ ॥ ೭೯ ॥

ಏತೈರೇವ ತು ಕಾಮಂ ತ್ವಾಂ ಪ್ರಾಪಯಿಷ್ಯಾಮಿ ಯಾಜನಂ ।
ಶ್ರುತ್ವೇಂದ್ರಸ್ಯ ತು ತದ್ವಾಕ್ಯಂ ತಸ್ಮಾದ್ದೇಶಾದಪಾಕ್ರಮನ್ ॥ ೮೦ ॥

---

೭೭. ಆ ಶುಕ್ರಾಚಾರ್ಯನಿಗೆ ತ್ವಷ್ಟಾರ, ವರೂತ್ರೀ, ಶಂಡ, ಅಮರ್ಕರೆಂಬ ನಾಲ್ಕುಜನ ಮಕ್ಕಳು ಹುಟ್ಟಿದರು. ಅವರು ಸೂರ್ಯನಿಗೆ ಸಮಾನವಾದ ತೇಜಸ್ವಿಗಳಾಗಿಯೂ, ಶಕ್ತಿಯಲ್ಲಿ ಬ್ರಹ್ಮದೇವನಿಗೆ ಸಮರಾಗಿಯೂ ಇದ್ದರು

೭೮ ಬ್ರಹ್ಮಜ್ಞಾನಿಗಳೂ ದೇವತೆಗಳ ಪುರೋಹಿತರೂ ಆದ ರಂಜನ, ಪೃಥುರಶ್ಮಿ, ವಿದ್ವಾನ್ಯ, ಬೃಹದ್ಗಿರರೆಂಬ ನಾಲ್ವರು ಕುಮಾರರು ವರೂತ್ರಿ ಎಂಬುವನಿಗೆ ಉತ್ಪನ್ನರಾದರು.

೭೯. ಆ ನಾಲ್ಕು ಜನರು ಯಜ್ಞಯಾಗಾದಿ ಧರ್ಮಗಳನ್ನು ನಾಶಮಾಡುವುದಕ್ಕಾಗಿ ಮನುವಿನ ಬಳಿಗೆ ಹೋಗಿ ಅವನನ್ನು ಪ್ರೇರಿಸಿದರು. ಹೀಗೆ ಇವರು ಆಲೋಚಿಸಿ ಧರ್ಮವನ್ನು ನಾಶಮಾಡಲಾಗಿ ಅದನ್ನು ತಿಳಿದ ದೇವೇಂದ್ರನು ಮನುವಿಗೆ ಇಂತೆಂದನು.

೮೦. ಎಲೈ ಪುರುಷರೇ, ನೀವು ಧರ್ಮಗಳನ್ನು ನಾಶಮಾಡುವುದರಿಂದ ನಿಮ್ಮನ್ನು ಈಗಲೇ ಶಿಕ್ಷಿಸುವೆನೆಂದನು. ಅವರು ಇಂದ್ರನ ಮಾತನ್ನು ಕೇಳಿದೊಡನೆಯೇ ಭೀತಿಯಿಂದ ಆ ದೇಶವನ್ನು ಬಿಟ್ಟು ಓಡಿಹೋದರು.

ತಿರೋಭೂತೇಷು ತೇಷ್ವಿಂದ್ರೋ ಧರ್ಮಪತ್ನೀಂ ಚ ಚೇತನಾಂ ।
ಗ್ರಹೇಣ ಮೋಚಯಿತ್ವಾ ತು ತತಃಸೋನುಸಸಾರ ತಾಂ ॥ ೮೧ ॥

ತತ ಇಂದ್ರ ವಿನಾಶಾಯ ಯತಮಾನಾನ್ಯತೀಂಸ್ತು ತಾನ್ ।
ತತ್ರಾಗತಾನ್ ಪುನರ್ದೃಷ್ಟ್ವಾ ದುಷ್ಟಾನಿಂದ್ರಃ ಪ್ರಹಸ್ಯತು ॥
ಸುಷ್ವಾಪ ದೇವದೇವಸ್ಯ ವೇದ್ಯಾಂ ವೈ ದಕ್ಷಿಣೇ ತತಃ ॥ ೮೨ ॥

ತೇಷಾಂ ತು ಭಕ್ಷ್ಯಮಾಣಾನಾಂ ತತ್ರ ಶಾಲಾವೃಕೈಃ ಸಹ ।
ಶೀರ್ಷಾಣಿ ನ್ಯಪತಂಸ್ತಾನಿ ಖರ್ಜೂರಾಣ್ಯಭವಂಸ್ತತಃ ॥ ೮೩ ॥

ಏವಂ ವರೂತ್ರಿಣಃ ಪುತ್ರಾ ಇಂದ್ರೇಣ ನಿಹತಾಃ ಪುರಾ ।
ಯಜನ್ಯಾಂ ದೇವಯಾನೀ ಚ ಶುಕ್ರಸ್ಯ ದುಹಿತಾಭವತ್ ॥ ೮೪ ॥

---

೮೧. ಆ ದುಷ್ಟರು ಓಡಿಹೋಗಲಾಗಿ ಇಂದ್ರನು ಧರ್ಮನ ಪತ್ನಿಯಾದ ಚೇತನೆಯೆಂಬುವಳನ್ನು ಭೂತರೂಪಗ್ರಹದಿಂದ ಬಿಡಿಸಿ, ಅವಳನ್ನು ಅನುಸರಿಸಿ ಹೋದನು.

೮೨. ಅನಂತರ ಇಂದ್ರನನ್ನು ಸಂಹಾರಮಾಡುವುದಕ್ಕಾಗಿ ಪ್ರಯತ್ನವನ್ನು ಮಾಡುವ ಆ ಯತಿಗಳನ್ನು ನೋಡಿ ಇಂದ್ರನನ್ನು ಸಂಹಾರಮಾಡಿರೆಂದು ಅವರಿಗೆ ಹೇಳಿ, ದೇವದೇವನಾದ ಮಹಾಪುರುಷನ ಯಜ್ಞದ ದಕ್ಷಿಣ ವೇದಿಕೆಯಲ್ಲಿ ಮಲಗಿ ನಿದ್ರಿಸಿದನು.

೮೩. ಅನಂತರ ತೋಳವೇ ಮೊದಲಾದ ದುಷ್ಟಪ್ರಾಣಿಗಳು ಅವರನ್ನು ಹಿಡಿದು ಭಕ್ಷಿಸಲಾಗಿ, ಅವರ ಶಿರಸ್ಸುಗಳು ಕೆಳಗೆ ಉದರಿ ಖರ್ಜೂರಗಳಾದುವು.

೮೪. ಹೀಗೆ ದೇವೇಂದ್ರನು ದುಷ್ಟರೂ ಧರ್ಮವಿರೋಧಿಗಳೂ ಆದ ವರೂತ್ರಿಯ ಕುಮಾರರನ್ನು ಪೂರ್ವದಲ್ಲಿ ಸಂಹಾರಮಾಡಿದನು. ಅನಂತರ ಶುಕ್ರನು ಯಜನಿಯೆಂಬ ಪತ್ನಿಯಲ್ಲಿ ದೇವಯಾನೀ ಎಂಬ ಕುಮಾರಿಯನ್ನು ಪಡೆದನು.

ತ್ರಿಶಿರಾ ವಿಶ್ವರೂಪಸ್ತು ತ್ವಷ್ಟುಃ ಪುತ್ರೋಽಭವನ್ಮಹಾನ್ ।
ವಿಶ್ವರೂಪಾನುಜಶ್ಚಾಪಿ ವಿಶ್ವಕರ್ಮಾ ಯಮಃ ಸ್ಮೃತಃ || ೮೫ ||

ಭೃಗೋಸ್ತು ಭೃಗವೋ ದೇವಾ ಜಜ್ಞಿರೇ ದ್ವಾದಶಾತ್ಮಜಾಃ ।
ದೇವ್ಯಾಂ ತಾನ್ಸುಷುವೇ ಸರ್ವಾನ್ ಕಾವ್ಯಶ್ಚೈವಾತ್ಮಜಾನ್ಪ್ರಭುಃ || ೮೬ ||

ಭುವನೋ ಭಾವನಶ್ಚೈವ ಅನ್ಯಶ್ಚಾನ್ಯಾಯತಸ್ತಥಾ ।
ಕ್ರತುಃ ಶ್ರವಾಶ್ಚ ಮೂರ್ಧಾ ಚ ವ್ಯಜಯೋ ವ್ಯಶ್ರುಷಶ್ಚ ಯಃ ||
ಪ್ರಸವಶ್ಚಾಪ್ಯಜಶ್ಚೈವ ದ್ವಾದಶೋಽಧಿಪತಿಃ ಸ್ಮೃತಃ || ೮೭ ||

ಇತ್ಯೇತೇ ಭೃಗವೋ ದೇವಾಃ ಸ್ಮೃತಾ ದ್ವಾದಶ ಯಾಜ್ಞಿಕಾಃ ।
ಪೌಲೋಽಮ್ಯಜನಯತ್ಪುತ್ರಂ ಬ್ರಹ್ಮಿಷ್ಠಂ ವಶಿನಂ ವಿಭುಂ || ೮೮ ||

---

೮೫. ಮಹಾತ್ಮನೂ ಮೂರು ಶಿರಸ್ಸುಗಳುಳ್ಳವನೂ (ತ್ರಿಶಿರೋನಾಮಕನೂ) ಆದ ವಿಶ್ವರೂಪನು ತ್ವಷ್ಟುವೆಂಬುವನಿಗೆ ಪುತ್ರನಾಗಿ ಜನಿಸಿದನು. ಆ ವಿಶ್ವರೂಪನ ತಮ್ಮನಾದ ವಿಶ್ವಕರ್ಮನು ಯಮನೆಂಬ ನಾಮದಿಂದ ಪ್ರಖ್ಯಾತನಾಗಿದ್ದನು.

೮೬. ಭೃಗುಮಹರ್ಷಿಗಳಿಗೆ ಭೃಗುಗಳೆಂದು ಪ್ರಖ್ಯಾತರಾದ ಹನ್ನೆರಡು ಜನ ದೇವತೆಗಳು ಪುತ್ರರಾಗಿ ಹುಟ್ಟಿದರು. ಪ್ರಭುವಾದ ಶುಕ್ರನು ತನ್ನ ಪತ್ನಿಯಲ್ಲಿ ಆ ಸಮಸ್ತ ದೇವತೆಗಳನ್ನೂ ಪುತ್ರರನ್ನಾಗಿ ಪಡೆದನು.

೮೭. ಭುವನ, ಭಾವನ, ಅನ್ಯ, ಅನ್ಯಾಯತ, ಕ್ರತು, ಶ್ರವಸ, ಮೂರ್ಧಾನ, ವ್ಯಜಯ, ವ್ಯಶ್ರುಷ, ಪ್ರಸವ, ಅಜ ಇವರೇ ಮೊದಲಾದ ಹನ್ನೆರಡು ಜನರು ದ್ವಾದಶಾಧಿಪಗಳೆಂದು ಪ್ರಸಿದ್ಧರಾಗಿರುವರು.

೮೮. ಮೇಲೆ ನಿರೂಪಿಸಿದ ದ್ವಾದಶ ಭೃಗುಗಳು ದೇವತೆಗಳಾಗಿಯೂ, ಯಾಜ್ಞಿಕರಾಗಿಯೂ ಇರುವರು. ಇಂದ್ರಾಣಿಯು ಬ್ರಹ್ಮಜ್ಞಾನಿಯೂ, ಜಿತೇಂದ್ರಿಯನೂ ಪ್ರಭುವೂ ಆದ ಪುತ್ರನನ್ನು ಪಡೆದಳು.

ವ್ಯಾಧಿತಃ ಸೋಽಷ್ಟಮೇ ಮಾಸಿ ಗರ್ಭಕ್ರೂರೇಣ ಕರ್ಮಣಾ ।
ಚ್ಯವನಾಚ್ಚ್ಯವನಾ ಸೋಽಥ ಚೇತನಸ್ತು ಪ್ರಚೇತಸಃ ॥
ಪ್ರಾಚೇತಸಾಚ್ಚ್ಯವನಕ್ರೋಧಾರಧ್ವಾನಾಂ ಪುರುಷಾದಜಃ ॥ ೮೯ ॥

ಜನಯಾಮಾಸ ಪುತ್ರೌ ದ್ವೌ ಸುಕನ್ಯಾಯಾಂ ಚ ಭಾರ್ಗವಃ ।
ಆತ್ಮವಾನಂ ದಧೀಚಂ ಚ ತಾವುಭೌ ಸಾಧುಸಮ್ಮತೌ ॥ ೯೦ ॥

ಸಾರಸ್ವತಃ ಸರಸ್ವತ್ಯಾಂ ದಧೀಚ್ಯಾಚೋಪಪದ್ಯತೇ ।
ರುಚೀ ಪತ್ನೀ ಮಹಾಭಾಗಾ ಆತ್ಮವಾನಸ್ಯ ನಾಹುಷೀ ॥ ೯೧ ॥

ತಸ್ಯ ಊರ್ವೋರ್ಋಷಿರ್ಜಜ್ಞೇ ಊರೂ ಭಿತ್ವಾ ಮಹಾಯಶಾಃ ।
ಔರ್ವಾರ್ಖ್ಯಾಸೀದೃಚೀಕಸ್ತು ದೀಪ್ತಾಗ್ನಿಸದೃಶಪ್ರಭಃ ॥ ೯೨ ॥

---

೮೯. ಆ ಕುಮಾರನು ರೋಗದಿಂದಲೂ, ಗರ್ಭದೋಷದಿಂದಲೂ, ಕ್ರೂರ ಕರ್ಮದಿಂದಲೂ, ಎಂಟನೆಯ ತಿಂಗಳಲ್ಲಿ ಜನಿಸಿದನು. ಅವನು ಅಷ್ಟಮಮಾಸದಲ್ಲಿ ಚ್ಯುತನಾದುದರಿಂದ ಚ್ಯವನನೆಂದು ಪ್ರಖ್ಯಾತನಾದನು. ಆ ಚ್ಯವನನಿಗೆ ಚ್ಯವನಾಸನೆಂಬ ಪುತ್ರನೂ, ಅವನಿಗೆ ಚೇತನನೆಂಬ ಕುಮಾರನೂ, ಅವನಿಗೆ ಪ್ರಚೇತಸನೆಂಬ ಆತ್ಮಜನೂ, ಅವನಿಗೆ ಚ್ಯವನಕ್ರೋಧನೆಂಬ ತನೂಜನೂ, ಅವನಿಗೆ ಅಧ್ವಾನನನೂ, ಅವನಿಗೆ ಪುರುಷಾದಜನೆಂಬ ಮಗನೂ, ಹುಟ್ಟಿದರು.

೯೦. ಭಾರ್ಗವನು ಸುಕನ್ಯೆಯಲ್ಲಿ ಆತ್ಮವಾನ, ದಧೀಚಿ, ಎಂಬ ಇಬ್ಬರು ಮಕ್ಕಳನ್ನು ಪಡೆದನು. ಅವರಿಬ್ಬರೂ ಸಾಧುಸಮ್ಮತರೂ, ಲೋಕವಿಖ್ಯಾತರೂ ಆಗಿದ್ದರು.

೯೧. ದಧೀಚನಿಗೆ ಸರಸ್ವತೀನಾಮಕಳಾದ ಭಾರ್ಯೆಯಲ್ಲಿ ಸಾರಸ್ವತನೆಂಬ ಪುತ್ರನು ಹುಟ್ಟಿದನು. ಆತ್ಮವಾನನಿಗೆ ಮಹಾಭಾಗ್ಯಶಾಲಿಯೂ, ನಹುಷ ಕುಮಾರಿಯೂ, ರುಚೀನಾಮಕಳೂ ಆದ ಪತ್ನಿಯು ಇದ್ದಳು.

೯೨. ಅವನಿಗೆ ಕೀರ್ತಿವಂತನಾದ ಔರ್ವನೆಂಬ ಪುತ್ರನು ಅವನ ಉರುಗಳನ್ನು ಭೇದಿಸಿಕೊಂಡು ಜನಿಸಿದ್ದರಿಂದ ಅನ್ವರ್ಥಕನಾಮಕನಾಗಿದ್ದನು. ಅಗ್ನಿಯಂತೆ ಮಹಾತೇಜಸ್ವಿಯಾದ ಔರ್ವನಿಗೆ ಋಚೀಕನೆಂಬ ನಾಮಾಂತರವೂ ಇತ್ತು.

ಜಮದಗ್ನಿರ್ಋಚೀಕಸ್ಯ ಸತ್ಯವತ್ಯಾಂ ವ್ಯಜಾಯತ ।
ಭೃಗೋಶ್ಚ ಋಚಿಪರ್ಯಾಯೇ ರೌದ್ರ ವೈಷ್ಣವಯೋಸ್ತಥಾ ॥ ೯೩ ॥

ಜಮನಾದ್ವೈಷ್ಣವಸ್ಯಾಗ್ನೇರ್ಜಮದಗ್ನಿರಜಾಯತ ।
ರೇಣುಕಾ ಜಮದಗ್ನೇಸ್ತು ಶಕ್ರತುಲ್ಯಪರಾಕ್ರಮಂ ॥
ಬ್ರಹ್ಮಕ್ಷತ್ರಮಯಂ ರಾಮಂ ಸುಷುವೇಽಮಿತತೇಜಸಂ ॥ ೯೪ ॥

ಔರ್ವಸ್ಯಾಸೀತ್ಪುತ್ರಶತಂ ಜಮದಗ್ನಿಪುರೋಗಮಂ ।
ತೇಷಾಂ ಪುತ್ರಸಹಸ್ರಾಣಿ ಭಾರ್ಗವಾಣಾಂ ಪರಸ್ಪರಾತ್ ॥ ೯೫ ॥

ಋಷ್ಯಂತರೇಷು ವೈ ಬ್ರಹ್ಮಾ ಬಹವೋ ಭಾರ್ಗವಾಃ ಸ್ಮೃತಾಃ ।
ವತ್ಸಾ ವಿಶ್ವೋಽಶ್ವಿಷೇಣಶ್ಚ ಪಾಂಡಃ ಪಥ್ಯಃ ಸ ಶೌನಕಃ ॥
ಗೋತ್ರೇಣ ಸಪ್ತಮಾ ಹ್ಯೇತೇ ಪಕ್ಷಾ ಜ್ಞೇಯಾಸ್ತು ಭಾರ್ಗವಾಃ ॥ ೯೬ ॥

---

೯೩. ಋಚೀಕನಿಗೆ ಸತ್ಯವತಿಯೆಂಬ ಕುಮಾರಿಯಲ್ಲಿ ಜಮದಗ್ನಿಯೆಂಬ ಸುತನು ಜನಿಸಿದನು. ಭೃಗುವಿಗಾದರೋ ರುಚಿಯ ವಂಶದಲ್ಲಿ ಈಶ್ವರ, ವಿಷ್ಣು, ಇವರ ಭಕ್ತರಾದ ಪುತ್ರರು ಉತ್ಪನ್ನರಾದರು.

೯೪. ಜಮನನಾಮಕವಾದ ವೈಷ್ಣವಾಗ್ನಿಯಿಂದ ಜಮದಗ್ನಿನಾಮಕಕುಮಾರನು ಉತ್ಪನ್ನನಾದನು. ರೇಣುಕಾದೇವಿಯು ಆ ಜಮದಗ್ನಿಯಿಂದ ಇಂದ್ರನಿಗೆ ಸಮಾನ ಶೂರನೂ, ಅಮಿತಪರಾಕ್ರಮಿಯೂ, ಬ್ರಾಹ್ಮಣ ಕ್ಷತ್ರಿಯೋಭಯರೂಪನೂ ಆದ ಪರಶುರಾಮನನ್ನು ಹೆತ್ತಳು.

೯೫. ಹೀಗೆ ಔರ್ವನಿಗೆ ಜಮದಗ್ನಿಯೇ ಮೊದಲಾದ ನೂರಾರು ಮಕ್ಕಳು ಸುಪ್ರಸಿದ್ಧರಾಗಿದ್ದರು. ಆ ನೂರಾರು ಜನರಿಗೆ ಪುತ್ರ ಪೌತ್ರರು ಉತ್ಪನ್ನರಾಗಿ ಭಾರ್ಗವರು ಸಹಸ್ರಾರು ಜನಗಳಾದರು. ಹೀಗೆ ಭೃಗುವಂಶವು ಲೋಕವಿಖ್ಯಾತವಾಯಿತು

೯೬. ಋಷಿಗಳು ಹೇಗೆ ಭಾರ್ಗವರೆಂದು ಪ್ರಸಿದ್ಧರಾಗಿರುವರೋ, ಹಾಗೆಯೇ ಋಷಿಗಳಲ್ಲದೆ ಇತರರೂ ಸಹ ಭಾರ್ಗವರೆಂದು ಪ್ರಖ್ಯಾತರಾಗಿರುವರು. ವತ್ಸ, ವಿಶ್ವ, ಆಶ್ವಷೇಣ, ಪಾಂಡ, ಪಥ್ಯ, ಶೌನಕ ಇವರೇ ಮೊದಲಾದವರು ಭೃಗುವಂಶದಲ್ಲಿ ಉತ್ಪನ್ನರಾಗಿರುವರು. ಇವರೂ ಕೂಡ ಭಾರ್ಗವರೆಂದು ಪ್ರಸಿದ್ಧರಾಗಿರುವರು.

ಶ್ರುಣುತಾಂಗಿರಸೋ ವಂಶಮಗ್ನೇಃ ಪುತ್ರಸ್ಯ ಧೀಮತಃ ।
ಯಸ್ಯಾನ್ವಾಯೇ ಸಂಭೂತಾ ಭಾರದ್ವಾಜಾಃ ಸ ಗೌತಮಾಃ ॥
ದೇವಾಶ್ಚಾಂಗಿರಸೋ ಮುಖ್ಯಾಸ್ತ್ವಿಷುಮಂತೋ ಮಹೌಜಸಃ ॥ ೯೭ ॥

ಸುರೂಪಾ ಚೈವ ಮಾರೀಚೀ ಕರ್ದಮಿ ಚ ತಥಾ ಸ್ವರಾಟ್ ।
ಪಥ್ಯಾ ಚ ಮಾನವೀ ಕನ್ಯಾ ತಿಸ್ರೋ ಭಾರ್ಯಾಸ್ತ್ವಥರ್ವಣಃ ॥
ಇತ್ಯೇತಾಂಗಿರಸಃ ಪತ್ನ್ಯಸ್ತಾಸು ವಕ್ಷ್ಯಾಮಿ ಸಂತತಿಂ ॥ ೯೮ ॥

ಅಥರ್ವಣಸ್ತು ದಾಯಾದಾಸ್ತಾಸು ಜಾತಾಃ ಕುಲೋದ್ವಹಾಃ ।
ಉತ್ಪನ್ನಾ ಮಹತಾ ಚೈವ ತಪಸಾ ಭಾವಿತಾತ್ಮನಾಂ ॥ ೯೯ ॥

---

೯೭. ಈಗ ಜ್ಞಾನಿಯೂ ಅಗ್ನಿಯ ಪುತ್ರನೂ ಆದ ಅಂಗಿರಸನ ವಂಶವನ್ನು ಹೇಳುವೆನು ಕೇಳಿರೆಂದನು. ಯಾರ ವಂಶದಲ್ಲಿ ಭಾರದ್ವಾಜರೂ, ಗೌತಮರೂ ಉತ್ಪನ್ನರಾದರೋ, ಮತ್ತು ಯಾವ ವಂಶದಲ್ಲಿ ದೇವತೆಗಳೂ, ಅಂಗಿರಸರೂ ಮಹಾ ತೇಜಸ್ವಿಗಳಾದ ಇಷುಮಂತರೂ ಇವರೇ ಮೊದಲಾದವರು ಜನಿಸಿರುವರೋ, ಅಂತಹ ಅಂಗಿರಸನ ವಂಶವನ್ನು ನಿರೂಪಿಸುವೆನು ಕೇಳಿರೆಂದನು.

೯೮. ಅಥರ್ವಣವೇದಜ್ಞನಾದ ಅಂಗಿರಸನಿಗೆ ಅತ್ಯಂತ ಸುಂದರಿಯಾದ ಮಾರಿಚಿಯು, ಚಕ್ರವರ್ತಿನಿಯಾದ ಕರ್ದ್ದಮಿಯು, ಮನುಕುಮಾರಿಯಾದ ಪಥ್ಯೆಯು ಎಂಬ ಇವರು ಮೂವರೂ ಪತ್ನಿಯರಾಗಿರುವರು. ಅಂಗಿರಸನ ಪತ್ನಿಯರಾದ ಈ ಮೂವರಲ್ಲಿಯೂ ಉಪ್ಪನ್ನರಾದವರ ಸಂತಾನವನ್ನು ಈಗ ತಿಳಿಸುವೆನು ಕೇಳಿರೆಂದನು.

೯೯. ಅಥರ್ವಣವೇದಜ್ಞನಾದ ಅಂಗಿರಸನಿಗೆ ವಂಶಕರರೂ, ಮಹಾತಪಸ್ವಿಗಳೂ, ಮಹಾತ್ಮರೂ ಆದ ಅನೇಕ ದಾಯಾದರು ಉದ್ಭೂತರಾಗಿದ್ದರು. ಅವರೆಲ್ಲರೂ ಅಂಗಿರಸರೆಂದೇ ಪ್ರಖ್ಯಾತರಾಗಿದ್ದರು.

**ಬೃಹಸ್ಪತಿಃ ಸುರೂಪಾಯಾಂ ಗೌತಮಃ ಸುಷುವೇ ಸ್ವರಾಟ್ ।**
**ಅವಂಧ್ಯಂ ವಾಮದೇವಂ ಚ ಉತಥ್ಯಮುಶಿಜಂ ತಥಾ ॥ ೧೦೦ ॥**

**ಧಿಷ್ಣುಃ ಪುತ್ರಸ್ತು ಪಥ್ಯಾಯಾಂ ಸಂವರ್ತಶ್ಚೈವ ಮಾನಸಃ ।**
**ವಿಚಿತ್ತಶ್ಚ ತಥಾಯಸ್ಯ ಶರದ್ವಾಂಶ್ಚಾಪ್ಯುತಥ್ಯಜಃ ॥ ೧೦೧ ॥**

**ಅಶಿಜೋ ದೀರ್ಘತಮಾ ಬೃಹದುತ್ಥೋ ವಾಮದೇವಜಃ ।**
**ಧಿಷ್ಣೋಃ ಪುತ್ರಃ ಸುಧನ್ವಾನ ಋಷಭಶ್ಚ ಸುಧನ್ವನಃ ॥ ೧೦೨ ॥**

**ರಥಕಾರಾಃ ಸ್ಮೃತಾ ದೇವಾ ಋಷಯೋ ಯೇ ಪರಿಶ್ರುತಾಃ ।**
**ಬೃಹಸ್ಪತೇರ್ಭರದ್ವಾಜೋ ವಿಶ್ರುತಃ ಸುಮಹಾಯಶಾಃ ॥ ೧೦೩**

---

೧೦೦. ಸುರೂಪೆಯಲ್ಲಿ ಬೃಹಸ್ಪತಿ, ಗೌತಮರೆಂಬ ಇಬ್ಬರು ಮಕ್ಕಳು ಉತ್ಪನ್ನರಾದರು. ಸ್ವರಾಟ್ಕನ್ಯೆಯು ಅವಂಧ್ಯ, ವಾಮದೇವ, ಉತಥ್ಯ ಮತ್ತು ಉಶಿಜ ಎಂಬ ನಾಲ್ವರು ಕುಮಾರರನ್ನು ಪಡೆದಳು.

೧೦೧. ಪಥ್ಯೆಯಲ್ಲಿ ಧಿಷ್ಣು, ಸಂವರ್ತರೆಂಬ ಇಬ್ಬರು ಮಾನಸಪುತ್ರರು ಉತ್ಪನ್ನರಾದರು. ಉತಥ್ಯನಿಗೆ ವಿಚಿತ್ತಿ, ಆಯಸ್ಯ, ಶರದ್ವಂತನೆಂಬ ಮಕ್ಕಳು ಸಂಭವಿಸಿದರು. ಇವರೆಲ್ಲರೂ ಅಂಗಿರಸನ ವಂಶದವರೇ ಆಗಿರುವರು.

೧೦೨. ಅಶಿಜ, ದೀರ್ಘತಮಸ, ಬೃಹದುತ್ಥ ಇವರು ಮೂವರೂ ವಾಮದೇವನ ಪುತ್ರರಾಗಿರುವರು. ಧಿಷ್ಣುವಿಗೆ ಸುಧನ್ವಾನನೆಂಬ ಪುತ್ರರೂ, ಆ ಸುಧನ್ವನಿಗೆ ಋಷಭನೆಂಬ ಕುಮಾರನೂ ಜನಿಸಿದರು.

೧೦೩. ಪೂರ್ವದಲ್ಲಿ ಯಾರು ಋಷಿಗಳೆಂದು ಪ್ರಸಿದ್ಧರಾಗಿರುವರೋ ಅವರು ರಥಕಾರನಾಮಕ ದೇವತೆಗಳೆಂದು ಪ್ರಖ್ಯಾತರಾಗಿರುವರು. ಬೃಹಸ್ಪತಿಗೆ ಮಹಾಕೀರ್ತಿವಂತನೂ ಪ್ರಖ್ಯಾತನೂ ಆದ ಭರದ್ವಾಜನು ಉತ್ಪನ್ನನಾದನು.

ಅಂಗಿರಸಸ್ತು ಸಂವರ್ತೋ ದೇವಾನಂಗಿರಸಃ ಶ್ರುಣು।
ಬೃಹಸ್ಪತೇರ್ಯವೀಯಾಂಸೋ ದೇವಾ ಹ್ಯಂಗಿರಸಃ ಸ್ಮೃತಾಃ ॥ ೧೦೪ ॥

ಔರಸಾಂಗಿರಸಃ ಪುತ್ರಾಃ ಸುರೂಪಾಯಾಂ ವಿಜಜ್ಞಿರೇ।
ಔದಾರ್ಯಾಯುರ್ದನುರ್ದಕ್ಷೋ ದರ್ಭಃ ಪ್ರಾಣಸ್ತಥೈವ ಚ॥
ಹವಿಷ್ಮಾಂಶ್ಚ ಹವಿಷ್ಣುಶ್ಚ ಕ್ರತುಃ ಸತ್ಯಶ್ಚ ತೇ ದಶ ॥ ೧೦೫ ॥

ಅಯಸ್ಯಸ್ತು ಉತಥ್ಯಶ್ಚ ವಾಮದೇವಸ್ತಥೋಶಿಜಃ।
ಭಾರದ್ವಾಜಾಃ ಶಾಂಕೃತಿಕಾ ಗಾರ್ಗ್ಯಕಾಣ್ವರಥೀತರಾಃ ॥ ೧೦೬ ॥

ಮುದ್ಗಲಾ ವಿಷ್ಣುವೃದ್ಧಾಶ್ಚ ಹರಿತಾ ವಾಯವಸ್ತಥಾ।
ತಥಾ ಭಾಕ್ಷಾ ಭರದ್ವಾಜಾ ಆರ್ಷಭಾಃ ಕಿಂಭಯಾಸ್ತಥಾ ॥ ೧೦೭ ॥

ಏತೇ ಹ್ಯಂಗಿರಸಃ ಪಕ್ಷಾ ವಿಜ್ಞೇಯಾ ದಶ ಪಂಚ ಚ।
ಋಷ್ಯಂತರೇಷು ವೈ ಬ್ರಾಹ್ಮಾ ಬಹವೋಂಗಿರಸಃ ಸ್ಮೃತಾಃ ॥ ೧೦೮ ॥

---

೧೦೪. ಅಂಗಿರಸನಿಗೆ ಸಂವರ್ತನೆಂಬ ಕುಮಾರನು ಉತ್ಪನ್ನನಾದನು. ಈಗ ಅಂಗಿರಸನ ಪುತ್ರರಾದ ದೇವತೆಗಳನ್ನು ಹೇಳುವೆನು ಕೇಳಿರೆಂದನು. ಬೃಹಸ್ಪತಿಗೆ ಅತಿ ಚಿಕ್ಕವರಾದವರೆಲ್ಲಾ ದೇವತಗಳೂ ಅಂಗಿರಸನ ಪುತ್ರರಾಗಿರುವರಂದು ಪ್ರಖ್ಯಾತ ರಾಗಿರುವರು.

೧೦೫. ಅಂಗಿರಸನಿಗೆ ಸುರೂಪೆಯಲ್ಲಿ ಔದಾರ್ಯ, ಆಯು, ಧನು, ದಕ್ಷ, ದರ್ಭ, ಪ್ರಾಣ, ಹವಿಷ್ಮಂತ, ಹವಿಷ್ಣು, ಕ್ರತು, ಸತ್ಯ ಎಂಬ ಹತ್ತುಜನ ಔರಸ ಪುತ್ರರು ಉದ್ಭವಿಸಿದರು.

೧೦೬-೧೦೮. ಆಯಸ್ಯ, ಉತಥ್ಯ, ವಾಮದೇವ, ಉಶಿಜ, ಭಾರದ್ವಾಜರು, ಶಾಂಕತಿಕರು, ಗಾರ್ಗ್ಯರು, ರಥೀತರರು, ಮುದ್ಗಲರು, ವಿಷ್ಣುವೃದ್ಧರು, ಹರಿತರು, ವಾಯವರು, ಭಕ್ಷರು, ಆರ್ಷಭರು, ಕಿಂಭಯರು, ಈ ಹದಿನೈದು ಕುಲದವರೂ ಅಂಗಿರಸನ ವಂಶದವರೇ ಆಗಿರುವರು ಋಷಿಗಳಲ್ಲಿಯೂ ಋಷಿಗಳ ಭಿನ್ನರಲ್ಲಿಯೂ, ಅಂಗಿರಸನ ವಂಶದವರನೇಕರಿರುವರು. ಇವರೆಲ್ಲರೂ ಆಂಗಿರಸರೆಂದೇ ಪ್ರಖ್ಯಾತ ರಾಗಿರುವರು.

ಮಾರೀಚಂ ಪರಿವಕ್ಷ್ಯಾಮಿ ವಂಶಮುತ್ತಮಪೂರುಷಂ ।
ಯಸ್ಯಾನ್ವವಾಯೇ ಸಂಭೂತಂ ಜಗತ್ಸ್ಥಾವರಜಂಗಮಂ ॥ ೧೦೯ ॥

ಮರೀಚಿರಾಪಶ್ಚಕಮೇ ತಾಭಿಧ್ಯಾಯನ್ಪ್ರಜೇಪ್ಸಯಾ ।
ಪುತ್ರಃ ಸರ್ವಗುಣೋಪೇತಃ ಪ್ರಜಾವಾನ್ ಸುರುಚಿರ್ದಿತಿಃ ॥
ಸಂಪೂಜ್ಯತೇ ಪ್ರಶಸ್ತಾಯಾಂ ಮನಸಾ ಭಾವಿತಾ ಪ್ರಭುಃ ॥ ೧೧೦ ॥

ಆಹೂತಾಶ್ಚ ತತಃ ಸರ್ವಾ ಆಪಃ ಸಮುವಸತ್ಪ್ರಭುಃ ।
ತಾಸು ಪ್ರಣಿಹಿತಾತ್ಮಾನಮೇಕಃ ಸೋಽಜನಯತ್ಪ್ರಭುಃ ॥ ೧೧೧ ॥

ಪುತ್ರಮಪ್ರತಿಮನ್ನಾಮ್ನಾಽರಿಷ್ಟನೇಮಿಃ ಪ್ರಜಾಪತಿಃ ।
ಪುತ್ರಂ ಮರೀಚಂ ಸೂರ್ಯಾಭಂ ವಧೌ ವೇಶೋ ವ್ಯಜೀಜನತ್ ॥ ೧೧೨ ॥

---

೧೦೯. ಈಗ ಮರೀಚಿ ಋಷಿಯ ವಂಶವನ್ನು ತಿಳಿಸುವೆನು. ಅದು ಅತ್ಯುತ್ತಮವೂ ಪ್ರಖ್ಯಾತ ಪುರುಷರುಳ್ಳದ್ದೂ ಆಗಿದೆ. ಆ ಮರೀಚಿ ಋಷಿಗಳ ವಂಶದಲ್ಲಿಯೇ ಚರಾಚರಾತ್ಮಕವಾದ ಸಕಲ ಜಗತ್ತೂ ಉತ್ಪನ್ನವಾಗಿವೆ. ಅಂತಹ ವಂಶವನ್ನು ತಿಳಿಸುವೆನು.

೧೧೦. ಮರೀಚಿ ಮುನಿಯು ಪುತ್ರಾಕಾಂಕ್ಷೆಯಿಂದ ಜಲದಲ್ಲಿ ನಿಂತು, ತಪಸ್ಸನ್ನು ಮಾಡಲು ಇಚ್ಛಿಸಿದನು. ಸರ್ವಗುಣೋಪೇತನೂ, ಪ್ರಜಾವಂತನೂ, ಸುಂದರನೂ, ಆದ ಪುತ್ರನು ಜನಿಸಬೇಕೆಂದು ಮರೀಚಿಯು ಯೋಚಿಸಿ, ಪ್ರಶಸ್ತವಾದ ಕಾಲದಲ್ಲಿ ದಿತೀದೇವಿಯನ್ನು ಮನಸ್ಸಿನಲ್ಲಿ ಸ್ಮರಿಸಿದನು.

೧೧೧. ಅನಂತರ ಮರೀಚಿಮುನಿಯು ಸಮಸ್ತ ಜಲವನ್ನೂ ಏಕತ್ರ ಸಮಾವೇಶ ಮಾಡಿಸಿ ಏಕಾಗ್ರಚಿತ್ತದಿಂದ ಆ ಜಲದಲ್ಲಿ ನಿಂತು ಧ್ಯಾನಿಸಿದನು. ತರುವಾಯ ಪ್ರಭುವಾದ ಮರೀಚಿಯು ಧ್ಯಾನಮಾಡಿ ಒಬ್ಬ ಮಗನನ್ನು ಪಡೆದನು.

೧೧೨. ಅಸದೃಶನೂ, ಮಹಾನುಭಾವನೂ, ಆದ ಆ ಕುಮಾರನು ಅರಿಷ್ಟನೇಮಿ ನಾಮಕ ಪ್ರಜಾಪತಿಯಾದನು. ಆ ಅರಿಷ್ಟನೇಮಿಗೆ ಸೂರ್ಯಸಮಾನ ವರ್ಚಸ್ವಿಯಾದ ಮರೀಚಿನಾಮಕಸುತನು ಉತ್ಪನ್ನನಾದನು.

**ಪ್ರಥ್ಯಾರ್ಯರ್ಣ ಹಿ ಸತಾಂ ವಾಚಂ ಪುತ್ರಾರ್ಥೀ ಸಲಿಲೇ ಸ್ಥಿತಃ ।**
**ಸಪ್ತವರ್ಷ ಸಹಸ್ರಾಣಿ ತತಃ ಸೋಽಪ್ರತಿಮೋಽಭವತ್ ॥ ೧೧೩ ॥**

**ಕಶ್ಯಪಃ ಸವಿತುರ್ವಿದ್ವಾಂಸ್ತೇನ ಸ ಬ್ರಹ್ಮಣಃ ಸಮಃ ।**
**ಮನ್ವಂತರೇಷು ಸರ್ವೇಷು ಬ್ರಾಹ್ಮಣಾಂಶೇನ ಜಾಯತೇ ॥ ೧೧೪ ॥**

**ಕನ್ಯಾ ನಿಮಿತ್ತಮಿತ್ಯುಕ್ತೇ ದಕ್ಷೇಣ ಕುಪಿತಾಃ ಪ್ರಜಾಃ ।**
**ಅಪಿಬತ್ಸ ತದಾ ಕಶ್ಯಂ ಕಶ್ಯಂ ಮದ್ಯಮಿಹೋಚ್ಯತೇ ॥ ೧೧೫ ॥**

**ಹಾರ್ದ್ದೀಕಸಾ ಹಿ ವಿಜ್ಞೇಯಾ ಬ್ರಹ್ಮಣಃ ಕಶ್ಯ ಉಚ್ಯತೇ ।**
**ಕಶ್ಯಂ ಮಧ್ಯಂ ಸ್ಮೃತಂ ವಿಪ್ರೈಃ ಕಶ್ಯಪಾನಾತ್ತು ಕಶ್ಯಪಃ ॥ ೧೧೬ ॥**

---

೧೧೩. ಆ ಮರೀಚಿಮುನಿಯು ಪುತ್ರಾಪೇಕ್ಷೆಯಾಗಿ ಮಹಾನುಭಾವರಾದ ಪ್ರಾಚೀನರ ಮಾತನ್ನನುಸರಿಸಿ, ಜಲದಲ್ಲಿ ನಿಂತು ಏಳುಸಾವಿರವರ್ಷಗಳವರೆಗೂ ಘೋರ ತಪಸ್ಸನ್ನು ಮಾಡಿ ಅಸದೃಶನಾದ ಪುರುಷನಾದನು.

೧೧೪. ಆ ಮರೀಚಿಗೆ ಸೂರ್ಯನಿಗೆ ಸಮಾನ ತೇಜಸ್ವಿಯೂ, ಮಹಾ ಪಂಡಿತನೂ, ಬ್ರಹ್ಮದೇವನಿಗೆ ಸಮಾನನೂ ಆಗಿದ್ದನು. ಹೀಗೆಯೇ ಪ್ರತಿಯೊಂದು ಮನ್ವಂತರದಲ್ಲಿಯೂ ಬ್ರಹ್ಮದೇವನ ಅಂಶದಿಂದ ಕಶ್ಯಪಮುನಿಯು ಜನಿಸುವನು.

೧೧೫. ದಕ್ಷಪ್ರಜಾಪತಿಯ ಕನ್ಯಾದಾನನಿಮಿತ್ತವಾಗಿ ಪ್ರಜೆಗಳಲ್ಲಿ ವಿವಾದವು ಪ್ರಾಪ್ತವಾಯಿತು. ಆಗ ಪ್ರಜೆಗಳು ಕುಪಿತರಾದರು. ಆಗ ಆ ಮುನಿಯು ಕೋಪ ದಿಂದ ಕಶ್ಯವನ್ನು ಪಾನಮಾಡಿದನು. ಕಶ್ಯವೆಂದರೆ ಮದ್ಯವೆಂದು ಅರ್ಥವಾಗುವು ದೆಂದು ಜ್ಞಾನಿಗಳು ಹೇಳುವರು. ಕಶ್ಯಪನೆಂದರೆ ಮದ್ಯವನ್ನು ಪಾನಮಾಡಿದವನೆಂದು ಅರ್ಥವು ಸಿದ್ಧವಾಗಿದೆ.

೧೧೬. ಬ್ರಹ್ಮದೇವಚೇಕಸಿಗೆ (ದಿವ್ಯತೇಜಸ್ಸಿಗೆ) ಕಶ್ಯವೆಂದು ನಾಮವು ಸಂಭವಿಸಿರುತ್ತದೆ. ಆ ದಿವ್ಯತೇಜಸ್ಸನ್ನು ಹೊಂದಿದವನು ಕಶ್ಯಪನಾಗುವನು. ಜ್ಞಾನಿ ಗಳು ಕಶ್ಯವೆಂದರೆ ಮದ್ಯವೆಂದು ಹೇಳುವರು. ಅಂತಹ ಮದ್ಯವನ್ನು ಪಾನಮಾಡಿದ್ದ ರಿಂದ ಕಶ್ಯಪನಾಗುವನು.

ಕರೋತಿ ನಾಮ ಯದ್ವಾಚೋ ವಾಚಂ ಕ್ರೂರಮುದಾಹೃತಂ ।
ದಕ್ಷಾಭಿಶಪ್ತಃ ಕುಪಿತಃ ಕಶ್ಯಪಸ್ತೇನ ಸೋಽಭವತ್ ॥ ೧೧೭ ॥

ತಸ್ಮಾಚ್ಚ ಕಶ್ಯಪೇನೋಕ್ತೋ ಬ್ರಹ್ಮಣಾ ಪರಮೇಷ್ಠಿನಾ ।
ತಸ್ಮಾದ್ದಕ್ಷಃ ಕಶ್ಯಪಾಯ ಕನ್ಯಾಸ್ತಾಃ ಪ್ರತ್ಯಪದ್ಯತ ॥
ಸರ್ವಾಶ್ಚ ಬ್ರಹ್ಮವಾದಿನ್ಯಃ ಸರ್ವಾಸ್ತಾ ಲೋಕಮಾತರಃ ॥ ೧೧೮ ॥

ಇತ್ಯೇತನ್ಮೃಷಿಸರ್ಗಂ ತು ಪುಣ್ಯಂ ಯೋ ವೇದವಾರುಣಂ ।
ಆಯುಷ್ಮಾನ್ ಪುಣ್ಯವಾನ್ ಶುದ್ಧಃ ಸುಖಮಾಪ್ನೋತ್ಯನುತ್ತಮಂ ॥
ಧಾರಣಾತ್ ಶ್ರವಣಾಚ್ಚೈವ ಸರ್ವಪಾಪೈಃ ಪ್ರಮುಚ್ಯತೇ ॥ ೧೧೯ ॥

ಅಥಾಬ್ರುವನ್ ಪುನಃ ಸರ್ವೇ ಮುನಯೋ ರೋಮಹರ್ಷಣಂ ।
ವಿನಿವೃತ್ತೇ ಪ್ರಜಾಸರ್ಗೇ ಷಷ್ಠೇ ವೈ ಚಾಕ್ಷುಷಸ್ಯ ಹ ॥
ನಿಸರ್ಗಃ ಸಂಪ್ರವೃತ್ತೋಽಯಂ ಮನೋರ್ವೈವಸ್ವತಸ್ಯ ಹ ॥ ೧೨೦ ॥

---

೧೧೭. ಯಾವನ ಭಾಷಣವು ಅತಿಕ್ರೂರವಾಗಿ ದಕ್ಷನಿಗೆ ಮನಃಕಾಲುಷ್ಯವನ್ನುಂಟುಮಾಡಿತೋ ಅವನೇ ದಕ್ಷನಿಂದ ಶಪ್ತನಾಗಿ, ಮದ್ಯಪಾನಮಾಡಿದ್ದರಿಂದ ಕಶ್ಯಪನೆಂಬ ನಾಮವನ್ನು ಪಡೆದನು.

೧೧೮. ಅನಂತರ ಪರಮೇಷ್ಠಿಯಾದ ಬ್ರಹ್ಮದೇವನು ಕಶ್ಯಪನಿಗೆ ಸಮಾಧಾನವನ್ನು ಮಾಡಿದನು. ತರುವಾಯ ದಕ್ಷಪ್ರಜೇಶ್ವರನು ತನ್ನ ಕುಮಾರಿಯರನ್ನು ಆ ಕಶ್ಯಪನಿಗೆ ಕೊಟ್ಟು ವಿವಾಹವನ್ನು ಮಾಡಿದನು. ಆ ಪುತ್ರಿಯರೆಲ್ಲರೂ ಬ್ರಹ್ಮವಾದಿಗಳೂ ಲೋಕಮಾತೃಗಳೂ ಆಗಿದ್ದರು.

೧೧೯. ಪುಣ್ಯಪ್ರದವೂ, ವರುಣನ ಸಂಬಂಧಿಯೂ ಆದ ಮುನಿಗಳ ಸೃಷ್ಟಿಕ್ರಮವನ್ನು ಯಾವನು ತಿಳಿಯುವನೋ ಅವನು ಆಯುಷ್ಮಂತನೂ, ಪುಣ್ಯವಂತನೂ, ಶುದ್ಧನೂ ಆಗಿ ಅತ್ಯುತ್ತಮವಾದ ಸುಖವನ್ನು ಪಡೆಯುವನು. ಈ ವಂಶವನ್ನು ಮನಸ್ಸಿನಲ್ಲಿ ಧಾರಣೆಮಾಡುವುದರಿಂದಲೂ, ಶ್ರವಣಮಾಡುವುದರಿಂದಲೂ, ಸರ್ವಪಾಪಗಳಿಂದ ಮುಕ್ತನಾಗಿ ದಿವ್ಯಸುಖವನ್ನು ಪಡೆಯುವನು.

೧೨೦. ಅನಂತರ ಸಮಸ್ತರಾದ ಮಹರ್ಷಿಗಳೂ ಸೂತಮುನಿಯನ್ನು ಕುರಿತು ಇಂತೆಂದರು :—ಆರನೆಯ ಚಾಕ್ಷುಷಮನ್ವಂತರದ ಪ್ರಜೆಗಳ ಸೃಷ್ಟಿಕ್ರಮವು

|| ಸೂತ ಉವಾಚ ||

ಪ್ರಜಾಃ ಸೃಜೇತಿ ವ್ಯಾದಿಷ್ಟಃ ಸ್ವಯಂ ದಕ್ಷಃ ಸ್ವಯಂಭುವಾ ।
ಸಸರ್ಜ ದಕ್ಷೋ ಭೂತಾನಿ ಗತಿಮಂತಿ ಧ್ರುವಾಣಿ ಚ ॥
ಉಪಸ್ಥಿತೇಂತರೇ ಹ್ಯಸ್ಮಿನ್ ಮನೋರ್ವೈವಸ್ವತಸ್ಯ ಹ || ೧೨೧ ||

ತತಃ ಪ್ರವೃತ್ತೋ ದಕ್ಷಸ್ತು ಪ್ರಜಾಃ ಸ್ರಷ್ಟುಂ ಚತುರ್ವಿಧಾಃ ।
ಜರಾಯುಜಾ ಅಂಡಜಾಶ್ಚ ಉದ್ಭಿಜ್ಜಾಃ ಸ್ವೇದಜಾಸ್ತಥಾ || ೧೨೨ ||

ದಶವರ್ಷಸಹಸ್ರಾಣಿ ತಪ್ತ್ವಾ ಘೋರಂ ಮಹತ್ತಪಃ ।
ಸಂಭಾವಿತೋ ಯೋಗಬಲೈರಣಿಮಾದ್ಯೈರ್ವಿಶೇಷತಃ || ೧೨೩ ||

---

ಮುಗಿಯಲು, ಏಳನೆಯ ವೈವಸ್ವತಮನ್ವಂತರದ ಸೃಷ್ಟಿಕ್ರಮವು ಯಾವ ರೀತಿಯನ್ನು ಹೊಂದುವುದು. ಇದನ್ನು ವಿಸ್ತಾರವಾಗಿ ತಿಳಿಸಬೇಕೆಂದು ಮುನಿಗಳು ಸೂತಪುರಾಣೀಕನನ್ನು ಕೇಳಿದರು.

೧೨೧. ಸೂತಮುನಿಯು ಹೇಳಿದನು :—ಬ್ರಹ್ಮದೇವನು ಪ್ರಜೆಗಳನ್ನು ಸೃಷ್ಟಿ ಮಾಡುವಂತೆ ದಕ್ಷನಿಗೆ ಆಜ್ಞಾಪಿಸಿದನು. ಹೀಗೆ ಬ್ರಹ್ಮದೇವನಿಂದ ಆದಿಷ್ಟನಾದ ದಕ್ಷೇಶ್ವರನು ವೈವಸ್ವತಮನ್ವಂತರವು ಪ್ರಾಪ್ತವಾಗಲು, ಚರಾಚರಾತ್ಮಕವಾದ ಸಕಲ ಭೂತಗಳನ್ನೂ ಸೃಷ್ಟಿಮಾಡಿದನು.

೧೨೨. ಅನಂತರ ದಕ್ಷಪ್ರಜೇಶ್ವರನು ಜರಾಯುಜ, ಅಂಡಜ, ಸ್ವೇದಜ, ಉದ್ಭಿಜಗಳೆಂದು ಪ್ರಸಿದ್ಧಗಳಾದ ಚತುರ್ವಿಧ ಪ್ರಾಣಿಗಳನ್ನು ಸೃಷ್ಟಿಸಲುಪಕ್ರಮಿಸಿದನು.

೧೨೩. ದಕ್ಷಪ್ರಜಾಪತಿಯು ಹತ್ತುಸಾವಿರವರ್ಷಗಳವರೆಗೆ ಘೋರವೂ, ಭಯಂಕರವೂ ಆದ ಮಹಾತಪಸ್ಸನ್ನು ಮಾಡಿ ಯೋಗಬಲದಿಂದಲೂ, ಅಣಿಮಾದ್ಯೈಶ್ವರ್ಯದಿಂದಲೂ ಕೂಡಿ ವಿಶೇಷವಾದ ಮರ್ಯಾದೆಗೆ ಪಾತ್ರನಾದನು.

ಆತ್ಮಾನಂ ವ್ಯಭಜತ್ ಶ್ರೀಮಾನ್ ಮನುಷ್ಯೋರಗರಾಕ್ಷಸಾನ್ ।
ದೇವಾಸುರಸಗಂಧರ್ವಾನ್ ದಿವ್ಯಸಂಹನನಪ್ರಜಾನ್ ॥
ಈಶ್ವರಾನಾತ್ಮನಸ್ತುಲ್ಯಾನ್ ರೂಪದ್ರವಿಣತೇಜಸಾ ॥ ೧೨೪ ॥

ತಥೈವಾನ್ಯಾನಿ ಮುದಿತೋ ಗತಿಮಂತಿ ಧ್ರುವಾಣಿ ಚ ।
ಮಾನಸಾನ್ಯೇವ ಭೂತಾನಿ ಸಿಸೃಕ್ಷುರ್ವಿವಿಧಾಃ ಪ್ರಜಾಃ ॥ ೧೨೫ ॥

ಋಷೀನ್ ದೇವಾನ್ ಸಗಂಧರ್ವಾನ್ ಮನುಷ್ಯೋರಗರಾಕ್ಷಸಾನ್ ।
ಯಕ್ಷಭೂತಪಿಶಾಚಾಂಶ್ಚ ವಯಃ ಪಶುಮೃಗಾಂಸ್ತಥಾ ॥ ೧೨೬ ॥

ಯದಾಸ್ಯ ಮನಸಾ ಸೃಷ್ಟ್ವಾ ನ ವ್ಯವರ್ಧಂತ ತಾಃ ಪ್ರಜಾಃ ।
ಅಪಧ್ಯಾತಾ ಭಗವತಾ ಮಹಾದೇವೇನ ಧೀಮತಾ ॥ ೧೨೭ ॥

ಮೈಥುನೇನ ಚ ಭಾವೇನ ಸಿಸೃಕ್ಷುರ್ವಿವಿಧಾಃ ಪ್ರಜಾಃ ।
ಅಸಿಕ್ನೀಂ ಚಾವಹತ್ಪತ್ನೀಂ ವೀರಣಸ್ಯ ಪ್ರಜಾಪತೇಃ ॥ ೧೨೮ ॥

---

೧೨೪ ಅನಂತರ ದಕ್ಷೇಶನು ಆತ್ಮಾಂಶಗಳ ವಿಭಾಗದಿಂದ ಮನುಷ್ಯರು, ಉರಗಗಳು, ರಾಕ್ಷಸರು, ದಿವ್ಯರೂಪಿಗಳಾದ ದೇವತೆಗಳು, ಅಸುರರು, ಗಂಧರ್ವರು ಇವರನ್ನೂ, ರೂಪ, ಸೌಂದರ್ಯ, ಬಲ, ವೀರ್ಯ ಇವುಗಳಿಂದ ತನಗೆ ಸಮರಾದ ರಾಜರು ಇವರನ್ನೂ ಸೃಷ್ಟಿಮಾಡಿದನು.

೧೨೫. ಮತ್ತು ಸಂತೋಷಯುಕ್ತನಾಗಿ ಸ್ಥಾವರಜಂಗಮಗಳಾದ ಸಕಲ ಪ್ರಾಣಿಗಳನ್ನೂ, ಮಾನಸಿಕರಾದ ವಿವಿಧಪ್ರಜೆಗಳನ್ನೂ ಸೃಷ್ಟಿಮಾಡಲು ಇಚ್ಛಿಸಿದನು.

೧೨೬–೧೨೭. ಅನಂತರ ದಕ್ಷಪ್ರಜಾಪತಿಯು, ಋಷಿಗಳು, ದೇವತೆಗಳು, ಗಂಧರ್ವರು, ಮನುಷ್ಯರು, ಉರಗಗಳು, ರಾಕ್ಷಸರು, ಯಕ್ಷರು, ಭೂತಗಳು, ಪಿಶಾಚಗಳು, ಪಕ್ಷಿಗಳು, ಪಶುಗಳು, ಮೃಗಗಳು ಇವುಗಳನ್ನು ಯಾವಾಗ ಮನಃಸಂಕಲ್ಪದಿಂದ ಸೃಷ್ಟಿಮಾಡಿದನೋ ಆಗ ಆ ಪ್ರಜೆಗಳು ಭಗವಂತನೂ, ಜ್ಞಾನಿಯೂ ಆದ ಪರಮೇಶ್ವರನಿಂದ ಶಪ್ತರಾಗಿ ವೃದ್ಧಿಯನ್ನು ಹೊಂದಲಿಲ್ಲ.

೧೨೮. ತರುವಾಯ ದಕ್ಷಪ್ರಜೇಶ್ವರನು ಸ್ತ್ರೀಪುರುಷ ಸಂಬಂಧರೂಪವಾದ ಪ್ರಜಾಧರ್ಮದಿಂದ ನಾನಾವಿಧಪ್ರಾಣಿಗಳನ್ನು ಸೃಷ್ಟಿಸಲಿಚ್ಛಿಸಿ, ವೀರಣಪ್ರಜಾಪತಿಯ ಪುತ್ರಿಯಾದ ಅಸಿಕ್ನೀ ಎಂಬುವಳನ್ನು ವಿವಾಹಮಾಡಿಕೊಂಡನು.

**ಸುತಾಂ ಸುಮಹತಾ ಯುಕ್ತಾಂ ತಪಸಾ ಲೋಕಧಾರಿಣೀಂ ।**
**ಯಯಾ ಧೃತಮಿದಂ ಸರ್ವಂ ಜಗತ್ಸ್ಥಾವರಜಂಗಮಂ ॥ ೧೨೯ ॥**

**ಅತ್ರಾಪ್ಯುದಾಹರಂತೀಮೌ ಶ್ಲೋಕೌ ಪ್ರಾಚೇತಸಂ ಪ್ರತಿ ।**
**ದಕ್ಷಸ್ಯೋದ್ವಹತೋ ಭಾರ್ಯಾಮಸಿಕ್ನೀಂ ವೀರಿಣೀಂ ಪರಾಂ ॥ ೧೩೦ ॥**

**ಕೂಪಾನಾಂ ನಿಯುತಂ ದಕ್ಷಃ ಸರ್ಪಿಷಾಂ ಸಾಭಿಮಾನಿನಾಂ ।**
**ನದೀಗಿರಿಷುಸರ್ಜಂಸ್ತಾಃ ಪೃಷ್ಠತೋಽನುಯಯೌ ಪ್ರಭುಃ ॥ ೧೩೧ ॥**

**ತಂ ದೃಷ್ಟ್ವಾ ಋಷಿಭಿಃ ಪ್ರೋಕ್ತಂ ಪ್ರತಿಷ್ಠಾಸ್ಯತಿ ವೈ ಪ್ರಜಾಃ ।**
**ಪ್ರಥಮಾತ್ರ ದ್ವಿತೀಯಾ ತು ದಕ್ಷಸ್ಯೇಹ ಪ್ರಜಾಪತೇಃ ॥ ೧೩೨ ॥**

---

೧೨೯. ಮಹಾತಪಸ್ವಿಯೂ, ಲೋಕಧಾರಕಳೂ, ಸ್ಥಾವರಜಂಗಮಾತ್ಮಕವಾದ ಸರ್ವಜಗದ್ಧಾರಕಳೂ, ವೀರಣಪ್ರಜಾಪತಿಯ ಕುಮಾರಿಯೂ ಆದ ಅಸಿಕ್ನಿಯನ್ನು ದಕ್ಷನು ಪತ್ನಿಯನ್ನಾಗಿ ಮಾಡಿಕೊಂಡನು.

೧೩೦. ದಕ್ಷಪ್ರಜಾಪತಿಯು ವೀರಣಪ್ರಜಾಪತಿಯ ಪುತ್ರಿಯೂ ಸುಂದರಿಯೂ ಆದ ಅಸಿಕ್ನಿಯನ್ನು ಮದುವೆಯಾದ ವಿಷಯದಲ್ಲಿ ಮಹಾತ್ಮರು ಪ್ರಚೇತಸನ ವಿಷಯಕವಾಗಿ ಎರಡು ಪದ್ಯಗಳನ್ನು ಉದಾಹರಿಸುವರು.

೧೩೧. ಪ್ರಭುವಾದ ದಕ್ಷಪ್ರಜಾಪತಿಯು ಅಭಿಮಾನಿಗಳಿಂದಸಹಿತವಾದ ತುಪ್ಪದ ಹತ್ತುಸಾವಿರ ಭಾವಿಗಳನ್ನು ತೋಡಿಸಿದನು. ಇವು ನದೀರೂಪವಾಗಿ ಬೆಟ್ಟ ಗುಡ್ಡಗಳಲ್ಲಿ ಹರಿಯಲು ಅವನ್ನು ಅನುಸರಿಸಿ ಹೊರಟನು.

೧೩೨. ಆಗ ಋಷಿಗಳು ದಕ್ಷನನ್ನು ನೋಡಿ ನೀನು ಪ್ರಜೆಗಳನ್ನು ಸ್ಥಾಪನ ಮಾಡುತ್ತೀಯೆ. ಈ ವಿಷಯದಲ್ಲಿ ದಕ್ಷಪ್ರಜಾಪತಿಗೆ ಸಹಕಾರಿಯಾದವರಲ್ಲಿ ಅಸಿಕ್ನಿಯು ಅಗ್ರಗಣ್ಯಳಾಗಿರುವಳು. ಎರಡನೆಯವಳ ವಿಷಯವನ್ನು ತಿಳಿಸುವೆನು ಕೇಳಿರೆಂದನು.

ತಥಾಗಚ್ಛದ್ಯಥಾಕಾಲಂ ಕೂಪಾನಾಂ ನಿಯುತೇ ತು ಸಃ ।
ಅಸಿಕ್ನೀಂ ವೈರಿಣೀಂ ಯತ್ರ ದಕ್ಷಃ ಪ್ರಾಚೇತಸೋಽವಸತ್ ॥ ೧೩೩ ॥

ಅಥ ಪುತ್ರಸಹಸ್ರಂ ಸ ವೈರಿಣ್ಯಾಮಮಿತೌಜಸಾ ।
ಅಸಿಕ್ನ್ಯಾಂ ಜನಯಾಮಾಸ ದಕ್ಷಃ ಪ್ರಾಚೇತಸಃ ಪ್ರಭುಃ ॥ ೧೩೪ ॥

ತಾಂಸ್ತು ದೃಷ್ಟ್ವಾ ಮಹಾತೇಜಾಃ ಸ ವಿವರ್ಧಯಿಷೂರ್ ಪ್ರಜಾಃ ।
ದೇವರ್ಷಿಃ ಪ್ರಿಯಸಂವಾದೋ ನಾರದೋ ಬ್ರಹ್ಮಣಃ ಸುತಃ ॥
ನಾಶಾಯ ವಚನಂ ತೇಷಾಂ ಶಾಪಾಯೈವಾತ್ಮನೋಽಬ್ರವೀತ್ ॥ ೧೩೫ ॥

ಯಃ ಸ ಪ್ರೋಚ್ಯತೇ ವಿಪ್ರಃ ಕಶ್ಯಪಸ್ಯೇತಿ ಕೃತ್ರಿಮಃ ।
ದಕ್ಷಶಾಪಭಯಾದ್ಭೀತೋ ಬ್ರಹ್ಮರ್ಷಿಸ್ತೇನ ಕರ್ಮಣಾ ॥ ೧೩೬ ॥

---

೧೩೩. ಪ್ರಚೇತಸನ ಪುತ್ರನಾದ ದಕ್ಷನು ಎಲ್ಲಿ ವೀರಣರಾಜಕುಮಾರಿಯಾದ ಅಸಿಕ್ನಿಯನ್ನು ಮದುವೆಯಾದನೋ, ಅಲ್ಲಿ ಅನೇಕ ಸಹಸ್ರ ಕೂಪಗಳನ್ನು ನಿರ್ಮಾಣ ಮಾಡಿಸಿ ಪ್ರಜೆಗಳನ್ನು ಸ್ಥಾಪಿಸಿದನು.

೧೩೪. ಪ್ರಚೇತಸನ ಕುಮಾರನೂ, ಪ್ರಭುವೂ ಆದ ದಕ್ಷಪ್ರಜಾಪತಿಯು ವೀರಣರಾಜಕುಮಾರಿಯಾದ ಅಸಿಕ್ನೀದೇವಿಯಲ್ಲಿ ಮಹಾಶೂರರಾಧ ಸಹಸ್ರಾರು ಪುತ್ರರನ್ನು ಪಡೆದನು.

೧೩೫. ಮಹಾತೇಜಸ್ವಿಯೂ, ದೇವರ್ಷಿಯೂ, ಪ್ರಿಯಕರವಾದ ಭಾಷಣವುಳ್ಳವನೂ, ಬ್ರಹ್ಮದೇವನ ಮಾನಸಪುತ್ರನೂ ಆದ ನಾರದಮುನಿಯು ವೃದ್ಧಿಯನ್ನು ಪಡೆಯತಕ್ಕ ಆ ದಕ್ಷಕುಮಾರರನ್ನು ನೋಡಿ ಅವರು ನಾಶವಾಗುವಂತೆ ಮಾಡಿದನು. ಇದರಿಂದ ತನಗೂ ಶಾಪವು ಪ್ರಾಪ್ತವಾಯಿತು. ಈ ರೀತಿಯಲ್ಲಿ ಹೇಳಿದನು.

೧೩೬. ಯಾವ ನಾರದಮುನಿಯು ಕಶ್ಯಪನ ಹಾಗೆ ಕೃತ್ರಿಮವನ್ನು ಆಚರಿಸಿದನೋ, ಅಂತಹ ಬ್ರಹ್ಮರ್ಷಿಯಾದ ನಾರದನು ತಾನು ಮಾಡಿದ ಕೆಲಸದಿಂದ ದಕ್ಷಪ್ರಜೇಶನ ಶಾಪಕ್ಕೆ ವಶನಾಗಬೇಕಾಯಿತು.

**ಯಃ ಕಶ್ಯಪಸುತಸ್ಯಾಥ ಪರಮೇಷ್ಠೀ ವ್ಯಜಾಯತ ।**
**ಮಾನಸಃ ಕಶ್ಯಪಸ್ಯೇಹ ದಕ್ಷಶಾಪಭಯಾತ್ ಪುನಃ ॥ ೧೩೭ ॥**

**ತಸ್ಮಾತ್ ಸ ಕಶ್ಯಪಸ್ಯಾಥ ದ್ವಿತೀಯಂ ಮಾನಸೋಽಭವತ್ ।**
**ಸ ಹಿ ಪೂರ್ವಸಮುತ್ಪನ್ನೋ ನಾರದಃ ಪರಮೇಷ್ಠಿನಃ ॥ ೧೩೮ ॥**

**ಯೇನ ದಕ್ಷಸ್ಯ ಪುತ್ರಾಸ್ತೇ ಹರ್ಯಶ್ವಾ ಇತಿ ವಿಶ್ರುತಾಃ ।**
**ನಿಂದಾರ್ಥಂ ನಾಶಿತಾಃ ಸರ್ವೇ ವಿನಿಷ್ಟಾಶ್ಚ ನ ಸಂಶಯಃ ॥ ೧೩೯ ॥**

**ತಸ್ಯೋದ್ಯತಸ್ತದಾ ದಕ್ಷಃ ಕ್ರುದ್ಧೋ ನಾಶಾಯ ವೈ ಪ್ರಭುಃ ।**
**ಬ್ರಹ್ಮರ್ಷಿರ್ವೈ ಪುರಸ್ಕೃತ್ಯ ಯಾಚಿತಃ ಪರಮೇಷ್ಠಿನಾ ॥ ೧೪೦ ॥**

---

೧೩೭. ಬ್ರಹ್ಮದೇವನ ಮಾನಸಿಕ ಪುತ್ರನಾದ ನಾರದನು ದಕ್ಷೇಶನ ಶಾಪದಿಂದ ಕಶ್ಯಪನಿಗೆ ಪುತ್ರನಾಗಿ ಜನಿಸಿದನು. ಆ ನಾರದನೇ ಮೊದಲು ಬ್ರಹ್ಮನ ಮಗನಾಗಿದ್ದನು. ಅನಂತರ ಕಶ್ಯಪಕುಮಾರನಾದನು

೧೩೮. ಆದುದರಿಂದಲೇ ನಾರದನು ಕಶ್ಯಪನಿಗೆ ದ್ವಿತೀಯಮಾನಸಿಕ ಪುತ್ರನಾಗಿದ್ದನು. ಅದೇ ನಾರದನೇ ಪೂರ್ವದಲ್ಲಿ ಬ್ರಹ್ಮದೇವನಿಗೆ ಮಾನಸಿಕ ಕುಮಾರನಾಗಿ ಉದ್ಭವಿಸಿ ನಾರದನೆಂದು ಪ್ರಖ್ಯಾತನಾಗಿದ್ದನು.

೧೩೯. ಯಾರಿಂದ ಹರ್ಯಶ್ವರೆಂದು ಪ್ರಖ್ಯಾತರಾದ ದಕ್ಷನ ಪುತ್ರರು ದೂಷಣೆಗಾಗಿ (ಸೃಷ್ಟರಾದರೋ) ನಾಶಿತರಾದರೋ ಅವರೆಲ್ಲರೂ ನಿಸ್ಸಂದೇಹವಾಗಿಯೂ ನಷ್ಟರಾದರು.

೧೪೦. ಯಾವಾಗ ದಕ್ಷಕುಮಾರರೆಲ್ಲರೂ ಮೃತರಾದರೋ, ಆಗ ದಕ್ಷಪ್ರಜಾಪತಿಯು ನಾರದನನ್ನು ಸಂಹಾರಮಾಡಲು ಉದ್ಯುಕ್ತನಾದನು. ಆಗ ಬ್ರಹ್ಮದೇವನು ಬ್ರಹ್ಮರ್ಷಿಗಳಿಂದ ಕೂಡಿ ದಕ್ಷನನ್ನು ಪ್ರಾರ್ಥಿಸಿದನು.

**ತತೋಽಭಿಸಂಧಿತಂ ಚಕ್ರೇ ದಕ್ಷಸ್ತು ಪರಮೇಷ್ಠಿನಾ ।**
**ಕನ್ಯಾಯಾಂ ನಾರದೋ ಮಹ್ಯಂ ತವ ಪುತ್ರೋ ಭವತ್ವಿತಿ ॥ ೧೪೧ ॥**

**ತತೋ ದಕ್ಷಃ ಸುತಾಂ ಪ್ರಾದಾತ್ ಪ್ರಿಯಾಂ ವೈ ಪರಮೇಷ್ಠಿನೇ ।**
**ತಸ್ಮಾತ್ ಸ ನಾರದೋ ಜಜ್ಞೇ ಭೂಯಃ ಶಾಂತೋ ಭಯಾದೃಷಿಃ॥ ೧೪೨ ॥**

**ತದುಪಶ್ರುತ್ಯ ವಿಪ್ರಾಸ್ತೇ ಜಾತಕೌತೂಹಲಾಃ ಪುನಃ ।**
**ಅಪೃಚ್ಛನ್ ವದತಾಂ ಶ್ರೇಷ್ಠಂ ಸೂತಂ ತತ್ವಾರ್ಥದರ್ಶಿನಂ ॥ ೧೪೩ ॥**

**॥ ಋಷಯ ಊಚುಃ ॥**

**ಕಥಂ ವಿನಾಶಿತಾಃ ಪುತ್ರಾ ನಾರದೇನ ಮಹಾತ್ಮನಾ ।**
**ಪ್ರಜಾಪತಿಸುತಾಸ್ತೇ ವೈ ಪ್ರಜಾಃ ಪ್ರಾಚೇತಸಾತ್ಮಜಾಃ ॥ ೧೪೪ ॥**

---

೧೪೧ ಆಗ ದಕ್ಷನು ಬ್ರಹ್ಮದೇವನ ಸಂಗಡ ಒಂದು ಕೌಲನ್ನು ಮಾಡಿಕೊಂಡನು ಅದೇನೆಂದರೆ, ಎಲೈ ಪಿತಾಮಹನೇ, ನಿನ್ನ ಕುಮಾರನಾದ ನಾರದನು ನನಗೆ ಪುತ್ರನಾಗಿ ಜನಿಸಲೆಂದು ಕೇಳಿಕೊಂಡನು.

೧೪೨. ಅನಂತರ ದಕ್ಷನು ತನ್ನ ಪ್ರಿಯ ಪುತ್ರಿಯನ್ನು ಬ್ರಹ್ಮನಿಗೆ ಕೊಟ್ಟು ವಿವಾಹವನ್ನು ಬೆಳಸಿದನು. ತರುವಾಯ ಭಯದಿಂದ ಶಾಂತಮುನಿಯು ಪುನಃ ಅವನಿಗೆ ಪುತ್ರನಾಗಿ ಜನಿಸಿದನು.

೧೪೩. ಅನಂತರ ಈ ವಿಷಯವನ್ನು ಕೇಳಿದ ಮುನಿಗಳು ಕುತೂಹಲದಿಂದ ಕೂಡಿ ತತ್ವಜ್ಞಾನಿಗಳಲ್ಲಿ ಉತ್ತಮನೂ, ಪುರಾಣವಕ್ತೃಗಳಲ್ಲಿ ಶ್ರೇಷ್ಠನೂ ಆದ ಸೂತಮುನಿಯನ್ನು ಕುರಿತು ಹೀಗೆ ಹೇಳಿದರು.

೧೪೪. ಋಷಿಗಳು ಹೇಳಿದರು :—ಎಲೈ ಸೂತಮುನಿಯೇ, ಮಹಾತ್ಮನಾದ ನಾರದಮುನಿಯು ಆ ಪುತ್ರರನ್ನು ಹೇಗೆ ಸಂಹರಿಸಿದನು. ಅವರು ಪ್ರಚೇತಸನ ಪುತ್ರನಾದ ದಕ್ಷಪ್ರಜಾಪತಿಯ ಪುತ್ರರೂ ಅತಿಸಮರ್ಥರೂ ಆಗಿರಲಿಲ್ಲವೇ ? ಇಂತಹ ವರು ಹೇಗೆ ನಾರದರಿಂದ ವಿನಷ್ಟರಾದರು.

**ಸ ತಥ್ಯಂ ವಚನಂ ಶ್ರುತ್ವಾ ಜಿಜ್ಞಾಸಾಸಂಭವಂ ಶುಭಂ |**
**ಪ್ರೋವಾಚ ಮಧುರಂ ವಾಕ್ಯಂ ತೇಷಾಂ ಸರ್ವಗುಣಾನ್ವಿತಂ || ೧೪೫ ||**

**ದಕ್ಷಪುತ್ರಾಶ್ಚ ಹರ್ಯಶ್ವಾ ವಿವರ್ಧಯಿಷವಃ ಪ್ರಜಾಃ |**
**ಸಮಾಗತಾ ಮಹಾವೀರ್ಯಾ ನಾರದಸ್ತಾನುವಾಚ ಹ || ೧೪೬ ||**

**ಬಾಲಿಶಾ ಬತ ಯೂಯಂ ವೈ ನ ಪ್ರಜಾನೀಥ ಭೂತಲಂ |**
**ಅಂತಮೂರ್ಧ್ವಮಧಶ್ಚೈವ ಕಥಂ ಸ್ರಕ್ಷ್ಯಥ ವೈ ಪ್ರಜಾಃ || ೧೪೭ ||**

**ಕಿಂ ಪ್ರಮಾಣಂ ತು ಮೇದಿನ್ಯಾಃ ಸ್ರಷ್ಟವ್ಯಾನಿ ತಥೈವ ಚ |**
**ಅವಿಜ್ಞಾಯೇಹ ಸ್ರಷ್ಟವ್ಯಮನ್ಯಥಾ ಕಿಂ ನು ಸ್ರಕ್ಷ್ಯಥ ||**
**ಅಲ್ಪಂ ವಾಪಿ ಬಹುರ್ವಾಪಿ ತತ್ರ ದೋಷಸ್ತು ದೃಶ್ಯತೇ || ೧೪೮ ||**

---

೧೪೫. ಆ ಸೂತಮುನಿಯು ಮಹಾತ್ಮರಾದ ಆ ಮುನಿಗಳ ಯಥಾರ್ಥವೂ, ಸರ್ವಗುಣೋಪೇತವೂ, ವಿಚಾರಾರ್ಹವೂ, ಗೌರವೋಪೇತವೂ, ಮಂಗಳಕರವೂ ಆದ ಮಾತನ್ನು ಕೇಳಿ ಮಧುರವಾಗಿ ಇಂತೆಂದನು.

೧೪೬. ಮಹಾಶೂರರೂ, ವರ್ಧಿಷ್ಣುಗಳೂ, ಹರ್ಯಕ್ಷನಾಮಕರೂ, ದಕ್ಷ ಪ್ರಜಾಪತಿಯ ಪುತ್ರರೂ ಆದ ಆ ಪ್ರಜೆಗಳು ಸಂಚಾರಮಾಡಲು, ನಾರದಮುನಿಯು ಅವರನ್ನು ನೋಡಿ ವಕ್ಷ್ಯಮಾಣರೀತಿಯಾಗಿ ಹೇಳಿದನು.

೧೪೭. ಎಲೈ ದಕ್ಷಕುಮಾರರೇ, ನೀವು ಅತ್ಯಂತ ಮೂರ್ಖರಲ್ಲವೇ ? ಏಕೆಂದರೆ, ನಿಮಗೆ ಪ್ರಪಂಚ ಜ್ಞಾನವೇ ಇಲ್ಲ. ನೀವು ಈ ಭೂತಲದ ಕೊನೆಯನ್ನೂ, ಊರ್ಧ್ವಭಾಗವನ್ನೂ, ಕೆಳಭಾಗವನ್ನೂ ಕೂಡ ತಿಳಿಯದೆ, ಪ್ರಜೆಗಳನ್ನು ಹೇಗೆ ಸೃಷ್ಟಿಮಾಡುವಿರೆಂದು ಕೇಳಿದನು.

೧೪೮. ಎಲೈ ಕುಮಾರರೇ, ಈ ಭೂಮಂಡಲವು ಎಷ್ಟು ವಿಸ್ತಾರವಾಗಿದೆ. ನೀವು ಸೃಷ್ಟಿಮಾಡಬೇಕಾದ ಪ್ರಜೆಗಳು ಎಷ್ಟು? ಇವುಗಳನ್ನು ತಿಳಿಯದೆ ನೀವು ಹೇಗೆ ಸೃಷ್ಟಿಮಾಡುವಿರಿ ? ಸಂಪೂರ್ಣವಾಗಿ ತಿಳಿದಲ್ಲವೇ ಸೃಷ್ಟಿಸಬೇಕು ? ಸೃಷ್ಟಿಸುವ ವಿಷಯಗಳು ಅಲ್ಪವಾಗಿರಲಿ ಅಥವಾ ಮಹತ್ತಾಗಿರಲಿ ಅದನ್ನು ತಿಳಿಯದೆ, ಸೃಷ್ಟಿಗೆ ಮಹತ್ತಾದ ದೋಷಗಳು ಸಂಭವಿಸುತ್ತವೆಯೆಂದು ನಾರದಮುನಿಯು ದಕ್ಷಕುಮಾರ ರನ್ನು ಕೇಳಿದನು.

ತೇ ತು ತದ್ವಚನಂ ಶ್ರುತ್ವಾ ಪ್ರಯಾತಾಃ ಸರ್ವತೋದಿಶಂ ।
ವಾಯುಂ ತು ಸಮನುಪ್ರಾಪ್ಯ ಗತಾಸ್ತೇ ವೈ ಪರಾಭವಂ ॥ ೧೪೯ ॥

ಅದ್ಯಾಪಿ ನ ನಿವರ್ತಂತೇ ಭ್ರಮಂತೋ ವಾಯುವಿಶ್ರಿತಾಃ ।
ಏವಂ ವಾಯುಪಥಂ ಪ್ರಾಪ್ಯ ಭ್ರಮಂತೇ ತೇ ಮಹರ್ಷಯಃ ॥ ೧೫೦ ॥

ಸ್ವೇಷು ಪುತ್ರೇಷು ನಷ್ಟೇಷು ದಕ್ಷಃ ಪ್ರಾಚೇತಸಃ ಪುನಃ ।
ವೈರಿಣ್ಯಾಮೇವ ಪುತ್ರಾಣಾಂ ಸಹಸ್ರಮಸೃಜತ್ ಪ್ರಭುಃ ॥ ೧೫೧ ॥

ಪ್ರಜಾ ವಿವರ್ಧಯಿಷವಃ ಶಬಲಾಶ್ವಾಃ ಪುನಸ್ತು ತೇ ।
ಪೂರ್ವಮುಕ್ತಂ ವಚಸ್ತತ್ರ ಶ್ರಾವಿತಾ ನಾರದೇನ ಹ ॥ ೧೫೨ ॥

---

೧೪೯-೧೫೦. ತರುವಾಯ ದಕ್ಷಕುಮಾರನು ನಾರದಮಹರ್ಷಿಯ ಆ ವಾಕ್ಯಗಳನ್ನು ಕೇಳಿ ಯುಕ್ತವೆಂದು ತಿಳಿದು, ಭೂಮಂಡಲದ ವಿಸ್ತಾರವನ್ನು ಕಂಡುಹಿಡಿಯಲು ಸರ್ವದಿಕ್ಕುಗಳಿಗೂ ಹೊರಟರು. ಕೊನೆಗೆ ಅವರು ವಾಯುಮಂಡಲವನ್ನು ಸೇರಿ ದಿಕ್ಕುತೋರದೆ ಪರಾಭೂತರಾದರು. ವಾಯುಮಂಡಲವನ್ನು ಹೊಂದಿದ ಆ ಕುಮಾರರು ತಿರುಗಾಡುತ್ತಾ ಇದುವರೆಗೂ ಹಿಂದಕ್ಕೆ ತಿರುಗಿ ಪುನಃ ಬರಲೇ ಇಲ್ಲ. ಹೀಗೆ ಆ ಮಹರ್ಷಿಗಳು ವಾಯುಮಾರ್ಗವನ್ನು ಹೊಂದಿ ಅದ್ಯಾಪಿ ಅಲೆದಾಡುತ್ತಲೇ ಇರುವರು.

೧೫೧. ಹೀಗೆ ಭೂಸಂಚಾರಕ್ಕಾಗಿ ಹೋದ ಮಕ್ಕಳು ಹಿಂತಿರುಗಿ ಬಾರದೇ ಇರಲು, ಅವರು ನಷ್ಟರಾದರೆಂದು ತಿಳಿದು ಪ್ರಚೇತಸನ ಮಗನಾದ ದಕ್ಷನು ಪುನಃ ವೈರಿಣೀದೇವಿಯಲ್ಲಿ ಸಾವಿರಾರು ಮಕ್ಕಳನ್ನು ಸೃಷ್ಟಿಮಾಡಿದನು.

೧೫೨. ಪ್ರಜೆಗಳ ಅಭಿವೃದ್ಧಿಗೆ ಕಾರಣರೂ, ಶಬಲಾಶ್ವನಾಮಕರೂ ಆದ ವೈರಿಣೀಕುಮಾರರು ಪೂರ್ವದ ಹಾಗೆಯೇ ನಾರದಮುನಿಯ ವಾಕ್ಯವನ್ನು ಕೇಳಿ ಯುಕ್ತವೆಂದು ಭಾವಿಸಿದರು.

**ತಚ್ಛ್ರುತ್ವಾ ವಚನಂ ಸರ್ವೇ ಕುಮಾರಾಸ್ತೇ ಮಹೌಜಸಃ |**
**ಅನ್ಯೋನ್ಯಮೂಚುಸ್ತೆ ಸರ್ವೇ ಸಮ್ಯಗಾಹ ಮಹಾನೃಷಿಃ ||**
**ಭ್ರಾತೃಣಾಂ ಪದವೀ ಚೈವ ಗಂತವ್ಯಾ ನಾತ್ರ ಸಂಶಯಃ || ೧೫೩ ||**

**ಜ್ಞಾತ್ವಾ ಪ್ರಮಾಣಂ ಪೃಥ್ವ್ಯಾಶ್ಚ ಸುಖಂ ಸ್ರಕ್ಷ್ಯಾಮಹೇ ಪ್ರಜಾಃ |**
**ತೇಽಪಿ ತೇನೈವ ಮಾರ್ಗೇಣ ಪ್ರಯಾತಾಃ ಸರ್ವತೋದಿಶಂ ||**
**ಅದ್ಯಾಪಿ ನ ನಿವರ್ತಂತೇ ಸಮುದ್ರೇಭ್ಯೋ ಇವಾಪಗಾಃ || ೧೫೪ ||**

**ತತಃ ಪ್ರಭೃತಿ ವೈ ಭ್ರಾತಾ ಭ್ರಾತುರನ್ವೇಷಣೇ ರತಃ |**
**ಪ್ರಾಯಾತೋ ನಶ್ಯತಿ ತಥಾ ತನ್ನ ಕಾರ್ಯಂ ವಿಜಾನತಾ || ೧೫೫ ||**

---

೧೫೩. ಮಹಾಶೂರರಾದ ಆ ಕುಮಾರರು ನಾರದನ ಆ ಮಾತುಗಳನ್ನು ಕೇಳಿ ಯುಕ್ತವೆಂದು ಭಾವಿಸಿ, ಮಹಾನುಭಾವರಾದ ನಾರದರು ಹೇಳುವುದು ಸಮಂಜಸ ವಾಗಿದೆಯೆಂದು ಪರಸ್ಪರವಾಗಿ ಮಂತ್ರಾಲೋಚನೆ ಮಾಡಿದರು. ಮತ್ತು ನಮ್ಮ ಹಿರಿಯವರಾದ ಸಹೋದರರ ಮಾರ್ಗವನ್ನೇ ಹೊಂದುವುದು ಉತ್ತಮ ಮಾರ್ಗವು. ಈ ವಿಷಯದಲ್ಲಿ ನಾವು ಸಂದೇಹಪಡಬಾರದೆಂದು ಹೇಳಿದರು.

೧೫೪. ನಾರದಮುನಿಯ ವಚನದಂತೆ ಭೂಮಂಡಲದ ಪ್ರಮಾಣವನ್ನರಿತು ತದನುಗುಣವಾಗಿ ಪ್ರಜೆಗಳನ್ನು ಸುಖವಾಗಿ ಸೃಷ್ಟಿಮಾಡೋಣವೆಂದು ಯೋಚಿಸಿ, ಅವರು ತಮ್ಮ ಸಹೋದರರು ಹೋದ ಮಾರ್ಗವನ್ನೇ ಹಿಡಿದು ಸರ್ವದಿಕ್ಕಿಗೂ ಹೊರಟರು. ಹೀಗೆ ಹೊರಟುಹೋದ ಆ ದಕ್ಷಕುಮಾರರು ಸಮುದ್ರವನ್ನು ಸೇರಿದ ಮಹಾನದಿಗಳಂತೆ ಇದುವರೆಗೂ ಹಿಂದಕ್ಕೆ ವಾಪಸು ಬರಲೇ ಇಲ್ಲ.

೧೫೫. ಆ ದಿವಸದಿಂದಲೂ ಸಹೋದರರ ಅನ್ವೇಷಣಕ್ಕಾಗಿ ಹೊರಟರೆ ಭ್ರಾತೃಗಳು ನಷ್ಟರಾಗುವರು. ಆದುದರಿಂದ ಬುದ್ಧಿವಂತರಾದ ಪುರುಷರು ಅನ್ವೇಷ ಣಕ್ಕೆ ಹೋಗಬಾರದೆಂಬ ಲೋಕಪ್ರವಾದವು ಸಂಭವಿಸಿತು.

ನಷ್ಟೇಷು ಶಬಲಾಶ್ವೇಷು ದಕ್ಷಃ ಕ್ರುದ್ಧೋಽಭವದ್ವಿಭುಃ ।
ನಾರದಂ ನಾಶಮೇಹೀತಿ ಗರ್ಭವಾಸಂ ವಸೇತಿ ಚ ॥ ೧೫೬ ॥

ತಥಾ ತೇಷ್ವಪಿ ನಷ್ಟೇಷು ಮಹಾತ್ಮಸು ಪುರಾ ಕಿಲ ।
ಷಷ್ಟಿಂ ಕನ್ಯಾಃಸೃಜದ್ದಕ್ಷೋ ವೈರಿಣ್ಯಾಮೇವ ವಿಶ್ರುತಾಃ ॥ ೧೫೭ ॥

ತಾಸ್ತದಾ ಪ್ರತಿಜಗ್ರಾಹ ಪತ್ನ್ಯರ್ಥೇ ಕಶ್ಯಪಃ ಪ್ರಭುಃ ।
ಧರ್ಮಃ ಸೋಮಸ್ತು ಭಗವಾಂಸ್ತಥೈವಾನ್ಯೇ ಮಹರ್ಷಯಃ ॥ ೧೫೮ ॥

ಇಮಾಂ ವಿಸೃಷ್ಟಿಂ ದಕ್ಷಸ್ಯ ಕೃತ್ಸ್ನಾಂ ಯೋ ವೇದ ತತ್ತ್ವತಃ ।
ಆಯುಷ್ಮಾನ್ ಕೀರ್ತಿಮಾನ್ ಧನ್ಯಃ ಪ್ರಜಾವಾಂಶ್ಚ ಭವತ್ಯುತ ॥ ೧೫೯ ॥

ಇತಿ ಶ್ರೀ ಮಹಾಪುರಾಣೇ ವಾಯುಪ್ರೋಕ್ತೇ " ಪ್ರಜಾಪತಿ
ವಂಶಾನುಕೀರ್ತನಂ " ನಾಮ ಚತುರ್ಥೋಽಧ್ಯಾಯಃ

---

೧೫೬. ಹೀಗೆ ಶಬಲಾಶ್ವರೆಲ್ಲರೂ ನಾಶಹೊಂದಲು, ಕುಪಿತನಾದ ದಕ್ಷ ಪ್ರಜಾಪತಿಯು ನಾರದನಿಗೆ ಶಾಪವನ್ನು ಕೊಟ್ಟನು. ಎಲೈ ನಾರದನೇ, ನೀನು ನನ್ನ ಮಕ್ಕಳನ್ನು ಸಂಹಾರಮಾಡಿಸಿದ್ದರಿಂದ ಮೃತನಾಗಿ ಗರ್ಭವಾಸದುಃಖವನ್ನು ಅನುಭವಿಸುವನಾಗೆಂದು ಶಾಪವನ್ನು ಕೊಟ್ಟನು

೧೫೭. ಎಲೈ ಮುನಿವರ್ಯರೇ, ಪೂರ್ವಕಾಲದಲ್ಲಿ ಮಹಾತ್ಮರೂ, ದಕ್ಷಪುತ್ರರೂ ಆದ ಶಬಲಾಶ್ವರು ಹೀಗೆ ನಾರದವಾಕ್ಯದಿಂದ ಮೃತಲಾಗಲು, ದಕ್ಷಪ್ರಜಾಪತಿಯು ವೈರಿಣೀದೇವಿಯಲ್ಲಿ ಅರವತ್ತು ವಿಶ್ರುತರಾದ ಕುಮಾರಿಯರನ್ನು ಪಡೆದನು.

೧೫೮. ಅನಂತರ ಮಹಾತ್ಮರಾದ ಕಶ್ಯಪರು ಪ್ರಜಾಸೃಷ್ಟಿಗಾಗಿ ಆ ಅರವತ್ತು ಹೆಣ್ಣುಮಕ್ಕಳನ್ನು ಮದುವೆಯಾದರು. ಈ ವಂಶದಲ್ಲಿ ಧರ್ಮಾತ್ಮನೂ, ಪೂಜ್ಯನೂ ಆದ ಸೋಮದೇವನೇ ಮೊದಲಾದವರೂ ಅದರಂತೆ ಅನ್ಯರಾದ ಮಹರ್ಷಿಗಳೂ ಕೂಡ ಜನಿಸಿದರು. ಇವರೆಲ್ಲರೂ ಕಶ್ಯಪರ ಪುತ್ರರೆಂದು ಪ್ರಖ್ಯಾತರಾದರು.

೧೫೯. ಯಾವ ಪುರುಷನು ಮಹಾತ್ಮನಾದ ದಕ್ಷಪ್ರಜಾಪತಿಯ ಸಂಪೂರ್ಣವಾದ ಸೃಷ್ಟಿಕ್ರಮವನ್ನ ಸಮಗ್ರವಾಗಿಯೂ, ಯಥಾರ್ಥವಾಗಿಯೂ ತಿಳಿಯುವನೋ, ಅವನು ಆಯುಷ್ಯವನ್ನೂ, ಕೀರ್ತಿಯನ್ನೂ, ಧನಧಾನ್ಯಸಮೃದ್ಧಿಯನ್ನೂ, ಪುತ್ರಸಂತಾನವನ್ನೂ, ಸಕಲೇಷ್ಟಾರ್ಥಗಳನ್ನೂ ಪಡೆಯುವನೆಂದು ಸೂತಮುನಿಯು ಮಹರ್ಷಿಗಳಿಗೆ ಹೇಳಿದನು.

ಹೀಗೆ ವಾಯುದೇವನಿಂದ ನಿರೂಪಿತವಾದ ಮಹಾಪುರಾಣದಲ್ಲಿ ದಕ್ಷ(ಪ್ರಜಾಪತಿಯ)
ವಂಶವರ್ಣನವೆಂಬ ನಾಲ್ಕನೆಯ ಅಧ್ಯಾಯವು ಸಮಾಪ್ತಮಾದುದು.

## ನಾಲ್ಕನೆಯ ಅಧ್ಯಾಯದ ಸಾರಾಂಶವು

ಈ ಅಧ್ಯಾಯದಲ್ಲಿ ಏಳನೆಯ ವೈವಸ್ವತಮನುವಿನ ಸೃಷ್ಟಿಕ್ರಮವು ವಿಸ್ತಾರವಾಗಿ ನಿರೂಪಿತವಾಗಿದೆ. ಬ್ರಹ್ಮದೇವನು ಪ್ರಜೆಗಳನ್ನು ಸೃಷ್ಟಿಮಾಡಲಿಚ್ಛಿಸಿ ಯಾಗವನ್ನು ಮಾಡಿದನು. ಆಗ ಭೃಗು, ಅಂಗಿರಸ, ಮರೀಚಿ, ಪುಲಸ್ತ್ಯ, ಪುಲಹ, ಕ್ರತು, ಅತ್ರಿ, ವಸಿಷ್ಠ ಈ ಅಷ್ಟಮಹರ್ಷಿಗಳೂ, ಋಗ್ವೇದ, ಯಜುರ್ವೇದ, ಸಾಮವೇದ, ಅಥರ್ವಣ ವೇದಗಳೆಂಬ ನಾಲ್ಕುವೇದಗಳೂ ಉತ್ಪನ್ನಗಳಾದವು. ಅನಂತರ ಓಂಕಾರ ವಷಟ್ಕಾರಗಳೂ, ಸತ್ವರಜಸ್ತಮೋಗುಣಗಳೂ, ಸಪ್ತರ್ಷಿಗಳೂ, ಭೃಗ್ವಾದಿಗಳೂ ಉತ್ಪನ್ನರಾದರು. ಅನಂತರ ಶುಕ್ರ, ಚ್ಯವನ, ದಕ್ಷ, ಪ್ರಜಾಪತಿಗಳು ಆವಿರ್ಭವಿಸಿದರು. ತರುವಾಯ ಜರಾಯುಜ, ಅಂಡಜ, ಸ್ವೇದಜ, ಉದ್ಭಿಜ್ಜಗಳೆಂಬ ನಾಲ್ಕುವಿಧ ಸೃಷ್ಟಿಕ್ರಮವು ಆರಂಭವಾಯಿತು.

ದಕ್ಷೇಶ್ವರನು ವೀರಣಪುತ್ರಿಯಾದ ಅಸಿಕ್ನಿಯನ್ನು ಮದುವೆಯಾಗಿ ಸಾವಿರಾರು ಮಕ್ಕಳನ್ನು ಪಡೆದನು. ನಾರದ ಮುನಿಯು ಆ ಮಕ್ಕಳನ್ನು ಸಂಹಾರಮಾಡಿದನೆಂದು ತಿಳಿದು, ದಕ್ಷನು ಶಾಪವನ್ನು ಕೊಟ್ಟನು. ಇದರಿಂದ ನಾರದನು ಪುನಃ ಅವತರಿಸಿದನು. ಕಶ್ಯಪನು ದಕ್ಷಪ್ರಜೇಶನ ಅರವತ್ತು ಕುಮಾರಿಯರನ್ನು ಮದುವೆಯಾಗಿ ವಿವಿಧ ಸೃಷ್ಟಿಯನ್ನು ಮಾಡಿದನೆಂಬುದೇ ಮೊದಲಾದ ವಿಷಯಗಳು ಈ ಅಧ್ಯಾಯದಲ್ಲಿ ವರ್ಣಿತವಾಗಿದೆ.



—: ಹರಿಃ ಓಂ :—

—ಶ್ರೀ ವೇದವ್ಯಾಸಾಯ ನಮಃ—

# ಶ್ರೀಮದ್ವಾಯುಪುರಾಣಂ

## ಪಂಚಮೋಽಧ್ಯಾಯಃ

|| ಋಷಯ ಊಚುಃ ||

**ದೇವಾನಾಂ ದಾನವಾನಾಂ ಚ ದೈತ್ಯಾನಾಂ ಚೈವ ಸರ್ವಶಃ |**
**ಉತ್ಪತ್ತಿಂ ವಿಸ್ತರೇಣೇಹ ಬ್ರೂಹಿ ವೈವಸ್ವತೇಽಂತರೇ || ೧ ||**

|| ಸೂತ ಉವಾಚ ||

**ಧರ್ಮಸ್ಯ ತಾವದ್ವಕ್ಷ್ಯಾಮಿ ನಿಸರ್ಗಂ ತಂ ನಿಬೋಧತ |**
**ಅರುಂಧತೀ ವಸುರ್ಯಾಮಿಾ ಲಂಬಾ ಭಾನುರ್ಮರುತ್ವತೀ || ೨ ||**

**ಸಂಕಲ್ಪಾ ಚ ಮುಹೂರ್ತಾ ಚ ಸಾಧ್ಯಾ ವಿಶ್ವಾ ತಥೈವ ಚ |**
**ಧರ್ಮಪತ್ನ್ಯೋ ದಶ ತ್ವೇತಾ ದಕ್ಷಃ ಪ್ರಾಚೇತಸೋ ದದೌ || ೩ ||**

---

## ಐದನೆಯ ಅಧ್ಯಾಯವು

೧. ಋಷಿಗಳು ಹೇಳಿದರು :—ಎಲೈ ಸೂತಮುನಿಯೇ, ಈಗ ದೇವತೆಗಳು, ದಾನವರು, ದೈತ್ಯರು, ಇವರು ವೈವಸ್ವತಮನ್ವಂತರದಲ್ಲಿ ಹೇಗೆ ಉತ್ಪನ್ನನಾದರು. ಅವರ ಉತ್ಪತ್ತಿಯನ್ನು ವಿಸ್ತಾರವಾಗಿಯೂ, ಕ್ರಮವಾಗಿಯೂ ನಿರೂಪಿಸು ಎಂದು ಮುನಿಗಳು ಸೂತಪುರಾಣಿಕನನ್ನು ಬೇಡಿದರು

೨-೩ ಸೂತಪುರಾಣಿಕನು ಹೇಳಿದನು —ಓ ಮುನಿವರ್ಯರೇ, ಈಗ ಧರ್ಮದೇವನ ಸೃಷ್ಟಿಕ್ರಮವನ್ನು ವಿಸ್ತಾರವಾಗಿ ನಿರೂಪಿಸುವೆನು ಕೇಳಿರಿ. ಪ್ರಚೇತಸನ ಪುತ್ರನಾದ ದಕ್ಷೇಶ್ವರನಿಗೆ ಅರುಂಧತೀ, ವಸು, ಯಾಮಿಾ, ಲಂಬಾ, ಭಾನು, ಮರುತ್ವತೀ, ಸಂಕಲ್ಪಾ, ಮುಹೂರ್ತಾ, ಸಾಧ್ಯಾ, ವಿಶ್ವಾ ಎಂಬ ಹತ್ತು ಹೆಣ್ಣುಮಕ್ಕಳಿದ್ದರು. ಆ ದಕ್ಷಪ್ರಜಾಪತಿಯು ಆ ಕುಮಾರಿಯರನ್ನು ಧರ್ಮದೇವನಿಗೆ ಕನ್ಯಾದಾನಮಾಡಿದನು.

ಸಾಧ್ಯಾ ಪುತ್ರಾಂಸ್ತು ಧರ್ಮಸ್ಯ ಸಾಧ್ಯಾನ್ ದ್ವಾದಶ ಜಜ್ಞಿರೇ ।
ಸಾಧ್ಯಾ ನಾಮ ಮಹಾಭಾಗಾಶ್ಛಂದಜಾ ಯಜ್ಞಭಾಗಿನಃ ॥
ದೇವೇಭ್ಯಸ್ತಾನ್ ಪರಾನ್ ದೇವಾನ್ ದೇವಜ್ಞಾಃ ಪರಿಚಕ್ಷಿರೇ ॥ ೪ ॥

ಬ್ರಹ್ಮಣೋ ವೈ ಮುಖಾತ್ ಸೃಷ್ಟಾ ಜಯಾ ದೇವಾಃ ಪ್ರಜೇಪ್ಸಯಾ ।
ಸರ್ವೇ ಮಂತ್ರಶರೀರಾಸ್ತೇ ಸ್ಮೃತಾ ಮನ್ವಂತರೇಷ್ವಿಹ ॥ ೫ ॥

ದರ್ಶಶ್ಚ ಪೌರ್ಣಮಾಸಶ್ಚ ಬೃಹದ್ಯಚ್ಚ ರಥಂತರಂ ।
ಚಿತ್ತಿಶ್ಚೈವ ವಿಚಿತ್ತಿಶ್ಚ ಆಕೂತಿಃ ಕೂತಿರೇವ ಚ ॥ ೬ ॥

ವಿಜ್ಞಾತಾ ಚೈವ ವಿಜ್ಞಾತೋ ಮನೋ ಯಜ್ಞಶ್ಚ ತೇ ಸ್ಮೃತಾಃ ।
ನಾಮಾನ್ಯೇತಾನಿ ತೇಷಾಂ ವೈ ಜಯಾನಾಂ ಪ್ರಥಿತಾನಿ ಚ ॥ ೭ ॥

---

೪. ಅವರಲ್ಲಿ ಸಾಧ್ಯಾದೇವಿಯು ಧರ್ಮದೇವನಿಂದ ಸಾಧ್ಯಾನಾಮಕರಾದ ಹನ್ನೆರಡುಜನ ಮಕ್ಕಳನ್ನು ಪಡೆದಳು ಮಹಾನುಭಾವರಾದ ಅವರು ಸಾಧ್ಯರೆಂದೂ, ಸ್ವೇಚ್ಛಾಜಾತರೆಂದೂ, ಯಜ್ಞಭಾಗಿಗಳೆಂದೂ ಲೋಕವಿಖ್ಯಾತರಾದರು. ಮಹಾತ್ಮರು ಆ ಸಾಧ್ಯರನ್ನು ದೇವೋತ್ತಮರೆಂದೂ, ಮಹಾನುಭಾವರೆಂದೂ ಹೇಳುತ್ತಾರೆ.

೫. ವೈವಸ್ವತಮನ್ವಂತರದಲ್ಲಿ ಬ್ರಹ್ಮದೇವನು ಸೃಷ್ಟಿಯನ್ನು ಮಾಡಬೇಕೆಂದು ಯೋಚಿಸಿ, ತನ್ನ ಮುಖದಿಂದ ಜಯನಾಮಕ ದೇವತೆಗಳನ್ನು ಸೃಷ್ಟಿಸಿದನು. ಅವರೆಲ್ಲರೂ ಕೇವಲ ಮಂತ್ರಶರೀರಿಗಳಾಗಿದ್ದರು.

೬-೭. ಜಯನಾಮಕರಾದ ಆ ದೇವತೆಗಳಿಗೆ ದರ್ಶ, ಪೌರ್ಣಮಾಸ, ಬೃಹದ್ಯ, ರಥಂತರ, ಚಿತ್ತಿ, ವಿಚಿತ್ತಿ, ಆಕೂತಿ, ಕೂತಿ, ವಿಜ್ಞಾತಾ, ವಿಜ್ಞಾತ, ಮನ ಮತ್ತು ಯಜ್ಞವೆಂಬ ನಾಮಗಳು ಲೋಕಪ್ರಖ್ಯಾತವಾಗಿದ್ದುವು.

ಬ್ರಹ್ಮಶಾಪೇನ ತೇ ಜಾತಾಃ ಪುನಃ ಸ್ವಾಯಂಭುವೇ ಜಿತಾಃ ।
ಸ್ವಾರೋಚಿಷೇ ವೈ ತುಷಿತಾಃ ಸತ್ಯಾಶ್ಚೈವೋತ್ತಮೇ ಪುನಃ ॥ ೮ ॥

ತಾಮಸೇ ಹರಯೋ ನಾಮ ವೈಕುಂಠಾ ರೈವತಾಂತರೇ ।
ಸಾಧ್ಯಾಶ್ಚ ಚಾಕ್ಷುಷೇ ನಾಮ್ನಾ ಛಂದಜಾ ಜಜ್ಞಿರೇ ಸುರಾಃ ॥ ೯ ॥

ಧರ್ಮಪುತ್ರಾ ಮಹಾಭಾಗಾಃ ಸಾಧ್ಯಾ ಯೇ ದ್ವಾದಶಾಮರಾಃ ।
ಪೂರ್ವಂ ಸ್ಮ ಅನುಸೂಯಂತೇ ಚಾಕ್ಷುಷಸ್ಯಾಂತರೇ ಮನೋಃ ॥ ೧೦ ॥

ಸ್ವಾರೋಚಿಷೇಽಂತರೇಽತೀತಾ ದೇವಾ ಯೇ ವೈ ಮಹೌಜಸಃ ।
ತುಷಿತಾ ನಾಮ ತೇಽನ್ಯೋಽನ್ಯಮೂಚುರ್ವೈ ಚಾಕ್ಷುಷೇಽಂತರೇ ॥ ೧೧ ॥

---

೮–೯ ಆ ಮಹಾನುಭಾವರಾದ ಜಯನಾಮಕ ದೇವತೆಗಳು ಸ್ವಾಯಂಭುವ ಮನ್ವಂತರದಲ್ಲಿ ಪುನಃ ಜನಿಸಿ, ಜಿತರೆಂದು ಪ್ರಖ್ಯಾತರಾಗುವರು. ಸ್ವಾರೋಚಿಷ ಮನ್ವಂತರದಲ್ಲಿ ತುಷಿತರೆಂದೂ, ಉತ್ತಮ ಮನ್ವಂತರದಲ್ಲಿ ಸತ್ಯರೆಂದೂ, ತಾಮಸ ಮನ್ವಂತರದಲ್ಲಿ ಹರಿಗಳೆಂದೂ, ರೈವತ ಮನ್ವಂತರದಲ್ಲಿ ವೈಕುಂಠರೆಂದೂ, ಚಾಕ್ಷುಷ ಮನ್ವಂತರದಲ್ಲಿ ಸಾಧ್ಯರೆಂದೂ, ಮತ್ತು ಛಂದಜರಾದ ದೇವತೆಗಳೆಂದೂ ಪ್ರಖ್ಯಾತರಾಗಿರುವರು.

೧೦. ವೈವಸ್ವತ ಮನ್ವಂತರದಲ್ಲಿ ಮಹಾನುಭಾವರೂ, ದ್ವಾದಶಸಂಖ್ಯಾಕರೂ, ಧರ್ಮಪುತ್ರರೂ ಆದ ಆ ದೇವತೆಗಳು (ಸಾಧ್ಯರೆಂದು) ಸಾಧ್ಯದೇವತೆಗಳೆಂದು ಪ್ರಸಿದ್ಧರಾಗಿರುವರು. ಅವರು ಚಾಕ್ಷುಷಮನ್ವಂತರದಲ್ಲಿ ಮೊದಲು ಸೂರ್ಯನಂತೆ ಅತಿ ಪ್ರಕಾಶಮಾನರಾಗಿರುವರು

೧೧. ಸ್ವಾರೋಚಿಷ ಮನ್ವಂತರದಲ್ಲಿ ಮಹಾ ತೇಜಸ್ವಿಗಳಾದ ಯಾವ ದೇವತೆಗಳು ಅತೀತರಾಗಿರುವರೋ, ಆ ದೇವತೆಗಳೇ ಚಾಕ್ಷುಷ ಮನ್ವಂತರದಲ್ಲಿ ತುಷಿತ ನಾಮದಿಂದ ಪ್ರಖ್ಯಾತರಾಗಿ ಪರಸ್ಪರವಾಗಿ ಮಾತನಾಡುವರು. ಆ ದೇವತೆಗಳೇ ನಾಮಾಂತರಗಳಿಂದ ಪ್ರಖ್ಯಾತರಾಗಿರುವರು

**ಕಿಂಚಿಚ್ಛಿಷ್ಟೇ ತದಾ ತಸ್ಮಿನ್ ದೇವಾ ವೈ ತುಷಿತಾಬ್ರುವನ್ ।**
**ಇತರೇತರಂ ಮಹಾಭಾಗಾನ್ ವಯಂ ಸಾಧ್ಯಾನ್ ಪ್ರವಿಶ್ಯ ವೈ ॥**
**ಮನ್ವಂತರೇ ಭವಿಷ್ಯಾಮಸ್ತನ್ನಃ ಶ್ರೇಯೋ ಭವಿಷ್ಯತಿ ॥ ೧೨ ॥**

**ಏವಮುಕ್ತ್ವಾ ತು ತೇ ಸರ್ವೇ ಚಾಕ್ಷುಷಸ್ಯಾಂತರೇ ಮನೋಃ ।**
**ತಸ್ಮಾದ್ದ್ವಾದಶಸಂಭೂತಾನ್ ಧರ್ಮಾತ್ ಸ್ವಾಯಂಭುವಾತ್ ಪುನಃ ॥ ೧೩ ॥**

**ನರನಾರಾಯಣೌ ತತ್ರ ಜಜ್ಞಾತೇ ಪುನರೇವ ಹಿ ।**
**ವಿಪಶ್ಚಿದಿಂದ್ರೋ ಯಶ್ಚಾಸೀತ್ತಥಾ ಸತ್ಯೋ ಹರಿಶ್ಚ ತೌ ॥**
**ಸ್ವಾರೋಚಿಷೇಂತರೇ ಪೂರ್ವಮಾಸ್ತಾಂ ತೌ ತುಷಿತೌ ಸುರೌ ॥ ೧೪ ॥**

**ತುಷಿತಾನಾಂ ತು ಸಾಧ್ಯತ್ವೇ ನಾಮಾನ್ಯೇತಾನಿ ವಕ್ಷ್ಯತೇ ।**
**ಮನೋನುಮಂತಾ ಪ್ರಾಣಶ್ಚ ನರೋ ಯಾನಶ್ಚ ವೀರ್ಯವಾನ್ ॥ ೧೫ ॥**

---

೧೨. ಆ ಚಾಕ್ಷುಷಮನ್ವಂತರವು ಸ್ವಲ್ಪಾವಶಿಷ್ಟವಾಗಲು, ತುಷಿತನಾಮಕರಾದ ದೇವತೆಗಳು ಇಂತೆಂದರು :— ನಾವು ಪರಸ್ಪರ ಮಹಾನುಭಾವರಾದ ಸಾಧ್ಯರನ್ನು ಪ್ರವೇಶಿಸಿ, ಮನ್ವಂತರದಲ್ಲಿ ಉತ್ಪನ್ನರಾಗೋಣ ಅದು ನಮಗೆ ಬಹಳ ಶ್ರೇಯಸ್ಕರ ವಾಗುವುದೆಂದು ಯೋಚಿಸಿದರು

೧೩. ಆ ತುಷಿತನಾಮಕರಾದ ದೇವತೆಗಳೆಲ್ಲರೂ ಹೀಗೆ ಚಾಕ್ಷುಷ ಮನ್ವಂತರ ದಲ್ಲಿ ಆಲೋಚಿಸಿ, ಪುನಃ ಸ್ವಾಯಂಭುವ ಮನುವಿನ ಧರ್ಮದೇವನ ದ್ವಾದಶ ಕುಮಾರರಾಗಿ ಅವತರಿಸಿದರು.

೧೪ ಆಗಲೇ ಆ ವಂಶದಲ್ಲಿ ನರನಾರಾಯಣರಿಬ್ಬರೂ ಅವತರಿಸಿದರು. ಅವ ರಿಬ್ಬರೂ ಪೂರ್ವದಲ್ಲಿ ಒಬ್ಬನು ಜ್ಞಾನಿಯಾದ ಇಂದ್ರನಾಗಿದ್ದನು. ಮತ್ತೊಬ್ಬನು ಸತ್ಯನಾಮಕನಾದ ಶ್ರೀಹರಿಯಾಗಿದ್ದನು. ದೇವೇಂದ್ರ, ಶ್ರೀವಿಷ್ಣು ಇವರಿಬ್ಬರೂ ನರನಾರಾಯಣರಾಗಿ ಅವತರಿಸಿದರು ಇವರಿಬ್ಬರೂ ಪೂರ್ವದ ಸ್ವಾರೋಚಿಷ ಮನ್ವಂತರದಲ್ಲಿ ತುಷಿತನಾಮಕ ದೇವತೆಗಳಾಗಿದ್ದರು.

೧೫. ತುಷಿತನಾಮಕರಾದ ದೇವತೆಗಳು ಸಾಧ್ಯನಾಮದಿಂದ ಅವತರಿಸಿದಾಗ ಅವರಿಗೆ ಯಾವ ಯಾವ ನಾಮಗಳು ಸಂಭವಿಸಿವೆಯೋ ಅವಗಳನ್ನು ಹೇಳುವೆನು ಕೇಳಿರೆಂದನು.

ಚಿತ್ತಿರ್ಹಯೋ ನಯಶ್ಚೈವ ಹಂಸೋ ನಾರಾಯಣಸ್ತಥಾ ।
ಪ್ರಭವೋಽಥ ವಿಭುಶ್ಚೈವ ಸಾಧ್ಯಾ ದ್ವಾದಶ ಜಜ್ಞಿರೇ ॥ ೧೬ ॥

ಸ್ವಾಯಂಭವೇಂತರೇ ಪೂರ್ವಂ ತತಃ ಸ್ವಾರೋಚಿಷೇ ಪುನಃ ।
ನಾಮಾನ್ಯಾರ್ಸ ಪುನಸ್ತಾನಿ ತುಷಿತಾನಾಂ ನಿಬೋಧತ ॥ ೧೭ ॥

ಪ್ರಾಣೋಽಪಾನಸ್ತಥೋದಾನಃ ಸಮಾನೋ ವ್ಯಾನ ಏವ ಚ ।
ಚಕ್ಷುಃ ಶ್ರೋತ್ರಂ ತಥಾ ಪ್ರಾಣಃ ಸ್ಪರ್ಶೋ ಬುದ್ಧಿರ್ಮನಸ್ತಥಾ ॥ ೧೮ ॥

ಪ್ರಾಣಾಪಾನಾವುದಾನಾಶ್ಚ ಸಮಾನೋ ವ್ಯಾನ ಏವ ಚ ।
ನಾಮಾನ್ಯೇತಾನಿ ಪೂರ್ವಂತು ತುಷಿತಾನಾಂ ಸ್ಮೃತಾನಿ ಹ ॥ ೧೯ ॥

---

೧೬. ಮನಸ್ಸು, ಅನುಮಂತ, ಪ್ರಾಣ, ನರ, ಯಾನ, ಶೂರನಾದ ಚಿತ್ತಿ, ಹಯ, ನಯ, ಹಂಸ, ನಾರಾಯಣ, ಪ್ರಭವ, ವಿಭು ಎಂಬುದಾಗಿ ಸಾಧ್ಯರು ದ್ವಾದಶನಾಮುಗಳಿಂದ ಅವತರಿಸಿದರು

೧೭. ಸ್ವಾಯಂಭುವ ಮನ್ವಂತರದಲ್ಲಿ ತುಷಿತರೆಂದು ಪ್ರಸಿದ್ಧರಾದ ದೇವತೆಗಳಿಗೆ ಸ್ವಾರೋಚಿಷ ಮನ್ವಂತರದಲ್ಲಿ ನಾಮಾಂತರಗಳು ಸಂಭವಿಸಿರುತ್ತವೆ. ಅವುಗಳನ್ನು ನಿರೂಪಿರುವೆನು ಕೇಳಿರೆಂದನು.

೧೮. ಪೂರ್ವದ ಮನ್ವಂತರದಲ್ಲಿ ತುಷಿತನಾಮಕದೇವತೆಗಳಿಗೆ ಪ್ರಾಣ, ಅಪಾನ, ಉದಾನ, ಸಮಾನ, ವ್ಯಾನ, ಚಕ್ಷಸ್ಸು, ಶ್ರೋತ್ರ, ಪ್ರಾಣ, ಸ್ಪರ್ಶ, ಬುದ್ಧಿ, ಮನಸ್ಸು ಇವೇ ಮೊದಲಾದ ನಾಮುಗಳು ಸುಪ್ರಸಿದ್ಧಗಳಾಗಿವೆ.

೧೯. ಪ್ರಾಣಾಪಾನ, ಉದಾನ, ಸಮಾನ, ವ್ಯಾನ ಇವು ಪೂರ್ವದ ತುಷಿತ ನಾಮಕ ದೇವತೆಗಳ ನಾಮಾಂತಗರಳಾಗಿದ್ದುವು. ಅವರು ಈ ನಾಮುಗಳಿಂದ ಕರೆಯಲ್ಪಡುತ್ತಿದ್ದರು.

ವಸೋಸ್ತು ವಸವಃ ಪುತ್ರಾಃ ಸಾಧ್ಯಾನಾಮನುಜಾಃ ಸ್ಮೃತಾಃ ।
ಧರೋ ಧ್ರುವಶ್ಚ ಸೋಮಶ್ಚ ಆಪಶ್ಚೈವಾನಲೋಽನಿಲಃ ॥
ಪ್ರತ್ಯೂಷಶ್ಚ ಪ್ರಭಾಸಶ್ಚ ವಸವೋಽಷ್ಟೌ ಪ್ರಕೀರ್ತಿತಾಃ ॥ ೨೦ ॥

ಧರಸ್ಯ ಪುತ್ರೋ ದ್ರವಿಣೋ ಹುತಹವ್ಯವಹಸ್ತಥಾ ।
ಧ್ರುವಪುತ್ರೋ ಭವೋ ನಾಮ್ನಾ ಕಾಲೋ ಲೋಕಪ್ರಕಾಲನಃ ॥ ೨೧ ॥

ಸೋಮಸ್ಯ ಭಗವಾನ್ ವರ್ಚಾ ಬುಧಶ್ಚ ಗ್ರಹಬೋಧನಃ ।
ರೋಹಿಣ್ಯಾಂ ತೌ ಸಮುತ್ಪನ್ನಾ ತ್ರಿಷು ಲೋಕೇಷು ವಿಶ್ರುತಾ ॥ ೨೨ ॥

ಧಾರೋರ್ಮಿಕಲಿಲಾಶ್ಚೈವ ತ್ರಯಶ್ಚಂದ್ರಮಸಃ ಸುತಾಃ ।
ಆಪಸ್ಯ ಪುತ್ರೋ ವೈತಂಡ್ಯಃ ಶಮಃ ಶಾಂತಸ್ತಥೈವ ಚ ॥ ೨೩ ॥

---

೨೦. ವಸುವೆಂಬುವನಿಗೆ ವಸುನಾಮಕ ಪುತ್ರರಿದ್ದರು. ಅವರು ಸಾಧ್ಯರಿಗೆ ಕಿರಿಯರಾದ ಅನುಜರಾಗಿದ್ದರು. ಧರ, ಧ್ರುವ, ಸೋಮ, ಆಪ, ಅನಲ, ಅನಿಲ, ಪ್ರತ್ಯೂಷ, ಪ್ರಭಾಸ ಇವರು ಎಂಟುಜನರೂ ಅಷ್ಟವಸುಗಳಾಗಿರುವರು.

೨೧. ಆ ಅಷ್ಟವಸುಗಳಲ್ಲಿ ಧರನಾಮಕ ವಸುವಿಗೆ ದ್ರವಿಣ, ಹುತ, ಹವ್ಯವಹ ರೆಂಬ ಮಕ್ಕಳು ಜನಿಸಿದರು. ಭವ ಮತ್ತು ಲೋಕಕಂಟಕನಾದ ಕಾಲನೆಂಬ ಕುಮಾರರೂ ಜನಿಸಿದರು.

೨೨. ಸೋಮನಾಮಕ ವಸುವಿಗೆ ರೋಹಿಣೀದೇವಿಯಲ್ಲಿ ಮಹಾನುಭಾವರೂ, ಮೂರುಲೋಕಗಳಲ್ಲಿಯೂ ಪ್ರಖ್ಯಾತರೂ, ವರ್ಚಸಗ್ರಹಬೋಧಕನಾದ ಬುಧರೆಂದು ಪ್ರಖ್ಯಾತರಾದ ಇಬ್ಬರು ಕುಮಾರರೂ ಸಂಭವಿಸಿದರು.

೨೩. ಪೂಜ್ಯನಾದ ಚಂದ್ರನಿಗೆ ಧಾರ, ಊರ್ಮಿ, ಕಲಾಲರೆಂಬ ಮೂವರು ಪುತ್ರರು ಪ್ರಸಿದ್ಧರಾಗಿದ್ದರು. ಆಪನಿಗೆ ವೈತಂಡ್ಯ, ಶಮ, ಶಾಂತನೇ ಮೊದಲಾದ ಪ್ರಸಿದ್ಧರಾದ ಮಕ್ಕಳು ಉತ್ಪನ್ನರಾದರು.

ಸ್ಕಂದಃ ಸನತ್ಕುಮಾರಶ್ಚ ಜಜ್ಞೇ ಪಾದೇನ ತೇಜಸಃ ।
ಅಗ್ನಿಪುತ್ರಃ ಕುಮಾರಸ್ತು ಶರಸ್ತಂಬೇ ವ್ಯಜಾಯತ ॥
ತಸ್ಯ ಶಾಖೋ ವಿಶಾಖಶ್ಚ ನೈಗಮೇಯಶ್ಚ ಪೃಷ್ಠಜಾಃ ॥ ೨೪ ॥

ಅನಿಲಸ್ಯ ಶಿವಾ ಭಾರ್ಯಾ ತಸ್ಯಾಃ ಪುತ್ರೋ ಮನೋಜವಃ ।
ಅವಿಜ್ಞಾತಗತಿಶ್ಚೈವ ದ್ವೌ ಪುತ್ರಾವನಿಲಸ್ಯ ಚ ॥ ೨೫ ॥

ಪ್ರತ್ಯೂಷಸ್ಯ ವಿದುಃ ಪುತ್ರ ಋಷಿರ್ನಾಮ ತು ದೇವಲಃ ।
ದ್ವೌ ಪುತ್ರೌ ದೇವಲಸ್ಯಾಪಿ ಕ್ಷಮಾವಂತೌ ಮನೀಷಿಣೌ ॥ ೨೬ ॥

ಬೃಹಸ್ಪತೇಸ್ತು ಭಗಿನೀ ವರಸ್ತ್ರೀ ಬ್ರಹ್ಮಚಾರಿಣೀ ।
ಯೋಗಸಿದ್ಧಾ ಜಗತ್ಕೃತ್ಸ್ನಮಸಕ್ತಾ ವಿಚರುತ್ಯುತ ॥ ೨೭ ॥

---

೨೪. ವರುಣದೇವನಿಗೆ ಸ್ಕಂದ, ಸನತ್ಕುಮಾರರೆಂಬ ಇಬ್ಬರು ಕುಮಾರರು ತಂದೆಯ ತೇಜಸ್ಸಿನಲ್ಲಿ ನಾಲ್ಕನೆಯ ಒಂದುಭಾಗದ ತೇಜಸ್ಸಿನಿಂದ ಅವತರಿಸಿದರು. ಅಗ್ನಿದೇವನಿಗೆ ಶರವಣದಲ್ಲಿ ಕುಮಾರಸ್ವಾಮಿಯೆಂಬ ಕುಮಾರನು ಉದ್ಭವಿಸಿದನು. ಶಾಖ, ವಿಶಾಖ, ನೈಗಮೇಯರೆಂಬ ಮೂವರು ಸುತರು ಉದ್ಭವಿಸಿದರು.

೨೫. ವಾಯುದೇವನಿಗೆ ಶಿವೆಯೆಂಬ ಪತ್ನಿಯಲ್ಲಿ ಮನ್ಮಥನೆಂಬ ಕುಮಾರನು ಸಂಭವಿಸಿದನು. ಅಂಥ ವಾಯುದೇವನಿಗೆ ಅವಿಜ್ಞಾತನೆಂಬ ಬೇರೊಬ್ಬ ಸುತನೂ ಹುಟ್ಟಿದನು. ಹೀಗೆ ವಾಯುದೇವನಿಗೆ ಇಬ್ಬರು ಕುಮಾರರು ಸಂಭೂತರಾಗಿರುವರು.

೨೬. ಪ್ರತ್ಯೂಷನಿಗೆ ದೇವಲನಾಮಕಮಹರ್ಷಿಯು ಪುತ್ರನಾಗಿ ಅವತರಿಸಿದನು. ಆ ದೇವಲನಿಗೆ ಶಾಂತಿವಂತರೂ, ಜ್ಞಾನಿಗಳೂ ಆದ ಇಬ್ಬರು ಮಕ್ಕಳಿರುವರು. ಅವರು ಲೋಕವಿಖ್ಯಾತರಾಗಿರುವರು.

೨೭. ಬೃಹಸ್ಪತ್ಯಾಚಾರ್ಯರ ಸಹೋದರಿಯೂ, ಬ್ರಹ್ಮಚಾರಿಣಿಯೂ, ಯೋಗಸಿದ್ಧಿಯುಳ್ಳವಳೂ ಆದ ವರಸ್ತ್ರೀ ಎಂಬುವಳು ಸಮಸ್ತ ಜಗತ್ತನ್ನು ನೋಡಲಿಚ್ಛೆಯುಳ್ಳವಳಾದರೂಕೂಡ ಸರ್ವತ್ರ ಸಂಚರಿಸಲು ಅಶಕ್ತಳಾಗಿದ್ದಳು.

ಪ್ರಭಾಸಸ್ಯ ತು ಯಾ ಭಾರ್ಯಾ ವಸೂನಾಮಷ್ಟಮಸ್ಯ ಹ ।
ವಿಶ್ವಕರ್ಮಾ ಸುತಸ್ತಸ್ಯಾ ಜಾತಃ ಶಿಲ್ಪಿಪ್ರಜಾಪತಿಃ ॥ ೨೮ ॥

ಸ ಕರ್ತಾ ಸರ್ವಶಿಲ್ಪಾನಾಂ ತ್ರಿದಶಾನಾಂ ಚ ವರ್ಧ್ದಕಿಃ ।
ಭೂಷಣಾನಾಂ ಚ ಸರ್ವೇಷಾಂ ಕರ್ತಾ ಕಾರಯಿತಾ ಚ ಸಃ ॥ ೨೯ ॥

ಸರ್ವೇಷಾಂ ಚ ವಿಮಾನಾನಿ ದೈವತಾನಾಂ ಕರೋತಿ ಸಃ ।
ಮಾನುಷಾಶ್ಚೋಪಜೀವಂತಿ ಯಸ್ಯ ಶಿಲ್ಪಾನಿ ಶಿಲ್ಪಿನಃ ॥ ೩೦ ॥

ವಿಶ್ವೇದೇವಾಸ್ತು ವಿಶ್ವಾಯಾ ಜಜ್ಞಿರೇ ದಶ ವಿಶ್ರುತಾಃ ।
ಕ್ರತುರ್ದಕ್ಷಃ ಶ್ರವಃ ಸತ್ಯಃ ಕಾಲಃ ಕಾಮೋ ಧುನಿಸ್ತಥಾ ॥ ೩೧ ॥

ಕುರುರ್ವಾ ಪ್ರಭವಾಂಶ್ಚೈವ ರೋಚಮಾನಶ್ಚ ತೇ ದಶ ।
ಧರ್ಮಪುತ್ರಾಃ ಸ್ಮೃತಾ ಹ್ಯೇತೇ ವಿಶ್ವಾಯಾಂ ಜಜ್ಞಿರೇ ಶುಭಾಃ ॥ ೩೨ ॥

---

೨೮. ವಸುಗಳಲ್ಲಿ ಎಂಟನೆಯವನಾದ ಪ್ರಭಾಸನಾಮಕವಸುವಿಗೆ ಪತಿಭಕ್ತಿಪರಾಯಣೆಯಾದ ಪತ್ನಿಯು ಇದ್ದಳು. ಅವಳಲ್ಲಿ ಆ ಪ್ರಭಾಸನಿಗೆ ಶಿಲ್ಪಕಲಾವಿದ್ಯಾಪಾರಂಗತನೂ, ಅತಿಚತುರನೂ ಆದ ವಿಶ್ವಕರ್ಮನಾಮಕನಾದ ಸುಕುಮಾರನು ಜನಿಸಿದನು.

೨೯. ಸರ್ವಶಿಲ್ಪಕಲಾಪ್ರವೀಣನಾದ ಆ ವಿಶ್ವಕರ್ಮನು ಸರ್ವಶಿಲ್ಪಕಾರ್ಯಗಳನ್ನು ಮಾಡುವನೂ, ದೇವಬಡಗಿಯೂ ಆಗಿರುವನು. ಮತ್ತು ಅವನು ಸಕಲ ಭೂಷಣಗಳನ್ನೂ ಸ್ವಯಂ ಮಾಡುವನೂ, ಪರರಿಂದ ಮಾಡಿಸುವನೂ ಆಗಿ ಲೋಕಸಮ್ಮತನಾಗಿರುವನು.

೩೦. ಆ ವಿಶ್ವಕರ್ಮನು ದೇವತೆಗಳು ವಾಯುಮಾರ್ಗದಲ್ಲಿ ಸಂಚರಿಸಲರ್ಹವಾದ ಸಮಸ್ತ ದೇವತೆಗಳ ಉತ್ತಮ ವಿಮಾನಗಳನ್ನು ಮಾಡುವವನಾಗಿರುವನು. ಪರಂಪರವಾಗಿ ಅವನ ಶಿಷ್ಯ ಪ್ರಶಿಷ್ಯರಿಂದ ಆ ಶಿಲ್ಪವಿದ್ಯೆಯನ್ನು ಕಲಿತು ಮನುಷ್ಯರಾಗಿ ಜನಿಸಿರುವ ಶಿಲ್ಪಿಗಳೂ ಸಹ ಆ ವಿಶ್ವಕರ್ಮನ ಅನುಗ್ರಹದಿಂದಲೇ ಜೀವಿಸುತ್ತಿರುವುದು ಆಶ್ಚರ್ಯಕರವೇನೂ ಅಲ್ಲ.

೩೧–೩೨. ಲೋಕವಿಶ್ರುತರಾದ ಹತ್ತು ಜನ ವಿಶ್ವೇದೇವತೆಗಳು ವಿಶ್ವದೇವಿಯಲ್ಲಿ ಆವಿರ್ಭವಿಸಿದರು. ಕ್ರತು, ದಕ್ಷ, ಶ್ರವ, ಸತ್ಯ, ಕಾಲ, ಕಾಮ, ಧುನಿ, ಕುರುವಂತ, ಪ್ರಭಾವಂತ ಮತ್ತು ರೋಚಮಾನರೆಂಬ ಈ ಹತ್ತು ಜನ ವಿಶ್ವೇದೇವತೆಗಳು ಧರ್ಮದೇವನಿಗೆ ವಿಶ್ವೆಯೆಂಬ ಪತ್ನಿಯಲ್ಲಿ ಹುಟ್ಟಿದವರೂ, ಮಂಗಳಪ್ರದರೂ ಆಗಿರುವರು.

ಮರುತ್ವತ್ಯಾಂ ಮರುತ್ವಂತೋ ಭಾನವೋ ಭಾನುಜಾಃ ಸ್ಮೃತಾಃ ।
ಮುಹೂರ್ತಾಶ್ಚ ಮುಹೂರ್ತಾಯಾಂ ಘೋಷಂ ಲಂಭಾ ವ್ಯಜಾಯತ ॥ ೩೩॥

ಸಂಕಲ್ಪಾಯಾಂ ತು ಸಂಜಜ್ಞೇ ವಿದ್ವಾನ್ ಸಂಕಲ್ಪ ಏವ ಚ ।
ನಾಗವೀಥ್ಯಸ್ತು ಜಾಮ್ಯಾಂ ಚ ಪಥತ್ರಯಸಮಾಶ್ರಿತಾಃ ॥ ೩೪ ॥

ಪೃಥಿವೀವಿಷಯಂ ಸರ್ವಮರುಂಧತ್ಯಾಂ ವಜಾಯತ ।
ಏಷ ಸರ್ಗಃ ಸಮಾಖ್ಯಾತೋ ವಿದ್ವಾನ್ ಧರ್ಮಸ್ಯ ಶಾಶ್ವತಃ ॥ ೩೫ ॥

ಮುಹೂರ್ತಾಶ್ಚೈವ ತಿಥ್ಯಶ್ಚ ಪತಿಭಿಃ ಸಹ ಸುವ್ರತಾಃ ।
ನಾಮತಃ ಸಂಪ್ರವಕ್ಷ್ಯಾಮಿ ಬ್ರುವತೋ ಮೇ ನಿಬೋಧತ ॥ ೩೬ ॥

---

೩೩ ಅನಂತರ ಮರುತ್ವತೀ ದೇವಿಯಲ್ಲಿ ಮರುತ್ವಂತರೂ, ಭಾನುದೇವಿಯಲ್ಲಿ ಭಾನವರೆಂಬ ದೇವತೆಗಳೂ, ಮುಹೂರ್ತಾದೇವಿಯಲ್ಲಿ ಮುಹೂರ್ತೆಯೆಂಬುವರೂ ಅವತರಿಸಿದರು ತರುವಾಯ ಲಂಬೆಯು ಘೋಷನಾಮಕ ಪುತ್ರನನ್ನು ಪಡೆದಳು

೩೪. ತರುವಾಯ ಸಂಕಲ್ಪೆಯಲ್ಲಿ ವಿದ್ವಾಂಸನಾದ ಸಂಕಲ್ಪನಾಮಕಪುತ್ರನೂ, ಜಾಮಿಯಲ್ಲಿ ತ್ರಿವಾರ್ಗಗಾಮಿಗಳೂ, ನಾಗವೀಧಿನಾಮಕರೂ ಆದ ಕುಮಾರರು ಜನಿಸಿದರು

೩೫. ಅರುಂಧತೀದೇವಿಯಲ್ಲಿ ಪೃಥಿವೀ ವಿಷಯಕವಾದ ಸರ್ವವೂ ಉತ್ಪನ್ನವಾದುವು ಇದು ಜ್ಞಾನಿಯಾದ ಧರ್ಮದೇವನ ಲೋಕವಿಖ್ಯಾತವೂ, ಸಜ್ಜನಸಮ್ಮತವೂ, ಶಾಶ್ವತವೂ ಆದ ಸೃಷ್ಟಿಕ್ರಮವಾಗಿದೆ

೩೬. ಮುಹೂರ್ತೆಯಲ್ಲಿ ಉದ್ಭವಿಸಿದ ತಿಥಿ ಮುಹೂರ್ತಗಳನ್ನೂ, ನಿಯಮಿಷ್ಠರಾದ ತದಭಿಮಾನಿ ದೇವತೆಗಳನ್ನೂ ಅವರವರ ನಾಮಕ್ರಮದಿಂದ ನಿರೂಪಿಸುವೆನು ಕೇಳಿರೆಂದು ಸೂತಮುನಿಯು ಹೇಳಿದನು

**ಅಹೋರಾತ್ರವಿಭಾಗಶ್ಚ ನಕ್ಷತ್ರಾಣಿ ಸಮಾಸತಃ |**
**ಮುಹೂರ್ತಾಃ ಸರ್ವನಕ್ಷತ್ರಾ ಅಹೋರಾತ್ರವಿದಸ್ತಥಾ || ೩೭ ||**

**ಅಹೋರಾತ್ರಾಕಲಾನಾಂ ತು ಷಟ್ ಶತೀತ್ಯಧಿಕಾ ಸ್ಮೃತಾ |**
**ರವೇರ್ಗತಿವಿಶೇಷೇಣ ಸರ್ವೇಷು ಋತುಮಿಚ್ಛತಃ || ೩೮ ||**

**ತತೋ ವೇದವಿದಶ್ರೈತಾಂ ತಿಥಿಮಿಚ್ಛಂತಿ ಪರ್ವಸು |**
**ಅವಿಶೇಷೇಷು ಕಾಲೇಷು ಯೋಜ್ಯಃ ಸ ಪಿತೃದಾನತಃ || ೩೯ ||**

**ರೌದ್ರಃ ಸಾರ್ವಸ್ತಥಾ ಮೈತ್ರಃ ಪಿಂಡ್ಯವಾಸವ ಏವ ಚ |**
**ಆಪ್ಯೋಽಥ ವೈಶ್ವದೇವಶ್ಚ ಬ್ರಾಹ್ಮೋ ಮಧ್ಯಾಹ್ನಸಂಶ್ರಿತಃ || ೪೦ ||**

---

೩೭ ಓ ಮುನಿಗಳೇ, ಅಹೋರಾತ್ರವಿಭಾಗಗಳೂ, ನಕ್ಷತ್ರಗಳೂ ಇವುಗಳ ವಿಷಯವನ್ನು ಸಂಕ್ಷೇಪವಾಗಿ ತಿಳಿಸುವೆನು ಕೇಳಿರಿ. ಮುಹೂರ್ತಗಳು, ಸರ್ವನಕ್ಷತ್ರ ಗಳು ಇವುಗಳಿಂದ ಅಹೋರಾತ್ರಿಗಳನ್ನೂ ದಿನವನ್ನೂ ತಿಳಿಯಬೇಕೆಂದು ಕಾಲಜ್ಞರು ಹೇಳುವರು.

೩೮. ಅಹೋರಾತ್ರಗಳ ಕಲೆಗಳು ಆರನೂರಕ್ಕಿಂತಲೂ ಅಧಿಕವಾಗಿವೆಯೆಂದು ಕಾಲಜ್ಞಾನಿಗಳು ಹೇಳುವರು ಈ ಅಹೋರಾತ್ರಾದಿಗಳು ಸೂರ್ಯದೇವನ ಗತಿ ವಿಶೇಷದಿಂದ ಉಂಟಾಗುವುವು. ಅವೆಲ್ಲಗಳಲ್ಲಿಯೂ ಋತುವೇ ಮುಖ್ಯವೆಂದು ಜ್ಞಾನಿ ಗಳು ಹೇಳುವರು.

೩೯. ಆದುದರಿಂದ ವೇದವೇತ್ತೃಗಳಾದ ಮಹಾತ್ಮರು ಪರ್ವಕಾಲಗಳಲ್ಲಿ ತಿಥಿ ವಿಶೇಷವನ್ನು ಇಚ್ಛಿಸುವರು. ಸರ್ವಕಾಲಗಳಲ್ಲಿಯೂ ಪಿತೃನಿಮಿತ್ತಕವಾಗಿ ದಾನಾದಿ ಗಳನ್ನು ಮಾಡಬೇಕು. ವಿಶೇಷವಾಗಿ ಪರ್ವತಿಥಿಗಳಲ್ಲಿ ಪಿತೃಗಳಿಗಾಗಿ ದಾನಾದಿಗಳನ್ನು ಮಾಡಬೇಕೆಂದು ಶ್ರುತಿ ಸ್ಮೃತಿಗಳು ಸಾರುವುವು.

೪೦. ರುದ್ರದೇವತಾಕವಾದ ಸರ್ವಕಾರ್ಯಗಳೂ, ಮತ್ತು ಇಂದ್ರ, ಮಿತ್ರ, ವರುಣ, ವಿಶ್ವೇದೇವತೆ, ಬ್ರಹ್ಮ ಈ ದೇವತೋದ್ದೇಶ್ಯಕವಾದ ಪಿಂಡದಾನಾದಿ ಸರ್ವ ಕಾರ್ಯಗಳೂ ಇವನ್ನು ಮಧ್ಯಾಹ್ನಕಾಲದಲ್ಲಿಯೇ ಮಾಡಬೇಕೆಂದು ಕಾಲಜ್ಞರಾದ ಮಹಾತ್ಮರು ಹೇಳುತ್ತಾರೆ.

ಪ್ರಾಜಾಪತ್ಯಸ್ತಥಾ ಐಂದ್ರಸ್ತಥೇಂದ್ರೋ ನಿರ್ಋತಿಸ್ತಥಾ ।
ವಾರುಣಶ್ಚ ತಥಾರ್ಯಮ್ಣೋ ಭಾಗಾಶ್ಚಾಪಿ ದಿನಾಶ್ರಿತಾಃ || ೪೧ ||

ಏತೇ ದಿನಮುಹೂರ್ತಾಶ್ಚ ದಿವಾಕರವಿನಿರ್ಮಿತಾಃ ।
ಶಂಕುಚ್ಛಾಯಾವಿಶೇಷೇಣ ವೇದಿತವ್ಯಾಃ ಪ್ರಮಾಣತಃ || ೪೨ ||

ಅಜಾಸ್ತಥಾಹಿಂರ್ಬುಧ್ನ್ಯಶ್ಚ ಪೂಷಾ ಹಿ ಯಮದೇವತಾಃ ।
ಆಗ್ನೇಯಶ್ಚಾಪಿ ವಿಜ್ಞೇಯಃ ಪ್ರಜಾಪತ್ಯಸ್ತಥೈವ ಚ || ೪೩ ||

ಬ್ರಹ್ಮಸೌಮ್ಯಸ್ತಥಾದಿತ್ಯೋ ಬಾರ್ಹಸ್ಪತ್ಯೋಥ ವೈಷ್ಣವಃ ।
ಸಾವಿತ್ರೋ ತ್ವಥಾ ತ್ವಷ್ಟ್ರೋಥ ವಾಯುವ್ಯಶ್ಚೇತಿ ಸಂಗ್ರಹಃ || ೪೪ ||

---

೪೧ ಇದರಂತೆಯೇ ಪ್ರಜಾಪತಿ, ಇಂದ್ರ, ನಿಋತಿ, ವರುಣ, ಅರ್ಯಮಣ ಈ ದೇವತೋದ್ದೇಶ್ಯಕಗಳಾದ ಕಾರ್ಯಗಳೆಲ್ಲವನ್ನೂ ದಿವಸಗಳಲ್ಲಿಯೇ ಮಾಡಬೇಕು.

೪೨ ಕಲಾ, ಮುಹೂರ್ತ, ಅಹೋರಾತ್ರಿ, ದಿನ, ಪಕ್ಷ, ಮಾಸಾದಿಗಳನ್ನು ಸೂರ್ಯದೇವನ ಗತಿವಿಶೇಷದಿಂದಲೇ ತಿಳಿಯಬೇಕು. ಒಂದು ಶಂಕುವನ್ನು ಸ್ಥಾಪಿಸಿ ಅದರ ಛಾಯಾವಿಶೇಷಗಳಿಂದ ಕಲಾ ಮುಹೂರ್ತಾದಿಗಳನ್ನೂ ತಿಳಿಯಬೇಕೆಂದು ಕಾಲಜ್ಞರು ಹೇಳುವರು.

೪೩. ಅಜ, ಅಹಿರ್ಬುಧ್ನ್ಯ, ಪೂಷಾ, ಇವು ಯಮದೇವತಾಕವಾಗಿವೆ. ಅಂದರೆ ಯಮನೇ ಮುಖ್ಯವಾದ ದೇವತೆಯಾಗಿರುವನು.

೪೪. ಹೀಗೆಯೇ ಅಗ್ನಿ, ಪ್ರಜಾವತಿ, ಬ್ರಹ್ಮ, ಸೋಮ, ಸೂರ್ಯ, ಬೃಹಸ್ಪತಿ, ವಿಷ್ಣು, ಸವಿತೃ, ತ್ವಷ್ಟೃ, ವಾಯು, ಈ ದೇವತಾಕ ಕಾರ್ಯಗಳು ವಿಶೇಷವಾಗಿವೆ ಯೆಂದು ಸಂಗ್ರಹವಾಗಿ ನಿರೂಪಿಸಿರುವೆನು.

**ಏಕರಾತ್ರಿಮುಹೂರ್ತಾಃ ಸ್ಯುಃ ಕ್ರಮೋಕ್ತಾ ದಶಪಂಚ ಚ |**
**ಇಂದೋರ್ಗತ್ಯುದಯಾ ಜ್ಞೇಯಾ ನಾಲಿಕಾಃ ಪಾದಿಕಾಸ್ತಥಾ ||**
**ಕಾಲಾವಸ್ಥಾಸ್ವಿಮಾಸ್ತೇತೇ ಮುಹೂರ್ತಾ ದೇವತಾಃ ಸ್ಮೃತಾಃ || ೪೫ ||**

**ಸರ್ವಗ್ರಹಾಣಾಂ ತ್ರೀಣ್ಯೇವ ಸ್ಥಾನಾನಿ ವಿಹಿತಾನಿ ಚ |**
**ದಕ್ಷಿಣೋತ್ತರಮಧ್ಯಾನಿ ತಾನಿ ವಿದ್ಯಾದ್ಯಥಾಕ್ರಮಂ || ೪೬ ||**

**ಸ್ಥಾನಂ ಜಾರದ್ಗವಂ ಮಧ್ಯೇ ತಥೈರಾವತಮುತ್ತರಂ |**
**ವೈಶ್ವಾನರಂ ದಕ್ಷಿಣತೋ ನಿರ್ದಿಷ್ಟಮಿಹ ತತ್ವತಃ || ೪೭ ||**

**ಅಶ್ವಿನೀ ಕೃತಿಕಾ ಯಾಮ್ಯಾ ನಾಗವೀಥಿರಿತಿ ಸ್ಮೃತಾ |**
**ಪುಶ್ಯೋಽಶ್ಲೇಷಾ ಪುನರ್ವಸೂ ವೀಥಿರೈರಾವತೀ ಮತಾ ||**
**ತಿಸ್ರಸ್ತು ವೀಥಯೋ ಹ್ಯೇತಾ ಉತ್ತರೇ ಮಾರ್ಗ ಉಚ್ಯತೇ || ೪೮ ||**

---

೪೫. ಮೇಲೆ ನಿರೂಪಿಸಿರುವ ಹದಿನೈದು ದೇವತೆಗಳೂ ಏಕರಾತ್ರಿಯ ಮುಹೂರ್ತಗಳಿಗೆ ಅಧಿದೇವತೆಗಳಾಗಿರುವರು ಚಂದ್ರನ ಉದಯಗಮನಗಳಿಂದ ಗಳಿಗೆಗಳನ್ನೂ ಪಾದಗಳನ್ನೂ ತಿಳಿಯಬೇಕು. ಈ ಕಾಲಾವಸ್ಥೆಗಳಲ್ಲಿ ಈ ಮುಹೂರ್ತಾಭಿಮಾನಿಗಳೇ ದೇವತೆಗಳಾಗಿರುವರು. ಎಂದು ಮಹಾತ್ಮರು ಹೇಳುತ್ತಾರೆ.

೪೬ ಸಮಸ್ತವಾದ ಗ್ರಹಗಳಿಗೂ ದಕ್ಷಿಣ ಉತ್ತರ ಮಧ್ಯಮವೆಂದು ಮೂರು ವೀಥಿಗಳೂ ಕ್ರಮವಾಗಿ ಸ್ಥಾನಗಳಾಗಿವೆಯೆಂದು ಕಾಲಜ್ಞರು ಹೇಳುವರು.

೪೭. ಅವುಗಳಲ್ಲಿ ಮಧ್ಯಗತವಾದ ಸ್ಥಾನಕ್ಕೆ ಜಾರದ್ಗವವೆಂದೂ ಉತ್ತರ ಸ್ಥಾನಕ್ಕೆ ಐರಾವತವೆಂದೂ, ದಕ್ಷಿಣಸ್ಥಾನಕ್ಕೆ ವೈಶ್ವಾನರವೆಂದೂ, ನಾಮಗಳು ಪ್ರಾಪ್ತವಾಗಿವೆಯೆಂದು ಜ್ಞಾನಿಗಳು ತಿಳಿಸುವರು.

೪೮. ಅಶ್ವಿನೀ ಕೃತ್ತಿಕೆಗಳು ಸಂಚರಿಸುವ ದಕ್ಷಿಣಮಾರ್ಗಕ್ಕೆ ನಾಗವೀಥಿಯೆಂಬ ಸಂಜ್ಞೆಯು ಪ್ರಾಪ್ತವಾಗಿದೆ. ಪುಷ್ಯ, ಆಶ್ಲೇಷ, ಪುನರ್ವಸು, ಇವು ಸಂಚರಿಸುವ ಮಾರ್ಗಕ್ಕೆ (ವೀಥಿಗೆ) ಐರಾವತೀಯೆಂಬ ಸಂಜ್ಞೆಯು ಸಂಭವಿಸಿರುತ್ತದೆ. ಈ ಮೂರು ವೀಥಿಗಳೂ ಉತ್ತರದ ಮಾರ್ಗವಾಗಿವೆ.

ಪೂರ್ವೋತ್ತರೇ ಫಾಲ್ಗುನ್ಯೋ ಚ ಮಘಾ ಚೈವಾರ್ಯವಿಾ ಸ್ಮೃತಾ ।
ಹಸ್ತಚಿತ್ರೇ ತಥಾ ಸ್ವಾತೀ ಗೋವೀಥೀತ್ಯಭಿಶಬ್ದಿತಾ ॥ ೪೯ ॥

ಜ್ಯೇಷ್ಠಾ ವಿಶಾಖಾನುರಾಧಾ ವೀಥೀ ಜಾರದ್ಗವೀ ಸ್ಮೃತಾ ।
ಏತಾಸ್ತು ವೀಥಯಸ್ತಿಸ್ರೋ ಮಧ್ಯಮೋ ಮಾರ್ಗ ಉಚ್ಯತೇ ॥ ೫೦ ॥

ಮೂಲಂಚಾಷಾಢೇ ದ್ವೇ ಚಾಪಿ ಅಜವೀಥ್ಯಭಿಶಬ್ದಿತಾ ।
ಶ್ರವಣಂಚ ಧನಿಷ್ಠಾ ಚ ಗಾರ್ಗೀ ಶತಭಿಷಕ್ತಥಾ ॥ ೫೧ ॥

ವೈಶ್ವಾನರೀ ಭಾದ್ರಪದೇ ರೇವತೀ ಚೈವ ಕೀರ್ತಿತಾ ।
ಸ್ಮೃತಾ ವೀಥ್ಯಸ್ತು ತಿಸ್ರಸ್ತಾ ಮಾರ್ಗೇ ವೈ ದಕ್ಷಿಣೇ ಬುಧೈಃ ॥ ೫೨ ॥

ಸಪ್ತವಿಂಶತ್ತು ಯಾಃ ಕನ್ಯಾ ದಕ್ಷಃ ಸೋಮಾಯ ತಾ ದದೌ ।
ಸರ್ವಾ ನಕ್ಷತ್ರನಾಮ್ನ್ಯಸ್ತಾ ಜ್ಯೋತಿಷೇ ಚೈವ ಕೀರ್ತಿತಾಃ ॥
ತಾಸಾಮಪತ್ಯಾನ್ಯಭವನ್ ದೀಪ್ತಾನ್ಯಮಿತತೇಜಸಾ ॥ ೫೩ ॥

---

೪೯. ಪೂರ್ವಾಭಾದ್ರ, ಉತ್ತರಾಭಾದ್ರ, ಮಖೆ, ಸೂರ್ಯ, ಹಸ್ತ, ಚಿತ್ತ, ಮತ್ತು ಸ್ವಾತಿ, ಈ ಗ್ರಹಗಳು ಸಂಚರಿಸುವ ಮಾರ್ಗಕ್ಕೆ ಗೋವೀಥಿಯೆಂದು ಸಂಜ್ಞೆಯು ಉಂಟಾಗಿದೆ.

೫೦. ಜ್ಯೇಷ್ಠಾನಕ್ಷತ್ರ, ವಿಶಾಖೆ, ಅನೂರಾಧಾ, ನಕ್ಷತ್ರಗಳು ಸಂಚರಿಸುವ ವೀಧಿಗೆ ಜಾರದ್ಗವೀ ಎಂಬ ನಾಮವು ಉಕ್ತವಾಗಿದೆ ಮೇಲೆ ನಿರೂಪಿಸಿರುವ ಈ ಮೂರು ವೀಥಿಗಳೂ ಮಧ್ಯಮ ವರ್ಗವಾಗಿವೆಯೆಂದು ಮಹಾತ್ಮರು ಹೇಳುವರು.

೫೧–೫೨ ಮೂಲ ಮತ್ತು ಆಷಾಢ ಇವೆರಡೂ ಅಜವೀಧಿಯೆಂದು ಪ್ರಸಿದ್ಧವಾಗಿವೆ ಶ್ರವಣ, ಧನಿಷ್ಠ, ಶತಭಿಷ, ಇವುಗಳು ಸಂಚರಿಸುವ ಮಾರ್ಗಕ್ಕೆ ಗಾರ್ಗೀ ವೀಧಿಯೆಂದು ನಾಮವು ಉಂಟಾಗಿರುವುದು. ಭಾದ್ರಪದ ರೇವತಿಗಳು ತಿರುಗಾಡುವ ಜಾಗಕ್ಕೆ ವೈಶ್ವಾನರವೀಧಿಯೆಂದು ನಾಮವೂ ಉಂಟಾಗಿದೆ. ಹೀಗೆ ದಕ್ಷಿಣಭಾಗದಲ್ಲಿ ಮೂರು ವೀಧಿಗಳಿವೆಯೆಂದು ಜ್ಞಾನಿಗಳು ಹೇಳುವರು.

೫೩. ದಕ್ಷಪ್ರಜಾಪತಿಗೆ ಇಪ್ಪತ್ತೇಳು ಜನ ಕುಮಾರಿಯರಿದ್ದರು. ಅವರೆಲ್ಲರನ್ನೂ ಚಂದ್ರನಿಗೆ ಕೊಟ್ಟು ವಿವಾಹ ಮಾಡಿದನು. ಆ ಹುಡುಗಿಯರೆಲ್ಲರೂ ನಕ್ಷತ್ರನಾಮಕರಾಗಿಯೂ, ಜ್ಯೋತಿರ್ನಾಮಕರಾಗಿಯೂ, ಪ್ರಸಿದ್ಧರಾಗಿಯೂ ಇರುವರು.

**ಯಾಸ್ತು ಶೇಷಾಸ್ತದಾ ಕನ್ಯಾಃ ಪ್ರತಿಜಗ್ರಾಹ ಕಶ್ಯಪಃ ।**
**ಚತುರ್ದಶ ಮಹಾಭಾಗಾಃ ಸರ್ವಾಸ್ತಾ ಲೋಕಮಾತರಃ ॥ ೫೪ ॥**

**ಅದಿತಿರ್ದನುಃ ಕಾಲಾ ಅರಿಷ್ಟಾ ಸುರಸಾ ತಥಾ ।**
**ಸುರಭಿರ್ವಿನತಾ ಚೈವ ತಾಮ್ರಾ ಕ್ರೋಧವಶಾ ಇರಾ ॥**
**ಕದ್ರುರ್ಮುನಿಶ್ಚ ಧರ್ಮಜ್ಞಾಃ ಪ್ರಜಾಸ್ತಾಸಾಂ ನಿಬೋಧತ ॥ ೫೫ ॥**

**ಚಾರಿಷ್ಣವೇಂತರೇತೀತೇ ಯೇ ದ್ವಾದಶ ಪುರೋಗಮಾಃ ।**
**ವೈಕುಂಠಾ ನಾಮ ತೇ ಸಾಧ್ಯಾ ಬಭೂವುಶ್ಚಾಕ್ಷುಷೇಂತರೇ ॥ ೫೬ ॥**

**ಉಪಸ್ಥಿತೇಂತರೇ ಹ್ಯಸ್ಮಿನ್ ಪುನರ್ವೈವಸ್ವತಸ್ಯ ಹ ।**
**ಆರಾಧಿತಾ ಹ್ಯದಿತ್ಯಾ ತೇ ಸಮೇತ್ಯಾಹುಃ ಪರಸ್ಪರಂ ॥ ೫೭ ॥**

---

೫೪. ದಕ್ಷೇಶ್ವರನ ಉಳಿದಿರುವ ಕನ್ನಿಕೆಯರನ್ನು ಕಶ್ಯಪನು ಲಗ್ನವಾದನು. ಆ ಹದಿನಾಲ್ಕು ಕುಮಾರಿಯರೂ ಮಹಾಭಾಗ್ಯಶಾಲಿಗಳಾಗಿಯೂ ಲೋಕಮಾತೃಗಳಾಗಿಯೂ ಪ್ರಜಾಪಾಲಕರಾಗಿಯೂ ಇರುವರು.

೫೫. ಅವರು ಯಾರೆಂದರೆ ಅದಿತಿ, ದಿತಿ, ದನು, ಕಾಲಾ, ಅರಿಷ್ಟಾ, ಸುರಸಾ, ಸುರಭಿ, ವಿನತಾ, ತಾಮ್ರಾ, ಕ್ರೋಧವಶಾ, ಇರಾಕದ್ರುಮುನಿ ಇವರಿರುವರು. ಧರ್ಮಜ್ಞನಾದ ಕಶ್ಯಪನು ಇವರನ್ನು ಮದುವೆಯಾಗಿ ಸಂತಾನವನ್ನು ಪಡೆದನು. ಅವರ ಪುತ್ರರನ್ನು ಹೇಳುವೆನು ಕೇಳಿರೆಂದನು.

೫೬. ಚಾರಿಷ್ಣವ ಮನ್ವಂತರವು ಅತೀತವಾಗಲು ಮುಖಂಡರೂ ದ್ವಾದಶ ಸಂಖ್ಯಾಕರೂ ಆದ ಯಾವ ಸಾಧ್ಯರಿರುವರೋ ಅವರು ಚಾಕ್ಷುಷ ಮನ್ವಂತರವು ಬರಲಾಗಿ ವೈಕುಂಠರೆಂದು ಪ್ರಸಿದ್ಧರಾಗಿರುವರು.

೫೭. ವೈವಸ್ವತ ಮನ್ವಂತರವು ಪುನಃ ಪ್ರಾಪ್ತವಾಗಲು ಅದಿತೀದೇವಿಯು ಅವರನ್ನು ಆರಾಧಿಸಿದಳು. ಆಗ ಅವರೆಲ್ಲರೂ ಮಿಳಿತರಾಗಿ ಪರಸ್ಪರವಾಗಿ ಹೀಗೆ ಹೇಳಿದರು.

ಏತಾಮೇವ ಮಹಾಭಾಗಾಮದಿತಂ ಸಂಪ್ರವಿಶ್ಯ ವೈ ।
ವೈವಸ್ವತೇಂತರೇ ಹ್ಯಸ್ಮಿನ್ ಯೋಗಾದದ್ಧೇನ ಚೇತಸಃ ॥ ೫೮ ॥

ಗಚ್ಛಾಮಃ ಪುತ್ರತಾಮಸ್ಯಾಸ್ತನ್ನಃ ಶ್ರೇಯೋ ಭವಿಷ್ಯತಿ ।
ಆದಿತ್ಯಾಸ್ತು ಪ್ರಸೂತಾನಾಮಾದಿತ್ಯತ್ವಂ ಭವಿಷ್ಯತಿ ॥ ೫೯ ॥

ಏವಮುಕ್ತ್ವಾ ತು ತೇ ಸರ್ವೇ ಚಾಕ್ಷುಷಸ್ಯಾಂತರೇ ಮನೋಃ ।
ಜಜ್ಞಿರೇ ದ್ವಾದಶಾದಿತ್ಯಾ ಮಾರೀಚಾತ್ ಕಶ್ಯಪಾತ್ಪುನಃ ॥ ೬೦ ॥

ಶತಕ್ರತುಶ್ಚ ವಿಷ್ಣುಶ್ಚ ಜಜ್ಞಾತೇ ಪುನರೇವ ಹಿ ।
ವೈವಸ್ವತೇಂತರೇ ಹ್ಯಸ್ಮಿನ್ ನರನಾರಾಯಣೌ ಸುತೌ ॥ ೬೧ ॥

ತೇಷಾಮಪಿ ಹಿ ದೇವಾನಾಂ ನಿಧನೋತ್ಪತ್ತಿರಿಚ್ಯತೇ ।
ಯಥಾ ಸೂರ್ಯಸ್ಯ ಲೋಕೇಸ್ಮಿನ್ ಉದಯಾಸ್ತಮಯಾವುಭೌ ॥
ಪ್ರಜಾಪತೇಶ್ಚ ವಿಷ್ಣೋಶ್ಚ ಭವಸ್ಯ ಚ ಮಹಾತ್ಮನಃ ॥ ೬೨ ॥

---

೫೮–೬೦. ಅನಂತರ ಸಾಧ್ಯನಾಮಕರಾದ ದೇವತೆಗಳು ನಾವು ಮಹಾನುಭಾವಳಾದ ಈ ಅದಿತಿದೇವಿಯನ್ನು ಪ್ರವೇಶಿಸಿ ವೈವಸ್ವತಮನ್ವಂತರವು ಬರಲು, ನಮ್ಮ ಯೋಗಜವಾದ ಸಾಮರ್ಥ್ಯದಿಂದ ಅದಿತಿದೇವಿಯ ಪುತ್ರರಾಗಿ ಅವತಾರ ಮಾಡೋಣ. ಅದರಿಂದ ನಮಗೆ ಮಹಾ ಶ್ರೇಯಸ್ಸುಂಟಾಗುವುದು. ಅದಿತೀದೇವಿಗೆ ಪುತ್ರರಾಗಿ ಜನಿಸಿದರೆ ಆದಿತ್ಯನಾಮಕರಾಗುವೆವು. ಎಂದು ಸಮಾಲೋಚನೆಯನ್ನು ಮಾಡಿ, ಆ ದೇವತೆಗಳೆಲ್ಲರೂ ಚಾಕ್ಷುಷಮನ್ವಂತರದಲ್ಲಿ ಮರೀಚಿಪುತ್ರರಾದ ಕಶ್ಯಪರ ಪತ್ನಿಯಲ್ಲಿ ಆದಿತ್ಯನಾಮಕರಾಗಿ ಪುನಃ ಅವತಾರ ಮಾಡಿದರು

೬೧. ಇದೇ ವೈವಸ್ವತಮನ್ವಂತರದಲ್ಲಿ ನೂರು ಯಾಗಗಳನ್ನು ಮಾಡಿದ ಇಂದ್ರನೂ, ಶ್ರೀ ಮಹಾವಿಷ್ಣುವೂ ಸಹ ನರನಾರಾಯಣರೆಂಬ ದೇವತೆಗಳಾಗಿ ಪುನಃ ಅವತರಿಸಿದರು.

೬೨. ಲೋಕದಲ್ಲಿ ಸೂರ್ಯನಿಗೆ ಉದಯಾಸ್ತಮಯಗಳೆರಡೂ ಹೇಗೆ ಉಂಟಾಗುತ್ತವೆಯೋ, ಹಾಗೆ ಮಹಾತ್ಮರಾದ ಬ್ರಹ್ಮ, ವಿಷ್ಣು, ಮಹೇಶ್ವರರಿಗೂ ಮೇಲೆ ನಿರೂಪಿಸಿರುವ ಸಾಧ್ಯಾದಿ ದೇವತೆಗಳೂ ಉದಯಾಸ್ತಮಯರೂಪವಾದ ಜನನ ಮರಣಗಳು ಉಂಟಾಗುತ್ತವೆ.

ಶ್ರೇಷ್ಠಾನುಶ್ರವಿಕೇ ಯಸ್ಮಾಚ್ಛಕ್ತಾಃ ಶಬ್ದಾದಿಲಕ್ಷಣೇ।
ಅಷ್ಟಾತ್ಮಕೇಣಿಮಾದ್ಯೇ ಚ ತಸ್ಮಾತ್ತೇ ಜಜ್ಞಿರೇ ಸುರಾಃ || ೬೩ ||

ಇತ್ಯೇಷ ವಿಷಯೇ ರಾಗಃ ಸಂಭೂತ್ಯಾಃ ಕಾರಣಂ ಸ್ಮೃತಂ।
ಬ್ರಹ್ಮಶಾಪೇನ ಸಂಭೂತಾ ಜಯಾಃ ಸ್ವಾಯಂಭುವೇ ಜಿತಾಃ || ೬೪ ||

ಸ್ವಾರೋಚಿಷೇ ವೈ ತುಷಿತಾಃ ಸತ್ಯಾಶ್ಚೈವೋತ್ತಮೇ ಪುನಃ।
ತಾಮಸೇ ಹರಯೋ ದೇವಾ ಜಾತಾಶ್ಚಾರಿಷ್ಣವೇ ತು ವೈ ||
ವೈಕುಂಠಾಶ್ಚಾಕ್ಷುಷೇ ಸಾಧ್ಯಾ ಆದಿತ್ಯಾಃ ಸಾಂಪ್ರತೇ ಪುನಃ || ೬೫ ||

ಧಾತಾರ್ಯಮಾ ಚ ಮಿತ್ರಶ್ಚ ವರುಣೋಽಂಶೋ ಭಗಸ್ತಥಾ।
ಇಂದ್ರೋ ವಿವಸ್ವಾನ್ ಪೂಷಾ ಚ ಪರ್ಜನ್ಯೋ ದಶಮಃ ಸ್ಮೃತಃ || ೬೬ ||

ತತಸ್ತ್ವಷ್ಟಾ ತತೋ ವಿಷ್ಣುರಜಘನ್ಯೋ ಜಘಾನ್ಯಜಃ।
ಇತ್ಯೇತೇ ದ್ವಾದಶಾದಿತ್ಯಾಃ ಕಶ್ಯಪಸ್ಯ ಸುತಾಃ ಸ್ಮೃತಾಃ || ೬೭ ||

---

೬೩. ಮೇಲೆ ಹೇಳಿದ ಉತ್ತಮರಾದ ದೇವತೆಗಳು ಭಕ್ತಾನುಗ್ರಹಕ್ಕಾಗಿಯೂ, ಲೋಕೋಪಕಾರಕಕ್ಕಾಗಿಯೂ, ಉತ್ತಮವಾದ ದೇವತೆಗಳ ವರದಂತೆ (ಆಜ್ಞೆಯಂತೆ) ಭೂಮಿಯಲ್ಲವತರಿಸಿ, ಅಣಿಮಾದ್ಯಷ್ಟೈಶ್ವರ್ಯದಿಂದ ಕೂಡಿ ಪ್ರಖ್ಯಾತರಾಗಿರುವರು.

೬೪. ಆದುದರಿಂದ ದೇವತೆಗಳು ಭೂಮಿಯಲ್ಲಿ ಅವತರಿಸಿ, ಸ್ವಕಾರ್ಯಗಳನ್ನು ಸಾಧಿಸಿಕೊಂಡು ತರುವಾಯ ತೆರಳುವರು. ಸ್ವಾಯಂಭುವಮನ್ವಂತರದಲ್ಲಿ ಜಯ ವಿಜಯಾದಿಗಳು ಬ್ರಹ್ಮದೇವನ ಶಾಪದಿಂದ ಜಿತನಾಮಕರಾಗಿ ಅವತರಿಸಿದ್ದರು.

೬೫. ಆ ದೇವತೆಗಳೇ ಪುನಃ ಸ್ವಾರೋಚಿಷ ಮನ್ವಂತರದಲ್ಲಿ ತುಷಿತನಾಮಕರಾಗಿಯೂ, ಉತ್ತಮಮನ್ವಂತರದಲ್ಲಿ ಸತ್ಯನಾಮಕರಾಗಿಯೂ, ತಾಮಸಮನ್ವಂತರದಲ್ಲಿ ಹರಿನಾಮಕರಾಗಿಯೂ, ಚಾರಿಷ್ಣವಮನ್ವಂತರದಲ್ಲಿ ವೈಕುಂಠನಾಮಕರಾಗಿಯೂ, ಚಾಕ್ಷುಷಮನ್ವಂತರದಲ್ಲಿ ಸಾಧ್ಯನಾಮಕರಾಗಿಯೂ, ವೈವಸ್ವತಮನ್ವಂತರದಲ್ಲಿ ಆದಿತ್ಯನಾಮಕರಾಗಿಯೂ ಅವತರಿಸಿದರು.

೬೬-೬೭. ಬ್ರಹ್ಮ, ಸೂರ್ಯ, ಮಿತ್ರ, ವರುಣಾಂಶವಿರುವ ಭಗ, ಇಂದ್ರ, ವಿವಸ್ವಂತ, ಪೂಷ, ಪರ್ಜನ್ಯ, ತರುವಾಯ ತ್ವಷ್ಟ, ವಿಷ್ಣು, ಅಜಘನ್ಯ, ಅಜಘನ್ಯಜ ಇವರೇ ದ್ವಾದಶಾದಿತ್ಯರಾಗಿಯೂ, ಕಶ್ಯಪಮುನಿಯ ಕುಮಾರರಾಗಿಯೂ ಇರುವರು.

ಸುರಭೀ ಕಶ್ಯಪಾದ್ರುದ್ರಾನೇಕಾದಶ ವಿಜಜ್ಞಿರೇ ।
ಮಹಾದೇವಪ್ರಸಾದೇನ ತಪಸಾ ಭಾವಿತಾ ಸತೀ ॥ ೧೮ ॥

ಅಂಗಾರಕಂ ತಥಾ ಸರ್ಪಂ ನಿರ್ಋತಿಂ ಸದಸಸ್ಪತಿಂ ।
ಅಜೈಕಪಾದಹಿಂರ್ಬುಂಧ್ಯಮೂರ್ಧ್ವಕೇತುಂ ಜ್ವರಂ ತಥಾ ॥ ೧೯ ॥

ಭುವನಂಚೇಶ್ವರಂ ಮೃತ್ಯುಂ ಕಪಾಲಂಚೈವ ವಿಶ್ರುತಂ ।
ದೇವಾನೇಕಾದಶೈಸ್ತಾಂಸ್ತು ರುದ್ರಾಂಸ್ತ್ರಿಭುವನೇಶ್ವರಾ ॥
ತಪಸಾ ತೇನ ಮಹತಾ ಸುರಭೀ ತಾನಜೀಜನತ್ ॥ ೨೦ ॥

ತತೋ ದುಹಿತರಾವನ್ಯೇ ಸುರಭೀ ದ್ವೇ ವ್ಯಜಾಯತ ।
ರೋಹಿಣೀ ಚೈವ ರುದ್ರಾಭಾ ಗಾಂಧಾರೀ ಚ ಯಶಸ್ವಿನೀ ॥ ೨೧ ॥

ರೋಹಿಣ್ಯಾಂ ಜಜ್ಞಿರೇ ಕನ್ಯಾಶ್ಚತಸ್ರೋ ಲೋಕವಿಶ್ರುತಾಃ ।
ಸುರೂಪಾಂ ಹಂಸಕೀಲಾ ಚ ಭದ್ರಾ ಕಾಮದುಘಾ ತಥಾ ॥
ಸುಷುವೇ ಕಾಮದುಘಾ ತು ಸುರೂಪಾ ತನಯದ್ವಯಂ ॥ ೨೨ ॥

---

೧೮ ಸುರಭಿನಾಮಕದೇವಿಯು ಕಶ್ಯಪರಿಂದ ಏಕಾದಶರುದ್ರರನ್ನು ಪಡೆದಳು. ಆ ಸುರಭಿಯು ಪರಮೇಶ್ವರ ಪ್ರಸಾದದಿಂದ ಯುಕ್ತಳೂ, ಮಹಾ ತಪೋಯುಕ್ತಳೂ, ಸಾಧ್ವೀಶಿರೋಮಣಿಯೂ ಆಗಿರುವಳು

೧೯–೨೦ ಸುರುಭೀದೇವಿಯು ಮಹಾ ತಪಸ್ಸಿನಿಂದ ಯುಕ್ತಳಾಗಿ, ಕಶ್ಯಪರಿಂದ ಅಂಗಾರಕ, ಸರ್ಪ, ನಿರ್ಋತಿ, ಶದಸಸ್ಪತಿ, ಅಜೈಕಪಾದ, ಅಹಿರ್ಬುಧ್ನ್ಯ, ಊರ್ಧ್ವಕೇತು, ಜ್ವರ, ಭುವನೇಶ್ವರ, ಮತ್ತು ಪ್ರಖ್ಯಾತನಾದ ಕಪಾಲ ಈ ಏಕಾದಶ ಸಂಖ್ಯಾಕರೂ, ಭುವನೇಶ್ವರರೂ ದೇವತೆಗಳೂ ಆದ ರುದ್ರರನ್ನು ಪಡೆದಳು.

೨೧. ತರುವಾಯ ಸುರಭಿಯು ರುದ್ರರಂತೆ ಕಾಂತಿಯುತಳಾದ, ರೋಹಿಣೀ, ಮಹಾಕೀರ್ತಿಯುತಳಾದ ಗಾಂಧಾರೀ ಎಂಬ ಇಬ್ಬರು ಹೆಣ್ಣುಮಕ್ಕಳನ್ನು ಪಡೆದಳು.

೨೨. ಅನಂತರ ರೋಹಿಣೀದೇವಿಯಲ್ಲಿ ಸುರೂಪಾ, ಹಂಸಕೀಲಾ, ಇಷ್ಟಾರ್ಥದಾಯಕಳಾದ ಕಾಮಮುಘಾ, ಭದ್ರೆ ಎಂಬ ವಿಖ್ಯಾತರಾದ ನಾಲ್ವರು ಕುಮಾರಿಯರನ್ನು ಪಡೆದಳು. ಅವರಲ್ಲಿ ಕಾಮದುಘೆಯು ಇಬ್ಬರು ಮಕ್ಕಳನ್ನೂ, ಸುರೂಪೆಯು ಇಬ್ಬರು ಸುತರನ್ನೂ ಪಡೆದರು

ಹಂಸಕೀಲಾ ನೃಪಮ್ಮೃಷೀ ಭದ್ರಾ ತ್ರಿಯಾಸ್ತು ವ್ಯಜಾಯತ ।
ವಿಶ್ರುತಾಸ್ತು ಮಹಾಭಾಗಾ ಗಂಧರ್ವಾ ವಾಜಿನಃ ಸುತಾಃ ॥ ೭೩ ॥

ಉಚ್ಚೈಃಶ್ರವಾಸ್ತದಾ ಜಾತಾಃ ಖೇಚರಾಸ್ತೇ ಮನೋಜವಾಃ ।
ಶ್ವೇತಾಃ ಶ್ಯೇನಾಃ ಪಿಶಂಗಾಶ್ಚ ಸಾರಂಗಾ ಹರಿತಾರ್ಜುನಾಃ ॥
ರುದ್ರ ದೇವೋಪಬಾಹ್ಯಾಸ್ತೇ ಗಂಧರ್ವಯೋನಯೋ ಹಯಾಃ ॥ ೭೪ ॥

ಭೂಯೋ ಜಜ್ಞೇ ಸುರಭ್ಯಾಸ್ತು ಶ್ರೀಮಾ ಚಂದ್ರಾಭಸುಪ್ರಭಃ ।
ಸ್ರಗ್ವೀಕಕುದ್ಮೀ ದ್ಯುತಿಮಾನಮೃತಾಲಯಸಂಭವಃ ॥
ಸುರಭ್ಯನುಮತೇ ದತ್ತೋ ಧ್ವಜೋ ಮಾಹೇಶ್ವರಸ್ತು ಸಃ ॥ ೭೫ ॥

ಇತ್ಯೇತೇ ಕಶ್ಯಪಸುತಾ ರುದ್ರಾದಿತ್ಯಾಃ ಪ್ರಕೀರ್ತಿತಾಃ ।
ಧರ್ಮಪುತ್ರಾಃ ಸ್ಮೃತಾಃ ಸಾಧ್ಯಾ ವಿಶ್ವೇ ಚ ವಸವಸ್ತಥಾ ॥ ೭೬ ॥

---

೭೩. ಹಂಸಕೀಲಯು ರಾಜರನ್ನೂ, ಋಷಿಗಳನ್ನೂ ಪಡೆದಳು. ಭದ್ರಾದೇವಿಯಲ್ಲಿಯಾದರೋ ಗಂಧರ್ವರೂ, ಅಶ್ವಮುಖಿಗಳಾದ ದೇವತೆಗಳೂ ಅವತರಿಸಿದರು.

೭೪. ಆಗ ಆಕಾಶ ಸಂಚಾರಿಗಳೂ ಮನೋವೇಗಿಗಳೂ ಆದ ಉಚ್ಚೈಃಶ್ರವಸುಗಳೂ, ಅತಿ ಶುಭ್ರಗಳೂ, ಶ್ಯೇನಮುಖಿಗಳೂ, ಪಿಶಂಗವರ್ಣಗಳೂ, ಸಾರಂಗ ಮುಖಿಗಳೂ, ಹರಿದ್ವರ್ಣಗಳೂ, ರುದ್ರಾಂಶಗಳೂ, ದೇವಯಾನಿಗಳೂ, ಗಂಧರ್ವ ಯೋನಿಗಳೂ ಆದ ಇತರಾಶ್ವಗಳೂ ಉತ್ಪನ್ನವಾದವು

೭೫. ಆ ಸುರಭಿಗೆ ಶ್ರೀಮಂತನೂ, ಚಂದ್ರನಂತೆ ಅತ್ಯಂತ ಕಾಂತಿಯುತನೂ. ಮಾಲೆಧಾರಿಯೂ, ಎತ್ತರವಾದ ಹಿಳಲುಳ್ಳನೂ, ಕಾಂತಿಯುತನನ, ಕ್ಷೀರಸಾಗರ ಸಂಭೂತನೂ ಆದ ವೃಷಭರಾಜನು ಹುಟ್ಟಿದನು. ಅವನು ಸುರಭಿಯ ಅಭಿಪ್ರಾಯದಂತೆ ಈಶ್ವರನಿಗೆ ವಾಹನಕ್ಕಾಗಿ ಕೊಡಲ್ಪಟ್ಟನು.

೭೬. ಈ ರೀತಿಯಾಗಿ ಏಕಾದಶರುದ್ರರೂ, ದ್ವಾದಶಾದಿತ್ಯರೂ ಕೂಡ ಕಶ್ಯಪ ಮುನಿಯ ಮಕ್ಕಳಾಗಿ ಹುಟ್ಟಿದರು. ಇವರೆಲ್ಲರೂ ಧರ್ಮದೇವನ ಪುತ್ರರೂ, ಸಾಧ್ಯ ದೇವತೆಗಳೂ, ವಿಶ್ವೇದೇವತೆಗಳೂ, ವಸುಗಳೂ ಆಗಿರುವರು.

ಅರಿಷ್ಟನೇಮಿಪತ್ನೀನಾಮಪತ್ಯಾನೀಹ ಷೋಡಶೇ।
ಬ್ರಹ್ಮಪುತ್ರಸ್ಯ ವಿದುಷಶ್ಚತಸ್ರೋ ವಿದ್ಯುತಃ ಸ್ಮೃತಾಃ ॥
ಪ್ರತ್ಯಂಗಿರಸಜಾಃ ಶ್ರೇಷ್ಠಾ ಋಚೋ ಬ್ರಹ್ಮರ್ಷಿಸತ್ಕೃತಾಃ ॥ ೭೭ ॥

ಕೃಶಾಶ್ವಸ್ಯ ತು ದೇವರ್ಷೇರ್ದೇವಪ್ರಹರಣಾಃ ಸ್ಮೃತಾಃ।
ಏತೇ ಯುಗಸಹಸ್ರಾಂತೇ ಜಾಯಂತೇ ಪುನರೇವ ಹಿ ॥ ೭೮ ॥

ಸರ್ವೇ ದೇವಗಣಾ ವಿಪ್ರಾಸ್ತ್ರಯಸ್ತ್ರಿಂಶತ್ತು ಛಂದಜಾಃ।
ಏತಾಷಾಮಪಿ ದೇವಾನಾಂ ನಿರೋಧೋತ್ಪತ್ತಿರುಚ್ಯತೇ ॥ ೭೯ ॥

ಯಥಾ ಸೂರ್ಯಸ್ಯ ಲೋಕೇಸ್ಮಿ ಉದಯಾಸ್ತಮಯಾವುಭೌ।
ಏತೇ ದೇವನಿಕಾಯಾಸ್ತೇ ಸಂಭವಂತಿ ಯುಗೇ ಯುಗೇ ॥ ೮೦ ॥

---

೭೭. ಅರಿಷ್ಟನಾಮಕನ ಪತ್ನಿಯರಿಗೆ ಹದಿನಾರು ಮಕ್ಕಳು ಹುಟ್ಟಿದುವು. ಬಹುಪುತ್ರನೂ ಜ್ಞಾನಿಯೂ ಆದ ಅರಿಷ್ಟನೇಮಿಗೆ ತೇಜಸ್ವಿಗಳಾದ ನಾಲ್ಕುಜನ ಮಕ್ಕಳು ಅವತರಿಸಿದರು ಅವರು ಅಂಗಿರಸಜರೂ, ಶ್ರೇಷ್ಠರೂ, ಬ್ರಹ್ಮರ್ಷಿಗಳಿಂದ ಪೂಜ್ಯರೂ, ಋಗಭಿಮಾನಿಗಳೂ, ದೇವತೆಗಳೂ ಆಗಿರುವರು.

೭೮. ದೇವರ್ಷಿಯಾದ ಕೃಶಾಶ್ವನಿಗೆ ದೇವಪ್ರಹರಣನಾಮಕರಾದ ಮಕ್ಕಳು ಜನಿಸಿದರು. ಅವರು ಪುನಃ ಒಂದು ಸಹಸ್ರ ಯುಗಗಳಾದ ತರುವಾಯ ಉದ್ಭವಿಸುವರು

೭೯. ಸಮಸ್ತವಾದ ಈ ಮೂವತ್ತಮೂರು ದೇವಗಣಗಳೂ, ಬ್ರಾಹ್ಮಣರಾಗಿಯೂ, ಸ್ವೇಚ್ಛೆಯಾಗಿ ಅವತರಿಸಿದವರೂ ಆಗಿರುವರು ಇಂತಹ ದೇವತೆಗಳ ಜನನ ಮರಣಗಳನ್ನು ನಿರೂಪಿಸುವೆನು ಕೇಳೆಂದನು.

೮೦. ಈ ಲೋಕದಲ್ಲಿ ಸೂರ್ಯನಿಗೆ ಉದಯಾಸ್ತಮಯಗಳು ಹೇಗೆ ಉಂಟಾಗುತ್ತವೆಯೋ, ಹಾಗೆಯೇ ಈ ದೇವತೆಗಳಿಗೂ, ದೇವಸಂಘಗಳಿಗೂ ಪ್ರತಿ ಯುಗಗಳಲ್ಲಿಯೂ ಜನನ ಮರಣಗಳು ಸ್ವೇಚ್ಛೆಯಾಗಿ ಸಂಭವಿಸುತ್ತವೆ.

॥ ಋಷಯ ಊಚುಃ ॥

ಸಾಧ್ಯಾಶ್ಚ ವಸವೋ ವಿಶ್ವೇ ರುದ್ರಾದಿತ್ಯಾಸ್ತಥೈವ ಚ ।
ಅಭಿಜಾತ್ಯಾ ಪ್ರಭಾವೈಶ್ಚ ಕರ್ಮಭಿಶ್ಚೈವ ವಿಶ್ರುತಾಃ ॥ ೮೧ ॥

ಪ್ರಜಾಪತೇಶ್ಚ ವಿಷ್ಣೋಶ್ಚ ಭವಸ್ಯ ಚ ಮಹಾತ್ಮನಃ ।
ಅಂತರಂ ಜ್ಞಾತುಮಿಚ್ಛಾಮೋ ಯಶ್ಚ ಯಸ್ಮಾದ್ವಿಶಿಷ್ಯತೇ ॥ ೮೨ ॥

ಯಶ್ಚ ಯಸ್ಮಾತ್ ಪ್ರಭವತಿ ಯಶ್ಚ ಯಸ್ಮಿನ್ ಪ್ರತಿಷ್ಠಿತಃ ।
ಜ್ಯಾಯಾನ್ಯೋ ಮಧ್ಯಮಶ್ಚೈವ ಕನೀಯಾನ್ ಯಶ್ಚ ತೇಷು ವೈ ॥ ೮೩ ॥

ಪ್ರಾಧಾನಭೂತೋ ಯಸ್ತೇಷಾಂ ಗುಣಭೂತಶ್ಚ ತೇಷು ಯಃ ।
ಕರ್ಮಭಿಶ್ಚಾಭಿಜಾತ್ಯಾ ಚ ಪ್ರಭಾವೇಣ ಚ ಯೋ ಮಹಾನ್ ॥
ಏತತ್ ಪ್ರಬ್ರೂಹಿ ನಃ ಸರ್ವಂ ತ್ವಂ ಹಿ ವೇತ್ಥ ಯಥಾಯಥಂ ॥ ೮೪ ॥

---

೮೧. ಮುನಿಗಳು ಹೇಳಿದರು.—ಎಲೈ ಸೂತಮುನಿಯೇ, ಸಾಧ್ಯರು, ವಸುಗಳು, ವಿಶ್ವೇದೇವತೆಗಳು, ಏಕಾದಶರುದ್ರರು ಮತ್ತು ದ್ವಾದಶಾದಿತ್ಯರು, ಇವರು ಸತ್ಕುಲಪ್ರಸೂತತೆಯಿಂದಲೂ, ಸಾಮರ್ಥ್ಯದಿಂದಲೂ, ಕಾರ್ಯಗಳಿಂದಲೂ ಲೋಕ ವಿಖ್ಯಾತರಾಗಿರುವರು.

೮೨ ಆದರೆ ಮಹಾತ್ಮರಾದ ಬ್ರಹ್ಮ, ವಿಷ್ಣು, ಮಹೇಶ್ವರ ಇವರಲ್ಲಿ ಯಾರು ಯಾರಿಗಿಂತ ಉತ್ತಮರು? ಅವರ ಪ್ರಭಾವವು ಎಂತಹದು? ಅವರ ಅಂತರವೇನು? ಇವರ ತಾರತಮ್ಯಗಳನ್ನು ತಿಳಿಯಲು ಬಯಸುತ್ತೇವೆ ಎಂದರು

೮೩-೮೪. ಎಲೈ ಮುನಿಯೇ, ಈ ಬ್ರಹ್ಮ, ವಿಷ್ಣು, ಮಹೇಶ್ವರರಲ್ಲಿ ಯಾರಿಂದ ಯಾರು ಹುಟ್ಟಿರುವರು? ಯಾರು ಯಾರನ್ನು ಆಶ್ರಯಿಸಿಕೊಂಡಿರುವರು? ಅವರಲ್ಲಿ ಯಾವನು ಉತ್ತಮನು? ಯಾವನು ಮಧ್ಯಮನು? ಯಾವನು ಕಿರಿಯವನು? ಅವರಲ್ಲಿ ಮುಖ್ಯನಾದವನು ಯಾವನು? ಅಮುಖ್ಯನು ಯಾರು? ಸತ್ಕರ್ಮ, ಸತ್ಕುಲ, ಸಾಮರ್ಥ್ಯ ಇವುಗಳಿಂದ ಯಾವನು ಶ್ರೇಷ್ಠನಾಗಿರುವನು? ಇವೆಲ್ಲವನ್ನೂ ಯಥಾಸ್ಥಿತವಾಗಿ ನೀನು ತಿಳಿದಿರುತ್ತೀಯೆ. ಆದುದರಿಂದ ಎಲ್ಲವನ್ನೂ ನಿಜವಾಗಿ ನಿರೂಪಿಸಬೇಕೆಂದು ಮುನಿಗಳು ಸೂತನನ್ನು ಬೇಡಿಕೊಂಡರು.

|| ಸೂತ ಉವಾಚ ||

ಅತ್ರ ವೋ ವರ್ಣಯಿಷ್ಯೇಹಮುಂತರೇಷು ಯತ್ ಸ್ಮೃತಂ ।
ಯದ್ಬ್ರಹ್ಮವಿಷ್ಣುರುದ್ರಾಣಾಂ ಶೃಣುಧ್ವಂ ಮೇ ವಿವಕ್ಷತಃ || ೮೫ ||

ರಾಜಸೀ ತಾಮಸೀ ಚೈವ ಸಾತ್ವಿಕೀ ಚೈವ ತಾಃ ಸ್ಮೃತಾಃ ।
ತನ್ವಃ ಸ್ವಯಂಭುವಃ ಪ್ರೋಕ್ತಾಃ ಕಾಲೇಕಾಲೆ ಭವಂತಿ ಯಾಃ || ೮೬ ||

ಏತಾಸಾಮುಂತರಂ ವಕ್ತುಂ ನೈವ ಶಕ್ಯಂ ದ್ವಿಜೋತ್ತಮಾಃ ।
ಗುಣವೃದ್ಧಿನಿಬಂಧತ್ವಾದ್ವಿಧಾನುಗ್ರಹಬಂಧತಃ || ೮೭ ||

ಪ್ರವೃತ್ತಿಂಚ ನಿವೃತ್ತಿಂಚ ಗುಣವೃದ್ಧಿಮಿಹ ದ್ವಿಜಾಃ ।
ಯಥಾಶಕ್ತಿ ಪ್ರವಕ್ಷ್ಯಾಮಿ ತನೂನಾಂತನ್ನಿಬೋಧತ || ೮೮ ||

---

೮೫. ಸೂತಪುರಾಣಿಕನು ಹೇಳಿದನು.—ಓ ವಿಪ್ರೋತ್ತಮರೇ, ಈ ಬ್ರಹ್ಮ, ವಿಷ್ಣು, ಮಹೇಶ್ವರರಲ್ಲಿ ಗುಣಕವರ್ಣಾದಿಗಳಿಂದ ಯಾವನುತ್ತಮನೆಂದು ನಾನು ಪೂರ್ವದಲ್ಲಿ ಜ್ಞಾನಿಗಳಿಂದ ಕೇಳಿ ಯಾವುದನ್ನು ತಿಳಿದಿರುವೆನೋ ಅದನ್ನು ನಿಮಗಾಗಿ ನಿರೂಪಿಸುವೆನು ಕೇಳಿರೆಂದನು

೮೬. ಬ್ರಹ್ಮದೇವನು ಸೃಷ್ಟಿಸುವ ಪ್ರತಿಯೊಂದು ಯುಗಗಳಲ್ಲಿಯೂ ಅವತರಿಸುವ ದೇವಾದಿಗಳ ಶರೀರವು (ತನುಗಳು) ರಾಜಸ, ಸಾತ್ವಿಕ, ತಾಮಸವೆಂಬುದಾಗಿ ಮೂರು ವಿಧಗಳಾಗಿವೆ. ಅವುಗಳ ಕಾರ್ಯಗಳೂ ಮೂರು ವಿಧಗಳಾಗಿವೆ.

೮೭. ಎಲೈ ವಿಪ್ರವರ್ಯರೇ, ಬ್ರಹ್ಮ, ವಿಷ್ಣು, ಮಹೇಶ್ವರರಲ್ಲಿ ತಾರತಮ್ಯವನ್ನು ಹೇಳಲು ಸಾಧ್ಯವೇ ಇಲ್ಲ. ಏಕೆಂದರೆ, ಈ ಶರೀರಗಳು ಗುಣವೃದ್ಧಿಗಳ ನಿಮಿತ್ತಕವಾಗಿಯೂ, ಅನುಗ್ರಹಪೂರ್ವಕವಾಗಿಯೂ ಇರುವುದರಿಂದ ಹೇಳಲಸಾಧ್ಯವಾಗಿರುತ್ತವೆ

೮೮. ಓ ದ್ವಿಜವರ್ಯರೇ, ಲೋಕದಲ್ಲಿ ಅವತರಿಸಿರುವ ಶರೀರಗಳ ಪ್ರವೃತ್ತಿನಿವೃತ್ತಿಗಳನ್ನೂ, ಗುಣವೃದ್ಧಿಗಳನ್ನೂ, ಯಥಾಸ್ಥಿತವಾಗಿಯೂ, ಶಕ್ತ್ಯನುಗುಣವಾಗಿಯೂ ತಿಳಿಸುವೆನು ಕೇಳಿರೆಂದನು.

ಏಕಾ ತು ಕುರುತೇ ತಾಸಾಂ ರಾಜಸೀ ಸರ್ವತಃ ಪ್ರಜಾಃ ।
ಏಕಾ ಸಾ ಕ್ಷಿಪತೇ ಕಾಲೇ ತಾಮಸೀ ಗ್ರಸತೇ ಪ್ರಜಾಃ ॥ ೮೯ ॥

ರಜಸಾ ತು ಸಮುದ್ರಿಕ್ತೋ ಬ್ರಹ್ಮಾ ಸಂಭವತೇ ಯದಾ ।
ಪುರುಷಾಖ್ಯಾ ತದಾ ತಸ್ಯ ಸಾತ್ವಿಕೀ ವಿನಿವರ್ತತೇ ॥ ೯೦ ॥

ಯದಾ ಭವತಿ ಕೌಲಾತ್ಮಾ ಹ್ಯುದ್ರೇಕಾತ್ತಮಸಸ್ತು ಸಃ ।
ಬ್ರಹ್ಮಾಖ್ಯಾ ಸಾ ತದಾ ತ್ವಸ್ಯ ರಾಜಸೀ ವಿನಿವರ್ತತೇ ॥ ೯೧ ॥

ಸತ್ವೋದ್ರೇಕಾತ್ತು ಪುರುಷೋ ಯದಾ ಭವತಿ ಸ ಪ್ರಭುಃ ।
ಕಾಲಾಖ್ಯಾ ಸ ತದಾ ತಸ್ಯ ಪುನರ್ನ ಭವತೀತಿ ವೈ ॥ ೯೨ ॥

---

೮೯–೯೦. ಅವುಗಳಲ್ಲಿ ಒಂದೂ ಬ್ರಹ್ಮರೂಪವೂ ಆದ ರಾಜಸಪ್ರಕೃತಿಯು ಸಕಲ ಪ್ರಜೆಗಳನ್ನೂ ಸೃಷ್ಟಿಸುವುದು. ಸಮುದ್ರಶಾಯಿಯೂ, ದ್ವಿತೀಯವೂ, ವಿಷ್ಣು ರೂಪಿಯೂ ಆದ ಸಾತ್ವಿಕ ಶರೀರವು ಆ ಪ್ರಜೆಗಳನ್ನು ಅನುಗ್ರಹಿಸಿ ಪಾಲಿಸುವುದು. ರುದ್ರರೂಪಿಯೂ ತಾಮಸವೂ ಆದ ಮೂರನೆಯ ತನವು ಪ್ರಲಯಕಾಲದಲ್ಲಿ ಆ ಪ್ರಜೆಗಳನ್ನು ಸಂಹರಿಸುವುದು

೯೧. ರಜೋಗುಣೋದ್ರೇಕದಿಂದ ಯಾವಾಗ ಸೃಷ್ಟಿಯನ್ನು ಮಾಡುವ ಬ್ರಹ್ಮನ ಶರೀರವು ಸಂಭವಿಸುವುದೋ, ಆಗ ಪುರುಷನೆಂಬ ನಾಮವುಳ್ಳ ವಿಷ್ಣುರೂಪವಾದ ಸಾತ್ವಿಕ ಶರೀರವು ಹೊರಟುಹೋಗುವುದು. ಅಂದರೆ ರಜೋಗುಣೋದ್ರೇಕದಿಂದ ಬ್ರಹ್ಮನ ಶರೀರವು ಸಂಭವಿಸುವುದು.

೯೨. ಹಾಗೆ ಸತ್ವಗಾಧಿಕ್ಯದಿಂದ ಪಾಲನಮಾಡತಕ್ಕ ವಿಷ್ಣುವಿನ ರೂಪವು ಯಾವಾಗ ಉಂಟಾಗುವುದೋ, ಆಗ ಕಾಲನಾಮಕವೂ, ತಮೋಗುಣಪ್ರಚುರವೂ ಆದ ರುದ್ರರೂಪವು ತಿರೋಹಿಗತವಾದುವು.

ಕ್ರಮಾತ್ತಸ್ಯ ನಿವರ್ತಂತೇ ರೂಪಂ ನಾಮ ಚ ಕರ್ಮ ಚ ।
ತ್ರೈಲೋಕ್ಯೇ ವರ್ತಮಾನಸ್ಯ ಸರ್ವಾನುಗ್ರಹನಿಗ್ರಹೈಃ ॥ ೯೩ ॥

ಯದಾ ಭವತಿ ಬ್ರಹ್ಮಾ ಚ ತದಾ ಚಾಂತರಮುಚ್ಯತೇ ।
ಯದಾ ಚ ಪುರುಷೋ ಬ್ರಹ್ಮಾ ನ ಚೈವ ಪುರುಷಸ್ತು ಸಃ ॥ ೯೪ ॥

ಮಣಿರ್ವಿಭಜತೇ ವರ್ಣಾನ್ ವಿಚಿತ್ರಾನ್ ಸ್ಫಟಿಕೇ ಯಥಾ ।
ನೈರ್ಮಲ್ಯಾದಾಶ್ರಯವಶಾತ್ತದ್ವರ್ಣಃ ಸ್ಯಾತ್ತದಂಜನಃ ॥ ೯೫ ॥

ತದಾ ಗುಣವಶಾತ್ತಸ್ಯ ಸ್ವಯಂಭೋರನುರಂಜನಂ ।
ಏಕತ್ವೇ ಚ ಪೃಥಕ್ತ್ವೇ ಚ ಪ್ರೋಕ್ತಮೇತನ್ನಿದರ್ಶನಂ ॥ ೯೬ ॥

---

೯೩. ಲೋಕಾನುಗ್ರಹಕ್ಕಾಗಿ ಅವತರಿಸಿರುವ ಬ್ರಹ್ಮ, ವಿಷ್ಣು, ಮಹೇಶ್ವರರ ನಾಮರೂಪಕಾರ್ಯಗಳು ಕ್ರಮವಾಗಿ ಮಾಯವಾಗುವುದು. ಅಂದರೆ, ಒಬ್ಬನೇ ಭಗವಂತನು ರಜೋಗುಣದಿಂದ ಬ್ರಹ್ಮರೂಪವನ್ನೂ, ಸತ್ತ್ವಗಣದಿಂದ ವಿಷ್ಣುರೂಪವನ್ನೂ, ತಮೋಗುಣದಿಂದ ರುದ್ರರೂಪವನ್ನೂ ಸ್ವೀಕರಿಸಿ, ಕ್ರಮವಾಗಿ ಸೃಷ್ಟಿ, ಸ್ಥಿತಿ, ಸಂಹಾರಗಳನ್ನು ಮಾಡುವನೆಂದು ಭಾವವು

೯೪. ಯಾವಾಗ ರಜೋಗುಣಾಧಿಕ್ಯದಿಂದ ಸೃಷ್ಟಿಕರ್ತನಾದ ಬ್ರಹ್ಮನಾಗುವನೋ ಆಗ ಬ್ರಹ್ಮ ವಿಷ್ಣುಗಳಿಗೆ ಭೇದವಿರುತ್ತದೆ ಯಾವಾಗ ಸತ್ವಗುಣಾಧಿಕ್ಯದಿಂದ ವಿಷ್ಣುವಾಗುವನೋ, ಆಗ ಬ್ರಹ್ಮನು ವಿಷ್ಣುವಾಗುವುದಿಲ್ಲ. ಇವರಿಬ್ಬರಿಗೂ ಅಂತರವಿರುತ್ತದೆ

೯೫. ಸ್ಫಟಿಕಮಣಿಯು ಶುಭ್ರವಾಗಿದ್ದರೂ ಜಪಾಕುಸುಮಾದಿ ಸಂಪರ್ಕದಿಂದ ನಾನಾ ವರ್ಣಗಳನ್ನು ಪಡೆಯುವಂತೆ, ಒಬ್ಬನೇ ಪುರುಷನು ವಿಮಲನಾಗಿಯೂ, ಆಶ್ರಯನಾಗಿಯೂ ಇರುವುದರಿಂದ ನಾನಾರೂಪನಾಗಿ ಕಾಣುವನು.

೯೬ ಸ್ಫಟಿಕಮಣಿಯಲ್ಲಿ ನಾನಾ ವರ್ಣಗಳು ತೋರುವಂತೆ, ಒಬ್ಬನೇ ಬ್ರಹ್ಮನಲ್ಲಿ ಸತ್ವರಜಸ್ತಮೋಗುಣ ಸಂಬಂಧದಿಂದ ನಾನಾ ರೂಪಗಳು ಕಾಣುತ್ತವೆ. ಹೀಗೆ ಒಬ್ಬನೆ, ಪುರುಷನು ಗುಣಸಂಬಂಧಕ್ಕಿಂತಲೂ ಮೊದಲು ಏಕರೂಪನಾಗಿರುವನು. ಗುಣಸಂಪರ್ಕಾನಂತರದಲ್ಲಿ ಸ್ಫಟಿಕಮಣಿಯಂತೆ ಭಿನ್ನಭಿನ್ನ ರೂಪಗಳು ತೋರುತ್ತವೆಯೆಂದು ದೃಷ್ಟಾಂತದ ಮೂಲಕವಾಗಿ ವಿವರಿಸಿರುತ್ತೇನೆಂದನು.

ಏಕೋ ಭೂತ್ವಾ ಯಥಾ ಮೇಘಃ ಪೃಥಕ್ತ್ವೇನಾವತಿಷ್ಠತೇ।
ರೂಪತೋ ವರ್ಣತಶ್ಚೈವ ತಥಾ ಗುಣವಶಾತ್ತು ಸಃ ॥ ೯೭ ॥

ಭವತ್ಯೇಕೋ ದ್ವಿಧಾ ಚೈವ ತ್ರಿಧಾ ಮೂರ್ತಿವಿನಾಶನಾತ್।
ಏಕೋ ಬ್ರಹ್ಮಾಂತಕೃಚ್ಚೈವ ಪುರುಷಶ್ಚೇತಿ ತೇ ತ್ರಯಃ ॥ ೯೮ ॥

ಏಕಸ್ಯೈತಾಃ ಸ್ಮೃತಾಸ್ತಿಸ್ರಸ್ತನವಸ್ತು ಸ್ವಯಂಭುವಃ।
ಬ್ರಾಹ್ಮೀ ಚ ಪೌರುಷೀ ಚೈವ ಅಂತಕಾರೀ ಚ ತೇ ತ್ರಯಃ ॥ ೯೯ ॥

ತತ್ರ ಯಾ ರಾಜಸೀ ತಸ್ಯ ತನುಃ ಸಾವೈ ಪ್ರಜಾಕರೀ।
ಯಾ ತಾಮಸೀ ತು ಕಾಲಾಖ್ಯಾ ಪ್ರಜಾಕ್ಷಯಕರೀ ತು ಸಾ ॥
ಸಾತ್ವಿಕೀ ಪೌರುಷೀ ಯಾ ತು ಸಾನುಗ್ರಹಕರೀ ಸ್ಮೃತಾ ॥ ೧೦೦ ॥

---

೯೭. ಅಖಂಡವಾದ ಒಂದೇ ಮೇಘವು ಗಾಳಿಯಿಂದ ಭಿನ್ನಭಿನ್ನವಾಗಿ ಚೆದರಿ ನಾನಾರೂಪವಾಗಿಯೂ, ವಿವಿಧಾಕಾರವಾಗಿಯೂ ಹೇಗೆ ಕಾಣುವುದೋ ಹಾಗ, ಒಬ್ಬನೇ ಪುರುಷನು ಸತ್ವಾದಿಗುಣದಿಂದ ನಾನಾಕಾರವಾಗಿ ಕಾಣಿಸುವನು

೯೮. ಒಬ್ಬನೇ ಪುರುಷನೇ ಬ್ರಹ್ಮವಿಷ್ಣ್ವಾದಿ ದ್ವಿರೂಪನಾಗಿಯೂ, ತ್ರಿರೂಪನಾಗಿಯೂ ಕಾಣಿಸುವನು. ಒಬ್ಬ ಪುರುಷನೆ, ಬ್ರಹ್ಮಾಂತಕನೂ, ಪುರುಷತ್ರಯ ರೂಪನೂ ಆಗಿ ಹೊಳಯುವನು.

೯೯. ಒಬ್ಬನೇ ಬ್ರಹ್ಮನಿಗೆ ಬ್ರಹ್ಮ, ವಿಷ್ಣು, ಮಹೇಶ್ವರವೆಂಬ (ರೂಪವಾದ) ಮೂರು ರೂಪಗಳು ಸಂಭವಿಸಿರುತ್ತವೆ. ಪರಮಪುರುಷನೊಬ್ಬನೇ ರಜೋಗುಣದಿಂದ ಬ್ರಹ್ಮರೂಪಿಯೂ, ಸತ್ವಗುಣದಿಂದ ವಿಷ್ಣುರೂಪಿಯೂ, ತಮೋಗುಣದಿಂದ ರುದ್ರ ರೂಪಿಯೂ ಆಗಿ, ಸೃಷ್ಟಿ ಸ್ಥಿತಿ ಸಂಹಾರಗಳನ್ನು ಮಾಡುವನು

೧೦೦. ಆ ಮೂರು ರೂಪಗಳಲ್ಲಿ ರಜೋಗುಣಪ್ರಚುರವಾದ ಶರೀರವು ಸೃಷ್ಟಿಯನ್ನು ಮಾಡುವುದು. ಸತ್ವಗುಣಾಧಿಕವಾದ ದೇಹವು ಪಾಲನೆಯನ್ನು ಮಾಡುವುದು. ತಮೋಗುಣಪ್ರಚುರವಾದ ರುದ್ರರೂಪವು ಪ್ರಲಯಕಾರಿಯಾಗಿಯೂ ಇರುವುದೆಂದು ಜ್ಞಾನಿಗಳು ಹೇಳುವರು.

**ರಾಜಸ್ಯಾ ಬ್ರಹ್ಮಣೋಽಂಶೇನ ಮರೀಚೇಃ ಕಶ್ಯಪೋಽಭವತ್ ।**
**ತಾಮಸೀ ಚಾಂತಕೃದ್ಯಾ ತು ತದಂಶೇನಾಭವದ್ಭವಃ ॥ ೧೦೧ ॥**

**ಸಾತ್ತ್ವಿಕೀ ಪೌರುಷೀ ಯಾ ಸಾ ತಸ್ಯಾಃ ಶೋಚಿಷ್ಣುರುಚ್ಯತೇ ।**
**ತ್ರೈಲೋಕ್ಯೇ ತಾಃ ಸ್ಮೃತಾಸ್ತಿಸ್ರಸ್ತನವಸು ಸ್ವಯಂಭುವಃ ॥ ೧೦೨ ॥**

**ನಾನಾಪ್ರಯೋಜನಾರ್ಥಾಂ ಹಿ ಕಾಲೋಽವಸ್ಥಾಂ ಕರೋತಿ ಯಃ ।**
**ಬ್ರಹ್ಮತ್ವೇನ ಪ್ರಜಾಃ ಸೃಷ್ಟ್ವಾ ವಿಷ್ಣುತ್ವೇ ನಾನುಗೃಹ್ಯ ಚ ।**
**ವೈಷ್ಣವಾನುಗೃಹೀತಾಸ್ತಾ ತಾದ್ರ್ಯನುಗ್ರಸತೇ ಪುನಃ ॥ ೧೦೩ ॥**

**ಏಕಃ ಸ್ವಯಂಭುವಃ ಕಾಲಸ್ತ್ರಿಭಿಸ್ತ್ರೀನ್ ವ್ಯೈಕರೋತಿಸಃ ।**
**ಸೃಜತೇ ಚಾನುಗೃಹ್ಣಾನಿ ಪ್ರಜಾಃ ಸಂಹರತೇ ತಥಾ ॥ ೧೦೪ ॥**

---

೧೦೧. ರಜೋಗುಣಪ್ರಚುರನಾದ ಬ್ರಹ್ಮದೇವನ ಅಂಶದಿಂದ ಮರೀಚಿ ಪುತ್ರನಾದ ಕಶ್ಯಪನು ಅವತರಿಸಿ ಪ್ರಜೆಗಳನ್ನು ಸೃಷ್ಟಿಮಾಡುವನು. ತಮೋಗುಣ ಪ್ರಚುರನಾದ ರುದ್ರದೇವನ ಅಂಶದಿಂದ ಭವನೆಂಬ ನಾಮದಿಂದ ಅವತರಿಸಿ ಸಂಹಾರ ಮಾಡುವನು

೧೦೨. ಸತ್ವಗುಣಪ್ರಚುರವಾದ ಯಾವ ವಿಷ್ಣುರೂಪವಿರುತ್ತದೆಯೋ, ಆ ವಿಷ್ಣುವಿನ ಅಂಶವು ಶೋಚಿಷ್ಣುನಾಮದಿಂದ ಅವತರಿಸಿ ಪಾಲನೆ ಮಾಡುವದು. ಹೀಗೆ ಮೂರುಲೋಕಗಳಲ್ಲಿಯೂ ಪರಬ್ರಹ್ಮನ ಗುಣತ್ರಯವಿಶಿಷ್ಟವಾದ ಮೂರು ರೂಪಗಳು ಪ್ರಖ್ಯಾತವಾಗಿವೆ.

೧೦೩. ಯಾವ ಪರಮ ಪುರುಷನು ಲೋಕಗಳಲ್ಲಿ ನಾನಾವಿಧ ಪ್ರಯೋಜನ ವನ್ನು ಮಾಡುವುದಕ್ಕಾಗಿ ಅನೇಕ ರೂಪನಾಗಿ ಅವತರಿಸಿರುವನೋ, ಆ ಪರಮ ಪುರುಷನೇ ಬ್ರಹ್ಮರೂಪದಿಂದ ಪ್ರಜೆಗಳನ್ನು ಸೃಷ್ಟಿಸಿ, ವಿಷ್ಣುರೂಪದಿಂದ ಪಾಲಿಸು ವನು. ಹೀಗೆ ವಿಷ್ಣುರೂಪದಿಂದ ಪಾಲಿತವಾದ ಪ್ರಜೆಗಳನ್ನು ರುದ್ರರೂಪದಿಂದ ಸಂಹಾರಮಾಡುವನು.

೧೦೪. ಕಾಲರೂಪಿಯಾದ ಬ್ರಹ್ಮನು ಸೃಷ್ಟಿಕಾಲದಲ್ಲಿ ಸೃಷ್ಟಿಯನ್ನೂ, ರಕ್ಷಣಾಕಾಲದಲ್ಲಿ ರಕ್ಷಣೆಯನ್ನೂ, ಸಂಹಾರಕಾಲದಲ್ಲಿ ಸಂಹಾರವನ್ನೂ ಮಾಡುವನು.

ಇತ್ಯೇತಾಃ ಕಥಿತಾಸ್ತಿಸ್ರಸ್ತನವಸ್ತು ಸ್ವಯಂಭುವಃ ।
ಪ್ರಜಾಪತ್ಯಾ ಚ ತಾದ್ರೀ ಚ ವೈಷ್ಣವೀ ಚೈವತಾಃ ಸ್ಮೃತಾಃ || ೧೦೫ ||

ಏಕಾ ತನುಃ ಸ್ಮೃತಾ ವೇದೇ ಧರ್ಮಶಾಸ್ತ್ರೇ ಪುರಾತನೇ ।
ಸಂಖ್ಯಾಯೋಗಪರೇ ವೀರೈಃ ಪೃಥಕ್‌ತ್ವೈ ಕತ್ವದರ್ಶಿಭಿಃ ।
ಅಭಿಜಾತಪ್ರಭಾವಜ್ಞೈ ಋರ್ಷಿಭಿಸ್ತ ತ್ವದರ್ಶಿಭಿಃ || ೧೦೬ ||

ಏಕತ್ವೇ ಚ ಪೃಥುಕ್ತ್ವೇ ಚ ತಾಸು ಭಿನ್ನಾಃ ಪ್ರಜಾಸ್ತ್ವಿಹ ।
ಇದಂ ಪರಮಿದಂ ನೇತಿ ಬ್ರುವತೋ ಭಿನ್ನದರ್ಶನಃ || ೧೦೭ ||

ಬ್ರಹ್ಮಾಣಂ ಕಾರಣಂ ಕೇಚಿತ್ ಕೇಚಿತ್ ಪ್ರಾಹುಃ ಪ್ರಜಾಪತಿಂ ।
ತೇಚಿಚ್ಛಿವಂ ಪರತ್ವೇನ ಪ್ರಾಹುರ್ವಿಷ್ಣುಂ ತಥಾಽಪರೇ ।
ಅವಿಜ್ಞಾನೇನ ಸಂಸಕ್ತಾಃ ಸಕ್ತಾ ರತ್ಯಾದಿಚೇತಸಾ || ೧೦೮ ||

---

೧೦೫. ಬ್ರಹ್ಮದೇವನಿಗೆ ಈ ರೀತಿಯಾಗಿ ಮೂರುವಿಧಗಳಾದ ಶರೀರಗಳು ಪ್ರಖ್ಯಾತವಾಗಿವೆ ಅವು ಪ್ರಜಾಪತಿಯ ತನು, ವಿಷ್ಣುವಿನ ಆಕಾರ, ರುದ್ರನ ಶರೀರ ವೆಂಬುದಾಗಿ ಮೂರು ವಿಧಗಳಾಗಿವೆ.

೧೦೬. ಸಾಂಖ್ಯಯೋಗಶಾಸ್ತ್ರಜ್ಞರೂ, ವೀರರೂ, ಏಕತ್ವ ಮತ್ತು ನಾನಾತ್ವ ದರ್ಶಿಗಳೂ, ಸತ್ಕುಲಪ್ರಸೂತರೂ, ಪ್ರಭಾವಶಾಲಿಗಳೂ, ತತ್ವದರ್ಶಿಗಳೂ ಆದ ಮಹರ್ಷಿಗಳು ಭಗವಂತನ ಶರೀರಗಳು ಪುರಾತನವಾದ ವೇದ, ಧರ್ಮಶಾಸ್ತ್ರ, ಸಾಂಖ್ಯಯೋಗಗಳು ಇವುಗಳಲ್ಲಿ ವರ್ಣಿತವಾಗಿವೆಯೆಂದು ಹೇಳುವರು

೧೦೭. ಈ ಲೋಕಗಳಲ್ಲಿ ಭಿನ್ನಭಿನ್ನರಾದ ಪ್ರಜೆಗಳಲ್ಲಿ ಕೆಲವರು ಆ ಭಗವದ್ರೂಪಗಳಲ್ಲಿ ಅಭೇದವನ್ನು ಹೇಳುವರು. ಕೆಲವು ಪ್ರಜೆಗಳು ಆ ರೂಪಗಳಿಗೆ ಭೇದವನ್ನು ಹೇಳುವರು. ಭೇದವಾದಿಗಳು ಈ ಭಗವದ್ರೂಪವು ಉತ್ತಮವೆಂದೂ ಮಧ್ಯಮವೆಂದೂ ಉತ್ತಮವಲ್ಲವೆಂದೂ ಹೇಳುವರು

೧೦೮. ಕೆಲವರು ಬ್ರಹ್ಮನೇ ಈ ಜಗತ್ತಿಗೆ ಮೂಲಕಾರಣನೆಂದು ಹೇಳುವರು. ಮತ್ತೆ ಕೆಲವರು ಚತುರ್ಮುಖನೇ ಮುಖ್ಯ ಕಾರಣನೆನ್ನುವರು. ಇನ್ನು ಕೆಲವರು ಶಿವನನ್ನು ಉತ್ತಮನೆಂದು ತಿಳಿಸುವರು. ಇತರರು ವಿಷ್ಣುವನ್ನು ಸರ್ವೋತ್ತಮನೆಂದು ಪ್ರತಿಪಾದಿಸುವರು. ಅಜ್ಞಾನದಿಂದಲೂ, ಅಭಿಮಾನದಿಂದಲೂ, ಕಾಮಕ್ರೋಧಾದಿಗಳಿಂದಲೂ ಯುಕ್ತರಾದ ಪ್ರಜಗಳು ನಾನಾ ರೀತಿಯಾಗಿ ಹೇಳುವರು.

ತತ್ವಂ ಕಾಲಂಚ ದೇಶಂಚ ಕಾರ್ಯೋಣ್ಯಾವೇಕ್ಷ್ಯ ತತ್ವತಃ ।
ಕಾರಣಂಚ ಸ್ಮೃತಾ ಹ್ಯೇತಾ ನಾನಾರ್ಥೇಷ್ವಿಹ ದೇವತಾಃ ॥ ೧೦೯ ॥

ಏಕಂ ನಿಂದತಿ ಯಸ್ತೇಷಾಂ ಸರ್ವಾನೇವ ಸ ನಿಂದತಿ ।
ಏಕಂ ಪ್ರಶಂಸಮಾನಸ್ತು ಸರ್ವಾನೇವ ಪ್ರಶಂಸತಿ ।

ಏಕಂ ಯೋ ವೇತ್ತಿ ಪುರುಷಂ ತಮಾಹುರ್ಬ್ರಹ್ಮವಾದಿನಂ ॥ ೧೧೦ ॥
ಅದ್ವೇಷಸ್ತು ಸದಾ ಕಾರ್ಯೋ ದೇವತಾಸು ವಿಜಾನತಾ ।
ನ ಶಕ್ಯಮೀಶ್ವರಂ ಜ್ಞಾತು ಮೈಶ್ವರ್ಯೇಣ ವ್ಯವಸ್ಥಿತಂ ॥ ೧೧೧ ॥

ಏಕಾತ್ಮಾ ಸ ತ್ರಿಧಾ ಭೂತ್ವಾ ಸಂಮೋಹಯತಿ ಯಃ ಪ್ರಜಾಃ
ಏತೇಷಾಂಚ ತ್ರಯಾಣಾಂ ತು ವಿಚರಂ ತ್ಯಂತರಂ ಜನಾಃ ॥ ೧೧೨ ॥

---

೧೦೯. ಪರಾಪರ ತತ್ವಗಳನ್ನೂ, ಕಾಲದೇಶ ವರ್ತಮಾನಗಳನ್ನೂ, ಕಾರ್ಯಕಾರಣಗಳನ್ನೂ, ತತ್ವತಃ ಅರಿತಿರುವ ಈ ದೇವತೆಗಳು ನಾನಾವಿಧ ವಸ್ತುಗಳಲ್ಲಿ ನಾನಾ ರೂಪಗಳನ್ನು ತಿಳಿಯಲು ಕಾರಣರಾಗಿರುತ್ತಾರೆ.

೧೧೦. ಯಾವ ಪುರುಷನು ಬ್ರಹ್ಮ, ವಿಷ್ಣು, ಮಹೇಶ್ವರರಲ್ಲಿ ಒಬ್ಬರನ್ನು ದೂಷಿಸುವನೋ, ಅವನು ಸರ್ವರನ್ನೂ ದೂಷಿಸಿದ ಹಾಗೆಯೇ ಆಗುವುದು. ಅವರಲ್ಲಿ ಒಬ್ಬನನ್ನು ಹೊಗಳಿದರೆ ಸರ್ವರನ್ನೂ ಹೊಗಳಿದಂತೆ ಆಗುವುದು. ಆ ಮೂವರಲ್ಲಿ ಒಬ್ಬರನ್ನರಿತ ಪುರುಷನು ಬ್ರಹ್ಮಜ್ಞಾನಿಯಾಗುವನೆಂದು ಜ್ಞಾನಿಗಳು ಹೇಳುವರು

೧೧೧. ವಿವೇಕಿಯಾದ ಪುರುಷನು ಬ್ರಹ್ಮ, ವಿಷ್ಣು, ಮಹೇಶ್ವರ ರೂಪರಾದ ದೇವತೆಗಳಲ್ಲಿ ಯಾವಾಗಲೂ ದ್ವೇಷವನ್ನು ಮಾಡಬಾರದು. ಪ್ರೀತಿಯನ್ನೇ ಸದಾಕಾಲ ದಲ್ಲಿಯೂ ಮಾಡಬೇಕು. ಪರಮೈಶ್ವರ್ಯದಿಂದ ಕೂಡಿರುವ ಪರಮ ಪುರುಷನನ್ನು ಯಥಾರ್ಥವಾಗಿ ತಿಳಿಯಲು ಸಾಧ್ಯವೇ ಇಲ್ಲ.

೧೧೨. ಏಕರೂಪಿಯಾದ ಪರಮ ಪುರುಷನು ಒಬ್ಬನೇ ಆದರೂ, ಮೂರು ರೂಪಗಳಿಂದ ಪ್ರಜೆಗಳನ್ನು ಮೋಹಗೊಳಿಸುವನು. ಪ್ರಜೆಗಳು ಈ ಮೂರು ರೂಪಗಳ ಮಧ್ಯದಲ್ಲಿಯೇ ಸಿಕ್ಕಿಕೊಂಡು ಸಂಚರಿಸುವರು.

ಜಿಜ್ಞಾಸಂತಃ ಪರೀಕ್ಷಂತಃ ಸಕ್ತಾ ರೂಪಾವಿಚೇತಸಃ ।
ಇದಂ ಪರಮಿದಂ ನೇತಿ ವದಂತಿ ಭಿನ್ನದರ್ಶಿನಃ ॥ ೧೧೩ ॥

ಯಾತುಧಾನಾನ್ ವಿಶಂತ್ಯೇತಾಃ ಪಿಶಾಚಾಂಶ್ಚೈವತಾನ್ನರಾನ್ ।
ಏಕತ್ವೇನ ಪೃಥುಕ್ತ್ವೇನ ಸ್ವಯಂಭೂರ್ವ್ಯವತಿಷ್ಠತೇ ॥ ೧೧೪ ॥

ಗುಣಮಾತ್ರಾತ್ಮಿಕಾಭಿಸ್ತು ತನುಭಿರ್ಮೋಹಯನ್ ಪ್ರಜಾಃ ।
ತೇಷ್ವೇಕಂ ಯಜತೇ ಯಸ್ತು ಸ ತದಾಯಜಿತೇ ತ್ರಯಂ ॥ ೧೧೫ ॥

ತಸ್ಮಾದ್ದೇವಾಸ್ತ್ರಯೋ ಹ್ಯೇತೇ ನೈರಂತರ್ಯೇಣ ವ್ಯವಸ್ಥಿತಾಃ ।
ತಸ್ಮಾತ್ ಪೃಥಕ್ತ್ವಮೇಕ ತ್ವ ಸಂಖ್ಯಾ ಸಂಖ್ಯಾಗತಾಗತಂ ।
ಏಕತಂವಾ ಬಹು ತ್ವಂ ವಾತೇಷು ಕೋಜ್ಞಾತುಮರ್ಹತಿ ॥ ೧೧೬ ॥

---

೧೧೩. ವಿಚಾರವನ್ನೂ ಪರೀಕ್ಷೆಯನ್ನೂ ಮಾಡುವ ಜ್ಞಾನಿಗಳು ಭಗವದ್ವಿಷಯದಲ್ಲಿ ಆಸಕ್ತರಾಗಿ ರೂಪವಿಶೇಷಗಳನ್ನು ತಿಳಿಯುದವರಾಗಿರುವರು. ಇದು ಉತ್ತಮವಾಗಿದೆ. ಇದು ಶ್ರೇಷ್ಠವಲ್ಲವೆಂದು ಭೇದವಾದಿಗಳು ಹೇಳುವರು.

೧೧೪. ಹೀಗೆ ಈ ತ್ರಿಮೂರ್ತಿಗಳು ರಾಕ್ಷಸರನ್ನೂ, ಪಿಶಾಚಗಳನ್ನೂ, ಪುರುಷರನ್ನೂ ಪ್ರವೇಶಿಸಿರುವರು. ಬ್ರಹ್ಮದೇವನಾದರೋ ಏಕರೂಪನಾಗಿಯೂ, ಭಿನ್ನರೂಪನಾಗಿಯೂ ಇರುವನು.

೧೧೫. ಅಂತಹ ಬ್ರಹ್ಮದೇವನು ಸತ್ವರಜಸ್ತಮೋಗುಣಗಳಿಂದಲೂ, ತನ್ಮಾತ್ರೆಗಳಿಂದಲೂ ಕೂಡಿರುವ ಶರೀರಗಳಿಂದ ಪ್ರಜೆಗಳನ್ನು ಮೋಹಗೊಳಿಸಿರುವನು. ಆ ಮೂವರಲ್ಲಿ ಒಬ್ಬನು (ಅವತರಿಸಿವರೆ ಮಿಕ್ಕವರೂ ಕೂಡ ಈ ಭೂಮಿಯಲ್ಲಿ ಅವತರಿಸುವರು. ಹೀಗೆ ಮೂವರೂ ಏಕಾಭಿಪ್ರಾಯವುಳ್ಳವರಾಗಿರುವರು) ಒಬ್ಬನು ಪೂಜಿತನಾದ ರೆಮೂವರೂ ಪೂಜಿಸಲ್ಪಡುವರು.

೧೧೬. ಆದುದರಿಂದ ಈ ಮೂವರು ದೇವತೆಗಳೂ ನಿರಂತರ ಸಂಬಂಧರಾಗಿರುವರು. ಇದರಂತೆಯೇ ಏಕತ್ವ ಬಹುತ್ವಗಳೂ, ಸಂಖ್ಯಾಸಂಖ್ಯೆಗಳೂ, ಗಮನಾಗಮನಗಳೂ ಅವರಲ್ಲಿ ಸಹಜಗಳಾಗಿರುವುವು. ಆದುದರಿಂದ ಅವರಲ್ಲಿ ಏಕತ್ವಬಹುತ್ವಾದಿಗಳನ್ನು ತಿಳಿಯಲು ಯಾರಿಗೆ ಸಾಮರ್ಥ್ಯವಿರುವುದು? ಯಾರಿಗೂ ಶಕ್ತಿಯಿಲ್ಲ.

ಯಸ್ಮಾತ್ ಸೃಷ್ಟ್ವಾನುಗೃಹ್ಣೀತೇ ಗ್ರಸತೇ ಚೈವ ತೇ ಪ್ರಜಾಃ ।
ಗುಣಾತ್ಮ ಕತ್ವಾತ್ತ್ರೈ ಕಾಲ್ಯೇ ತಸ್ಮಾದೇಕಃ ಸ ಉಚ್ಯತೇ ॥ ೧೧೭ ॥

ರುದ್ರಂ ಬ್ರಹ್ಮಾಣಮಿಂದ್ರಂಚ ಲೋಕಪಾಲಾನ್ ಋಷೀನ್ ದನೂನ್ ।
ದೇವಂ ತಮೇಕಂ ಬಹುಧಾ ಪ್ರಾಹುರ್ನಾರಾಯಣಂ ದ್ವಿಜಾಃ ॥ ೧೧೮ ॥

ಪ್ರಜಾಪತ್ಯಾ ತನುರ್ಯಾ ಚ ತನುರ್ಯಾ ಚೈವ ವೈಷ್ಣವೀ ।
ಮನ್ವಂತರೇ ಚ ಕಲ್ಪೇ ಚ ಆವರ್ತಂತೇ ಪುನಃ ಪುನಃ ॥ ೧೧೯ ॥

ತೇಜಸಾ ಯಶಸಾ ಬುದ್ಧ್ಯಾ ಶ್ರುತೇನಚ ಬಲೇನ ಚ ।
ಜಾಯಂತೇ ತತ್ಸಮಾಶ್ಚೈವ ತಾನಪೀಹ ನಿಬೋಧತ ॥ ೧೨೦ ॥

---

೧೧೭. ಆದುದರಿಂದ ತ್ರಿಗುಣಾತ್ಮಕವಾದ ಈ ಜಗತ್ತಿನಲ್ಲಿ ಆ ಭಗವಂತನು ಒಬ್ಬನೇ ಪ್ರಜೆಗಳ ಸೃಷ್ಟಿ ಸ್ಥಿತಿ ಸಂಹಾರಗಳನ್ನು ಮಾಡುವನು ಕೇವಲ ಶುದ್ಧ ಸತ್ವರೂಪವಾದ ಮೋಕ್ಷದಲ್ಲಿ ಪರಮಾತ್ಮನೊಬ್ಬನೇ ಪ್ರಕಾಶಿಸುವನು.

೧೧೮. ಮಹಾತ್ಮನಾದ ಶ್ರೀಮನ್ನಾರಾಯಣನೊಬ್ಬನೇ ರುದ್ರ, ಬ್ರಹ್ಮ, ಇಂದ್ರ ಲೋಕಪಾಲಕರು, ಋಷಿಗಳು, ಮುನಿಗಳು, ದಾನವರು, ದೇವತೆಗಳು ಇವರ ರೂಪಗಳಾಗಿ ಕಾಣುವನೆಂದು ಬ್ರಾಹ್ಮಣರು ದೇವನಾದ ಶ್ರೀಹರಿಯನ್ನು ಹೊಗಳುವರು.

೧೧೯. ಪ್ರಜಾಪತಿಯ ಸಂಬಂಧವಾದ ಶರೀರ, ವಿಷ್ಣು ಸಂಬಂಧಿಯಾದ ತನು ಇವುಗಳು ಯಾವುವಿವೆಯೋ ಅವುಗಳು ಪ್ರತಿ ಮನ್ವಂತರಗಳಲ್ಲಿಯೂ, ಪ್ರತಿ ಕಲ್ಪಗಳ ಲ್ಲಿಯೂ ಪುನಃ ಪುನಃ ಅವತರಿಸುತ್ತವೆ.

೧೨೦. ಆ ಮೂರ್ತಿಗಳು ಅವತರಿಸುವಾಗ ಶಕ್ತಿ, ಯಶಸ್ಸು, ಬುದ್ಧಿ, ಜ್ಞಾನ, ಬಲ ಇವುಗಳಿಂದ ಕೂಡಿಯೇ ಸಮವಾಗಿಯೇ ಇರುತ್ತವೆ. ಯಾವ ರೂಪಗಳಲ್ಲಿ ಈ ಅಂಶಗಳಿರುತ್ತವೆಯೋ, ಆ ರೂಪಗಳು ತೇಜಸ್ಸೇ ಮೊದಲಾದುವುಗಳಿಂದ ಒಂದೇ ಸಮನಾಗಿರುವುವು. ಈ ವಿಷಯಗಳನ್ನು ತಿಳಿಸುವೆನು ಕೇಳಿರೆಂದನು.

**ರಾಜಸ್ಯಾ ಬ್ರಾಹ್ಮಣೋಽಂಶೇನ ಮರೀಚಿಃ ಕಶ್ಯಪೋಽಭವತ್ ।**
**ತಾಮಸ್ಯಾಸ್ತಸ್ಯ ಚಾಂಶೇನ ಕಾಲಾತ್ಮಾ ರುದ್ರ ಉಚ್ಯತೇ ॥**
**ಸಾತ್ವಿಕ್ಯಾಃ ಪುರುಷಾಂಶೇನ ಯಜ್ಞೋ ವಿಷ್ಣು ರಭೂತ್ತದಾ ॥ ೧೨೧ ॥**

**ತ್ರಿಷು ಕಾಲೇಷು ತಸ್ಯೈತಾ ಬ್ರಹ್ಮಣಸ್ತನವೋಽಂ ಶಜಾಃ ।**
**ಕಾಲೋ ಭೂತ್ವಾ ಪುನಶ್ಚಾ ಸೌ ರುದ್ರಃ ಸಂಹಸತೆ ಪ್ರಜಾಃ ॥ ೧೨೨ ॥**

**ಸಂಪ್ರಾಪ್ತೇ ಚೈವ ಕಲ್ಪಾಂತೇ ಸಪ್ತರಶ್ಮಿರ್ದಿವಾಕರಃ ।**
**ಭೂತ್ವಾ ಸಂವರ್ತಕಾದಿತ್ಯೋ ಲೋಕಾಂಸ್ತ್ರೀನ್ ಸ ತದಾದಹತ್ ॥ ೧೨೩ ॥**

**ವಿಷ್ಣುಃ ಪ್ರಜಾನುಗೃಹ್ಣಾತಿ ನಾಮರೂಪ ವಿಪರ್ಯಯೇ ।**
**ತಸ್ಯಾಂತಸ್ಯಾಮವಸ್ಥಾಯಾಂ ತತ್ತದುತ್ಪತ್ತಿಕಾರಣಂ ॥ ೧೨೪ ॥**

---

೧೨೧. ಅವುಗಳಲ್ಲಿ ರಜೋಗುಣ ಸಂಬಂಧಿಯಾದ ಬ್ರಹ್ಮನ ಅಂಶದಿಂದ ಮರೀಚಿ ಪುತ್ರನಾದ ಕಶ್ಯಪನು ಜನಿಸಿದನು. ತಮೋಗುಣಸಂಬಂಧಿಯಾದ ಆ ದೇವನ ಅಂಶದಿಂದ ರುದ್ರನಾಗಿ ಅವತರಿಸಿ ಪ್ರಜೆಗಳನ್ನು ಸಂಹರಿಸುವನು. ಸತ್ವಗುಣ ಸಂಬಂಧಿಯಾದ ಪುರುಷನ ಅಂಶದಿಂದ ವಿಷ್ಣುವಾಗಿ ಜನಿಸಿ ಪ್ರಜಾಪಾಲನೆಯನ್ನು ಮಾಡುವನು.

೧೨೨. ಮೂರುಲೋಕದಲ್ಲಿಯೂ ಪರಮ ಪುರುಷನ ಅಂಶಗಳಿಂದ ಈ ಮೂರು ರೂಪಗಳೂ ಅವತರಿಸುತ್ತವೆ. ಅವುಗಳಲ್ಲಿ ತಮೋಗುಣಯುಕ್ತನಾದ ರುದ್ರದೇವನು ಅವತರಿಸಿ ಕಾಲರೂಪಿಯಾಗಿ ಪ್ರಜೆಗಳನ್ನು ಸಂಹಾರಮಾಡುವನು

೧೨೩. ಪ್ರಲಯಕಾಲವು ಸಂಭವಿಸಲು ಸೂರ್ಯನು ಸಪ್ತರಶ್ಮಿಗಳಿಂದ ಯಾದಿತ್ಯನಾಗಿ ಅವತರಿಸಿ, ಮೂರು ಲೋಕಗಳನ್ನೂ ತನ್ನ ರಶ್ಮಿಗಳಿಂದ ದಹಿಸುವನು.

೧೨೪. ನಾಮರೂಪಗಳು ವಿಪರ್ಯಯವಾಗಿ ವಿಷ್ಣರೂಪದಿಂದ ಅವತಾರ ಮಾಡಿದಾಗ ಪ್ರಜೆಗಳನ್ನು ಪರಿಪಾಲಿಸುವನು. ಹೀಗೆ ಭಗವಂತನು ಸೃಷ್ಟಿಯನ್ನು ಮಾಡುವಾಗ, ಬ್ರಹ್ಮರೂಪವನ್ನು ರಕ್ಷಿಸುವಾಗ, ವಿಷ್ಣುರೂಪವನ್ನು ಸಂಹರಿಸುವಾಗ ರುದ್ರರೂಪವನ್ನು ಹೊಂದುವನು.

ಸತ್ತ್ವೋದ್ರಿಕ್ತಾ ತು ಯಾ ಪ್ರೋಕ್ತಾ ಬ್ರಹ್ಮಣಃ ಪೌರುಷೀತನುಃ ।
ತಸ್ಯಾಂಶೇನ ವಿಜಜ್ಞೇ ಸ ಇಹ ಸ್ವಾಯಂಭುವೇಂತರೇ ॥
ಆಕೂತ್ಯಾಂ ಮನಸೋ ದೇವ ಉತ್ಪನ್ನಃ ಪ್ರಥಮೋ ವಿಭುಃ ॥ ೧೨೫ ॥

ತತಃ ಪುನಃ ಸ ವೈ ದೇವೋ ಪ್ರಾಪ್ತೇ ಸ್ವಾರೋಚಿಷೇಂತರೇ ।
ತುಷಿತಾಯಾಂ ಸಮುತ್ಪನ್ನೋ ಹ್ಯತೀತಸ್ತುಷಿ ತೈಃಸಹ ॥ ೧೨೬ ॥

ಔತ್ತಮೇ ಚಾಂತರೇ ಚೈವ ತುಷಿತಸ್ತು ವಿದುಃ ಸವೈ ।
ವಶವರ್ತಿಭಿರುತ್ಪನೋ ವಶವರ್ತೀ ಹರಿಃ ಪುನಃ ॥ ೧೨೭ ॥

ಸತ್ಯಾಯಾಮಭವತ್ಸತ್ಯಃ ಸತ್ಯೈಃ ಸಹ ಸುರೋತ್ತಮೈಃ ।
ತಾಮಸಸ್ಯಾಂತರೇ ಚಾಪಿ ಸಂಪ್ರಾಪ್ತೇ ಪುನರೇವ ಹಿ ।
ಭಾರ್ಯಾಯಾಂ ಹರಿಭಿಃ ಸಾರ್ಧಂ ಹರಿರೇವ ಬಭೂವ ಹ ॥ ೧೨೮ ॥

---

೧೨೫ ಸತ್ವಗುಣ ಪ್ರಾಚುರ್ಯದಿಂದ ಪರಮ ಪುರುಷನು ವಿಷ್ಣುರೂಪಿಯಾಗಿ ಯಾವಾಗ ಅವತರಿಸಿದನೋ, ಆಗ ಅಂತಹ ವಿಷ್ಣುವಿನ ಅಂಶದಿಂದ ಸ್ವಾಮಿಯಾದ ದೇವನು ಸ್ವಾಯಂಭುವಮನ್ವಂತರದಲ್ಲಿ ಆಕೂತೀದೇವಿಯಲ್ಲಿ ಅವತರಿಸಿ ಮಹತ್ಕಾರ್ಯ ವನ್ನು ಮಾಡಿದನು

೧೨೬. ಅನಂತರ ಸ್ವಾಮಿಯಾದ ಶ್ರೀಹರಿಯು ಪುನಃ ಸ್ವಾರೋಚಿಷ ಮನ್ವಂತರವು ಪ್ರಾಪ್ತವಾಗಲು, ತುಷಿತಾದೇವಿಯಲ್ಲಿ ಉತ್ಪನ್ನನಾಗಿ ತುಷಿತರೊಡನೆ ಅತೀತನಾದನು

೧೨೭. ಪುನಃ ಔತ್ತಮಮನ್ವಂತರವು ಬರಲು, ತುಷಿತನಾಮಕ ಭಗವಂತನು ವಶವರ್ತಿಗಳಿಂದ ಸಂಭೂತನಾಗಿ ವಶವರ್ತಿನಾಮಕ ಹರಿಯಾಗಿ ಅವತರಿಸಿದನು.

೧೨೮. ಆಗ ಹರಿಯು ಸುರೋತ್ತಮರಾದ ಸತ್ಯರೊಡನೆ ಸತ್ಯಾದೇವಿಯಲ್ಲಿ ಸತ್ಯನಾಮಕವಾಗಿ ಅವತರಿಸಿದನು. ಪುನಃ ತಾಮಸಮನ್ವಂತರವು ಪ್ರಾಪ್ತವಾಗಲು, ಹರಿಗಳೊಡನೆ ಕೂಡಿ ಶ್ರೀಹರಿಯು ಅವತಾರ ಮಾಡಿದನು.

ಚಾರಿಷ್ಣವೇಂತರೇ ಚಾಪಿ ಹರಿರ್ದೇವಃ ಪುನಸ್ತು ಸಃ ।
ವೈಕುಂಠಾಯಾಮಸೌ ಜಜ್ಞೇ ಹ್ಯಾಭೂತರಜಸೈಃ ಸಹ ॥
ವೈಕುಂಠಃ ಸ ಪುನರ್ದೇವಃ ಸಂಪ್ರಾಪ್ತೇ ಚಾಕ್ಷುಷೇಂತರೇ ॥ ೧೨೯ ॥

ಧರ್ಮೋ ನಾರಾಯಣಃ ಸಾಧ್ಯಃ ಸಾಧ್ಯೈಃ ಸಹ ಸುರೈರಭೂತ್ ।
ಸ ತು ನಾರಾಯಣಃ ಸಾಧ್ಯಃ ಪ್ರಾಪ್ತೇ ವೈವಸ್ವತೇಂತರೇ ॥ ೧೩೦ ॥

ಮಾರೀಚಾತ್ ಕಶ್ಯಪಾದ್ವಿಷ್ಣುರದಿತ್ಯಾಃ ಸಂಬಭೂವ ಹ ।
ತ್ರಿಸ್ತ್ರಿಃ ಕ್ರಮೈರಿಮಾನ್ ಲೋಕಾನ್ ಜಿತ್ವಾ ವಿಷ್ಣುರುರುಕ್ರಮಃ ॥ ೧೩೧ ॥

ಪ್ರತ್ಯಪಾದಯದಿಂದ್ರಾಯ ದೇವೇಭ್ಯಶ್ಚೈವ ಸ ಪ್ರಭುಃ ।
ಇತ್ಯೇತಾಸ್ತನವಸ್ತಸ್ಯ ವ್ಯತೀತಾಃ ಸಪ್ತ ಸಪ್ತಸು ॥
ಮನ್ವಂತರೇಷ್ವತೀತೇಷು ಯಾಭಿಃ ಸಂರಕ್ಷಿತಾಃ ಪ್ರಜಾಃ ॥ ೧೩೨ ॥

---

೧೨೯. ಪುನಃ ಚಾರಿಷ್ಣವಮನ್ವಂತರವು ಪ್ರಾಪ್ತವಾಗಲು, ದೇವನಾದ ಆ ಹರಿಯು ಆಭೂತರಜಸ್ಕರೊಡನೆ ವೈಕುಂಠದಲ್ಲಿ ವೈಕುಂಠನಾಮಕನಾಗಿ ಹುಟ್ಟಿದನು.

೧೩೦. ವೈವಸ್ವತಮನ್ವಂತರವು ಪ್ರಾಪ್ತವಾಗಲು, ಧರ್ಮರೂಪಿಯಾದ ನಾರಾಯಣನು ಸಾಧ್ಯನಾಮಕ ದೇವತೆಗಳೊಡನೆ ಸಾಧ್ಯನಾಮಕನಾಗಿ ಅವತರಿಸಿದನು. ನಾರಾಯಣನೇ ಸಾಧ್ಯನಾಮಕನಾಗಿ ಹುಟ್ಟಿದನು.

೧೩೧–೧೩೨. ಸ್ವಾಮಿಯಾದ ವಿಷ್ಣುವು ಮರೀಚಿಪುತ್ರನಾದ ಕಶ್ಯಪನಿಂದ ಅದಿತೀದೇವಿಯಲ್ಲಿ ವಾಮನರೂಪದಿಂದ ಅವತರಿಸಿದನು. ಹೀಗೆ ಅವತರಿಸಿದ ತರುವಾಯ ಆ ಮಹಾ ವಾಮನನು ಮೂರು ಪಾದಗಳಿಂದ ಮೂರು ಲೋಕಗಳನ್ನೂ ಆಕ್ರಮಿಸಿ, ದೇವೇಂದ್ರನಿಗೂ ದೇವತೆಗಳಿಗೂ ಆ ದೈತ್ಯರ ರಾಜ್ಯವನ್ನು ಕೊಟ್ಟನು. ಈ ರೀತಿಯಾಗಿ ಸಪ್ತಮನ್ವಂತರಗಳಲ್ಲಿಯೂ ಶ್ರೀ ಭಗವಂತನು ಏಳುಸಲ ಅವತರಿಸಿ ಪ್ರಜಾಪಾಲನೆಯನ್ನು ಮಾಡಿದನು. ಈ ಸಪ್ತಮನ್ವಂತರಗಳಲ್ಲಿಯೂ ಭಗವಂತನು ಅವತರಿಸುವನು.

ತಸ್ಮಾದ್ವಿಷ್ಟಮಿದಂ ಸರ್ವಂ ವಾಮನೇನೇಹ ಜಾಯತಾ ।
ತಸ್ಮಾತ್ಸ ವೈ ಸ್ಮೃತೋ ವಿಷ್ಣುರ್ವಿಶೇರ್ಧಾತೋಃ ಪ್ರವೇಶನಾತ್ ॥ ೧೩೩ ॥

ಇತ್ಯೇತೇ ಬ್ರಹ್ಮಣಶ್ಚೈವ ವಾಮನಸ್ಯ ಮಹಾತ್ಮನಃ ।
ಏಕತ್ವಂಚ ಪೃಥಕ್ತ್ವಂಚ ವಿಶಿಷ್ಟತ್ವಂಚ ಕೀರ್ತಿತಂ ॥ ೧೩೪ ॥

ದೇವತಾನಾಮಿಹಾಂಶೇನ ಜಾಯಂತೇ ಯಾಸ್ತು ದೇವತಾಃ ।
ತಾಸಾಂತಾಸ್ತೇಜಸಾ ಬುದ್ಧ್ಯಾ ಶ್ರುತೇನ ಚ ಬಲೇನ ಚ ॥
ಜಾಯಂತೇ ತತ್ಸಮಾಶ್ಚೈವ ತಾ ವೈ ತೇಷಾಮನುಗ್ರಹಾತ್ ॥ ೧೩೫ ॥

ಯದ್ಯದ್ವಿಭೂತಿಮತ್ಸತ್ವಂ ಶ್ರೀಮದೂರ್ಜಿತಮೇವ ।
ತತ್ತದೇವಾವಗಚ್ಛಧ್ವಂ ವಿಷ್ಣೋಸ್ತೇಜೋಂಶಸಂಭವಂ ॥ ೧೩೬ ॥

---

೧೩೩–೧೩೪. ಹೀಗೆ ವಾಮನರೂಪಿಯಾದ ಭಗವಂತನಿಂದ ಮೂರು ಲೋಕಗಳೂ ಪ್ರವೇಶಿಸಲ್ಪಟ್ಟುದರಿಂದ ಈ ಜಗತ್ತು ಎಷ್ಣುನಾಮಕವಾಗಿದೆ ಮೂರು ಲೋಕಗಳನ್ನೂ ಪ್ರವೇಶಮಾಡಿರುವುದರಿಂದ ಶ್ರೀಹರಿಯು ವಿಷ್ಣುವೆಂದು ಪ್ರಖ್ಯಾತನಾದನು. ವಿಶಪ್ರವೇಶನೇ ಎಂಬ ಧಾತುವಿನಿಂದ ವಿಷ್ಣುವೆಂಬ ಶಬ್ದವು ಉತ್ಪನ್ನವಾಗಿದೆ. ಹೀಗೆ ಮಹಾತ್ಮನಾದ ಪರಬ್ರಹ್ಮನಿಗೂ ವಾಮನನಿಗೂ ಮೂಲರೂಪದಿಂದ ಐಕ್ಯವನ್ನೂ, ಅವತಾರರೂಪದಿಂದ ಭಿನ್ನತೆಯನ್ನೂ, ಗುಣೈಶ್ವರ್ಯಾದಿಗಳಲ್ಲಿ ವೈಶಿಷ್ಟ್ಯವನ್ನೂ ಜ್ಞಾನಿಗಳು ತಿಳಿಯಬೇಕು.

೧೩೫ ಈ ಜಗತ್ತಿನಲ್ಲಿ ದೇವಾಂಶಗಳಿಂದ ಯಾವ ದೇವತೆಗಳು ಅವತರಿಸಿರುವರೋ, ಆಯಾ ದೇವತೆಗಳ ತೇಜಸ್ಸು, ಬುದ್ಧಿ, ಜ್ಞಾನ, ಬಲ ಇವುಗಳಿಗೆ ಸಮನಾಗಿಯೇ ಅವತರಿಸುವರು. ಅವರ ಅನುಗ್ರಹವು ಅವತಾರಪುರುಷರಲ್ಲಿ ಸಂಪೂರ್ಣವಾಗಿರುವುದು

೧೩೬. ಈ ಲೋಕದಲ್ಲಿ ಯಾವ ಯಾವ ದೇವಾದಿಗಳು ಮಹಾ ತೇಜಸ್ವಿಯಾಗಿಯೂ, ಮಹದೈಶ್ವರ್ಯವುಳ್ಳದ್ದಾಗಿಯೂ, ಕಾಂತಿಯುತರಾಗಿಯೂ ಇರುತ್ತಾರೆಯೋ ಅವರೆಲ್ಲರೂ ವಿಷ್ಣುವಿನ ಅಂಶಗಳಿಂದ ಜನ್ಯರಾಗಿರುವರೆಂದು ಎಲ್ಲರೂ ತಿಳಿಯಬೇಕು.

ಸ ಏವಂ ಜಾಯತೇಂಶೇನ ಕೇಚಿದಿಚ್ಛಂತಿ ಮಾನವಾಃ ।
ತತೋಽಪರೇ ಬ್ರುವಂತೀಮುಮನ್ಯೋನ್ಯಾಂಶೇನ ಜಾಯತೇ ॥ ೧೩೭ ॥

ಏವಂ ವಿವದಮಾನಾಸ್ತೇ ದೃಷ್ಟ್ವಾ ತಾನ್ವೈ ಬ್ರುವಂತಿ ಹ ।
ಯಸ್ಮಾನ್ನ ವಿದ್ಯತೇ ಭೇದೋಮನಸಶ್ಚೈತಸಶ್ಚ ಹ । ॥ ೧೩೮ ॥

ತಸ್ಮಾದನುಗ್ರಹಾಸ್ತೇಷಾಂ ಕ್ಷೇತ್ರಜ್ಞಾಸ್ತೇ ಭವಂತ್ಯುತ ।
ಏಕಸ್ತು ಪ್ರಭುಶಕ್ತ್ಯಾ ವೈ ಬಹುಧಾ ಭವತೀಶ್ವರಃ ॥
ಭೂತ್ವಾ ಯಸ್ಮಾಚ್ಚ ಬಹುಧಾ ಭವತ್ಯೇಕಃ ಪುನಸ್ತು ಸಃ ॥ ೧೩೯ ॥

ತಸ್ಮಾತ್ತುಮನಸೋ ಭೇದಾಜ್ಜಾಯಂತೇ ತೇಜಸಶ್ಚ ಹ ।
ಮನ್ವಂತರೇಷು ಸರ್ವೇಷು ಪ್ರಜಾಃ ಸ್ಥಾವರಜಂಗಮಾಃ ॥
ಸರ್ಗಾದೌ ಸಕೃದುತ್ಪನ್ನಾಸ್ತಿಷ್ಠಂತೀಹ ಪ್ರಶಂಸಯಾ ॥ ೧೪೦ ॥

---

೧೩೭. ಕೆಲವು ಶಕ್ತಿಮಂತರಾದ ಪುರುಷರು ವಿಷ್ಣುವಿನ ಅಂಶದಿಂದ ಜನ್ಯರಾಗಿರುವರೆಂದೂ, ಕೆಲವರು ಅನ್ಯಾಂಶದಿಂದ ಉದ್ಭವಿಸಿರುವರೆಂದು ಹೇಳುವರು.

೧೩೮. ಮಹಾತ್ಮರು ಹೀಗೆ ವಿವಾದಮಾಡುವ ಜನರನ್ನು ನೋಡಿ ಬುದ್ಧಿವಾದವನ್ನು ಹೇಳುವರು. ಮನಸ್ಸಿಗೂ ಚೇತಸ್ಸಿಗೂ ಹೇಗೆ ಭೇದವಿಲ್ಲವೋ, ಹಾಗೆ ಆ ದೇವತೆಗಳಿಗೆ ಭೇದವಿಲ್ಲವೆಂಬುದಾಗಿ ಹೇಳುವರು. ಹೀಗೆ ತಿಳಿದರೆ ಪರಮಾತ್ಮನ ಅನುಗ್ರಹವಾಗುವುದು. ಆಗ ಅವರು ಕ್ಷೇತ್ರಜ್ಞರಾಗುವರು.

೧೩೯. ಹೀಗೆ ಈಶ್ವರನೊಬ್ಬನೇ ತನ್ನಲ್ಲಿರುವ ಮಹತ್ತಾದ ಪ್ರಭುಶಕ್ತಿಯಿಂದ ಅನೇಕ ರೂಪವನ್ನು ಧರಿಸುವನು. ಹೀಗೆ ಪರಮಾತ್ಮನೊಬ್ಬನೇ ತನ್ನ ಮಹಾಶಕ್ತಿಯಿಂದ ನಾನಾ ರೂಪಗಳನ್ನು ಹೊಂದಿ ಪುನಃ ಏಕರೂಪವನ್ನು ಪಡೆಯುವನು.

೧೪೦. ಸಕಲವಾದ ಮನ್ವಂತರಗಳಲ್ಲಿಯೂ ದೇವತೆಗಳ ಪ್ರಭೇದದಿಂದ ತೇಜೋವಂತರಾದ ಸ್ಥಾವರ ಜಂಗಮಾತ್ಮಕ ಪ್ರಜೆಗಳು ಹುಟ್ಟುತ್ತಾರೆ. ಸರ್ಗಾದಿಯಲ್ಲಿ ಒಂದುಸಲ ಉತ್ಪನ್ನರಾದ ದೇವತೆಗಳು ಕೊನೆಯ ತನಕ ಇರುವುದರಿಂದ ಪ್ರಶಂಸನೀಯರಾಗಿರುವರು.

ಪ್ರಾಪ್ತೇ ಪ್ರಾಪ್ತೇ ತು ಕಲ್ಪಾಂತೇ ರುದ್ರಃ ಸಂಹರತಿ ಪ್ರಜಾಃ ।
ಜಾಯಂತೇ ಮೋಹಯಂತೋಽನ್ಯಾನೀಶ್ವರಾ ಯೋಗಮಾಯಯಾ ॥೧೪೧॥

ಐಶ್ವರ್ಯೇಣ ಚರಂತಸ್ತೇ ಮೋಹಯಂತಿಹ್ಯನೀಶ್ವರಾಃ ।
ತಸ್ಮಾದ್ದೋಷಪ್ರಚಾರೇಷು ಯುಕ್ತಾಯುಕ್ತಂ ನ ವಿದ್ಯತೇ ॥ ೧೪೨ ॥

ಭೂತಾಪವಾದಿನೋ ದುಷ್ಟಾ ಮಧ್ಯಸ್ಥಾ ಭೂತಭಾವಿನಃ ।
ಭೂತಾಪವಾದಿನಃ ಶಕ್ತಾಸ್ತ್ರಯೋ ವೇದಾಃ ಪ್ರವಾನಿನಾಂ ॥ ೧೪೩ ॥

ಧೃಢಪೂರ್ವಶ್ರುತತ್ವಾಚ್ಚ ಪ್ರವಾದಾಚ್ಚೈವ ಲೌಕಿಕಾತ್ ।
ಚತುರ್ಭಿಃ ಕಾರಣೈರೇಭಿರ್ಯಥಾತತ್ವಂ ನ ವಿಂದತಿ ॥ ೧೪೪ ॥

---

೧೪೧. ಪ್ರತಿಯೊಂದು ಕಲ್ಪಗಳ ಕೊನೆಯಲ್ಲಿಯೂ ರುದ್ರನಾಮಕನಾದ ಭಗವಂತನು ಪ್ರಜೆಗಳನ್ನು ಸಂಹರಿಸುವನು. ಈ ರೀತಿಯಾಗಿ ದೇವತೆಗಳು ತಮ್ಮ ಯೋಗಮಹಿಮೆಗಳಿಂದ ಪ್ರಜೆಗಳನ್ನು ಮೋಹಗೊಳಿಸುತ್ತಾ ತಾವೂ ಅವತರಿಸುವರು.

೧೪೨. ಸ್ವತಂತ್ರರಾದ ಆ ದೇವತೆಗಳು ತಮ್ಮ ಅಣಿಮಾದ್ಯೈಶ್ವರ್ಯಸಿದ್ಧಿಯಿಂದ ಸಂಚರಿಸುತ್ತಾ ಪ್ರಜೆಗಳನ್ನು ಮೋಹಗೊಳಿಸುವರು. ಹೀಗೆ ಮೋಹಪಡಿಸುವುದರಿಂದ ಅವರಿಗೆ ದೋಷಪ್ರಸಕ್ತಿಯಾಗಲಿ, ವಿವೇಕಶೂನ್ಯತೆಯಾಗಲಿ ಅವರಿಗೆ ಸುತರಾಂ ಇಲ್ಲ.

೧೪೩. ದೇವತೆಗಳು ಭೂತಪ್ರೇತಪಿಶಾಚಗಳಾಗಿ ಹುಟ್ಟುವರು ಎಂದು ಹೇಳುವವರು ದುಷ್ಟರಾಗಿರುವರು. ಭೂತಾದಿಗಳಲ್ಲಿರುವ ಶಕ್ತಿಸಾಮರ್ಥ್ಯಾದಿಗಳು ದೇವದತ್ತವಾಗಿವೆಯೆಂದು ಮಧ್ಯಮರು ಹೇಳುವರು ಭೂತಾದಿ ಸರ್ವಪ್ರಾಣಿಗಳನ್ನೂ ಸೃಷ್ಟಿಮಾಡುವವರೇ ದೇವತೆಗಳೆಂದು ಮಹಾತ್ಮರು ಹೇಳುವರು.

೧೪೪. ಮನುಷ್ಯರು ವೃಥವಾದ ಪ್ರಾಕ್ತನಸಂಸ್ಕಾರದಿಂದಲೂ, ಲೋಕಪ್ರವಾದದಿಂದಲೂ, ಚತುರ್ವಿಧ ಇಂದ್ರಿಯಗಳಿಂದಲೂ ಶ್ರೀ ಭಗವದ್ವಿಷಯಕವಾದ ಯಥಾರ್ಥವನ್ನು ತಿಳಿಯಲು ಸಾಧ್ಯವಿಲ್ಲ.

ಪೂರ್ವಮರ್ಥಾಂತರೇ ನ್ಯಸ್ತಾಃ ಕಾಲಾಂತರಗತಾ ಅಪಿ ।
ತೇನಾನ್ಯಾತ್ ಸಂತಮಪ್ಯರ್ಥಂ ದ್ವೇಷನ್ನ ಪ್ರತಿಪದ್ಯತೇ || ೧೪೫ ||

ದರ್ಶಾನಾಂ ದ್ರವ್ಯಭೂತೋ ಯೋ ಗುಣಭೂತಸ್ತು ತೇಷು ಯಃ ।
ಕರ್ಮಣಾಂ ಮನಸಾಂ ಕರ್ತಾ ಅಭಿಜಾತ್ಯಾ ಚ ಯೋ ಮಹಾ ॥
ಶ್ರುತಜ್ಞೈಃ ಕಾರಣೈರೇತೈಶ್ಚತುರ್ಭಿಃ ಪರಿಕೀರ್ತ್ಯತೇ || ೧೪೬ ||

ಅಶಕ್ತರುಷ್ಟೋ ಜಾನಾತಿ ದೇವತಾಃ ಪ್ರವಿಭಾಗಶಃ ।
ಇಮೌ ಚೋದಾಹರಂತ್ಯತ್ರ ಶ್ಲೋಕೌ ಯೋಗೇಶ್ವರಂ ಪ್ರತಿ || ೧೪೭ ||

ಆತ್ಮನಃ ಪ್ರತಿರೂಪಾಣಿ ಪರೇಷಾಂ ಚ ಸಹಸ್ರಶಃ ।
ಕುರ್ಯಾದ್ಯೋಗಬಲಂಪ್ರಾಪ್ಯ ತೈಶ್ಚ ಸರ್ವೈಃ ಸಹಾಚರೇತ್ || ೧೪೮ ||

---

೧೪೫. ಪೂರ್ವಪಲ್ಲಿ ಅನ್ಯಾಪದೇಶವಾಗಿ ನಿರೂಪಿಸಿರುವ ಕಾಲಾಂತರಗತವಾದ ವಿಷಯಗಳು ಯಥಾರ್ಥವಾಗಿದ್ದರೂ ಜನರು ಕಾಮಕ್ರೋಧಾದಿಗಳಿಂದ ಅವನ್ನು ನಿಜವೆಂದು ತಿಳಿಯಲಾರರು ನಂಬುವುದಿಲ್ಲ

೧೪೬. ಯಾವ ಭಗವಂತನು ಸಕಲ ಶಾಸ್ತ್ರಪ್ರತಿಪಾದ್ಯನೋ, ಯಾವನು ಅಪ್ರಧಾನನಾಗಿದ್ದರೂ ಮುಖ್ಯ ಪ್ರೇರಕನೋ, ಮತ್ತು ಮನಸ್ಸಿಗೂ ಸಕಲ ಕರ್ಮಗಳಿಗೂ ನಿಯಾಮಕನೋ, ಸತ್ಕುಲಪ್ರಸೂತತೆಯಿಂದ ಯಾವನು ಮಹಾತ್ಮನಾಗಿರುವನೋ, ಅಂತಹ ಭಗವಂತನೇ ಶಾಸ್ತ್ರಜ್ಞರಾದ ಮಹಾತ್ಮರಿಂದಲೂ, ಪೂರ್ವೋಕ್ತಗಳಾದ ಚತುರ್ವಿಧ ಕಾರಣಗಳಿಂದಲೂ ವರ್ಣಿಸಲ್ಪಡುತ್ತಾನೆ.

೧೪೭. ಶ್ರೀ ಭಗವಂತನ ಸಂಪೂರ್ಣ ಮಹಿಮೆಗಳನ್ನು ಕಾಮಕ್ರೋದಾದ್ಯುಪೇತನಾದ ಪುರುಷನು ತಿಳಿಯಲಶಕ್ತನಾಗಿರುವನು. ಈ ವಿಷಯದಲ್ಲಿ ಮಹಾತ್ಮರು ಯೋಗೇಶ್ವರನಾದ ಭಗವಂತನ ವಿಷಯದಲ್ಲಿ ಈ ಎರಡು ಶ್ಲೋಕಗಳನ್ನು ಉದಾಹರಿಸುವರು.

೧೪೮. ಮಹಾತ್ಮನಾದ ಶ್ರೀ ಭಗವಂತನು ಸೃಷ್ಟಿಮಾಡಲಿಚ್ಛಿಸಿ, ಯೋಗಮಹಿಮೆಯಿಂದ ತನ್ನನುಗತವಾದ ಸರ್ವಪ್ರಾಣಿಗಳನ್ನೂ ಸೃಷ್ಟಿಸಿ ಅವುಗಳೊಡನೆ ವಿಹರಿಸುವನು.

ಪ್ರಾಪ್ನುಯಾದ್ವಿಷಯಾಂಶ್ಚೈವ ತಥೈವೋಗ್ರತಪಶ್ಚರ್ರ |
ಸಂಹರೇಚ್ಚ ಪುನಃ ಸರ್ವಾ ಸೂರ್ಯತೇಜೋ ಗುಣಾನಿವ || ೧೪೯ ||

ಇತಿ ಶ್ರೀ ಮಹಾಪುರಾಣೇ ವಾಯುಪ್ರೋಕ್ತೇ " ಕಶ್ಯಪೀಯ
ಪ್ರಜಾಸರ್ಗೋ " ನಾಮ ಪಂಚಮೋಽಧ್ಯಾಯಃ

---

೧೪೯. ಹೀಗೆ ಉಗ್ರತಪಸ್ಸುಗಳನ್ನು ಮಾಡಿ, ಸೃಷ್ಟವಾದ ಸಮಸ್ತ ಚರಾಚರ ವಸ್ತುಗಳನ್ನೂ ಪ್ರಲಯಕಾಲದಲ್ಲಿ ಸೂರ್ಯನು ತನ್ನ ಕಿರಣಗಳನ್ನು ಜಗತ್ತಿನಲ್ಲಿ ಹರಡಿ, ಪುನಃ ಅಸ್ತಮಯ ಸಮಯದಲ್ಲಿ ಸ್ವೀಕರಿಸುವಂತೆ, ಸೂರ್ಯಕಿರಣಗಳು ಜಲವನ್ನು ಸ್ವೀಕರಿಸಿ, ಪುನಃ ಮಳೆಯನ್ನು ಸುರಿಸುವಂತೆ ಸಂಹರಿಸುವನು.

ಹೀಗೆ ವಾಯುಪ್ರೋಕ್ತವಾದ ಮಹಾಪುರಾಣದಲ್ಲಿ " ಕಶ್ಯಪನ ವಂಶನಿರೂಪಣೆ"ಯೆಂಬ ಐದನೆಯ ಅಧ್ಯಾಯವು ಸಮಾಪ್ತವು.



## ಐದನೆಯ ಅಧ್ಯಾಯದ ಸಾರಾಂಶವು

ಈ ಅಧ್ಯಾಯದಲ್ಲಿ ಧರ್ಮದೇವನ ವಂಶವು ವರ್ಣಿತವಾಗಿದೆ. ಆ ಧರ್ಮ ದೇವನಿಗೆ ಅರುಂಧತಿಯೇ ಮೊದಲಾದ ಹತ್ತು ಜನ ಹೆಂಡತಿಯರೂ ಸಾಧ್ಯರೇ ಮೊದ ಲಾದ ಹನ್ನೆರಡುಜನ ಮಕ್ಕಳೂ ಇದ್ದರು. ಸ್ವಾರೋಚಿಷಮನ್ವಂತರಾದಿಗಳಲ್ಲಿ ತುಷಿ ತಾದಿ ದೇವತೆಗಳು ಅವತರಿಸಿದರು. ಅದೇ ವಂಶದಲ್ಲಿ ಹುಟ್ಟಿದ ದಕ್ಷಬ್ರಹ್ಮನಿಗೆ ಅನೇಕ ಪುತ್ರಿಯರು ಜನಿಸಿದರು. ಅವರಲ್ಲಿ ಕೆಲವರನ್ನು ಚಂದ್ರನಿಗೂ ಉಳಿದವರನ್ನು ಕಶ್ಯಪ ನಿಗೂ ಕೊಟ್ಟು ವಿವಾಹಮಾಡಿದನು. ಕಶ್ಯಪನಿಗೆ ಅದಿತಿಯೇ ಮೊದಲಾದ ಹದಿನಾಲ್ಕು ಜನ ಪತ್ನಿಯರಿದ್ದರು. ಅವರಲ್ಲಿ ಆದಿತ್ಯರೇ ಮೊದಲಾದ ದೇವತೆಗಳು ಅವತರಿಸಿದರು. ಸೂರ್ಯನು ಪ್ರತಿ ದಿನದಲ್ಲಿ ಉದಯಾಸ್ತಗಳನ್ನು ಪಡೆಯುವಂತೆ ಸಾಧ್ಯರು, ವಿಶ್ವೇದೇವತೆಗಳು, ವಸುಗಳು, ರುದ್ರರು, ಆದಿತ್ಯರು, ಇವರೇ ಮೊದಲಾದ ದೇವತೆಗಳು ಪ್ರತಿ ಮನ್ವಂತರಗಳಲ್ಲಿಯೂ, ಅವತರಿಸಿ, ಪ್ರಜಾಸೃಷ್ಟಿಯನ್ನು ಸಹಕರಿಸಿ, ಆ ಕಲ್ಪಾಂತ ಮೂಲರೂಪವನ್ನು ಸೇರುವರು.

ಒಬ್ಬನೇ ಪರಮಪುರುಷನು ರಜೋಗುಣೋದ್ರೇಕದಿಂದ ಬ್ರಹ್ಮರೂಪಿಯಾಗಿ ಪ್ರಜೆಗಳನ್ನು ಸೃಷ್ಟಿಸುವನು. ಶುದ್ಧ ಸತ್ವಗುಣದಿಂದ ವಿಷ್ಣುರೂಪಿಯಾಗಿ ಪ್ರಜಾ ಪಾಲನೆ ಮಾಡುವನು. ತಮೋಗುಣಸಂಪರ್ಕದಿಂದ ರುದ್ರರೂಪಿಯಾಗಿ ಪ್ರಲಯ ಕಾಲದಲ್ಲಿ ಸಂಹಾರಮಾಡುವನು. (ಏವಂಚ) ಒಬ್ಬನೇ ದೇವನು ಸತ್ವರಜಸ್ತಮೋ ಗುಣ ಸಂಬಂಧದಿಂದ ಬೇರೆಬೇರೆ ನಾಮರೂಪಗಳನ್ನು ಪಡೆದು ಸೃಷ್ಟಿಸ್ಥಿತಿಸಂಹಾರ ಗಳನ್ನು ಮಾಡುವುದರಿಂದ ಆ ಬ್ರಹ್ಮ, ವಿಷ್ಣು, ಮಹೇಶ್ವರರಿಗೆ ಭೇದವಿಲ್ಲ. ಇವೇ ಮೊದಲಾದ ವಿಷಯಗಳು ವರ್ಣಿತವಾಗಿವೆ



—: ಹರಿಃ ಓಂ : —

—ಶ್ರೀ ವೇದವ್ಯಾಸಾಯ ನಮಃ—

# ಶ್ರೀಮದ್ವಾಯುಪುರಾಣಂ

## ಷಷ್ಠೋಽಧ್ಯಾಯಃ

॥ ಋಷಯ ಊಚುಃ ॥

ಏತಚ್ಛ್ರುತ್ವಾವಚಸ್ತಸ್ಯ ನೈಮಿಷೇಯಾಸ್ತಪಸ್ವಿನಃ ।
ಪಪ್ರಚ್ಛುರ್ಋಷಯಃ ಶ್ರೇಷ್ಠಂ ವಚನಸ್ಯ ಯಥಾಕ್ರಮಂ ॥ ೧ ॥

ಸಪ್ತಸ್ವಿಹ ಕಥಂ ದೇವಾ ಜಾತಾ ಮನ್ವಂತರೇಷ್ವಿಹ ।
ಇಂದ್ರವಿಷ್ಣುಪ್ರಧಾನಾಸ್ತೇ ಆದಿತ್ಯಾಸ್ತು ಮಹೌಜಸಃ ॥
ಏತತ್ ಪ್ರಬ್ರೂಹಿ ನಃ ಸರ್ವಂ ವಿಸ್ತರಾದ್ರೋಮಹರ್ಷಣ ॥ ೨ ॥

ಏವಮುಕ್ತಸ್ತದಾ ಸೂತೋ ವಿನಯೀ ಬ್ರಹ್ಮವಾದಿಭಿಃ ।
ಉವಾಚ ವದತಾಂ ಶ್ರೇಷ್ಠೋ ಯಥಾ ಪೃಷ್ಟೋ ಮಹರ್ಷಿಭಿಃ ॥ ೩ ॥

---

## ಆರನೆಯ ಅಧ್ಯಾಯವು

೧. ಮುನಿಗಳು ಹೇಳಿದರು.—ನೈಮಿಷಾರಣ್ಯವಾಸಿಗಳೂ, ಮಹಾತಪಸ್ವಿಗಳೂ, ಬ್ರಹ್ಮವಾದಿಗಳೂ ಆದ ಮಹರ್ಷಿಗಳು ಮಹಾ ಜ್ಞಾನಿಯಾದ ಸೂತಮಹಾಮುನಿಯ ಮಾತುಗಳನ್ನು ಕೇಳಿ ಸಂತುಷ್ಟರಾಗಿ, ಮುನಿಶ್ರೇಷ್ಠನಾದ ಸೂತನನ್ನು ಕುರಿತು ಕ್ರಮವಾಗಿ ಪ್ರಶ್ನೆಮಾಡಿದರು

೨. ಎಲೈ ಮುನಿವರ್ಯನೇ, ಮಹಾ ತೇಜಸ್ವಿಗಳೂ, ಮಹಾತ್ಮರೂ, ಇಂದ್ರವಿಷ್ಣುಗಳೇ ಮೊದಲಾದವರೂ ಆದ ದೇವತೆಗಳು ಸಪ್ತಮನ್ವಂತರಗಳಲ್ಲಿಯೂ ಈ ಲೋಕಗಳಲ್ಲಿ ಹೇಗೆ ಅವತರಿಸಿದರು ? ಅವರು ಅವತಾರ ಮಾಡಲು ಕಾರಣವೇನು ? ಈ ವಿಷಯಗಳನ್ನು, ಸರ್ವರಿಗೂ ಸಂತೋಷಜನಕನಾದ ನೀನು ವಿಸ್ತಾರವಾಗಿ ನಿರೂಪಿಸು ಎಂದು ಹೇಳಿದರು.

೩. ಬ್ರಹ್ಮಜ್ಞಾನಿಗಳಲ್ಲಿ ಶ್ರೇಷ್ಠರಾದ ಮುನಿಗಳು ಹೀಗೆ ಕೇಳಲಾಗಿ, ವಿನೀತನೂ ವಕ್ತೃಗಳಲ್ಲಿ ಉತ್ತಮನೂ ಆದ ಸೂತಪುರಾಣಿಕನು ಇಂತೆಂದನು.

|| ಸೂತ ಉವಾಚ ||

ಬ್ರಹ್ಮಣೋ ವೈ ಮುಖಾತ್ ಸೃಷ್ಟ್ವಾ ಯಥಾ ದೇವಾಃ ಪ್ರಜೇಪ್ಸಯಾ ।
ಸರ್ವೇ ಮಂತ್ರಶರೀರಾಸ್ತೇ ಸ್ಮೃತಾ ಮನ್ವಂತರೇಷ್ವಿಹ || ೪ ||

ದರ್ಶಶ್ಚ ಪೌರ್ಣಮಾಸಶ್ಚ ಬೃಹದ್ಯಚ್ಚ ರಥಂತರಂ ।
ಆಕೂತಃ ಪ್ರಥಮಸ್ತೇಷಾಂ ತತಸ್ತ್ವಾಕೂತಿರೇವ ಚ || ೫ ||

ವಿತ್ತಿಶ್ಚೈವ ಸುವಿತ್ತಿಶ್ಚ ಆಕೂತಿಃ ಕೂತಿರೇವ ಚ ।
ಅಧೀಷ್ಟಸ್ತು ತತೋ ಜ್ಞೇಯಃ ಅಧೀತಿಶ್ಚೈವ ತತ್ವತಃ ||
ವಿಜ್ಞಾತಿಶ್ಚೈವ ವಿಜ್ಞಾತೋ ಮಾನವೋ ಯೇ ಚ ದ್ವಾದಶ || ೬ ||

ಜ್ಞೇಯೋ ದ್ವಾದಶಪುತ್ರಶ್ಚ ಯಶ್ಚಾಬ್ದೇನ ಸಮಾಜಯೇತ್ ।
ತಂ ದೃಷ್ಟ್ವಾ ಚಾಬ್ರವಿದ್ಬ್ರಹ್ಮಾ ಜಯಾ ದೇವಾನಸೂಯತ || ೭ ||

---

೪. ಸೂತಮುನಿಯು ಹೇಳಿದನು :—ಮನ್ವಂತರಗಳಲ್ಲಿ ಬ್ರಹ್ಮದೇವನು ತನ್ನ ಮುಖಕಮಲದಿಂದ ಪ್ರಜಾಕಾಂಕ್ಷಿತನಾಗಿ ಯಾವ ದೇವತೆಗಳನ್ನು ಸೃಷ್ಟಿಮಾಡಿದನೋ ಆ ದೇವತೆಗಳೆಲ್ಲರೂ ಮಂತ್ರಶರೀರಿಗಳೂ ಮಂತ್ರದ್ರಷ್ಟೃಗಳೂ ಆಗಿದ್ದರು.

೫–೬. ಅವರು ಯಾರಂದರೆ–ದರ್ಶ, ಪೌರ್ಣಮಾಸ, ಬೃಹದ್ಯತ್, ರಥಂತರ, ಆಕಾಶ, ಆಕೂತಿ, ವಿತ್ತಿ, ಸುವಿತ್ತಿ, ಅಧೀಷ್ಟ, ಅಧೀತಿ, ವಿಜ್ಞಾತರೆಂಬ ಹನ್ನೆರಡುಜನ ಮಕ್ಕಳು ಮನುಗಳಿಗೆ ಹುಟ್ಟಿದರು.

೭. ಯಾವನು ದ್ವಾದಶಪುತ್ರವುಳ್ಳವನಾಗಿ ಒಂದು ವರ್ಷಗಳವರೆಗೂ ಜಯ ಶೀಲನಾಗಿರುವನೋ, ಅಂಥವನನ್ನು ನೋಡಿ ಬ್ರಹ್ಮದೇವನು ಜಯನಾಮಕ ದೇವತೆ ಗಳನ್ನು ಪುತ್ರರನ್ನಾಗಿ ಪಡೆಯೆಂದು ಹೇಳಿದನು.

ದಾರಾಗ್ನಿಹೋತ್ರಸಂಯೋಗೇ ಮಿಥ್ಯಾಮಾರಭತೇತಿ ಚ ।
ಏವಮುಕ್ತ್ವಾ ತು ತಂ ಬ್ರಹ್ಮಾ ತತ್ರೈವಾಂತರಧೀಯತ ॥ ೮ ॥

ತತಸ್ತೇ ನಾಭ್ಯನಂದಂತ ತದ್ವಾಕ್ಯಂ ಪರಮೇಷ್ಠಿನಃ ।
ಸತ್ಯಸ್ಯೇಹ ತು ಕರ್ಮಾಣಿ ವಾಙ್ಮನಃ ಕರ್ಮಜಾನಿ ತು ॥ ೯ ॥

ಯ ಏವಾಪ್ಯವತಿಷ್ಠಂತೇ ದೋಷಂ ದೃಷ್ಟ್ವಾ ತು ಕರ್ಮಸು ।
ಕ್ಷಯಾತಿಶಯಯುಕ್ತಂ ತು ತೇ ದೃಷ್ಟ್ವಾ ಕರ್ಮಣಾಂ ಫಲಂ ॥ ೧೦ ॥

ಜುಗುಪ್ಸಂತಃ ಪ್ರಸೂತಿಂ ಚ ನಿಸ್ತಂದ್ರಾ ನಿರ್ಮಮಾಭವನ್ ।
ಅಜಸ್ರಂ ಕಾಂಕ್ಷ್ಯಮಾಣಾಸ್ತೇ ವಿರಕ್ತಾ ದೋಷ ದರ್ಶಿನಃ ॥ ೧೧ ॥

ಅರ್ಥಂ ಧರ್ಮಂ ಚ ಕಾಮಂ ಚ ಹಿತ್ವಾ ತೇ ವೈ ವ್ಯವಸ್ಥಿತಾಃ ।
ಪೌರುಷಂ ಜ್ಞಾನಮಾಸ್ಥಾಯ ತೇಜಃ ಸಂಕ್ಷಿಪ್ಯ ಚಾಸ್ಥಿತಾಃ ॥ ೧೨ ॥

---

೮ ಎಲೈ ದೇವತೆಗಳೇ, ನೀವು ಪತ್ನೀ ಮತ್ತು ಅಗ್ನಿಹೋತ್ರಗಳ ವಿಷಯಗಳಲ್ಲಿ ಮಿಥ್ಯಾಪ್ರವಾದಗಳನ್ನು ಲೋಕದಲ್ಲಿ ಹರಡಿರೆಂದು ಅವರಿಗೆ ಹೇಳಿ ಬ್ರಹ್ಮದೇವನು ಅಲ್ಲಿಯೇ ಮಾಯವಾದನು

೯. ಅನಂತರ ಆ ದೇವತಗಳು ಬ್ರಹ್ಮದೇವನ ಆ ಮಾತುಗಳನ್ನು ಕೇಳಿ ಅದನ್ನೂ ಒಪ್ಪಲಿಲ್ಲ, ಸರಿಯೆಂದೂ ಭಾವಿಸಲಿಲ್ಲ. ಅವರು ವಾಙ್ಮನಃ, ಕಾಯ, ಕರ್ಮಗಳೆಂಬ ತ್ರಿಕರಣಗಳಿಂದಲೂ ಸತ್ಯವನ್ನೇ ನುಡಿಯಬೇಕೆಂದು ಯೋಚಿಸಿದ್ದರು.

೧೦. ಯಾವ ದೇವತೆಗಳು ಕರ್ಮಗಳಲ್ಲಿ ದೋಷಗಳಿವೆಯೆಂದು ತಿಳಿದು, ಆ ಕರ್ಮಗಳನ್ನು ಮಾಡದೆ ಸುಮ್ಮನಿರುವರೋ, ಅಂತಹ ದೇವತೆಗಳು ಆ ಕರ್ಮಫಲಗಳನ್ನು ಅತ್ಯಂತ ನಾಶವುಳ್ಳವುಗಳನ್ನಾಗಿ ತಿಳಿದು ಉದಾಸೀನರಾಗಿರುವರು.

೧೧ ಹೀಗೆ ಆ ದೇವತೆಗಳು, ಕರ್ಮಫಲಗಳು ಅನಿತ್ಯವೆಂದು ತಿಳಿದು, ಜನನವನ್ನು ಜುಗುಪ್ಸೆಮಾಡುತ್ತಾ, ಪ್ರವೃತ್ತಿಮಾರ್ಗವನ್ನು ಬಿಟ್ಟು ನಿವೃತ್ತಿಮಾರ್ಗವನ್ನೇ ಆಶ್ರಯಿಸಿ, ಆಸಕ್ತರಾಗಿ ದೋಷದರ್ಶಿಗಳೂ ವಿರಕ್ತರೂ ಆದರು.

೧೨. ಆ ದೇವತೆಗಳು, ಧರ್ಮಾರ್ಥಕಾಮಗಳು ನಶ್ವರಗಳೆಂದು ತಿಳಿದು ಸ್ಥಿರಮನಸ್ಕರಾಗಿ ಪುರುಷನು ಪಡೆಯಬೇಕಾದ ದಿವ್ಯಜ್ಞಾನವನ್ನು ಪಡೆದು ತೇಜಸ್ಸನ್ನು ಸಂಕೋಚಿಸಿಕೊಂಡು ವ್ಯವಸ್ಥಿತರಾಗಿದ್ದರು.

ತೇಷಾಂ ಚ ತಮಭಿಪ್ರಾಯಂ ಜ್ಞಾತ್ವಾ ಬ್ರಹ್ಮಾ ಚುಕೋಪ ಹ ।
ತಾನಬ್ರವೀತ್ತದಾ ಬ್ರಹ್ಮಾ ನಿರುತ್ಸಾಹಾನ್ ಸುರಾನಥ ॥ ೧೩ ॥

ಪ್ರಜಾರ್ಥಮಿಹ ಯೂಯಂ ವೈ ಪ್ರಜಾಸ್ರಷ್ಟಾಸ್ಮಿ ನಾನ್ಯಥಾ ।
ಪ್ರಸೂಯಧ್ವಂ ಜಯಧ್ವಂಚೇತ್ಯುಕ್ತವಾನಸ್ಮಿ ಯತ್ ಪುರಾ ॥ ೧೪ ॥

ಯಸ್ಮಾದ್ವಾಕ್ಯಮನಾದೃತ್ಯ ಮಮ ವೈರಾಗ್ಯಮಾಸ್ಥಿತಾಃ ।
ಜುಗುಪ್ಸಮಾನಾ ಸ್ವಂ ಜನ್ಮ ಸಂತತಿಂ ನಾಭಿನಂದಥ ॥ ೧೫ ॥

ಕರ್ಮಣಾಂ ಚ ಕೃತೋ ನ್ಯಾಸೋ ಹ್ಯಮೃತತ್ವಾಭಿಕಾಂಕ್ಷಯಾ ।
ತಸ್ಮಾದ್ಯೂಯಮನಾದೃತ್ಯ ಸಪ್ತಕೃತ್ವಸ್ತು ಯಾಸ್ಯಥ ॥ ೧೬ ॥

---

೧೩. ಅನಂತರ ಬ್ರಹ್ಮದೇವನು ನಿವೃತ್ತಿಮಾರ್ಗವನ್ನಾಶ್ರಯಿಸಿರುವ ಆ ಪುತ್ರರ ಮನೋಭಾವವನ್ನು ತಿಳಿದು ಅವರ ಮೇಲೆ ಬಹಳವಾಗಿ ಕೋಪಿಸಿಕೊಂಡನು. ತರುವಾಯ ಸೃಷ್ಟಿಮಾರ್ಗದಲ್ಲಿ ನಿರುತ್ಸಾಹಿಗಳೂ, ಅಪುತ್ರರೂ ಆದ ದೇವತೆಗಳನ್ನು ನೋಡಿ ಇಂತೆಂದನು.

೧೪. ಎಲೈ ದೇವತೆಗಳಿರಾ, ಪ್ರಜೆಗಳನ್ನು ನೀವು ಸೃಷ್ಟಿಮಾಡಬೇಕೆಂಬ ಭಾವದಿಂದಲೇ ನಾನು ನಿಮ್ಮನ್ನು ಸೃಷ್ಟಿಮಾಡಿದೆನು. ಮತ್ತು ನೀವು ಸಂತಾನಗಳನ್ನು ಪಡೆದು ಜಯಶೀಲರಾಗಿರೆಂದು ನಾನು ನಿಮಗೆ ಮೊದಲು ಹೇಳಿದ್ದೆನಲ್ಲವೇ ?

೧೫–೧೬. ನೀವು ಹಾಗೆ ಹೇಳಿದ ನನ್ನ ಮಾತುಗಳನ್ನು ಕೇಳದೆ, ಯಾವ ಕಾರಣದಿಂದ ಉದಾಸೀನರಾಗಿ ನಿಮ್ಮ ಜನನ ಸಂತಾನಗಳನ್ನು ದೂಷಿಸುತ್ತಾ ನನ್ನ ಮಾತುಗಳನ್ನು ತಿರಸ್ಕಾರ ಮಾಡಿರುತ್ತೀರಿ, ಮತ್ತು ಕಾಮ್ಯಕರ್ಮತ್ಯಾಗವನ್ನು ಮಾಡಿರುವಿರಿ. ನಿತ್ಯಸುಖದಾಯಕವಾದ ಮೋಕ್ಷವನ್ನೇ ಬಯಿಸುತ್ತೀರಿ. ಆದುದರಿಂದ ನೀವು ನನ್ನ ಮಾತುಗಳನ್ನು ತಿರಸ್ಕರಿಸಿದಂತೇ ಆಗಿದೆ. ಆದುದರಿಂದ ನೀವು ಏಳುಸಲ ಅವತಾರವನ್ನು ಮಾಡಿರೆಂದು ಶಾಪವನ್ನು ಕೊಟ್ಟನು.

**ತೇ ಶಪ್ತಾ ಬ್ರಹ್ಮಣಾ ದೇವಾ ಜಯಾಸ್ತಂ ವೈ ಪ್ರಸಾದಯನ್ ।**
**ಕ್ಷಮಾಸ್ಮಾಕಂ ಮಹಾದೇವ ಯದಜ್ಞಾನಾತ್ ಕೃತಂ ವಿಭೋ ॥ ೧೭ ॥**

**ಪ್ರಣಿಪತ್ಯ ಸಾನುನಯಂ ಬ್ರಹ್ಮಾ ಶಾನಬ್ರವೀತ್ ಪುನಃ ।**
**ಲೋಕೇ ಮಯಾನನುಜ್ಞಾತಃ ಕಃ ಸ್ವಾತಂತ್ರ್ಯಮಿಹಾರ್ಹಸಿ ॥ ೧೮ ॥**

**ಮಯಾ ಪರಿಗತಂ ಸರ್ವಂ ಕಥಮುಚ್ಛಂದತೋ ಮಮ ।**
**ಪ್ರತಿಪತ್ಸ್ಯಂತಿ ಭೂತಾನಿ ಶುಭಂ ವಾ ಯದಿ ವಾಽಶುಭಂ ॥ ೧೯ ॥**

**ಲೋಕೇ ಯದಸ್ತಿ ಕಿಂಚಿದ್ವೈ ಸತ್ವಾಸತ್ವವ್ಯವಸ್ಥಿತಂ ।**
**ಬುಧ್ಯಾತ್ಮನಾ ಮಯಾ ವ್ಯಾಪ್ತಂ ಕೋ ಮಾಂ ಲೋಕೇಽತಿಸಂಧಯೇತ್॥೨೦॥**

---

೧೭. ಹೀಗೆ ಬ್ರಹ್ಮದೇವನು ಶಾಪವನ್ನು ಕೊಡಲು ಶಪ್ತರಾದ ಜಯನಾಮಕ ದೇವತೆಗಳು ಬ್ರಹ್ಮದೇವನನ್ನು ಪ್ರಾರ್ಥಿಸಿಕೊಂಡರು ಮಹಾನುಭಾವನಾದ ಓ ಪ್ರಭುವೇ, ನಾವು ತಿಳಿಯದೇ ಅಜ್ಞಾನದಿಂದ ಮಾಡಿದ ಕಾರ್ಯವನ್ನು ಕ್ಷಮಿಸ ಬೇಕೆಂದು ವಿನಯದೊಡನೆ ನಮಸ್ಕರಿಸಿ ಪ್ರಾರ್ಥಿಸಿಕೊಂಡರು

೧೮. ಪುನಃ ಬ್ರಹ್ಮದೇವನು ಅವರನ್ನು ಕುರಿತು ಎಲೈ ದೇವತೆಗಳಿರಾ, ಈ ಮೂರು ಲೋಕಗಳಲ್ಲಿಯೂ ನನ್ನಾಜ್ಞೆಯನ್ನು ಮೀರಿ ಸ್ವತಂತ್ರವಾಗಿ ಕೆಲಸ ಮಾಡಲು ಯಾರಿಗೆ ತಾನೆ ಶಕ್ತಿಯಿರುತ್ತದೆ? ನನ್ನಾಜ್ಞೆಯನ್ನು ಮೀರಲು ಯಾರಿಗೂ ಶಕ್ತಿಯಿಲ್ಲವೆಂದು ಹೇಳಿದನು.

೧೯. ಎಲೈ ದೇವತೆಗಳಿರಾ, ನನಗೆ ಸರ್ವವೂ ವಿಧಿತವಾಗಿದೆ. ನನಗೆ ತಿಳಿಯದೆ, ಸ್ವತಂತ್ರವಾಗಿ ಯಾವ ಕಾರ್ಯವೂ ಲೋಕದಲ್ಲಿ ನಡೆಯುವುದಿಲ್ಲ. ಲೋಕದಲ್ಲಿ ಪ್ರಜೆಗಳು ಶುಭಾಶುಭಗಳಾದ ಯಾವ ಸಕಲ ಕಾರ್ಯಗಳನ್ನು ಮಾಡುವರೋ, ಅವುಗಳೆಲ್ಲವೂ ನನಗೆ ವಿಧಿತವಾಗಿಯೇ ಇರುತ್ತದೆಯೆಂದು ದೇವನು ಹೇಳಿದನು

೨೦. ಓ ದೇವತೆಗಳಿರಾ, ಈ ಲೋಕದಲ್ಲಿ ಸದಸದಾತ್ಮಕವಾದ ಯಾವ ಕಾರ್ಯವಿರುತ್ತದೆಯೋ ಅದೆಲ್ಲವೂ ನನ್ನಿಂದಲೇ ವ್ಯಾಪ್ತವಾಗಿರುತ್ತದೆ. ಅವರ ಬುದ್ಧಿ ಆತ್ಮ ಇವುಗಳನ್ನು ನಾನೇ ಪ್ರೇರಣೆ ಮಾಡುವೆನು. ಇಂತಹ ನನ್ನನ್ನು ಮೀರಲು ಲೋಕದಲ್ಲಿ ಯಾರಿಗೆ ಶಕ್ಯವು. ಯಾರಿಗೂ ಮೀರಿ ನಡೆಯಲು ಸಾಧ್ಯವಿಲ್ಲ.

ಭೂತಾನಾಂತರ್ಕಿತಂ ಯಚ್ಚ ಯಚ್ಚಾಪ್ಯೇಷಾಂ ವಿಧಾರಿತಂ ।
ತಥಾ ವಿಚಾರಿತಂ ಯಚ್ಚ ತತ್ಸರ್ವಂ ವಿದಿತಂ ಮಮ ॥ ೨೧ ॥

ಮಯಾ ಸ್ಥಿತಮಿದಂ ಸರ್ವ ಜಗತ್ ಸ್ಥಾವರಜಂಗಮಂ ।
ಆಶಾಮಯೇನ ತತ್ಸೇನ ಕಥಂ ಛೇತ್ತುಮಿಹೋತ್ಸಹೇ ॥ ೨೨ ॥

ಯಸ್ಮಾಚ್ಚಾಹಂ ವಿಸ್ಮೃತೋ ವೈ ಸರ್ಗಾರ್ಥಮಿಹ ನಾನ್ಯಥಾ ।
ಇಹ ಕರ್ಮಾಣ್ಯನಾರಭ್ಯ ಕೋ ಮೇ ಛಂದಾದ್ವಿಮೋಕ್ಷ್ಯತೇ ॥ ೨೩ ॥

ಪರಿಭಾಷ್ಯ ತತೋ ದೇವಾನ್ ಜಯಾನ್ ವೈ ನಷ್ಟಚೇತಸಃ ।
ಅಬ್ರವೀತ್ಸ ಪುನಸ್ತಾನ್ ವೈ ಧೃತಾನ್ ದಂಡೇ ಪ್ರಜಾಪತಿಃ ॥ ೨೪ ॥

---

೨೧. ಈ ಲೋಕದಲ್ಲಿ ಪ್ರಾಣಿಗಳು ಯಾವ ಕಾರ್ಯವನ್ನು ಮನಸ್ಸಿನಲ್ಲಿ ಆಲೋಚಿಸುತ್ತಾರೋ, ಯಾವ ಕಾರ್ಯವನ್ನು ವಿಚಾರಿಸಿ ನಿರ್ಣಯವನ್ನು ಮಾಡುತ್ತಾರೋ ಅಂತಹ ಕಾರ್ಯಗಳೆಲ್ಲವೂ ಮೊದಲೇ ನನಗೆ ವಿಧಿತವಾಗಿಯೇ ಇರುತ್ತವೆ.

೨೨. ಓ ದೇವತೆಗಳೇ ಚರಾಚರಾತ್ಮಕವಾದ ಈ ಜಗತ್ತೆಲ್ಲವೂ ನನ್ನಿಂದ ವ್ಯಾಪ್ತವಾಗಿದೆ. ಮತ್ತು ನಾನು ಮನಃಪೂರ್ವಕವಾಗಿ ಈ ಜಗತ್ತನ್ನು ವೃದ್ಧಿಗೊಳಿಸ ಬೇಕೆಂದು ಆಶಿಸುತ್ತೇನೆ. ಹೀಗೆ ಇರುವಲ್ಲಿ ಈ ಲೋಕವನ್ನು ನಾಶಮಾಡಲು ನಾನು ಹೇಗೆ ಇಷ್ಟಪಡುವೆನೆಂದನು.

೨೩. ನಾನು ಈ ಜಗತ್ತನ್ನು ಸೃಷ್ಟಿಮಾಡಬೇಕೆಂದು ಮನಸ್ಸಿನಲ್ಲಿ ನಿಶ್ಚಯ ಮಾಡಿರುವೆನು. ಹೀಗೆ ನಾನು ನಿಶ್ಚಯಿಸಿರಲು ಈ ಲೋಕದಲ್ಲಿ ಪ್ರವೃತ್ತಿಕರ್ಮಗಳ ನ್ನಾಚರಿಸದೇ ನನ್ನಿಷ್ಟವನ್ನತಿಕ್ರಮಿಸಿ ಸ್ವೇಚ್ಛೆಯಾಗಿ ನಡೆಯುತಕ್ಕ ಯಾವನು ನನ್ನ ವಶಕ್ಕೆ ಸಿಕ್ಕದೆ ಸುಖಿಯಾಗಿರುವನು.

೨೪. ಅನಂತರ ಬ್ರಹ್ಮದೇವನು ವಿವೇಕಶೂನ್ಯರಾದ ಜಯನಾಮಕ ದೇವತೆ ಗಳಿಗೆ ಹೀಗೆ ಹೇಳಿ, ದಂಡಾರ್ಹರಾದ ಅವರನ್ನು ಕುರಿತು ಪುನಃ ವಕ್ಷ್ಯಮಾಣ ರೀತಿ ಯಲ್ಲಿ ತಿಳಿಸಿದನು.

**ಯಸ್ಮಾನ್ಮಮಾಭಿಸಂಧಾಯ ಸನ್ಯಾಸೋ ವಃ ಕೃತಃ ಪುರಾ ।**
**ಯಸ್ಮಾತ್ಸ ವಿಫಲೋಽಯನ್ನೋ ಹ್ಯಪಾರಸ್ವೇಷ ಯಃ ಕೃತಃ ।**
**ಭವಿತಾತಃ ಸುಬೋದರ್ಕೋ ದೇವಾಭಾವೇಷು ಜಾಯತಾಂ ॥ ೨೫ ॥**

**ಆತ್ಮಚ್ಛಂದೇನ ವೋ ಜನ್ಮ ಭವಿಷ್ಯತಿ ಸುರೋತ್ತಮಾಃ ।**
**ಮನ್ವಂತರೇಷು ಸಂಮೂಢಾಃ ಷಟ್‌ಸು ಸರ್ವೇ ಗಮಿಷ್ಯಥ ॥ ೨೬ ॥**

**ವೈವಸತಾಂತೇಷು ಸುರಾಸ್ತಥಾ ಸ್ವಾಯಂಭುವಾದಿಷು ।**
**ತಾಂ ಜ್ಞಾತ್ವಾ ಬ್ರಹ್ಮಣಾ ತತ್ರ ಶ್ಲೋಕೋ ಗೀತ ಪುರಾತನಃ ॥ ೨೭ ॥**

---

೨೫. ಎಲೈ ದೇವೋತ್ತಮರೇ, ನೀವು ಪೂರ್ವದಲ್ಲಿ ನನ್ನ ಸಂಗಡ ಸಮಾಲೋಚನೆಯನ್ನು ಮಾಡದೆಯೇ ನಿಷ್ಕಾಮರಾಗಿ ಕರ್ಮತ್ಯಾಗವನ್ನು ಮಾಡಿರುವಿರಿ. ಆದುದರಿಂದ ನಿಮ್ಮ ಪ್ರಯತ್ನಗಳೆಲ್ಲಾ ವ್ಯರ್ಥವಾಗುವುದು. ನಾನು ಮಾಡಿದ ಯತ್ನಗಳು ವ್ಯರ್ಥವಾಗುವುದಿಲ್ಲ. ಆದುದರಿಂದ ನನ್ನ ಮಾತುಗಳನ್ನು ಕೇಳಿರಿ ನಿನುಗೆ ಮುಂದೆ ಒಳ್ಳೆಯದಾಗುವುದು. ಆದುದರಿಂದ ನೀವು ಪುನಃ ದೇವತೆಗಳಾಗಿ ಜನಿಸಿ ಎಂದು ಹೇಳಿದನು.

೨೬ ಓ ದೇವತೆಗಳಿರಾ, ನಿಮ್ಮ ಇಚ್ಛಾನುಸಾರವಾಗಿ ನಿಮಗೆ ಜನನವು ಉಂಟಾಗಲಿ. ಈಗ ನೀವು ನಿವೃತ್ತಿಮಾರ್ಗವನ್ನಾಶ್ರಯಿಸಿರುವುದರಿಂದ ಹೀಗೆ ಭ್ರಾಂತರಾಗದೆ ಪ್ರವೃತ್ತಿಮಾರ್ಗದಿಂದಲೇ ಆರು ಮನ್ವಂತರಗಳಲ್ಲಿಯೂ, ಅವತಾರ ಗಳನ್ನು ಮಾಡಿ ನನಗೆ ಸಹಕಾರಿಗಳಾಗಿರೆಂದು ಬ್ರಹ್ಮನು ಹೇಳಿದನು.

೨೭ ಹೀಗೆ ಬ್ರಹ್ಮದೇವನ ಮಾತಿನಂತೆ ಆ ದೇವತೆಗಳು ಸ್ವಾಯಂಭುವ ಮನ್ವಂತರದ ಆದಿಯಾಗಿ ವೈವಸ್ವತಮನ್ವಂತರವೇ ಕೊನೆಯಾದ ಮನ್ವಂತರಗಳಲ್ಲಿ ಅವತರಿಸಿ ಬ್ರಹ್ಮದೇವನ ಸೃಷ್ಟಿಕಾರ್ಯಗಳಿಗೆ ಸಹಕಾರಿಯಾಗಿರುವರು. ಎಂಬ ವಿಷಯದಲ್ಲಿ ಪುರಾತನ ಶ್ಲೋಕವು ಉಕ್ತವಾಗಿದೆ.

ತ್ರಯೀಂ ವಿದ್ಯಾಂ ಬ್ರಹ್ಮಚರ್ಯಂ ಪ್ರಸೂತಿಂ ಶ್ರಾದ್ಧಮೀವ ಚ ।
ಯಜ್ಞಂಚೈವ ತು ದಾನಂಚ ಏಷಾಮೇವತು ಕುರ್ವತಾಂ ।
ಸ ಹಿ ಸ್ಮ ವಿರಜಾ ಭೂತ್ವಾವಸತೇಽನ್ಯಪ್ರಶಂಸಯಾ ॥ ೨೮ ॥

ಸ ಏವಂ ಶ್ಲೋಕಂ ದೃಷ್ಟ್ವಾ ತು ಜಯಾ ದೇವಾನಥಾಬ್ರವೀತ್ ।
ವೈವಸ್ವತೇಂತರೇತೀತೇ ಮತ್ಸಮೀಪಮಿಹೇಷ್ಯಥ ॥ ೨೯ ॥

ತತೋ ಯೂಯಂ ಮಯಾ ಸಾರ್ಧಂ ಸಿದ್ಧಿಂ ಪ್ರಾಪ್ಸ್ಯಥ ಶಾಶ್ವತೀಂ ।
ಏವಮುಕ್ತ್ವಾ ತು ತಾನ್ ಬ್ರಹ್ಮಾ ತತ್ರೈವಾಂತರಧೀಯತ ॥ ೩೦ ॥

ತತೋ ದೇವಾಸ್ತಿರೋಭೂತೇ ಈಶ್ವರೇ ಹ್ಯಕುತೋಭಯಂ ।
ಪ್ರಪನ್ನಾ ಅಣಿಮಾದ್ಯೈಶ್ಚ ಯುಕ್ತಾ ಯೋಗಬಲಾನ್ವಿತಾಃ ॥ ೩೧ ॥

---

೨೮. ಸ್ವಾಯಂಭುವಾದಿಮನ್ವಂತರಗಳಲ್ಲಿ ಆ ದೇವಾದಿಗಳನ್ನು ಕುರಿತು ಯಾವ ಪುರುಷರು ಮೂರು ವೇದಗಳು, ಬ್ರಹ್ಮಚರ್ಯ, ಜನನ, ಶ್ರಾದ್ಧ, ಯಜ್ಞ, ಯಾಗಾದಿಕರ್ಮ, ದಾನ ಇವುಗಳನ್ನು ಮಾಡುವರೋ ಅಂದರೆ ಆ ದೇವತೆಗಳ ಉದ್ದೇಶ್ಯವಾಗಿ ಮಾಡುವರೋ ಅವರು ದೋಷರಹಿತರಾಗಿ ಇತರರಿಂದ ಹೊಗಳ ಲ್ಪಡುತ್ತಾ ದಿವ್ಯಸುಖವನ್ನು ಹೊಂದುವರು.

೨೯-೩೦. ಅನಂತರ ಬ್ರಹ್ಮದೇವನು ಮಹಾತ್ಮರು ಹೇಳಿರುವ ಈ ವಾಕ್ಯವನ್ನು ಕೇಳಿ ಜಯನಾಮಕ ದೇವತೆಗಳಿಗೆ ಹೀಗೆ ಹೇಳಿದನು. ಎಲೈ ದೇವತೆಗಳೇ ನೀವು ವೈವಸ್ವತಮನ್ವಂತರವು ಕಳೆದ ತರುವಾಯ ನನ್ನ ಸಮೀಪಕ್ಕೆ ಬರುವಿರಿ. ಅನಂತರ ನಾನು ನೀವು ಎಲ್ಲರೂ ಕೂಡಿ ಶಾಶ್ವತವಾದ ಪರಮಪದವಿಯನ್ನು (ಹೊಂದೋಣ) ಪಡೆಯೋಣವೆಂದು ಬ್ರಹ್ಮದೇವನು ಆ ದೇವತೆಗಳಿಗೆ ಹೇಳಿ ಅಲ್ಲಿಯೇ ಮಾಯ ವಾದನು.

೩೧. ಅನಂತರ ಬ್ರಹ್ಮದೇವನು ಹೀಗೆ ಹೇಳಿ ಮಾಯವಾಗಲು, ಆ ಜಯ ನಾಮಕ ದೇವತೆಗಳು ನಿರ್ಭೀತರಾಗಿ ಅಣಿಮಾದ್ಯೈಶ್ವರ್ಯಗಳನ್ನು ಹೊಂದಿ, ಯೋಗಬಲದಿಂದ ಕೂಡಿ ಪ್ರಕಾಶಿಸಿದರು.

ತತಸ್ತೇಷಾಂ ತು ಯಾಸ್ತನ್ವಸ್ತಾಭಿರ್ವೈ ದ್ವಾದಶ ಹ್ರದಾಃ ।
ಜಯಾ ಇತಿ ಸಮಾಖ್ಯಾತಾ ಜಾತಾಶ್ಚೋದಧಿಸನ್ನಿಭಾಃ ॥ ೩೨ ॥

ತತಃ ಸ್ವಾಯಂಭುವೇ ತಸ್ಮಿನ್ ಸರ್ಗೇ ತು ಜಜ್ಞಿರೇ ಸುರಾಃ ।
ಅಜಿತಾಯಾಂ ರುಚೇಃ ಪುತ್ರಾ ಅಜಿತಾ ದ್ವಾದಶಾತ್ಮಕಃ ॥ ೩೩ ॥

ವಿಧಿಶ್ಚ ಮುನಯಶ್ಚೈವ ಕ್ಷೇಮೋ ನಂದೋಽವ್ಯಯಸ್ತಥಾ ।
ಪ್ರಾಣೋಽಪಾನಃ ಸುಧಾಮಾ ಚ ಕ್ರತುಶಕ್ತಿರ್ವ್ಯವಸ್ಥಿತಾಃ ॥
ಇತ್ಯೇತೇ ಮಾನಸಾಃ ಸರ್ವೇ ಅಜಿತಾ ದ್ವಾದಶ ಸ್ಮೃತಾಃ ॥ ೩೪ ॥

ತೇ ಚ ಯಜ್ಞೇ ಸುರೈಃ ಸಾರ್ಧಂ ಯಜ್ಞಭಾಜಸ್ತದಾ ಸ್ಮೃತಾಃ ।
ಸ್ವಾಯಂಭುವೇಂತರೇ ಪೂರ್ವೇ ತತಃ ಸ್ವಾರೋಚಿಷೇ ಪುನಃ ॥
ತುಷಿತಾಯಾಂ ಸಮುತ್ಪನ್ನಾಃ ಪುನಃ ಪುತ್ರಾಃ ಸ್ವರೋಚಿಷಃ ॥ ೩೫ ॥

೩೨. ಅನಂತರ ಈ ವೈವಸ್ವತಮನ್ವಂತರವು ಕಳೆಯಲು, ಆ ದೇವತೆಗಳ ಯಾವ ಶರೀರಗಳಿದ್ದುವೋ ಅವು ದ್ವಾದಶಸಂಖ್ಯಾಕಗಳೂ, ಜಯನಾಮಕಗಳೂ, ಸಮುದ್ರಕ್ಕೆ ಸಮಾನಗಳೂ ಆದ ಮಹಾಹ್ರದಗಳಾಗಿ ಪ್ರಖ್ಯಾತವಾದುವು.

೩೩. ಬ್ರಹ್ಮದೇವನು ಹೇಳಿದ ತರುವಾಯ ಸ್ವಾಯಂಭುವಮನ್ವಂತರದಲ್ಲಿ ಆ ದೇವತೆಗಳು ರುಚಿನಾಮಕದೇವನ ಪತ್ನಿಯಾದ ಅಜಿತಾದೇವಿಯಲ್ಲಿ ಅಜಿತನಾಮಕ ದ್ವಾದಶಪುತ್ರರಾಗಿ ಅವತರಿಸಿದರು

೩೪. ಆ ದ್ವಾದಶ ದೇವತೆಗಳು ವಿಧಿ, ಮುನಿ, ಕ್ಷೇಮ, ನಂದ, ಅವ್ಯಯ, ಪ್ರಾಣ, ಅಪಾನ, ಸುಧಾಮ, ಕ್ರತು, ಶಕ್ತಿ ಇವರೇ ಮೊದಲಾದವರು ಬ್ರಹ್ಮದೇವನ ದ್ವಾದಶ ಅಜಿತನಾಮಕಮಾನಸಪುತ್ರರಾಗಿ ಅವತರಿಸಿದರು

೩೫. ಆ ಅಜಿತನಾಮಕ ದೇವತೆಗಳು ಪ್ರಸಿದ್ಧರಾದ ದೇವತೆಗಳ ಸಂಗಡ ಸ್ವಾಯಂಭುವಮನ್ವಂತರದಲ್ಲಿ ಯಜ್ಞಭೋಕ್ತೃಗಳಾಗಿ ಸುಪ್ರಸಿದ್ಧರಾಗಿದ್ದರು. ಅನಂತರ ಸ್ವಾರೋಚಿಷಮನ್ವಂತರದಲ್ಲಿ ಸ್ವಾರೋಚಿಷಮನುವಿಗೆ ತುಷಿತಾದೇವಿಯಲ್ಲಿ ತುಷಿತನಾಮಕರಾಗಿ ಅವತರಿಸಿದರು.

ತುಷಿತಾ ನಾಮ ತೇ ಹ್ಯಾಸರ್ ಪ್ರಾಣಾಖ್ಯಾ ಯಾಜ್ಞಿಕಾಃ ಸುರಾಃ ।
ಪುನಸ್ತೇ ತುಷಿತಾ ದೇವಾ ಉತ್ತಮೇ ತ್ವಂತರೇ ಸ್ವಯಂ ॥ ೩೬ ॥

ಉತ್ತಮಸ್ಯ ತು ತೇ ಪುತ್ರಾಃ ಸತ್ಯಾಯಾಂ ಜಜ್ಞಿರೇ ಶುಭಾಃ ।
ತತಃ ಸತ್ಯಾಃ ಸ್ಮೃತಾ ದೇವಾ ಉತ್ತಮೇ ಚಾಂತರೇ ತದಾ ॥ ೩೭ ॥

ಅಭರ್ವ ಯಜ್ಞಭಾಜಸ್ತೇ ತೃತೀಯೇ ದ್ವಾಪರಾಂತರೇ ।
ತೇ ತು ಸತ್ಯಾಃ ಪುನರ್ದೇವಾಃ ಸಂಪ್ರಾಪ್ತೇ ತಾಮಸೇಂತರೇ ॥ ೩೮ ॥

ಹರ್ಷಾ ಯೇ ತಮಸಃ ಪುತ್ರಾ ಜಜ್ಞಿರೇ ದ್ವಾದಶೈವ ತು ।
ಹರಯೋ ನಾಮ ತೇ ದೇವಾ ಯಜ್ಞಭಾಜಸ್ತಥಾಭರ್ವ ॥ ೩೯ ॥

---

೩೬. ಸ್ವಾರೋಚಿಷಮನ್ವಂತರದಲ್ಲಿ ಉತ್ಪನ್ನರಾದ ತುಷಿತನಾಮಕ ದೇವತೆಗಳು ಪ್ರಾಣನಾಮಕರೂ ಯಾಜ್ಞಿಕರೂ ಆದ ದೇವತೆಗಳೆಂದು ಪ್ರಖ್ಯಾತರಾಗಿದ್ದರು. ಅನಂತರ ಉತ್ತಮಮನ್ವಂತರವು ಸಂಭವಿಸಲು ಆ ದೇವತೆಗಳು ಪುನಃ ಅವತರಿಸುವರು.

೩೭. ಉತ್ತಮಮನ್ವಂತರದಲ್ಲಿ ಆ ದೇವತೆಗಳು ಉತ್ತಮನಾಮಕಮನುವಿಗೆ ಸತ್ಯನಾಮಕ ಪತ್ನಿಯಲ್ಲಿ ಮಂಗಳಪ್ರದರೂ, ಸತ್ಯಾನಾಮಕರೂ ಆದ ಪುತ್ರರಾಗಿ ಜನಿಸಿದರು

೩೮. ಆ ತೃತೀಯಮನ್ವಂತರವಾದ ಉತ್ತಮಮನುವಿನ ಕಾಲದಲ್ಲಿ ಸತ್ಯನಾಮಕರಾಗಿ ಅವತರಿಸಿ, ಯಜ್ಞಭೋಕ್ತೃಗಳಾಗಿಯೂ ಸುಪ್ರಸಿದ್ಧರಾಗಿಯೂ ಇದ್ದರು.

೩೯. ಅನಂತರ ತಾಮಸಮನ್ವಂತರವು ಪ್ರಾಪ್ತವಾಗಲು, ಆ ದೇವತೆಗಳು ತಾಮಸನಾಮಕೇಶ್ವರನಿಗೆ ಹರ್ಷಾದೇವಿಯಲ್ಲಿ ಹರಿನಾಮಕರಾಗಿ ಅವತರಿಸಿ, ಯಜ್ಞಭೋಕ್ತೃಗಳೂ ಪ್ರಜಾಪಾಲಕರೂ ಆಗಿದ್ದರು.

ತತಸ್ತೇ ಹರಯೋ ದೇವಾಃ ಪ್ರಾಪ್ತೇ ಚಾರಿಷ್ಣವೇಂತರೇ।
ವೈಕುಂಠಾಯಾಂ ತತಸ್ತೇ ವೈ ಚರಿಷ್ಣೋರ್ಜಜ್ಞಿರೇ ಸುರಾಃ ॥
ವೈಕುಂಠಾ ನಾಮ ತೇ ದೇವಾಃ ಪಂಚಮಸ್ಯಾಂತರೇ ಮನೋಃ ॥ ೪೦ ॥

ತತಸ್ತೇ ವೈ ಪುನರ್ದೇವಾ ವೈಕುಂಠಾಃ ಪ್ರಾಪ್ಯ ಚಾಕ್ಷುಷಂ।
ಸಾಧ್ಯಾಯಾಂ ದ್ವಾದಶ ಸುತಾ ಜಜ್ಞಿರೇ ಧರ್ಮಸೂನವಃ ॥ ೪೧ ॥

ತತಸ್ತೇ ವೈ ಪುನಃ ಸಾಧ್ಯಾಃ ಸಂಕ್ಷೀಣೇ ಚಾಕ್ಷುಷೇಂತರೇ।
ಉಪಸ್ಥಿತೇ ಮನೋಃ ಸರ್ಗೇ ಪುನರ್ವೈವಸ್ವತಸ್ಯ ಹ ॥ ೪೨ ॥

ಆದ್ಯೇ ತ್ರೇತಾಯುಗಮುಖೇ ಪ್ರಾಪ್ತೇ ವೈವಸ್ವತಸ್ಯ ತು।
ಅಂಶೇನ ಸಾಧ್ಯಾಸ್ತೇಽದಿತ್ಯಾಂ ಮಾರೀಚಾತ್ ಕಶ್ಯಪಾತ್ ಪುನಃ ॥ ೪೩ ॥

---

೪೦ ಅನಂತರ ಪಂಚಮವಾದ ಚಾರಿಷ್ಣವಮನ್ವಂತರವು ಬರಲು, ಹರಿನಾಮಕರಾದ ಆ ದೇವತೆಗಳು ಚಾರಿಷ್ಣವಮನುವಿನ ಪತ್ನಿಯಾದ ವೈಕುಂಠಾ ದೇವಿಯಲ್ಲಿ ವೈಕುಂಠನಾಮಕರಾಗಿ ಅವತರಿಸಿ, ಯಜ್ಞಭಾಗಿಗಳೂ ಪ್ರಜಾಪಾಲಕರೂ ಆಗಿದ್ದರು

೪೧. ಅನಂತರ ವೈಕುಂಠನಾಮಕರಾದ ದೇವತೆಗಳು ಚಾಕ್ಷುಷಮನ್ವಂತರವು ಪ್ರಾಪ್ತವಾಗಲು, ಪುನಃ ಧರ್ಮದೇವನ ಪತ್ನಿಯಾದ ಸಾಧ್ಯೆಯಲ್ಲಿ ದ್ವಾದಶಪುತ್ರರಾಗಿ ಅವತರಿಸಿದರು.

೪೨. ತರುವಾಯ ಆ ಸಾಧ್ಯನಾಮಕ ದೇವತೆಗಳು ಚಾಕ್ಷುಷಮನ್ವಂತರವು ಕಳೆಯಲಾಗಿ, ವೈವಸ್ವತಮನ್ವಂತರದಲ್ಲಿ ಆದಿತ್ಯನಾಮಕರಾಗಿ ಪುನಃ ಅವತರಿಸಿದರು.

೪೩. ಆ ವೈವಸ್ವತಮನ್ವಂತರದ ಮೊದಲನೆಯ ತ್ರೇತಾಯುಗವು ಪ್ರಾಪ್ತವಾಗಲು, ವೈವಸ್ವತಮನುವಿನ ಅಂಶದಿಂದ ಮರೀಚಿ ಪುತ್ರನಾದ ಕಶ್ಯಪನಿಗೆ ಪತ್ನಿಯಾದ ಅದಿತೀದೇವಿಯಲ್ಲಿ ದ್ವಾದಸಂಖ್ಯಾಕರಾದ ಆದಿತ್ಯನಾಮಕ ದೇವತೆಗಳಾಗಿ ಅವರು ಹುಟ್ಟಿದರು.

ಜಜ್ಞಿರೇ ದ್ವಾದಶಾದಿತ್ಯಾ ವರ್ತಮಾನೇಽಂತರೇ ಪುನಃ ।
ಯದ್ವಾ ತೇತೇ ಸಮುತ್ಪನ್ನಾಶ್ಚಾಕ್ಷುಷಸ್ಯಾಂತರೇ ಮನೋಃ ॥ ೪೪ ॥

ತತಃ ಸ್ವಾಯಂಭುವೇ ಸಾಧ್ಯಾ ಜಜ್ಞಿರೇ ದ್ವಾದಶಾಮರಾಃ ।
ಏವಮಾದ್ಯಾ ಜಯಾಸ್ತೇ ವೈ ಶಾಪಾತ್ಸಮುಭವಂಸ್ತದಾ ॥ ೪೫ ॥

ಯ ಇಮಾಂ ಸಪ್ತಸಂಭೂತಿಂ ದೇವಾನಾಂ ದೇವಶಾಸನಾತ್ ।
ಪಠೇದ್ಯಃ ಶ್ರದ್ಧಯಾ ಯುಕ್ತಃ ಪ್ರತ್ಯವಾಯಂ ನ ಗಚ್ಛತಿ ॥ ೪೬ ॥

ಇತ್ಯೇತೇ ಭೂತಯಃ ಸಪ್ತ ಜಯಾನಾಂ ಸಪ್ತಲಕ್ಷಣಾಃ ।
ಪರಿಕ್ರಾಂತಾ ಮಯಾ ಚಾದ್ಯ ಕಿಂಭೂಯಃ ಶ್ರೋತುಮಿಚ್ಛಥ ॥ ೪೭ ॥

---

೪೪. ಚಾಕ್ಷುಷಮನ್ವಂತರದಲ್ಲಿದ್ದ ಆ ದೇವತೆಗಳು ಈಗ ನಡೆಯುವ ವೈವಸ್ವತ ಮನ್ವಂತರದಲ್ಲಿ ಕಶ್ಯಪರಿಗೆ ಅದಿತೀದೇವಿಯಲ್ಲಿ ಆದಿತ್ಯನಾಮಕ ದೇವತೆಗಳಾಗಿ ಅವತರಿಸಿದರು.

೪೫. ತರುವಾಯ ಪುನಃ ಸ್ವಾಯಂಭುವಮನ್ವಂತರವು ಬರಲಾಗಿ, ಸಾಧ್ಯ ನಾಮಕರಾದ ದ್ವಾದಶ ದೇವತೆಗಳು ಪುನಃ ಉದ್ಭವಿಸುವರು. ಹೀಗೆ ಜಯನಾಮಕ ದೇವತೆಗಳು ಬ್ರಹ್ಮದೇವನ ಶಾಪದಿಂದ ಪುನಃ ಅವತರಿಸುವರು.

೪೬. ಯಾವ ಪುರುಷರು ಜಯನಾಮಕ ದೇವತೆಗಳು ವೈರಾಗ್ಯರಾಗಿದ್ದ ಕಾರಣ, ಬ್ರಹ್ಮದೇವನ ಶಾಪದಿಂದ ಏಳು ಜನ್ಮಗಳಲ್ಲಿ ಅವತರಿಸಿದರೆಂಬ ಕಥೆಯನ್ನು ಶ್ರದ್ಧೆಯಿಂದ ಕೇಳುವರೋ, ಮತ್ತು ಪಠನಮಾಡುವರೋ ಅವರಿಗೆ ಯಾವವಿಧ ಪಾಪವೂ ಇಲ್ಲದೆ, ನಿತ್ಯಸುಖವನ್ನು ಅವರು ಹೊಂದುವರು.

೪೭. ಓ ವಿಪ್ರವರ್ಯರೇ, ಈ ರೀತಿಯಾಗಿ ಆ ಜಿಯಾದಿ ದೇವತೆಗಳ ಏಳುಸಲ ಸಪ್ತನಾಮಗಳಿಂದ ಅವತರಿಸಿದ ವಿಷಯಗಳನ್ನು ನಾನು ನಿಮಗೋಸ್ಕರ ಸಾಂಗ ವಾಗಿಯೂ, ಸಕಾರಣವಾಗಿಯೂ ನಿರೂಪಿಸಿರುವೆನು. ಈಗ ಮತ್ತು ಯಾವ ವಿಷಯ ಗಳನ್ನು ಕೇಳಬೇಕೆಂತ ಇಚ್ಛಿಸುತ್ತೀರಿ ತಿಳಿಸಿರೆಂದು ಸೂತಮುನಿಯು ಮಹರ್ಷಿಗಳಿಗೆ ಹೇಳಿದನು.

|| ಋಷಯ ಊಚುಃ ||

ದೈತ್ಯಾನಾಂ ದಾನವಾನಾಂ ಚ ಗಂಧರ್ವೋರಗರಕ್ಷಸಾಂ।
ಸರ್ವಭೂತಪಿಶಾಚಾನಾಂ ಪಶೂನಾಂ ಪಕ್ಷಿ ವೀರುಧಾಂ ||
ಉತ್ಪತ್ತಿಂ ನಿಧನಂ ಚೈವ ವಿಸ್ತರಾತ್ ಕಥಯಸ್ವನಃ || ೪೮ ||

ಏವಮುಕ್ತಸ್ತದಾ ಸೂತ ಉವಾಚ ಋಷಿಸತ್ತಮಾ।
ದಿತೇಃ ಪುತ್ರದ್ವಯಂ ಜಜ್ಞೇ ಕಶ್ಯಪಾದಿತಿ ನಃ ಶ್ರುತಂ || ೪೯ ||

ಕಶ್ಯಪಸ್ಯಾತ್ಮಜೌ ತೌ ವೈ ಸರ್ವೇಭ್ಯಃ ಪೂರ್ವಜೌ ಸ್ಮೃತೌ।
ಸೂತ್ಯೇಽಹನ್ಯತಿರಾತ್ರಸ್ಯ ಕಶ್ಯಪಸ್ಯಾಶ್ವಮೇಧಿಕೇ || ೫೦ ||

ಹಿರಣ್ಯಕಶಿಪುರ್ನಾಮ ಪ್ರಥಮಂ ಋತ್ವಿಗಾಸನಂ।
ದಿತ್ಯಾಗರ್ಭಾದ್ವಿನಿಃಸೃತ್ಯ ತತ್ರಾಸೀನೋಚ್ಚ ಸಂಸದಿ ||
ಹಿರಣ್ಯಕಶಿಪುಸ್ತಸ್ಮಾತ್ ಕರ್ಮಣಾ ತೇನ ಸ ಸ್ಮೃತಃ || ೫೧ ||

---

೪೮ ನೈಮಿಷಾರಣ್ಯವಾಸಿಗಳಾದ ಮುನಿಗಳು ಕೇಳಿದರು:—ಎಲೈ ಸೂತ ಪುರಾಣಿಕನೇ, ದೈತ್ಯರು, ದಾನವರು, ಗಂಧರ್ವರು, ಉರಗಗಳು, ರಾಕ್ಷಸರು, ಸರ್ವಭೂತಗಳು, ಪಿಶಾಚಿಗಳು, ಪಶುಗಳು, ಪಕ್ಷಿಗಳು, ವೃಕ್ಷಲತಾದಿಗಳು ಇವುಗಳ ಜನನಮರಣಗಳನ್ನು ದಯಪಾಲಿಸಿ ವಿಸ್ತಾರವಾಗಿ ತಿಳಿಸಬೇಕೆಂದು ಋಷಿಗಳು ಕೇಳಿಕೊಂಡರು

೪೯. ಹೀಗೆ ಮುನಿಗಳು ಸೂತಪುರಾಣಿಕನನ್ನು ಕೇಳಲಾಗಿ ಆ ಮುನಿಗಳಿಗೆ ಇಂತೆಂದನು. ದಿತೀದೇವಿಗೆ ಕಶ್ಯಪಮುನಿಯಿಂದ ಇಬ್ಬರು ಮಕ್ಕಳು ಜನಿಸಿದ ವಿಷಯ ವನ್ನು ನಾನು ನಿಮಗೆ ಮೊದಲೇ ತಿಳಿಸಿರುವೆನಷ್ಟೆ?

೫೦. ಕಶ್ಯಪರ ಪುತ್ರರಾದ ಹಿರಣ್ಯಾಕ್ಷ ಹಿರಣ್ಯಕಶಿಪುರೆಂಬ ಇಬ್ಬರು ಪುತ್ರರು ಎಲ್ಲಾ ಮಕ್ಕಳಿಗಿಂತಲೂ ಹಿರಿಯುವರಾಗಿದ್ದರು ಅವರು ಕಶ್ಯಪಮುನಿಯ ಅಶ್ವಮೇಧ ಯಾಗದ ಅತಿರಾತ್ರದ ಸುತ್ಯಾನಾಮಕ ದಿವಸದಲ್ಲಿ ಹುಟ್ಟಿರುವರು

೫೧ ಆ ಪುತ್ರರಲ್ಲಿ ಹಿರಣ್ಯಕಶಿಪುವೆಂಬ ಹಿರಿಯ ಕುಮಾರನು ದಿತೀದೇವಿಯ ಗರ್ಭದಿಂದ ಜನಿಸಿದ ಕೂಡಲೇ ಕಶ್ಯಪಮುನಿಯ ಯಾಗಶಾಲೆಯಲ್ಲಿರುವ ಸುವರ್ಣ ಮಯವಾದ ಉಚ್ಚಾಸನದಲ್ಲಿ ಕೂತುಕೊಂಡನು. ಅದರಿಂದ ಅವನಿಗೆ ಹಿರಣ್ಯಕಶಿಪು ವೆಂಬ ನಾಮವು ಪ್ರಾಪ್ತವಾಯಿತು.

|| ಋಷಯ ಊಚುಃ ||

ಹಿರಣ್ಯಕಶಿಪೋರ್ನಾಮ ಜನ್ಮ ಚೈವ ಮಹಾತ್ಮನಃ ।
ಪ್ರಭಾವಂಚೈವ ದೈತ್ಯಸ್ಯ ವಿಸ್ತರಾದ್ಬ್ರೂಹಿ ನಃ ಪ್ರಭೋ || ೫೨ ||

|| ಸೂತ ಉವಾಚ ||

ಕಶ್ಯಪಸ್ಯಾಶ್ವಮೇಧೋಽಭೂತ್ ಪುಣ್ಯೋ ವೈ ಪುಷ್ಕರೇ ಪುರಾ ।
ಋಷಿಭಿರ್ದೇವತಾಭಿಶ್ಚ ಗಂಧರ್ವೈರುಪಶೋಭಿತಃ || ೫೩ ||

ಉತ್ಕೃಷ್ಟೇನೈವ ವಿಧಿನಾ ಆಖ್ಯಾನಾದೌ ಯಥಾವಿಧಿ ।
ಆಸನಾನುಪ್ಲ್ಯಪ್ತಾನಿ ಕಾಂಚಾನಾನಿ ತು ಪಂಚ ವೈ || ೫೪ ||

ಕುಶಪೂತಾನಿ ತ್ರೀಣ್ಯತ್ರ ಕೂಚಫಲಕಮೇವ ಚ ।
ಮುಖ್ಯರ್ತ್ವಿಜಶ್ಚ ಚತ್ವಾರಸ್ತೇಷಾಂತಾನ್ಯುಪಕಲ್ಪಯೇತ್ || ೫೫ ||

---

೫೨. ಆಗ ಮುನಿಗಳು ಸೂತನಿಗೆ ಇಂತೆಂದರು :— ಓ ಸೂತಮುನಿಯೇ, ಮಹಾತ್ಮನೂ ದೈತ್ಯೇಂದ್ರನೂ ಆದ ಹಿರಣ್ಯಕಶಿಪುವಿನ ಜನ್ಮ ನಾಮ ಮತ್ತು ಅವನ ಸಾಮರ್ಥ್ಯ ಇವುಗಳನ್ನು ವಿಸ್ತಾರವಾಗಿ ನಮಗೆ ತಿಳಿಯಪಡಿಸು ಎಂದು ಋಷಿಗಳು ಸೂತನನ್ನು ಕೇಳಿಕೊಂಡರು.

೫೩–೫೫. ಸೂತಮುನಿಯು ಹೇಳಿದನು :— ಪೂರ್ವದಲ್ಲಿ ಮಹಾತ್ಮನಾದ ಕಶ್ಯಪ ಮಹಾಮುನಿಯ ಪವಿತ್ರವಾದ ಅಶ್ವಮೇಧಯಾಗವನ್ನು ಪುಷ್ಕರಕ್ಷೇತ್ರದಲ್ಲಿ ಮಾಡಿದನು. ಆ ಮಹಾ ಯಾಗಕ್ಕೋಸ್ಕರ ಮಹರ್ಷಿಗಳೂ, ದೇವತೆಗಳೂ, ಗಂಧರ್ವರೂ ಇವರೇ ಮೊದಲಾದವರು ಬಂದುದರಿಂದ ಯಾಗಮಂಟಪವು ಅಲಂಕೃತ ವಾಗಿತ್ತು. ಅಲ್ಲಿ ಉತ್ತಮರೀತಿಯಿಂದ ಶಾಸ್ತ್ರೋಕ್ತವಾಗಿ ಆಹ್ವಾನಾದಿ ಕಾರ್ಯಗಳು ನಡೆದುವು. ಆ ದೇವಾದಿಗಳಿಗೋಸ್ಕರವಾಗಿ ಸುವರ್ಣಮಯವೂ ಉನ್ನತವೂ ಆದ ಆಸನಗಳು ಏರ್ಪಟ್ಟಿದ್ದುವು. ಉತ್ತಮವೂ ಪವಿತ್ರವೂ ಆದ ಮೂರು ಕುಶಾಸನಗಳೂ, ಒಂದು ಹಲಿಗೆಯಿಂದ ಮಾಡಿದ ನಾಲ್ಕು ಆಸನಗಳೂ, ಋತ್ವಿಕ್ಕುಗಳಿಗೋಸ್ಕರ ಕ್ಲಿಪ್ತವಾಗಿ ಮಧ್ಯದಲ್ಲಿ ಇದ್ದುವು.

ಶುಭಂ ತತ್ರಾಸನಂ ಯತ್ತು ಹೋತುರರ್ಥೇ ಪ್ರಕಲ್ಪಿತಂ ।
ಹಿರಣ್ಮಯಂ ತಥಾ ದಿವ್ಯಂ ದಿವ್ಯಾಸ್ತರಣಸಂಸ್ತೃತಂ ॥ ೫೬ ॥

ಅಂತರ್ವತ್ನೀ ದಿತಿಶ್ಚೈವ ಪತ್ನೀತಂ ಸಮುಪಾಗತಾ ।
ದಶ ವರ್ಷಸಹಸ್ರಾಣಿ ಗರ್ಭಸ್ತಸ್ಯಾ ಅವರ್ತತ ॥ ೫೭ ॥

ಸ ತು ಗರ್ಭಾದ್ವಿನಿಸೃತ್ಯ ಮಾತುರ್ವೈ ಉದರಾತ್ತದಾ ।
ಉಪಕ್ಲಪ್ತಾಸನಂ ಯತ್ತು ಹೋತುರರ್ಥೇ ಹಿರಣ್ಮಯಂ ॥
ನಿಷಸಾದ ಸಗರ್ಭೋಽತ್ರ ತತ್ರಾಸೀನಃ ಶಶಂಸ ಚ ॥ ೫೮ ॥

ಆಖ್ಯಾನಪಂಚಮಾನ್ ವೇದಾನ್ ಮಹರ್ಷಿಃ ಕಶ್ಯಪೋ ಯಥಾ ।
ತಂ ದೃಷ್ಟ್ವಾ ಮುನಯಾಸ್ತಸ್ಯ ನಾಮಾಕುರ್ವಂಸ್ತು ತದ್ವಿಧಂ ॥ ೫೯ ॥

---

೫೬. ಆ ನಾಲ್ಕು ಪೀಠಗಳಲ್ಲಿ ಪವಿತ್ರವೂ ಮಂಗಳಕರವೂ ಆದ ಒಂದು ಪೀಠವು ಹೋತೃವಿಗೋಸ್ಕರ ಏರ್ಪಟ್ಟಿದ್ದಿತು ಆ ಆಸನವು ಸುವರ್ಣಮಯವಾಗಿಯೂ, ದಿವ್ಯವಾಗಿಯೂ, ದಿವ್ಯವಾದ ಮೇಲಿನ ಹಾಸಿಗೆಯಿಂದಲಂಕೃತವಾಗಿಯೂ, ವಿಶಾಲ ವಾಗಿಯೂ ಇತ್ತು.

೫೭. ಗರ್ಭಿಣಿಯಾದ ದಿತೀದೇವಿಯು ಯಾಗದಲ್ಲಿ ಯಜಮಾನಿಯಾಗಿದ್ದಳು ಅವಳು ಗರ್ಭವನ್ನು ಧರಿಸಿ ಹತ್ತು ಸಹಸ್ರ ವರ್ಷಗಳಾಗಿದ್ದುವು ಆದುದರಿಂದ ಪ್ರಸವ ಕಾಲವನ್ನು ತಿಳಿಯದೇ ಅವಳು ಯಜಮಾನಿಯಾಗಿ ಯಾಗಕ್ಕೆ ಬಂದಿದ್ದಳು.

೫೮. ಆಗ ದಿತೀದೇವಿಯ ಗರ್ಭದಲ್ಲಿದ್ದ ಕುಮಾರನು ತಾಯಿಯಾದ ದಿತಿಯ ಗರ್ಭದಿಂದ ಹೊರಗೆ ಬಂದು, ಹೋತೃವಿಗಾಗಿ ವ್ಯವಸ್ಥಿತವೂ, ಸುವರ್ಣಮಯವೂ, ಉನ್ನತವೂ ಆದ ಪೀಠದಲ್ಲಿ ಕುಳಿತುಕೊಂಡು, ಆ ಮಹಾಯಾಗವನ್ನು ವಿಶೇಷವಾಗಿ ಹೊಗಳಿದನು.

೫೯. ಮಹರ್ಷಿಯಾದ ಕಶ್ಯಪರು ಯಾಗದಲ್ಲಿ ಪಂಚಮ ವೇದವಾದ ಇತಿಹಾಸ ಪುರಾಣಾದಿಗಳನ್ನು ಹೇಳುವಂತೆ ಇತ್ತು. ಅವನನ್ನು ಮಹರ್ಷಿಗಳು ನೋಡಿ ಅವನಿಗೆ ಆ ಕರ್ಮಕ್ಕುಚಿತವಾದ ಹಿರಣ್ಯಕಶಿಪುವೆಂಬ ನಾಮಕರಣವನ್ನು ಮಾಡಿದರು.

ಹಿರಣ್ಯಕಶಿಪುಸ್ತಸ್ಮಾತ್ ಕರ್ಮಣಾ ತೇನ ವಿಶ್ರುತಃ ।
ಹಿರಣ್ಯಾಕ್ಷೋಽನುಜಸ್ತಸ್ಯ ಸಿಂಹಿಕಾ ತಸ್ಯ ಚಾನುಜಾ ॥
ರಾಹೋಃ ಸಾ ಜನನೀ ದೇವೀ ವಿಪ್ರಚಿತ್ತೇಃ ಪರಿಗ್ರಹಾತ್ ॥ ೬೦ ॥

ಹಿರಣ್ಯಕಶಿಪುರ್ದೈತ್ಯಶ್ಚಚಾ ಪರಮಂ ತಪಃ ।
ಶತಂವರ್ಷ ಸಹಸ್ರಾಣಾಂ ನಿರಾಹಾರೋ ಹ್ಯಧಃಶಿರಾಃ ॥ ೬೧ ॥

ತಂ ಬ್ರಹ್ಮಾ ಛಂದಯಾಮಾಸ ದೈತ್ಯಂ ತುಷ್ಟೋ ವರೇಣ ತು ।
ಸರ್ವಾಮರತ್ವಂ ವಿಪ್ರೇಭ್ಯಃ ಸರ್ವಭೂತೇಭ್ಯ ಏವ ಚ ॥
ಯೋಗಾದ್ದೇವಾನ್ವಿನಿರ್ಜಿತ್ಯ ಸರ್ವದೇವತ್ವಮಾಸ್ಥಿತಃ ॥ ೬೨ ॥

---

೬೦. ಹೀಗೆ ಹೋತೃವಿಗಾಗಿ ಕ್ಲಿಪ್ತವಾಗಿದ್ದ ಸುವರ್ಣಪೀಠದಲ್ಲಿ ಆಗ ತಾನೇ ಜನಿಸಿದ ಕುಮಾರನು ಮಂಡಿಸಿ ಯಾಗವನ್ನು ಹೊಗಳಿದ್ದರಿಂದ ಅವನಿಗೆ ಹಿರಣ್ಯಕಶಿಪುವೆಂಬ ನಾಮವು ಉಂಟಾಗಿದೆ. ಆ ಹಿರಣ್ಯಕಶಿಪುವಿಗೆ ಹಿರಣ್ಯಾಕ್ಷನೆಂಬ ತಮ್ಮನೂ, ಸಿಂಹಿಕೆಯೆಂಬ ತಂಗಿಯೂ ಹುಟ್ಟಿದರು. ಆ ಸಿಂಹಿಕೆಯು ವಿಪ್ರಚಿತ್ತಿಯನ್ನು ಮದುವೆಯಾಗಿ ರಾಹುವೆಂಬ ಕುಮಾರನನ್ನು ಪಡೆದಳು. ಸಿಂಹಿಕಾದೇವಿಯು ವಿಪ್ರಚಿತ್ತಿಯ ಪತ್ನಿಯೂ, ರಾಹುವಿನ ತಾಯಿಯೂ, ಹಿರಣ್ಯಾಕ್ಷನ ಭಗಿನಿಯೂ, ದಿತಿಯ ಕುಮಾರಿಯೂ ಆಗಿದ್ದಳು.

೬೧. ದೈತ್ಯನಾದ ಹಿರಣ್ಯಕಶಿಪುವು ಅಧಶ್ಶಿರಸ್ಕನೂ ನಿರಾಹಾರನೂ ಆಗಿ, ಒಂದು ಲಕ್ಷವರ್ಷಗಳವರೆಗೂ ಘೋರವಾದ ಮಹಾತಪಸ್ಸನ್ನು ಮಾಡಿದನು.

೬೨. ಆಗ ಬ್ರಹ್ಮದೇವನು ಆ ದೈತ್ಯನ ತಪಸ್ಸಿಗೆ ಮೆಚ್ಚಿ, ವರಗಳನ್ನು ಕೊಟ್ಟು ಅವನನ್ನು ಪ್ರೀತಿಸಿದನು. ಅನಂತರ ಅವನು ಸಮಸ್ತ ದೇವತೆಗಳು, ವಿಪ್ರರು, ಸರ್ವಭೂತಗಳು ಇವುಗಳನ್ನು ಅತಿಕ್ರಮಿಸಿದ್ದನು. ತನ್ನ ಯೋಗಮಹಿಮೆಗಳಿಂದ ಸಮಸ್ತ ದೇವತೆಗಳನ್ನು ಜಯಿಸಿ ಉತ್ತಮವಾದ ದೇವಪದವಿಯನ್ನು ಹೊಂದಿದನು.

ದಾನವಾಶ್ಚಾಸುರಾಶ್ಚೈವ ದೇವಾಃ ಸಮಾ ಭವಂತು ವೈ ।
ಮಾರುತೇರ್ಯನ್ಮಹೈಶ್ವರ್ಯಮೇಷ ಮೇದೀಯತಾಂ ವರಃ ॥ ೬೩ ॥

ಏವಮುಕ್ತೋಽಥ ಬ್ರಹ್ಮಾ ತು ತಸ್ಮೈ ದತ್ವಾ ಯಥೇಪ್ಸಿತಂ ।
ದತ್ವಾ ತಸ್ಮೈ ವರಾನ್ ದಿವ್ಯಾನ್ ತತ್ರೈವಾಂತರಧೀಯತ ॥
ಹಿರಣ್ಯಕಶಿಪುರ್ದೈತ್ಯಃ ಶ್ಲೋಕೈರ್ಗೀತಃ ಪುರಾತನೈಃ ॥ ೬೪ ॥

ರಾಜಾ ಹಿರಣ್ಯಕಶಿಪುರ್ಯಾಂ ಯಾಮಾಂಶಾಂ ನಿಷೇವಶೇ ।
ತಸ್ಯಾಸ್ತಸ್ಯಾ ದಿಶೋ ದೇವಾ ನಮಶ್ಚಕ್ರುರ್ಮಹರ್ಷಿಭಿಃ ॥ ೬೫ ॥

ಏವಂ ಪ್ರಭಾವೋ ದೈತ್ಯೇಂದ್ರೋ ಹಿರಣ್ಯಕಶಿಪುರ್ದ್ವಿಜಾಃ ।
ತಸ್ಯಾಸೀನ್ನರಸಿಂಹಃ ಸ ವಿಷ್ಣುರ್ಮೃತ್ಯುಃ ಪುರಾ ಕಿಲ ॥
ನಖೈಸ್ತು ತೇನ ನಿರ್ಭಿನ್ನಸ್ತತಃ ಶುದ್ಧಾ ನಖಾಃ ಸ್ಮೃತಾಃ ॥ ೬೬ ॥

---

೬೩. ಮತ್ತು ಬ್ರಹ್ಮದೇವನಿಗೆ ಸಮಸ್ತರಾದ ದಾನವರೂ, ದೇವತೆಗಳೂ, ದೈತ್ಯರೂ ಸಹ ನನಗೆ ಸಮರಾಗಲಿ. ವಾಯುದೇವನಿಗೆ ಯಾವ ಮಹದೈಶ್ವರ್ಯ ವಿರುತ್ತದೆಯೋ, ಆ ಐಶ್ವರ್ಯವೆಲ್ಲವೂ ನನಗೆ ಉಂಟಾಗಲೆಂದು ವರವನ್ನು ಕೊಡುವಂತೆ ಕೇಳಿಕೊಂಡನು

೬೪. ಹೀಗೆ ಆ ದೈತ್ಯನು ವರವನ್ನು ಕೇಳಲಾಗಿ, ಬ್ರಹ್ಮದೇವನು ಅವನಿಗೆ ಬೇಕಾದ ವರಗಳನ್ನು ಕೊಟ್ಟು ಅಲ್ಲಿಯೇ ಅಂತರ್ಧಾನವನ್ನು ಹೊಂದಿದನು. ಆಗ ದೈತ್ಯನಾದ ಹಿರಣ್ಯಕಶಿಪುವನ್ನು ಮಹಾತ್ಮರು ಅಪೂರ್ವವಾಗಿ ಹೊಗಳಿದರು.

೬೫. ಅನಂತರ ಹಿರಣ್ಯಕಶಿಪು ಮಹಾರಾಜನು ಯಾವ ಯಾವ ದಿಕ್ಕುಗಳಿಗೆ ಸಂಚಾರಕ್ಕಾಗಿ ಹೋಗುತ್ತಾನೋ, ಆಯಾ ದಿಕ್ಕುಗಳಿಗೆ ದೇವತೆಗಳೂ ಮತ್ತು ಮಹರ್ಷಿಗಳೂ ನಮಸ್ಕಾರ ಮಾಡಿದರು.

೬೬. ಎಲೈ ವಿಪ್ರೋತ್ತಮರೇ, ದೈತ್ಯೇಂದ್ರನಾದ ಹಿರಣ್ಯಕಶಿಪುವು ಈ ರೀತಿಯಾದ ಮಹಾ ಪರಾಕ್ರಮಿಯಾಗಿದ್ದನು. ಇಂತಹ ಮಹಾ ಶೂರನಾದ ದೈತ್ಯನಿಗೆ ಶತ್ರುವಾದ ಶ್ರೀಹರಿಯು ಪೂರ್ವದಲ್ಲಿ ನರಸಿಂಹಾವತಾರವನ್ನು ಮಾಡಿ, ತನ್ನ ನಖಗಳೆಂಬ ಮಹಾಯುಧಗಳಿಂದ ಆ ದೈತ್ಯನ ಹೃದಯವನ್ನು ಭೇದಿಸಿ ಸಂಹರಿಸಿದನು. ಅದರಿಂದ ಶ್ರೀಹರಿಯ ನಖಗಳು ಪರಿಶುದ್ಧವಾದುವೆಂದು ಮಹಾತ್ಮರು ಹೇಳುವರು.

ಹಿರಣ್ಯಾಕ್ಷಸುತಾಃ ಪಂಚ ವಿಕ್ರಾಂತಾಃ ಸುಮಹಾಬಲಾಃ ।
ಉತ್ಕುರಃ ಶಕುನಿಶ್ಚೈವ ಕಾಲನಾಭಸ್ತಥೈವ ಚ ॥ ೬೭ ॥

ಮಹಾನಾಭಶ್ಚ ವಿಕ್ರಾಂತೋ ಭೂತಸಂತಾಪನಸ್ತಥಾ ।
ಹಿರಣ್ಯಾಕ್ಷಸುತಾ ಹ್ಯೇತೇ ದೇವೈರಪಿ ದುರಾಸದಾಃ ॥ ೬೮ ॥

ತೇಷಾಂ ಪುತ್ರಾಶ್ಚ ಪೌತ್ರಾಶ್ಚ ಬಾಡೇಯಾಃ ಸಗಣಾಃ ಸ್ಮೃತಾಃ ।
ಶಂತತಾನಿ ಸಹಸ್ರಾಣಿ ನಿಹತಾಸ್ತಾರಕಮಯೇ ॥ ೬೯ ॥

ಹಿರಣ್ಯಕಶಿಪೋಃ ಪುತ್ರಾಶ್ಚತ್ವಾರಸ್ತು ಮಹಾಬಲಾಃ ।
ಪ್ರಹ್ಲಾದಃ ಪೂರ್ವಜಸ್ತೇಷಾಮನುಹ್ಲಾದಸ್ತಥೈವ ಚ ॥
ಸಂಹ್ರಾದಶ್ಚ ಹ್ರದಶ್ಚೈವ ಹ್ರದಪುತ್ರಾನ್ನಿಬೋಧತ ॥ ೭೦ ॥

ಹ್ರಾದೋ ನಿಸುಂದಶ್ಚ ತಥಾ ಹ್ರದಪುತ್ರೌ ಬಭೂವತುಃ ।
ಸುಂದೋಪಸುಂದೌ ವಿಕ್ರಾಂತೌ ನಿಸುಂದತನಯಾವುಭೌ ॥ ೭೧ ॥

---

೬೭–೬೮. ಹಿರಣ್ಯಾಕ್ಷನೆಂಬ ದೈತ್ಯನಿಗೆ ಮಹಾ ಬಲಿಷ್ಠರೂ, ಅತ್ಯಂತ ಪ್ರಖ್ಯಾತರೂ ಆದ ಐದುಜನ ಮಕ್ಕಳಿದ್ದರು ಉತ್ಕುರ, ಶಕುನಿ, ಕಾಲನಾಭ, ಮಹಾನಾಭ, ಮಹಾ ಶೂರನಾದ ಭೂತಸಂತಾಪನರೆಂಬ ಈ ಕುಮಾರರು ಹಿರಣ್ಯಾಕ್ಷನ ಸುತರೂ ದೈತ್ಯೇಂದ್ರರೂ, ದೇವತೆಗಳಿಂದ ಜಯಿಸಲಶಕ್ಯರೂ, ವಿಖ್ಯಾತರೂ ಆಗಿದ್ದರು.

೬೯. ಅವರ ಮಕ್ಕಳೂ ಮೊಮ್ಮಕ್ಕಳೂ ಕೂಡಿ ಬಂಡೇಯರೆಂಬ ಗಣನಾಮಕರಾಗಿ ಪ್ರಖ್ಯಾತರಾಗಿದ್ದರು. ಹೀಗೆ ಲಕ್ಷಸಂಖ್ಯಾಕರಾದ ಅವರ ವಂಶದ ದೈತ್ಯರು ತಾರಕಾಸುರನ ಯುದ್ಧದಲ್ಲಿ ಮೃತರಾದರು.

೭೦. ಹಿರಣ್ಯಕಶಿಪುವಿಗೆ ಮಹಾ ಬಲಿಷ್ಠರಾದ ಪ್ರಹ್ಲಾದ, ಅನುಹ್ಲಾದ, ಸಂಹ್ಲಾದ, ಹ್ರದರೆಂಬ ನಾಲ್ವರು ಕುಮಾರರು ಪ್ರಸಿದ್ಧರಾಗಿದ್ದರು. ಆ ನಾಲ್ವರಲ್ಲಿ ಹ್ರದನ ಸಂತಾನವನ್ನು ಹೇಳುವೆನು ಕೇಳಿರೆಂದನು.

೭೧. ಪ್ರಹ್ಲಾದಾದಿ ನಾಲ್ವರು ಪುತ್ರರಲ್ಲಿ ಹ್ರದನೆಂಬುವನಿಗೆ ಹ್ರಾದ, ನಿಸುಂದರೆಂಬ ಇಬ್ಬರು ಕುಮಾರರಿದ್ದರು ಅವರಲ್ಲಿ ನಿಸುಂದನಿಗೆ ಸುಂದೋಪಸುಂದರೆಂಬ ಮಹಾ ಶೂರರಾದ ಇಬ್ಬರು ಮಕ್ಕಳಿದ್ದರು.

ಬ್ರಹ್ಮಘ್ನಸ್ತು ಮಹಾವೀರ್ಯೋ ಮೂಕಸ್ತು ಹ್ರದದಾಯಿನಃ ।
ಮಾರೀಚಃ ಸುಂದಪುತ್ರಸ್ತು ತಾಡಕಾಮುಪಪದ್ಯತೇ ॥ ೭೨ ॥

ತಾಡಕಾ ನಿಹತಾ ಸಾಽಥ ರಾಘವೇಣ ಬಲೀಯಸಾ ।
ಮೂಕೋ ವಿನಿಹತಶ್ಚಾಪಿ ಕಿರಾತೇ ಸವ್ಯಸಾಚಿನಾ ॥ ೭೩ ॥

ಉತ್ಪನ್ನಾ ಮಹತಾ ಚೈವ ತಪಸಾ ಭಾವಿತಾಃ ಸ್ವಯಂ ।
ತಿಸ್ರಃ ಕೋಟ್ಯಸ್ತು ತೇಷಾಂ ವೈ ಮಣಿವರ್ತನಿವಾಸಿನಾಂ ॥
ಅವಧ್ಯಾ ದೇವತಾನಾಂ ವೈ ನಿಹತಾಃ ಸವ್ಯಸಾಚಿನಾ ॥ ೭೪ ॥

ಅನುಹ್ಲಾದಸುತೋ ವಾಯುಃ ಶಿನೀವಾಲೀ ತಥೈವ ಚ ।
ತೇಷಾಂತು ಶತಸಾಹಸ್ರೋ ಗಣೋ ಹಾಲಾಹಲಃ ಸ್ಮೃತಃ ॥ ೭೫ ॥

---

೭೨. ಹ್ರದ ಕುಮಾರನಾದ ಹ್ರಾದನಿಗೆ ಬ್ರಹ್ಮಹತ್ಯಾನಿರತನೂ, ಮಹಾ ಪರಾಕ್ರಮಿಯೂ ಆದ ಮೂಕನೆಂಬ ಕುಮಾರನು ಜನಿಸಿದನು. ಸುಂದನಿಗೆ ಮಾರೀಚ ನೆಂಬ ಸುತನು ಜನಿಸಿ ತಾಟಕೆಯನ್ನು ಮದುವೆಯಾದನು

೭೩. ಆ ತಾಟಕೆಯು ಪೂರ್ವದಲ್ಲಿ ಮಹಾ ಶೂರನಾದ ಶ್ರೀರಾಮನಿಂದ ಸಂಹೃತಳಾದಳು ಹ್ರಾದನ ಕುಮಾರನಾದ ಮೂಕನೂ ಸಹ ಕಿರಾತರ ಯುದ್ಧದಲ್ಲಿ ಸವ್ಯಸಾಚಿಯಾದ ಅರ್ಜುನನಿಂದ ಕೊಲ್ಲಲ್ಪಟ್ಟನು

೭೪. ಆ ಮೂಕನ ವಂಶದಲ್ಲಿ ಉತ್ಪನ್ನರೂ, ಮಹಾ ತಪಸ್ಸಿನಿಂದ ಸಂಭಾವಿ ತರೂ ಆದ ಮೂರುಕೋಟಿಜನರು ಮಣಿವರ್ತಖಂಡದಲ್ಲಿ ವಾಸಮಾಡುತ್ತಿದ್ದರು. ಅವರು ದೇವತೆಗಳಿಗೂ ಜಯಿಸಲಸಾಧ್ಯರಾಗಿ ಉಭಯಪಾಣಿಗಳಿಂದಲೂ ಬಾಣ ಗಳನ್ನು ಬಿಡುವ ಅರ್ಜುನನಿಂದ ಕೊಲ್ಲಲ್ಪಟ್ಟರು

೭೫. ಅನುಹ್ರಾದನಿಗೆ ವಾಯು, ಶಿನೀವಾಲಿಯೆಂಬ ಇಬ್ಬರು ಕುಮಾರರು ಉದ್ಭವಿಸಿದರು. ಅವರಿಬ್ಬರಿಂದ ಲಕ್ಷಾಂತರ ಪ್ರಜೆಗಳು ಉತ್ಪನ್ನರಾಗಿ ಹಾಲಾಹಲ ನಾಮಕವಾದ ಬಂದುಗಣವೇ ಸಂಭವಿಸಿ ಲೋಕವಿಖ್ಯಾತವಾಗಿತ್ತು.

ವೈರೋಚನಸ್ತು ಪ್ರಾಹ್ಲಾದಿಃ ಪಂಚ ತಸ್ಯಾತ್ಮಜಾಃ ಸ್ಮೃತಾಃ ।
ಗವೇಷ್ಠೀ ಕಾಲನೇಮಿಶ್ಚ ಜಂಬೋ ಬಾಷ್ಕಲ ಏವ ಚ ॥
ಶಂಭುಸ್ತು ಅನುಜಸ್ತೇಷಾಂ ಸ್ಮೃತಾಃ ಪ್ರಾಹ್ಲಾದಿಸೂನವಃ ॥ ೭೬ ॥

ಯಥಾಪ್ರಧಾನಂ ವಕ್ಷ್ಯಾಮಿ ತೇಷಾಂ ಪುತ್ರಾನ್ ದುರಾಸದಾನ್ ।
ಶುಂಭಶ್ಚೈವ ನಿಶುಂಭಶ್ಚ ವಿಶ್ವಕ್‌ಸೇನೋ ಮಹೌಜಸಃ ॥ ೭೭ ॥

ಗವೇಷ್ಠಿನಃ ಸುತಾ ಹ್ಯೇತೇ ಜಂಬಸ್ಯ ಶತದುಂದುಭಿಃ ।
ತಥಾ ದಕ್ಷಶ್ಚ ಖಂಡಶ್ಚ ತ್ರಯಸ್ತು ಜಂಬಸೂನವಃ ॥ ೭೮ ॥

ವಿರೋಧಶ್ಚ ಮನುಶ್ಚೈವ ವೃಕ್ಷಾಯುಃ ಕುಶಲೀಮುಖಃ ।
ಬಾಷ್ಕಲಸ್ಯ ಸುತಾ ಹ್ಯೇತೇ ಕಾಲನೇಮಿಸುತಾನ್ ಶೃಣು ॥ ೭೯ ॥

---

೭೬. ವಿರೋಚನನು ಪ್ರಹ್ಲಾದನಿಗೆ ಪುತ್ರನಾಗಿ ಹುಟ್ಟಿದನು. ಅವನಿಗೆ ಐದು ಜನ ಮಕ್ಕಳು ಹುಟ್ಟಿದರು. ಆ ಪ್ರಹ್ಲಾದನಿಗೆ ಗವೇಷ್ಠಿ, ಕಾಲನೇಮಿ, ಜಂಭ, ಬಾಷ್ಕಲ, ಶಂಭು ಎಂಬ ಐದುಜನ ಪೌತ್ರರಿದ್ದರು ಆ ಐವರಲ್ಲಿ ಶಂಭುವೆಂಬವನು ಕಿರಿಯವನಾಗಿದ್ದನು. ಇವರು ವಿಖ್ಯಾತರಾಗಿದ್ದರು

೭೭–೭೮ ಎಲೈ ಮುನಿವರ್ಯರೇ, ಅವರಲ್ಲಿ ಮುಖ್ಯರಾದವರ ವಿಷಯವನ್ನು ತಿಳಿಸುವೆನು ಕೇಳಿರಿ. ಅವರಲ್ಲಿ ಗವೇಷ್ಠಿಗೆ ಶುಂಭ, ನಿಶುಂಭ, ವಿಷ್ವಕ್ಸೇನರೆಂಬ ಮಹಾ ಶೂರರಾದ ಮಕ್ಕಳು ಜನಿಸಿದರು. ಜಂಭನಿಗಾದರೋ ಶತದುಂದುಭಿ, ದಕ್ಷ, ಖಂಡರೆಂಬ ಅತಿ ಪರಾಕ್ರಮಿಗಳಾದ ಮೂವರು ಕುಮಾರರು ಜನಿಸಿದರು ಇವರು ಮೂವರೂ ಜಂಭನ ಕುಮಾರರಾಗಿದ್ದರು.

೭೯. ಅನಂತರ ಬಾಷ್ಕಲನಿಗೆ ವಿರೋಧ, ಮನು, ವೃಕ್ಷಾಯು, ಕುಶಲೀಮುಖ ರೆಂಬ ಪ್ರಖ್ಯಾತರಾದ ಕುಮಾರರು ಜನಿಸಿದರು. ಈಗ ಕಾಲನೇಮಿಯ ಮಕ್ಕಳ ವಿಚಾರಗಳನ್ನು ಹೇಳುವೆನು ಸಾವಧಾನದಿಂದ ಕೇಳಿರೆಂದನು.

ಬ್ರಹ್ಮಜಿತ್ ಕ್ಷತ್ರಜಿಚ್ಚೈವ ದೇವಾಂತಕನರಾಂತಕೌ ।
ಕಾಲನೇಮಿಸುತಾ ಹೇತೇ ಶಂಬೋಸ್ತು ಶೃಣುತ ಪ್ರಜಾಃ ॥ ೮೦ ॥

ಧನುಕೋ ಹ್ಯಸಿಲೋಮಾ ಚ ನಾಬಲಶ್ಚ ಸ ಗೋಮುಖಃ ।
ಗವಾಕ್ಷಶ್ಚೈವ ಗೋಮಾಂಶ್ಚ ಶಂಭೋಃ ಪುತ್ರಾಃ ಪ್ರಕೀರ್ತಿತಾಃ ॥ ೮೧ ॥

ವಿರೋಚನಸ್ಯ ಪುತ್ರಸ್ತು ಬಲಿರೇಕಃ ಪ್ರತಾಪವಾನ್ ।
ಬಲೇಃ ಪುತ್ರಶತಂ ಜಜ್ಞೇ ರಾಜಾನಃ ಸರ್ವ ಏವ ತೇ ॥ ೮೨ ॥

ತೇಷಾಂ ಪ್ರಧಾನಾಶ್ಚತ್ವಾರೋ ವಿಕ್ರಾಂತಾಃ ಸುಮಹಾಬಲಾಃ ।
ಸಹಸ್ರಬಾಹುಜ್ಜ್ಯೇಷ್ಠಸ್ತು ಬಾಣೋ ದ್ರವಿಣಸಮ್ಮತಃ ॥
ಕುಂಭನಾಭೋ ಗರ್ದಭಾಕ್ಷಃ ಕುಶಿರಿತ್ಯೇವಮಾದಯಃ ॥ ೮೩ ॥

---

೮೦. ಕಾಲನೇಮಿಗೆ ಬ್ರಹ್ಮಜಿತ್, ಕ್ಷತ್ರಜಿತ್, ದೇವಾಂತಕ, ನರಾಂತಕರೆಂಬ ಅತಿ ಬಲಿಷ್ಠರೂ, ಲೋಕವಿಖ್ಯಾತರೂ ಆದ ನಾಲ್ವರು ಕುಮಾರರು ಆವಿರ್ಭವಿಸಿದರು. ಈಗ ಶಂಭುವಿನ ಪುತ್ರರನ್ನು ತಿಳಿಸುವೆನು ಕೇಳಿರೆಂದನು.

೮೧. ಶಂಭುವಿಗೆ ಧನುಕ, ಅಸಿಲೋಮ, ನಾಬಲ, ಗೋಮುಖ, ಗವಾಕ್ಷ, ಗೋಮಂತರೆಂಬ ಆರುಜನ ಪ್ರಸಿದ್ಧ ಪುರುಷರು ಜನಿಸಿದರು. ಅವರು ಲೋಕಕಂಟಕರಾಗಿದ್ದರು.

೮೨. ವಿರೋಚನನಿಗೆ ಮಹಾ ಪರಾಕ್ರಮಿಯಾದ ಬಲಿಯೆಂಬ ಒಬ್ಬ ಕುಮಾರನು ಲೋಕಮಾನ್ಯನಾಗಿದ್ದನು. ಆ ಬಲಿಗೆ ನೂರಾರು ಮಕ್ಕಳು ಹುಟ್ಟಿದರು. ಅವರೆಲ್ಲರೂ ರಾಜರೂ ಪ್ರತಾಪಶಾಲಿಗಳೂ ಆಗಿದ್ದರು

೮೩. ಅವರಲ್ಲಿ ಮುಖ್ಯರಾದವರು ನಾಲ್ವರು. ಅವರು ಮಹಾ ಶೂರರೂ ಅತಿ ಪರಾಕ್ರಮಿಗಳೂ ಆಗಿದ್ದರು. ಸಹಸ್ರಬಾಹು, ಬಾಣ, ದ್ರವಿಣಸಮ್ಮತ, ಕುಂಭನಾಭ, ಗದ್ದಭಾಕ್ಷ, ಕುಶಿ ಎಂಬುವರು ಬಲಿಯ ಪುತ್ರರಾಗಿದ್ದರು. ಇವರಲ್ಲಿ ಸಹಸ್ರಬಾಹುವು ಹಿರಿಯವನಾಗಿದ್ದನು.

ಶಕುನೀ ಪೂತನಾ ಚೈವ ಕನ್ಯೇ ದ್ವೇ ತು ಬಲೇಃ ಸುತೇ ।
ಬಲೇಃ ಪುತ್ರಾಶ್ಚ ಪೌತ್ರಾಶ್ಚ ಶತಶೋಽಥ ಸಹಸ್ರಶಃ ॥ ೮೪ ॥

ಬಲಿಯೋರ್ ನಾಮವಿಖ್ಯಾತೋ ಗಣೋ ವಿಕ್ರಾಂತಪೌರುಷಃ ।
ಬಾಣಸ್ಯ ಚಂದ್ರಮನಸೋ ಲೌಹಿತ್ಯಮುಪಪದ್ಯತೇ ॥ ೮೫ ॥

ದಿತಿರ್ವಿನಷ್ಟಪುತ್ರಾ ವೈ ತೋಷಾಯಾಮಾಸ ಕಶ್ಯಪಂ ।
ಸ ಕಶ್ಯಪಃ ಪ್ರಸನ್ನಾತ್ಮಾ ಸಮ್ಯಗಾರಾಧಿ ತಸ್ತಯಾ ॥
ವರೇಣ ಛಂದಯಾಮಾಸ ಸಾ ಚ ವವ್ರೇ ವರಂತತಃ ॥ ೮೬ ॥

ಸ ತು ತಸ್ಯೈ ವರಂ ಪ್ರಾದಾತ್ ಪ್ರಾರ್ಥಿತಂ ಭಗವಾನ್ ಪ್ರಭುಃ ।
ಕಿಮಿಚ್ಛಸಿ ಮಯಿ ಶುಭೇ ಮಾರೀಚಸ್ತಾಮಭಾಷತ ॥ ೮೭ ॥

---

೮೪. ಆ ಬಲಿಗೆ ಶಕುನೀ ಪೂತನೆಯರೆಂಬ ಇಬ್ಬರು ಪುತ್ರಿಯರು ಹುಟ್ಟಿದರು. ಬಲಿಯ ಪುತ್ರರೂ ಪೌತ್ರರೂ ಒಟ್ಟುಕೂಡಿ ಸಹಸ್ರಾರು ಜನರು ಲೋಕಪ್ರಸಿದ್ಧರಾಗಿದ್ದರು.

೮೫. ಬಲಿಯೆಂಬ ನಾಮದಿಂದ ಪ್ರಖ್ಯಾತವೂ, ಮಹಾ ಪರಾಕ್ರಮಿಯೂ ಆದ ಗಣವು ಇದ್ದಿತು. ಬಾಣನಿಗೆ ಚಂದ್ರನಿಂದ ಮಹಾಕಾಂತಿಯು ಪ್ರಾಪ್ತವಾಗಿರುತ್ತವೆ.

೮೬. ತರುವಾಯ ದೇವದೈತ್ಯರಿಗೆ ಕಲಹವು ಸಂಭವಿಸಲು ದೈತ್ಯರು ಮೃತರಾದರು. ಆಗ ಪುತ್ರನಾಶದಿಂದ ದುಃಖಿತಳಾದ ದಿತೀದೇವಿಯು ಪತಿಯಾದ ಕಶ್ಯಪ ಮುನಿಯನ್ನು ಆರಾಧಿಸಿ ಸಂತೋಷಪಡಿಸಿದಳು. ಅವಳಿಂದ ಆರಾಧಿತನಾದ ಮುನಿಯು ಪ್ರೀತನಾಗಿ ವರಗಳನ್ನು ಕೊಟ್ಟು ಸಂತೋಷಪಡಿಸಿದನು ಆಕೆಯು ವರಗಳನ್ನು ಬೇಡಿದಳು.

೮೭. ಸ್ವಾಮಿಯೂ, ಸ್ವತಂತ್ರರೂ ಆದ ಕಶ್ಯಪರು ಮಂಗಳಾಂಗಿಯಾದ ದಿತಿಯನ್ನು ಕುರಿತು, ಎಲೌ ಶೋಭನಾಂಗಿ, ನಾನಿರುವಾಗ ನಿನಗೇಕೆ ಚಿಂತೆ! ಓ ಸುಂದರಿ, ಬೇಕಾದ ವರಗಳನ್ನು ಕೊಡುವೆನೆಂದನು.

ಮಾರೀಚಂ ಕಶ್ಯಪಂ ತುಷ್ಟಂ ಭರ್ತಾರಂ ಪ್ರಾಂಜಲಿಸ್ತಥಾ ।
ಹತಪುತ್ರಾಸ್ಮಿ ಭಗವನ್ ಆದಿತ್ಯೈಸ್ತವ ಸೂನುಭಿಃ ॥ ೮೮ ॥

ಶಕ್ರಹಂತಾರಮಿಚ್ಛೇಯಂ ಪುತ್ರಂ ದೀರ್ಘತಪೋನ್ವಿತಂ ।
ಅಹಂ ತಪಶ್ಚರಿಷ್ಯಾಮಿ ಗರ್ಭಮಾಧಾತುಮರ್ಹಸಿ ॥ ೮೯ ॥

ತಸ್ಯಾಸ್ತದ್ವಚನಂ ಶ್ರುತ್ವಾ ಮಾರೀಚಃ ಕಶ್ಯಪಸ್ತಥಾ ।
ಪ್ರತ್ಯುವಾಚ ಮಹಾತೇಜಾ ದಿತಿಂ ಪರಮದುಃಖಿತಾಂ ॥ ೯೦ ॥

ಏವಂ ಭವತು ಭದ್ರಂ ತೇ ಶುಚಿರ್ಭವ ತಪೋಧನೇ ।
ಜನಯಿಷ್ಯಸಿ ಸತ್ಪುತ್ರಂ ಶಕ್ರಹಂತಾರಮಾಹವೇ ॥ ೯೧ ॥

---

೮೮. ಆಗ ದಿತಿಯು ಅಂಜಲೀಬದ್ಧಳಾಗಿ, ಮರಿಚಿಪುತ್ರನೂ ಪತಿಯೂ ಆದ ಕಶ್ಯಪನಿಗೆ ಇಂತೆಂದಳು:—ಎಲೈ ಪೂಜ್ಯರೇ, ನಿಮ್ಮ ಅದಿತಿಯ ಪುತ್ರರಾದ ದೇವತೆಗಳು ನನ್ನ ಮಕ್ಕಳೆಲ್ಲರನ್ನೂ ನಾಶಮಾಡಿರುವರು ಆದುದರಿಂದ ಪುತ್ರಹೀನಳಾಗಿರುವೆನು ಎಂದು ಹೇಳಿದಳು

೮೯. ಮತ್ತು ದೀರ್ಘತಪಸ್ವಿಯೂ, ಮಹಾಶೂರನೂ, ಇಂದ್ರನನ್ನು ಸಂಹಾರ ಮಾಡುವವನೂ ಆದ ಪುತ್ರನನ್ನು ಬಯಸುತ್ತೇನೆ ಇದಕ್ಕಾಗಿ ನಾನು ಮಹಾ ತಪಸ್ಸನ್ನು ಮಾಡುವೆನು ತಾವು ದಯಪಾಲಿಸಿ ಗರ್ಭಾದಾನವನ್ನು ಮಾಡಬೇಕೆಂದು ಪ್ರಾರ್ಥಿಸಿಕೊಂಡಳು.

೯೦. ಅನಂತರ ಮರೀಚಿ ಕುಮಾರನೂ ಮಹಾತೇಜಸ್ವಿಯೂ ಆದ ಕಶ್ಯಪನು ದಿತೀದೇವಿಯ ಆ ಮಾತುಗಳನ್ನು ಲಾಲಿಸಿ, ಪುತ್ರಶೋಕದಿಂದ ಅತ್ಯಂತ ಪೀಡಿತಳಾದ ದಿತೀದೇವಿಯನ್ನು ನೋಡಿ ಇಂತೆಂದನು.

೯೧. ಎಲೌ ತಪೋಧನಳೇ, ನೀನು ಕೋರಿದಂತೆಯೇ ಆಗಲಿ. ಆದರೆ ನೀನು ತಪಸ್ಸನ್ನು ಮಾಡುವಾಗ ಅತ್ಯಂತ ಶುಚಿಯಾಗಿರು. ಹಾಗೆ ನೀನು ಶುದ್ಧಳಾಗಿ ತಪಸ್ಸನ್ನು ಮಾಡಿದರೆ ಯುದ್ಧದಲ್ಲಿ ಇಂದ್ರನನ್ನು ಸಂಹಾರಮಾಡತಕ್ಕ ಪುತ್ರನನ್ನು ಪಡೆಯುವಿಯೆಂದು ವರವನ್ನು ಕೊಟ್ಟನು.

ಪೂರ್ಣಂ ವರ್ಷಶತಂ ತಾವತ್ ಶುಚಿರ್ಯದಿ ಭವಿಷ್ಯಸಿ ।
ಪುತ್ರಂ ತ್ರಿಲೋಕಪ್ರಚರಮಥ ತ್ವಂ ಜನಯಿಷ್ಯಸಿ ॥ ೯೨ ॥

ಏವಮುಕ್ತ್ವಾ ಮಹಾತೇಜಾಸ್ತಯಾ ಸಮವಸತ್ ಪ್ರಭುಃ ।
ತಾಮಾಲಿಂಗ್ಯ ತ್ರಿಭುವನಂ ಜಗಾಮ ಭಗವಾನೃಷಿಃ ॥ ೯೩ ॥

ಗತೇ ಭರ್ತರಿ ಸಾ ದೇವೀ ದಿತಿಃ ಪರಮಹರ್ಷಿತಾ ।
ಕುಶಲಂ ವನಮಾಸಾದ್ಯ ತಪಸ್ತೇಪೇ ಸುದಾರುಣಂ ॥ ೯೪ ॥

ತಪಸ್ತಸ್ಯಾಂ ತು ಕುರ್ವಂತ್ಯಾಂ ಪರಿಚರ್ಯಾಂಚಕಾರ ಹ ।
ಸಹಸ್ರಾಕ್ಷಃ ಸುರಶ್ರೇಷ್ಠಃ ಪರಯಾ ಗುಣಸಂಪದಾ ॥ ೯೫ ॥

---

೯೨. ಎಲೌ ಪ್ರಿಯಳಾದ ದಿತಿಯೇ, ನೀನು ನೂರು ವರ್ಷಗಳು ಸಂಪೂರ್ಣವಾಗಿ ಪರಿಶುದ್ಧತೆಯಿಂದ ತಪಸ್ಸನ್ನು ಮಾಡಿದರೆ ಮೂರು ಲೋಕದಲ್ಲಿಯೂ ಪ್ರಖ್ಯಾತನಾದ ಕುಮಾರನನ್ನು ನೀನು ಹೊಂದುವೆಯೆಂದು ಹೇಳಿದನು.

೯೩. ಮಹಾ ತೇಜಸ್ವಿಯೂ ಪ್ರಭುವೂ ಆದ ಕಶ್ಯಪರು ಹೀಗೆ ಹೇಳಿ ಅವಳ ಸಂಗಡ ವಾಸಿಸಿದನು. ಅನಂತರ ಪೂಜ್ಯನಾದ ಮುನಿಯು ದಿತಿಯನ್ನಾಲಂಗಿಸಿ ಕೊಂಡು ಆಕೆಯೊಡನೆ ಮೂರು ಲೋಕದಲ್ಲಿಯೂ ಸಂಚರಿಸಿದನು.

೯೪. ತರುವಾಯ ಮುನಿಯು ಅವಳನ್ನು ಬಿಟ್ಟು ಹೋಗಲಾಗಿ, ದಿತಿಯು ಪರಮಹರ್ಷವನ್ನು ಹೊಂದಿ, ಪವಿತ್ರವಾದ ಆಶ್ರಮಕ್ಕೆ ಹೋಗಿ ಘೋರವಾದ ಮಹಾ ತಪಸ್ಸನ್ನು ಮಾಡಿದಳು.

೯೫. ಹೀಗೆ ದಿತೀದೇವಿಯು ತಪಸ್ಸನ್ನು ಮಾಡಲಾಗಿ ದೇವೇಂದ್ರನು ಅವಳ ಬಳಿಗೆ ಬಂದು ಪರಮ ವಿನಯೋಪೇತನಾಗಿ ಭಕ್ತಿಯಿಂದ ಅವಳಿಗೆ ಶುಶ್ರೂಷೆಯನ್ನು ಮಾಡಿದನು.

ಅಗ್ನಿಂ ಶಮಿತ್ಕುಶಂ ಕಾಷ್ಠಂ ಫಲಂ ಮೂಲಂ ತಥೈವ ಚ ।
ನ್ಯವೇದಯತ್ ಸಹಸ್ರಾಕ್ಷೋ ಯಚ್ಚಾನ್ಯದಪಿ ಕಿಂಚನ ॥ ೯೬ ॥

ಗಾತ್ರಸಂವಾಹನಶ್ಚೈವ ಶ್ರಮಾಪನಯನೈಸ್ತಥಾ ।
ಶಕ್ರಃ ಸರ್ವೇಷು ಲೋಕೇಷು ದಿತಿಂ ಪರಿಚಚಾರ ಹ ॥
ಏವಮಾರಾಧಿತಾ ಶಕ್ರಮುವಾಚಾಥ ದಿತಿಸ್ತಥಾ ॥ ೯೭ ॥

॥ ದಿತಿರುವಾಚ ॥

ಪ್ರೀತಾ ತೇಽಹಂ ಸುರಶ್ರೇಷ್ಠ ದಶವರ್ಷಾಣಿ ಪುತ್ರಕ ।
ಅವಶಿಷ್ಟಾನಿ ಭದ್ರಂ ತೇ ಭ್ರಾತರಂ ದ್ರಕ್ಷ್ಯಸೇ ತತಃ ॥ ೯೮ ॥

ಜಯಲಿಪ್ಸಾಂ ಸಮಾಧಾಸ್ಯೇಽಲಬ್ಧ್ವಾಽಹಂ ತಾದೃಶಂ ಸುತಂ ।
ತ್ರೈಲೋಕ್ಯವಿಜಯಂ ಪುತ್ರ ಪ್ರಾಪ್ಸ್ಯಾಮಿ ಸಹ ತೇನ ವೈ ॥ ೯೯ ॥

---

೯೬. ಸಹಸ್ರಾಕ್ಷನಾದ ದೇವೇಂದ್ರನು ದಿತೀದೇವಿಯ ತಪಸ್ಸಿಗೆ ಉಪಯುಕ್ತಗಳಾದ ಅಗ್ನಿ, ಸಮಿತ್ತು, ದರ್ಭೆ, ಸೌದೆ, ಫಲ, ಗೆಡ್ಡೆ, ಗೆಣಸು ಇವೇ ಮೊದಲಾದ ಸಾಮಗ್ರಿಗಳನ್ನು ತಂದುಕೊಡುತ್ತಿದ್ದನು. ಮತ್ತು ಅವಳ ತಪಸ್ಸಿಗೆ ಅತ್ಯುಪಯುಕ್ತಗಳಾದ ಸಾಮಗ್ರಿಗಳನ್ನು ಒದಗಿಸುತ್ತಾ ಸೇವಿಸುತ್ತಿದ್ದನು.

೯೭. ದೇವೇಂದ್ರನು ಹೀಗೆ ದಿತೀದೇವಿಯ ಅಂಗಗಳನ್ನು ಒತ್ತುವುದು, ಶ್ರಮವನ್ನು ಪರಿಹರಿಸುವುದು ಇವೇ ಮೊದಲಾದ ಪರಿಚರ್ಯೆಯನ್ನು ಮಾಡಿ ಸಪ್ತಲೋಕಗಳಲ್ಲಿಯೂ ಪ್ರಖ್ಯಾತನಾದನು. ಹೀಗೆ ಪ್ರೀತಿಯಿಂದ ಸೇವಿಸುತ್ತಿರುವ ಇಂದ್ರನನ್ನು ನೋಡಿ ದಿತೀದೇವಿಯು ಹೀಗೆ ಹೇಳಿದಳು.

೯೮. ದಿತೀದೇವಿಯು ಹೇಳಿದಳು:—ಎಲೈ ದೇವೇಂದ್ರನಾದ ಪುತ್ರನೇ, ನಿನ್ನ ಈ ಸೇವೆಯಿಂದ ನಾನು ಪ್ರೀತಳಾಗಿರುವೆನು. ಇನ್ನು ನನ್ನ ತಪಸ್ಸು ಹತ್ತು ವರ್ಷಗಳು ಮಾತ್ರ ಉಳಿದಿರುವುದು. ಎಲೈ ಪ್ರಿಯಸುತನೇ, ಅನಂತರ ನೀನು ನಿನ್ನ ಸಹೋದರನನ್ನು ನೋಡಬಹುದು ಎಂಬುದಾಗಿ ಹೇಳಿದಳು.

೯೯. ಅನಂತರ ಅಂತಹ ಪುತ್ರನನ್ನು ಪಡೆದು ನನ್ನ ಕೋರಿಕೆಗಳನ್ನು ಈಡೇರಿಸಿಕೊಳ್ಳುವೆನು. ನೀನು ಮಾಡಿದ ಸಹಾಯದಿಂದ ತ್ರೈಲೋಕ್ಯಜಯವನ್ನು ಪಡೆಯುವ ಕುಮಾರನನ್ನು ಪಡೆದು ಕೃತಾರ್ಥಳಾಗುವೆನೆಂದು ಹೇಳಿದಳು.

ಏವಮುಕ್ತ್ವಾ ದಿತಿಃ ಶಕ್ರಂ ಮಧ್ಯಂ ಪ್ರಾಪ್ತೇ ದಿವಾಕರೇ ।
ನಿದ್ರಯಾಪಹೃತಾ ದೇವೀ ಜಾನ್ವೋಃ ಕೃತ್ವಾ ಶಿರಸ್ತದಾ ॥ ೧೦೦ ॥

ದೃಷ್ಟ್ವಾ ತಾಮಶುಚಿಂ ಶಕ್ರಃ ಪಾದಯೋರ್ಗತಮೂರ್ಧಜಾಂ ।
ತಸ್ಯಾಸ್ತದಂತರಂ ಲಬ್ಧ್ವಾ ಜಹಾಸ ಚ ಸುಮೋದ ಚ ॥ ೧೦೧ ॥

ತಸ್ಯಾಃ ಶರೀರಂ ವಿವೃತಂ ವಿವೇಶಾಥ ಪುರಂದರಃ ।
ಪ್ರವಿಶ್ಯ ಚಾಮಿತಂ ದೃಷ್ಟ್ವಾ ಗರ್ಭಮಿಂದ್ರೋ ಮಹೌಜಸಂ ॥
ಅಭಿನತ್ಸ ಪ್ರಧಾನಂ ತು ಕುಲಿಶೇನ ಮಹಾಯಶಾಃ ॥ ೧೦೨ ॥

ಭಿದ್ಯಮಾನಸ್ತದಾ ಗರ್ಭೋ ವಜ್ರೇಣ ಶತಪರ್ವಣಾ ।
ರುರೋದ ಸಸ್ವರಂ ಭೀಮಂ ವೇಪಮಾನಃ ಪುನಃ ಪುನಃ ॥
ಮಾರೋದೀರಿತಿ ತಂ ಗರ್ಭಂ ಶಕ್ರಃ ಪುನರಭಾಷತ ॥ ೧೦೩ ॥

---

೧೦೦. ದಿತೀದೇವಿಯು ಇಂದ್ರನನ್ನು ಕುರಿತು ಹೀಗೆ ಹೇಳುತ್ತಿರಲಾಗಿ, ಮಧ್ಯಾಹ್ನಸಮಯವು ಪ್ರಾಪ್ತವಾಯಿತು. ಆಗ ದಿತಿಯು ಶ್ರಮದಿಂದ ನಿದ್ರೆಯನ್ನು ಪಡೆದಳು. ಹೀಗೆ ನಿದ್ರಿಸುವಾಗ ಅವಳು ತನ್ನ ತೊಡೆಯ ಮೇಲೆ ತಲೆಯನ್ನು ಇಟ್ಟುಕೊಂಡು ಕೂತಹಾಗೆ ನಿದ್ರಿಸಿದಳು.

೧೦೧. ಹೀಗೆ ದಿತಿಯು ತೊಡೆಯ ಮೇಲೆ ತಲೆಯನ್ನಿಟ್ಟುಕೊಂಡು ನಿದ್ರಿಸುತ್ತಿರುವಾಗ ಆಕೆಯ ಕೇಶಗಳು ಕಾಲುಗಳ ಮೇಲೆ ಬಿದ್ದಿದ್ದುವು. ಅಂತಹ ಸಂದರ್ಭಗಳನ್ನೇ ಕಾಯುತ್ತಿದ್ದ ದೇವೇಂದ್ರನು ಆಕೆಯು ಅಶುಚಿಯೆಂದು ಭಾವಿಸಿ ಹಾಸ್ಯ ಮಾಡಿದನು. ಮತ್ತು ಸಂತೋಷವನ್ನು ಹೊಂದಿದನು

೧೦೨. ಅನಂತರ ದೇವೇಂದ್ರನು ಹೀಗೆ ಅಪರಿಶುದ್ಧಳಾಗಿ ಬಾಯಿಯನ್ನು ತೆರೆದುಕೊಂಡು ನಿದ್ರಿಸುತ್ತಿರುವ ಆಕೆಯನ್ನು ನೋಡಿ, ಇದೇ ತಕ್ಕ ಸಮಯವೆಂದು ಯೋಚಿಸಿ ಅವಳ ದೇಹವನ್ನು ಪ್ರವೇಶಿಸಿದನು. ತರುವಾಯ ಉದರದಲ್ಲಿ ಮಹಾತೇಜಸ್ವಿಯೂ, ಅಸದೃಶವೂ ಆದ ಗರ್ಭವನ್ನು ನೋಡಿ, ಮಹತ್ತಾದ ತನ್ನ ವಜ್ರಾಯುಧದಿಂದ ಛೇದಿಸಿ ಯಶೋವಂತನಾದನು.

೧೦೩. ದೇವೇಂದ್ರನು ವಜ್ರಾಯುಧದಿಂದ ಛೇದಿಸಲಾಗಿ, ಆ ಗರ್ಭವು ಗಂಭೀರವಾಗಿ ಅಳುತ್ತಾ ಬಹಳವಾಗಿ ಕಂಪಿಸಿತು. ಆಗ ಇಂದ್ರನು ರೋದಿಸಬೇಡವೆಂದು ಗರ್ಭಕ್ಕೆ ಸಮಾಧಾನವನ್ನು ಹೇಳಿದನು.

ತಂ ಗರ್ಭಂ ಸಪ್ತಧಾಭೂತಂ ಹ್ಯೇಕೈಕಂ ಸಪ್ತಧಾ ಪುನಃ ।
ಕುಲಿಶೇನ ಬಿಭೇದೇಂದ್ರಸ್ತತೋ ದಿತಿರಬುಧ್ಯತ ॥ ೧೦೪ ॥

ನ ಹಂತವ್ಯೋ ನ ಹಂತವ್ಯ ಇತ್ಯೇವಂ ದಿತಿರಬ್ರವೀತ್ ।
ನಿಷ್ಪಪಾತೋದರಾದ್ವಜ್ರೀ ಮಾತುರ್ವಚನಗೌರವಾತ್ ॥
ಪ್ರಾಂಜಲಿರ್ವಜ್ರಸಹಿತೋ ದಿತಿಂ ಶಕ್ರೋಭ್ಯಭಾಷತ ॥ ೧೦೫ ॥

ಅಶುಚಿರ್ದೇವಿ ಸುಪ್ತಾಸಿ ಪಾದಯೋರ್ಗತಮೂರ್ಧಜಾ ।
ತದಂತರಮಹಂ ಲಬ್ಧ್ವಾ ಶಕ್ರಹಂತಾರಮಾಹವೇ ॥
ಭಿನ್ನವಾನ್ ಗರ್ಭಮೇತಂತೇ ಬಹುಧಾ ಕ್ಷಂತುಮರ್ಹಸಿ ॥ ೧೦೬ ॥

ತಸ್ಮಿಂಸ್ತು ವಿಫಲೇ ಗರ್ಭೇ ದಿತಿಃ ಪರಮದುಃಖಿತಾ ।
ಸಹಸ್ರಾಕ್ಷಂ ತತೋ ವಾಕ್ಯಂ ಮಾತುರ್ನಯಾನಮಬ್ರವೀತ್ ॥ ೧೦೭ ॥

---

೧೦೪. ಮೊದಲು ದೇವೇಂದ್ರನು ವಜ್ರಾಯುಧದಿಂದ ಗರ್ಭವನ್ನು ಏಳುಭಾಗ ಮಾಡಿ, ತರುವಾಯ ಪ್ರತಿಯೊಂದು ಭಾಗವನ್ನೂ ಏಳೇಳುಭಾಗ ಮಾಡಿದನು. ಆಗ ಶಿಶುಗಳು ರೋದಿಸಲು ದಿತೀದೇವಿಯು ಎಚ್ಚರಗೊಂಡಳು.

೧೦೫. ಎಚ್ಚರಗೊಂಡಂಥ ದಿತೀದೇವಿಯು ಕೊಲ್ಲಬೇಡ, ಸಂಹರಿಸ ಬೇಡವೆಂದು ಹೇಳಿದಳು. ಆಗ ದೇವೇಂದ್ರನು ಚಿಕ್ಕತಾಯಿಯ ಮಾತಿನ ಗೌರವದಿಂದ ಗರ್ಭದಿಂದ ಹೊರಗೆ ಬಂದನು. ಅನಂತರ ವಜ್ರಪಾಣಿಯಾದ ಇಂದ್ರನು ಅಂಜಲೀ ಬದ್ಧನಾಗಿ ದಿತೀದೇವಿಗೆ ಹೀಗೆ ಹೇಳಿದನು

೧೦೬. ಎಲೌ ತಾಯಿಯೇ, ನೀನು ನಿದ್ರೆಮಾಡಿದಾಗ ನಿನ್ನ ಕೇಶಗಳು ಪಾದಗಳ ಮೇಲೆ ಬಿದ್ದಿದ್ದರಿಂದ ಅಶುಚಿಯಾಗಿದ್ದೀಯೆ. ಆ ಸಮಯವನ್ನು ಕಾದುಕೊಂಡಿದ್ದ ನಾನು ಯುದ್ಧದಲ್ಲಿ ಇಂದ್ರನಿಗೆ ಶತ್ರುವಾದ ಶಿಶುವನ್ನು ಬಹಳವಾಗಿ ಛೇದಿಸಿರುವೆನು. ಇದನ್ನು ಕ್ಷಮಿಸಬೇಕೆಂದು ಪ್ರಾರ್ಥಿಸಿದನು

೧೦೭ ಹೀಗೆ ಆ ಗರ್ಭವು ವಿಫಲವಾಗಲು, ದಿತಿಯು ಅತ್ಯಂತ ಖಿನ್ನಳಾದಳು. ಅನಂತರ ಅವಳು ಕಣ್ಣನ್ನು ಒರಸಿಕೊಂಡು, ಇಂದ್ರನಿಗೆ ಮುಂದೆ ಹೇಳುವಂತೆ ತಿಳಿಸಿದಳು.

ಮಮಾಪರಾದಾದಭೋ೯ಽಯಂ ಯದಿ ತೇ ವಿಫಲೀಕೃತಂ ।
ನಾಪರಾಧೋಽಸ್ತಿ ದೇವೇಶ ಋಷಿಪುತ್ರ ಮಹಾಬಲ || ೧೦೮ ||

ಶತ್ರೋರ್ವಧೇ ನ ದೋಷೋಽಸ್ತಿ ತೇನ ತ್ವಾಂ ನ ಶಪಾಮಿ ಭೋಃ ।
ಪ್ರಿಯಂ ತು ಕರ್ತುಮಿಚ್ಛಾಮಿ ಶ್ರೇಯೋ ಗರ್ಭಸ್ಯ ಮೇ ಕುರು || ೧೦೯ ||

ಭವಂ ತು ಮಮ ಪುತ್ರಾಣಾಂ ಸಪ್ತಸ್ಥಾನಾನಿ ವೈ ದಿವಿ ।
ವಾತಸ್ಕಂಧಾನಿಮಾ೯ ಸಪ್ತ ಚರಂ ತು ಮಮ ಪುತ್ರಕಾಃ ||
ಮರುತಶ್ಚೇತಿ ವಿಖ್ಯಾತಾ ಗಣಾಸ್ತೇ ಸಪ್ತ ಸಪ್ತಕಾಃ || ೧೧೦ ||

ಪೃಥಿವ್ಯಾಂ ಪ್ರಥಮಂಸ್ಕಂಧೋ ದ್ವಿತೀಯಶ್ಚೈವ ಭಾಸ್ಕರೇ ।
ಸೋಮೇ ತೃತೀಯೋ ವಿಜ್ಞೇಯಶ್ಚತುರ್ಥೋ ಜ್ಯೋತಿಷಾಂ ಗಣೇ|| ೧೧೧ ||

---

೧೦೮. ಎಲೈ ದೇವೇಶನೂ, ಮಹಾಬಲಶಾಲಿಯೂ, ಋಷಿಕುಮಾರನೂ ಆದ ಇಂದ್ರನೇ, ಈ ಗರ್ಭವು ನನ್ನ ಅಪರಾಧದಿಂದ ವ್ಯರ್ಥವಾಗಿದ್ದರೆ ಅದು ನಿನ್ನ ದೋಷವಲ್ಲ. ಅದು ನನ್ನ ದೋಷವೇ ಆಗಿರುತ್ತದೆ.

೧೦೯. ಎಲೈ ದೇವೇಶನೇ, ನೀನು ನಿನ್ನ ಶತ್ರುವನ್ನು ಸಂಹರಿಸಿರುವುದರಿಂದ ನಿನ್ನ ತಪ್ಪೇನೂ ಇರುವುದಿಲ್ಲ ಅದರಿಂದ ನಿನಗೆ ನಾನು ಶಾಪವನ್ನು ಕೊಡುವುದಿಲ್ಲ. ಆದರೇ ನನ್ನ ಗರ್ಭವು ವ್ಯರ್ಥವಾಗದಂತೆ ಸಫಲವನ್ನಾಗಿ ಮಾಡು. ನಾನು ನಿನಗೆ ಹಿತವನ್ನು ಕೋರುತ್ತೇನೆಂದು ಹೇಳಿದಳು.

೧೧೦ ಎಲೈ ಇಂದ್ರನೇ, ನನ್ನ ಪುತ್ರರು ಸಪ್ತಮರುತ್ತುಗಳಾಗಲಿ. ಅವರಿಗೆ ಪ್ರತ್ಯೇಕವಾಗಿ ಸ್ವರ್ಗದಲ್ಲಿ ಸ್ಥಾನಗಳನ್ನು ಏರ್ಪಡಿಸು. ನನ್ನ ಈ ಪುತ್ರರು ಸಪ್ತಸಪ್ತ ಮರುದ್ಗಣಗಳಾಗಿ ವಾತಸ್ಕಂಧಗಳಲ್ಲಿ ಸಂಚರಿಸಲಿ ಅವು ಸಪ್ತಮರುದ್ಗಣಗಳಾಗಿ ಸ್ವರ್ಗದಲ್ಲಿ ಸರ್ವರಿಂದಲೂ ಮಾನ್ಯವಾಗಿರಲೆಂದು ಕೇಳಿಕೊಂಡಳು

೧೧೧–೧೧೨. ಆ ಸಪ್ತಮರುದ್ಗಣಗಳಲ್ಲಿ ಪ್ರಥಮವಾತಸ್ಕಂಧವು ಭೂಮಿಯಲ್ಲಿಯೂ, ದ್ವಿತೀಯಸ್ಕಂಧವು ಸೂರ್ಯನಲ್ಲಿಯೂ, ಮೂರನೆಯ ಗುಂಪು ಚಂದ್ರನಲ್ಲಿಯೂ, ನಾಲ್ಕನೆಯ ಸಂಘವು ಜ್ಯೋತಿರ್ಮಂಡಲದಲ್ಲಿಯೂ, ಐದನೆಯ ಗುಂಪು

ಗ್ರಹೇಷು ಪಂಚಮಶ್ಚೈವ ಷಷ್ಠಃ ಸಪ್ತರ್ಷಿಮಂಡಲೇ ।
ಧ್ರುವೇ ತು ಸಪ್ತಮಶ್ಚೈವ ವಾತಸ್ಕಂಧಃ ಪರಸ್ತು ಸಃ ॥ ೧೧೨ ॥

ತಾನ್ಯೇತೇ ವಿಚರಂತ್ವದ್ಯ ಕಾಲೇ ಕಾಲೇ ಮಮಾತ್ಮಜಾಃ ।
ವಾತಸ್ಕಂಧಾನಿಮಾನ್ ಭೂತ್ವಾ ಚರಂ ತು ಮಮ ಪುತ್ರಕಾಃ ॥ ೧೧೩ ॥

ಪೃಥಿವ್ಯಾಂ ಪ್ರಥಮಸ್ಕಂಧೋ ಅಮೇದೇಭ್ಯೋ ಯ ಆವಹಃ ।
ಚರಂ ತು ಮಮ ಪುತ್ರಾಸ್ತೇ ಪ್ರಥಮಶ್ಚರತಾಂಗಣಃ ॥ ೧೧೪ ॥

ದ್ವಿತೀಯಶ್ಚಾಪಿ ಮೇಧ್ಯೇಭ್ಯ ಆಸೂರ್ಯಾತ್ ಪ್ರವಹಸ್ತು ಯಃ ।
ವಾತಸ್ಕಂಧಂ ದ್ವಿತೀಯಂ ತು ದ್ವಿತೀಯಶ್ಚರತಾಂಗಣಃ ॥ ೧೧೫ ॥

---

ಗ್ರಹಗಳ ಸಂಗಡವೂ, ಆರನೆಯ ಮಂಡಲವು ಸಪ್ತರ್ಷಿಗಳ ಮಂಡಲದಲ್ಲಿಯೂ, ಏಳನೆಯ ವಾತಸ್ಕಂಧವು ಧ್ರುವಮಂಡಲದಲ್ಲಿಯೂ ಸಂಚಾರವನ್ನು ಮಾಡಲೆಂದು ದಿತೀದೇವಿಯು ಇಂದ್ರನನ್ನು ಕೇಳಿಕೊಂಡಳು.

೧೧೩. ಎಲೈ ಸುರೇಶನೇ, ನನ್ನ ಪುತ್ರರಾದ ಇವರು ಮರುದ್ಗಣಗಳಾಗಿ ವಾತಸ್ಕಂಧ ಸಂಜ್ಞೆಯಿಂದ ಪೃಥಿವ್ಯಾದಿ ಸಪ್ತಸ್ಥಾನಗಳಲ್ಲಿಯೂ ಸ್ವೇಚ್ಛೆಯಾಗಿ ಸರ್ವರಿಂದಲೂ ಮಾನ್ಯರಾಗಿ ಸಂಚಾರಮಾಡಲಿ.

೧೧೪. ಓ ದೇವೇಶನೇ, ಆ ಸಪ್ತಮರುದ್ಗಣಗಳಲ್ಲಿ ನನ್ನ ಕುಮಾರರ ಆವಹ ನಾಮಕ ಮೊದಲನೆಯಸ್ಕಂಧವು ಭೂಮಿಯ ಪರಿಶುದ್ಧವಾದ ಸ್ಥಳದಲ್ಲಿ ಸಂಚಾರ ಮಾಡಲಿ.

೧೧೫. ಅವುಗಳಲ್ಲಿ ಎರಡನೆಯ ತಂಡವಾದರೋ, ಭೂಮಿಯಿಂದ ಸೂರ್ಯ ಮಂಡಲದವರೆಗೂ ಇರುವ ಪರಿಶುದ್ಧವಾದ ಸ್ಥಾನಗಳಲ್ಲಿ ಸಂಚರಿಸಲಿ. ಆದ್ವಿತೀಯ ಮರುದ್ಗಣವು ಪ್ರವಹನಾಮಕ ದ್ವಿತೀಯವಾತಸ್ಕಂಧನಾಮದಿಂದ ದ್ವಿತೀಯಸ್ಥಾನದಲ್ಲಿ ಓಡಾಡ ಎಂದಳು.

ಸೂರ್ಯೋರ್ಧ್ವಂ ತು ತತಃ ಸೋಮಾದುದ್ವಹೋ ಯಸ್ತು ವೈ ಸ್ಮೃತಃ।
ವಾತಸ್ಕಂಧಂ ತು ತಂ ಪ್ರಾಹುಸ್ತೃತೀಯಶ್ಚ ರತಾಂಗಣಃ ॥ ೧೧೬ ॥

ಸೋಮಾದೂರ್ಧ್ವಂ ತಥರ್ಕ್ಷೇಭ್ಯಶ್ಚತುರ್ಥಃ ಸುವಹಸ್ತು ಯಃ।
ಚತುರ್ಥೋ ಮಮ ಪುತ್ರಾಣಾಂ ಗಣಸ್ತು ಚರತಾಂ ವಿಭೋ ॥ ೧೧೭ ॥

ಯಕ್ಷೇಭ್ಯಶ್ಚ ತಥೈವೋರ್ಧ್ವಮಾಗ್ರಹಾದ್ವಿಹಸ್ತು ಯಃ।
ಪಂಚಮಂ ಪಂಚಮಃ ಸೌಮ್ಯಃ ಸ್ಕಂಧಸ್ತು ಚರತಾಂಗಣಃ ॥ ೧೧೮ ॥

ಊರ್ಧ್ವಂ ಗ್ರಹಾದೃಷಿಭ್ಯಸ್ತು ಷಷ್ಠೋ ಯೋ ವೈ ಪರಾಹತಃ।
ಚರಂ ತು ಮಮ ಪುತ್ರಾಸ್ತು ತತ್ರ ಷಷ್ಠೇ ಗಣೇ ತು ಯೇ ॥ ೧೧೯ ॥

---

೧೧೬. ಮೂರನೆಯ ಮರುದ್ಗಣವು ಉದ್ವಹನಾಮಕವೂ ತೃತೀಯವೂ ಆದ ವಾತಸ್ಕಂಧನಾಮದಿಂದ ಸೂರ್ಯಮಂಡಲದಿಂದ ಮೇಲೆ ಚಂದ್ರಮಂಡಲದವರೆಗೂ ಇರುವ ಸಂಚರಿಸಲರ್ಹವಾದ ಸ್ಥಾನದಲ್ಲಿ ಸಂಚಾರಮಾಡಲಿ.

೧೧೭. ಎಲೈ ಅಮರೇಶನೇ, ಚಂದ್ರಮಂಡಲದಿಂದ ಮೇಲಕ್ಕೆ ನಕ್ಷತ್ರಮಂಡಲದವರೆಗೂ ಸಂಚರಿಸಲು ಯೋಗ್ಯವಾದ ಪ್ರದೇಶಗಳಲ್ಲಿ ನನ್ನ ಕುಮಾರರ ನಾಲ್ಕನೆಯ ಸುವಹನಾಮಕಮರುದ್ಗಣವು ಸ್ವೇಚ್ಛೆಯಾಗಿ ಪ್ರವಹಿಸಲಿ.

೧೧೮. ಆ ಮರುದ್ಗಣಗಳಲ್ಲಿ ಐದನೆಯ ವಿವಾಹನಾಮಕವಾತಸ್ಕಂಧವು ನಕ್ಷತ್ರಮಂಡಲದಿಂದ ಗ್ರಹಮಂಡಲದವರೆಗೂ ಇರುವ ಪವಿತ್ರವಾದ ಸ್ಥಾನದಲ್ಲಿ ಸೌಮ್ಯರೀತಿಯಿಂದ ಸಂಚಾರವನ್ನು ಮಾಡಲೆಂದಳು.

೧೧೯. ಆ ಗುಂಪಿನಲ್ಲಿ ಆರನೆಯ ಪರಾಹವನಾಮಕವಾದ ಯಾವ ಮರುದ್ಗಣವಿದೆಯೋ, ಆ ಗುಂಪು ಗ್ರಹಮಂಡಲದಿಂದ ಮೇಲೆ ಋಷಿಮಂಡಲದವರೆಗೂ ಇರುವ ಪವಿತ್ರಸ್ಥಾನದಲ್ಲಿ ಸುಖವಾಗಿ ಸಂಚಾರಮಾಡಲೆಂದು ಕೇಳಿದಳು.

ಸಪ್ತರ್ಷಯಸ್ತಥೈವೋರ್ಧ್ವಮಾಧ್ರುವಾತ್ ಸಪ್ತಮಸ್ತು ಯಃ ।
ವಾತಸ್ಕಂಧಃ ಪರಿವಹಸ್ತತ್ರ ತಿಷ್ಠಂತು ಮೇ ಸುತಾಃ ॥ ೧೨೦ ॥

ಏತತ್ ಸರ್ವಂ ಚರಂತ್ವೇತೇ ಕಾಲೇ ಕಾಲೇ ಮಮಾತ್ಮಜಾಃ ।
ತತ್ರ ತೇಽಸ ಚ ನಾಮ್ನಾ ವೈ ಭವಂ ತು ಮರುತಸ್ತ್ವಿಮೇ ॥ ೧೨೧ ॥

ತತಸ್ತೇಷಾಂ ತು ನಾಮಾನಿ ಮಾತಾಪುತ್ರೌ ಪ್ರಚಕ್ರತುಃ ।
ತತ್ಕೃತೇ ಕರ್ಮಭಿಶ್ಚೈವ ಮರುತೋ ವೈ ಪೃಥಕ್ ಪೃಥಕ್ ॥ ೧೨೨ ॥

ಸತ್ವಜ್ಯೋತಿಸ್ತಥಾದಿತ್ಯಃ ಸತ್ಯಜ್ಯೋತಿಸ್ತಥಾಽಪರಃ ।
ತಿರ್ಯಗ್ಜ್ಯೋತಿಶ್ಚ ಸಜ್ಯೋತಿರ್ಜ್ಯೋತಿಷ್ಮಾನಪರಸ್ತಥಾ ॥ ೧೨೩ ॥

---

೧೨೦. ಸಪ್ತರ್ಷಿಮಂಡಲದಿಂದ ಧ್ರುವಮಂಡಲದವರೆಗೂ ಯಾವ ಪವಿತ್ರವಾದ ಸ್ಥಾನವಿರುತ್ತವೆಯೋ ಅದರಲ್ಲಿ ನನ್ನ ಪುತ್ರರಾದ ಮರುದ್ಗಣಗಳಲ್ಲಿ ಏಳನೆಯದೂ, ಪರಿವಹನಾಮಕವೂ ಆದ ವಾತಸ್ಕಂಧವು ವಾನ್ಯವಾಗಿ ಸಂಚಾರಮಾಡಲೆಂದು ದಿತಿದೇವಿಯು ಇಂದ್ರನಿಗೆ ಹೇಳಿದಳು

೧೨೧. ನನ್ನ ಪುತ್ರರಾದ ಈ ಸಪ್ತಮರುದ್ಗಣಗಳು ಮೇಲೆ ನಿರೂಪಿಸಿರುವ ಸಪ್ತಸ್ಕಂಧಗಳಲ್ಲಿಯೂ ಸಂಚರಿಸಲಿ. ಆಯಾ ಜಾಗಗಳಲ್ಲಿ ಆಹವಾದಿನಾಮಕವಾದ ಸಪ್ತಮರುದ್ಗಣಗಳೂ ಸಪ್ತಸ್ಕಂಧಗಳಲ್ಲಿ ತತ್ತನ್ನಾಮದಿಂದ ಸಂಚಾರಮಾಡಲೆಂದು ದಿತಿಯು ಹೇಳಿದಳು.

೧೨೨. ಅನಂತರ ತಾಯಿಯು ಆ ನಲವತ್ತೊಂಭತ್ತು ಮರುತ್ತುಗಳಿಗೂ ನಾಮಕರಣವನ್ನು ಮಾಡಿದಳು. ಇದರಿಂದ ಪ್ರತಿಗಣಗಳಲ್ಲಿರತಕ್ಕ ಪ್ರತಿಯೊಬ್ಬರಿಗೂ ಬೇರೆ ಬೇರೆಯಾದ ನಾಮವನ್ನು ಇಟ್ಟಳು.

೧೨೩. ಆ ಏಳು ಗಣಗಳಲ್ಲಿ ಮೊದಲನೆಯ ಗಣದಲ್ಲಿರುವ ಏಳು ಮರುತ್ತುಗಳಿಗೂ ಕ್ರಮವಾಗಿ ಸತ್ವಜ್ಯೋತಿ, ಆದಿತ್ಯಜ್ಯೋತಿ, ಸತ್ಯಜ್ಯೋತಿ, ಅಪರಜ್ಯೋತಿ, ತಿರ್ಯಗ್‌ಜ್ಯೋತಿ, ಸಜ್ಯೋತಿ, ಜ್ಯೋತಿಷ್ಮಂತ ಎಂಬ ನಾಮದಿಂದ ಮೊದಲನೆಯ ಗಣವು ಪ್ರಖ್ಯಾತವಾಗಿತ್ತು.

**ದಾರುಣಾಭಿಜನಾಃ ಕ್ರೂರಾಃ ಸರ್ವೇ ಬ್ರಹ್ಮದ್ವಿಷಶ್ಚ ತೇ ।**
**ದಶಾನ್ಯಾನಿ ಸಹಸ್ರಾಣಿ ಸೈಂಹಿಕೇಯೋ ಗಣಃ ಸ್ಮೃತಃ ॥ ೨೧ ॥**

**ನಿಹತೋ ಜಾಮದಗ್ನ್ಯೇನ ಭಾರ್ಗವೇಣ ಬಲೀಯಸಾ ।**
**ಸ್ವರ್ಭಾನೋಸ್ತು ಪ್ರಭಾ ಕನ್ಯಾ ಪುಲೋಮ್ನೋಽಥ ಶುಚೀ ತಥಾ ॥ ೨೨ ॥**

**ಉಪದಾನವೀ ಯಮಸ್ಯಾಪಿ ಶರ್ಮಿಷ್ಠಾ ವಾರ್ಷಪರ್ವಣೀ ।**
**ಪುಲೋಮಾ ಕಾಲಿಕಾ ಚೈವ ವೈಶ್ವಾನರಸುತೇ ಉಭೇ ॥ ೨೩ ॥**

**ಪ್ರಭಾಯಾ ನಹುಷಃ ಪುತ್ರೋ ಜಯಂತಶ್ಚ ಶುಚೀಸುತಃ ।**
**ಪುರಂ ಜಜ್ಞೇಥ ಶರ್ಮಿಷ್ಠಾ ದುಷ್ಮಂತಮುಪದಾನವೀ ॥ ೨೪ ॥**

---

೨೧ ಸಿಂಹಿಕಾ ಪುತ್ರರು ಹತ್ತುಸಹಸ್ರಸಂಖ್ಯಾಕರಾಗಿರುವರು ಅವರೆಲ್ಲರೂ ಕ್ರೂರಿಗಳೂ ದುರ್ವಂಶಿಕರೂ ಬ್ರಹ್ಮದ್ವೇಷಿಗಳೂ ಲೋಕಕಂಟಕರೂ ಆಗಿರುವರು ಅವರವೇ ಒಂದು ಗಣವಿರುವುದು ಇದು ಮಹಾಪ್ರಬಲವಾಗಿದೆ

೨೨—೨೩ ಈ ಸಿಂಹಿಕೆಯ ಮಕ್ಕಳು ಅತಿ ಬಲಶಾಲಿಯೂ ಭೃಗುವಂಶೋತ್ಪನನೂ ಜಮದಗ್ನಿಯ ಕುಮಾರನೂ ಆದ ಪರಶುರಾಮನಿಂದ ಸಂಹೃತರಾದರು ಅವರಲ್ಲಿ ಸ್ವರ್ಭಾನುವಿಗೆ ಪ್ರಭೆಯೆಂಬ ಕುಮಾರಿಯೂ ಪುಲೋಮನಿಗ ಶಚಿಯೆಂಬ ಪುತ್ರಿಯೂ ಯಮನಿಗೆ ಉಪದಾನವಿಯೆಂಬ ತನುಜೆಯೂ ವೃಷಪರ್ವನಿಗೆ ಶರ್ಮಿಷ್ಠೆಯೆಂಬ ಸುತೆಯೂ ವೈಶ್ವಾನರನಿಗೆ ಪುಲೋಮೆ ಕಾಲಿಕೆಯರೆಂಬ ಇಬ್ಬರು ಪುತ್ರಿಯರೂ ಉದ್ಭವಿಸಿದರು

೨೪ ಆ ಕುಮಾರಿಯರಲ್ಲಿ ಪ್ರಭೆಗೆ ನಹುಷನೆಂಬ ಪುತ್ರನೂ ಶಚೀದೇವಿಗೆ ಜಯಂತನೆಂಬ ಕುಮಾರನೂ ಶರ್ಮಿಷ್ಠೆಗೆ ಪುರುವೆಂಬ ಸುತನೂ, ಉಪದಾನವಿಗೆ ದುಷ್ಯಂತನೆಂಬ ತನುಜನೂ ಜನಿಸಿ ಲೋಕದಲ್ಲಿ ವಿಖ್ಯಾತರೂ ಮಾನ್ಯರೂ ಆಗಿದ್ದರು ಮತ್ತು ಪ್ರಜಾಪಾಲಕರಾಗಿದ್ದರು

ಈದೃಕ್ ಚ ಪುರುಷಶ್ಚೈವ ಅನಾದೃಕ್ಷಾಶ್ಚ ತೇಜಸಃ ।
ಸಮಿತಾಸಮಿತದೃಕ್ಷಾಶ್ಚ ಪ್ರತಿದೃಕ್ಷಾಶ್ಚ ವೈ ಗಣಾಃ ॥ ೧೨೮ ॥

ಏತೇ ಹೇಕೋನಪಂಚಾಶನ್ಮರುತೋ ನಾಮತಃ ಸ್ಮೃತಾಃ ।
ಪ್ರಸಂಖ್ಯಾತಾಸ್ತಥಾ ಸ್ತಾಭ್ಯಾಂ ದಿತ್ಯಾ ಚಂದ್ರೇಣ ಚೈವ ಹಿ ॥ ೧೨೯ ॥

ಶ್ರುತ್ವಾ ತೇಷಾಂ ತು ನಾಮಾನಿ ದಿತಿರಿಂದ್ರಮುವಾಚ ಹ ।
ವಾತಸ್ಕಂಧಂ ಚರಂತ್ವೇತೇ ಮಮ ಪುತ್ರಾಶ್ಚ ಪುತ್ರಕ ॥
ವಿಚರಂ ತು ಚ ಭದ್ರಂ ತೇ ದೇವೈಃ ಸಹ ಮಮಾತ್ಮಜಾಃ ॥ ೧೩೦ ॥

ತಸ್ಯಾಸ್ತದ್ವಚನಂ ಶ್ರುತ್ವಾ ಸಹಸ್ರಾಕ್ಷಃ ಪುರಂದರಃ ।
ಉವಾಚ ಪ್ರಾಂಜಲೀಭೂರ್ತ್ವಾ ಮಾತರ್ಭವತು ತತ್ತಥಾ ॥ ೧೩೧ ॥

---

೧೨೮. ಮೇಲೆ ಹೇಳಿದಂತೆಯೇ ದಿತೀದೇವಿಯು ಏಳನೆಯ ಗಣದಲ್ಲಿರುವ ಕುಮಾರರಿಗೆ ಕ್ರಮವಾಗಿ ಈದೃಕ್, ಪುರುಷ, ಅನ್ಯಾದೃಕ್ಷ, ಚೇತಸ, ಸಮಿತಾದೃಕ್ಷ, ಅಮಿತಾದೃಕ್ಷ, ಪ್ರತಿದೃಕ್ಷವೆಂಬ ನಾಮವನ್ನು ಇಟ್ಟಳು.

೧೨೯. ಹೀಗೆ ದಿತೀದೇವಿಯು ಸಪ್ತಮರುದ್ಗಣಗಳಿಗೂ ಕ್ರಮವಾಗಿ ನಲವತ್ತೊಂಭತ್ತು ನಾಮಗಳನ್ನಿಟ್ಟಳು ಹೀಗೆ ಆ ಗಣಗಳು ದಿತೀದೇವಿ ಮತ್ತು ಇಂದ್ರ ಇವರಿಂದ ಪ್ರಶಂಸಿಸಿ ಲೋಕದಲ್ಲಿ ಪ್ರಖ್ಯಾತವಾದುವು.

೧೩೦. ಹೀಗೆ ನಾಮಕರಣವನ್ನು ಮಾಡಿದ ತರುವಾಯ ದಿತೀದೇವಿಯು ಇಂದ್ರನಿಗೆ ಇಂತೆಂದಳು.—ಎಲೈ ಪ್ರಿಯ ಪುತ್ರನಾದ ಸುರೇಶನೇ, ಈ ನನ್ನ ಮಕ್ಕಳೆಲ್ಲರೂ ಮೇಲೆ ನಿರೂಪಿಸಿರುವ ವಾತಸ್ಕಂಧಗಳಲ್ಲಿ ನಿರಾತಂಕವಾಗಿಯೂ, ಸುಖವಾಗಿಯೂ ಸಂಚರಿಸಲೆಂದಳು.

೧೩೧. ತರುವಾಯ ಸಹಸ್ರಾಕ್ಷನಾದ ದೇವೇಂದ್ರನು ತಾಯಿಯಾದ ದಿತೀದೇವಿಯ ಆ ಮಾತುಗಳನ್ನು ಕೇಳಿ ಕೈಮುಗಿದುಕೊಂಡು ಎಲೌ ಜನನಿಯೇ, ನಿನ್ನ ಕುಮಾರರೆಲ್ಲರೂ ಲೋಕಮಾನ್ಯರಾದ ಸಪ್ತಸ್ಕಂಧಗಳಲ್ಲಿಯೂ ನಿರ್ಭಯರಾಗಿಯೂ, ಸ್ವೇಚ್ಛೆಯಾಗಿಯೂ ಸಂಚರಿಸಲೆಂದು ಹೇಳಿದನು.

ಸರ್ವಮೇತದ್ಯಥೋಕ್ತಂತೇ ಭವಿಷ್ಯತಿ ನ ಸಂಶಯಃ |
ದೇವಭೂತಾ ಮಹಾತ್ಮಾನಃ ಕುಮಾರಾ ದೇವಸಮ್ಮತಾಃ ||
ದೇವೈಃ ಸಹ ಭವಿಷ್ಯಂತಿ ಯಜ್ಞಭಾಜಸ್ತಥಾತ್ಮಜಾಃ || ೧೩೨ ||

ತಸ್ಮಾತ್ತೇ ಮರುತೋ ದೇವಾಃ ಸರ್ವೇ ಚೇಂದ್ರಾನುಚಾಮರಾಃ |
ವಿಜ್ಞೇಯಾಶ್ಚಾಮರಾಃ ಸರ್ವೇ ದಿತಿಪುತ್ರಾಸ್ತಪಸ್ವಿನಃ || ೧೩೩ ||

ಏವಾಂತೌ ನಿಶ್ಚಯಂ ಜ್ಞಾತ್ವಾ ಮಾತಾ ಪುತ್ರೌ ತಪೋಧನೌ |
ಜಗ್ಮತುಸ್ತ್ರಿದಿವಂ ದೃಷ್ಟ್ವಾ ಶಕ್ರೋಽಪಿ ತ್ರಿದಿವಂ ಗತಃ || ೧೩೪ ||

ಮರುತಾಂ ಹಿ ಶುಭಂ ಜನ್ಮ ಶೃಣುಯಾದ್ಯಃ ಪಠೇತ ವಾ |
ನಾವೃಷ್ಟಿಭಯಮಾಪ್ನೋತಿ ಬಹ್ವಾಯುಶ್ಚ ಭವೇತ್ತತಃ || ೧೩೫ ||

ಇತಿ ಶ್ರೀ ಮಹಾಪುರಾಣೇ ವಾಯುಪ್ರೋಕ್ತೇ "ಕಶ್ಯಪೀಯ
ಪ್ರಜಾಸರ್ಗೋ" ನಾಮ ಷಷ್ಠೋಽಧ್ಯಾಯಃ

---

೧೩೨. ಎಲೌ ತಾಯಿಯೇ, ನೀನು ಏನನ್ನು ಹೇಳುತ್ತೀಯೋ ಅವೆಲ್ಲವೂ ಹಾಗೆಯೇ ಆಗುವುದು. ಈ ವಿಷಯದಲ್ಲಿ ಸಂದೇಹವಿಲ್ಲ. ನಿನ್ನ ಕುಮಾರರೆಲ್ಲರೂ, ದೇವತೆಗಳೂ, ದೇವತೆಗಳ ಪ್ರಿಯರೂ, ದೇವತೆಗಳ ಸಂಗಡ ಯಜ್ಞಭಾಗಿಗಳೂ, ಮಹಾತ್ಮರೂ ಆಗುವರು.

೧೩೩. ಆದುದರಿಂದ ಆ ಮರುದ್ಗಣದಲ್ಲಿ ಸೇರಿದವರೆಲ್ಲರೂ ದೇವತೆಗಳೂ, ಇಂದ್ರಾನುಜರೂ, ಜರಾರಹಿತರೂ, ತಪಸ್ವಿಗಳೂ, ದಿತಿಯ ಕುಮಾರರೂ, ಮರಣ ರಹಿತರೂ, ಲೋಕಪೂಜ್ಯರೂ ಆಗಿರುವರು.

೧೩೪. ಹೀಗೆ ಆ ತಾಯಿಮಕ್ಕಳಿಬ್ಬರೂ ಈ ನಿಶ್ಚಯವನ್ನು ಕೇಳಿ ಸಂತುಷ್ಟರಾಗಿ ಸ್ವರ್ಗಲೋಕಕ್ಕೆ ಹೋದರು. ದೇವೇಂದ್ರನೂ ಸಹ ಸ್ವಕಾರ್ಯಸಿದ್ಧಿಯಿಂದ ಸಂತೋಷಭರಿತನಾಗಿ ಸ್ವರ್ಗಲೋಕಕ್ಕೆ ಹೋದನು.

೧೩೫. ಆದುದರಿಂದ ಯಾವ ಪುರುಷನು ಈ ದಿತೀಪುತ್ರರಾದ ಮರುತ್ತುಗಳ ಜನ್ಮವೃತ್ತಾಂತವನ್ನು ವಿಶ್ವಾಸದಿಂದ ಕೇಳುವನೋ ಮತ್ತು ಪಠನಮಾಡುವನೋ, ಅವನಿಗೆ ಅನಾವೃಷ್ಟ್ಯಾದಿ ಭೀತಿಯೂ ಇರುವುದಿಲ್ಲ. ಮಹತ್ತಾದ ಆಯುಷ್ಯವೂ ಬರುವುದೆಂದು ಸೂತಮುನಿಯು ಮಹರ್ಷಿಗಳಿಗೆ ಹೇಳಿದನು.

ಹೀಗೆ ವಾಯುಪ್ರೋಕ್ತವಾದ ಮಹಾಪುರಾಣದಲ್ಲಿ "ಕಶ್ಯಪಮುನಿಯ
ಪ್ರಜಾಸೃಷ್ಟಿ"ಯೆಂಬ ಆರನೆಯ ಅಧ್ಯಾಯವು ಸಮಾಪ್ತವಾದುದು.

## ಆರನೆಯ ಅಧ್ಯಾಯದ ಸಾರಾಂಶವು

ಈ ಅಧ್ಯಾಯದಲ್ಲಿ ಕಶ್ಯಪ ಮುನಿಯ ಪ್ರಜಾ ಸೃಷ್ಟಿಯು ವರ್ಣಿತವಾಗಿದೆ. ಸಪ್ತಮನ್ವಂತರಗಳಲ್ಲಿಯೂ ಜಯಾದಿ ದೇವತೆಗಳ ಸೃಷ್ಟಿಯು ಆಗಿರುವುದು. ಹೇಗೆಂದರೆ ಬ್ರಹ್ಮದೇವನು ತನ್ನ ಮುಖದಿಂದ ಜಯಾದಿ ದೇವತೆಗಳನ್ನು ಸೃಷ್ಟಿಸಿ ನೀವು ಪ್ರಜಾಸೃಷ್ಟಿಯನ್ನು ಮಾಡಿರೆಂದು ಆಜ್ಞಾಪಿಸಿದನು. ಅವರು ಹಾಗೆ ಮಾಡದೆ ವಿರಕ್ತಿಯಿಂದ ನಿವೃತ್ತಿಮಾರ್ಗವನ್ನಾಶ್ರಯಿಸಿದರು. ಆಗ ಬ್ರಹ್ಮದೇವನು ಕುಪಿತನಾಗಿ ನೀವು ಏಳು ಜನ್ಮಗಳಲ್ಲಿ ಜನಿಸಿರಿ. ತರುವಾಯ ವಿರಕ್ತರಾಗಿ ಮುಕ್ತಿಯನ್ನು ಪಡಯಿರೆಂದು ಶಾಪವನ್ನು ಕೊಟ್ಟನು ಆ ದೇವತೆಗಳು ಸ್ವಾಯಂಭುವಮನ್ವಂತರದಲ್ಲಿ ಅಜಿತನಾಮಕರಾಗಿಯೂ, ಸ್ವಾರೋಚಿಷಮನ್ವಂತರದಲ್ಲಿ ತುಷಿತನಾಮಕರಾಗಿಯೂ ತಾಮಸಮನ್ವಂತರದಲ್ಲಿ ಹರ್ಷನಾಮಕನಾಗಿಯೂ, ಚಾರಿಷ್ಣದಮನ್ವಂತರದಲ್ಲಿ ವೈಕುಂಠನಾಮಕನಾಗಿಯೂ, ಚಾಕ್ಷುಷಮನ್ವಂತರದಲ್ಲಿ ಸಾಧ್ಯನಾಮಕರಾಗಿಯೂ, ವೈವಸ್ವತಮನ್ವಂತರದಲ್ಲಿ ಆದಿತ್ಯನಾಮುಕರಾಗಿಯೂ ಅವತರಿಸಿದರು.

ಮುನಿಗಳು ದೈತ್ಯದಾನವ ಸೃಷ್ಟಿಕ್ರಮಾದಿಗಳನ್ನೂ ಕೇಳಲು ಕಶ್ಯಪ ಮುನಿಗೆ ದಿತೀದೇವಿಯಲ್ಲಿ ಹಿರಣ್ಯಕಶಿಪು ಹಿರಣ್ಯಾಕ್ಷರೆಂಬ ಮಕ್ಕಳು ಜನಿಸಿದರು. ಹಿರಣ್ಯಕಶಿಪುವು ಕಶ್ಯಪಮುನಿಯ ಯಾಗಶಾಲೆಯಲ್ಲಿಯೇ ಜನಿಸಿ ಹೋತೃವಿಗಾಗಿ ಹಾಕಿದ್ದ ಸುವರ್ಣಮಯವಾದ ಪೀಠದಲ್ಲಿ ಹೋಗಿ ಕುಳಿತದ್ದರಿಂದ ಅವನಿಗೆ ಹಿರಣ್ಯಕಶಿಪುವೆಂಬ ನಾಮವು ಸಂಭವಸಿತು. ಅವನಿಗೆ ಪ್ರಹ್ಲಾದಾದಿ ಅನೇಕ ಪುತ್ರ ಪೌತ್ರರು ಜನಿಸಿದರು. ಅವರ ವಂಶದಲ್ಲಿಯೇ ಮಾರೀಚ ಸುಂದೋಪಸುಂದ ತಾಟಕಾದಿ ಮೂರು ಕೋಟಿದೈತ್ಯರು ಉದ್ಭವಿಸಿದರು. ಆಗ ಶ್ರೀಹರಿಯು ಲೋಕಕಂಟಕರಾದ ಅನೇಕ ದೈತ್ಯರನ್ನು ಸಂಹರಿಸಿದನು. ತರುವಾಯ ದೇವದೈತ್ಯರಿಗೆ ಕಾಳಗವಾಗಲು ದೈತ್ಯರೆಲ್ಲರೂ ನಷ್ಟರಾದರು. ಆಗ ದಿತೀದೇವಿಯು ಇಂದ್ರನನ್ನು ಕೊಲ್ಲುವ ಪುತ್ರನನ್ನು ಪಡೆಯಲು ಕಶ್ಯಪರಿಂದ ಗರ್ಭವನ್ನು ಧರಿಸಿದಳು. ಈ ವಿಷಯವನ್ನರಿತ ಇಂದ್ರನು ಅವಳನ್ನು ಸೇವಿಸುತ್ತಾ ಸಮಯವನ್ನು ಕಾಯುತ್ತಿದ್ದನು. ಒಂದು ದಿವಸ ಅವಳು ಅಶುಚಿಯಾಗಿ

ನಿದ್ರಿಸುತ್ತಿರಲು ಅವಳ ಉದರವನ್ನು ಪ್ರವೇಶಿಸಿ ಆ ಗರ್ಭವನ್ನು ಏಳುಭಾಗ ಮಾಡಿದನು ಪುನಃ ಆ ಏಳು ಭಾಗಗಳನ್ನೂ ವಜ್ರಾಯುಧದಿಂದ ಏಳೇಳು ಭಾಗಗಳನ್ನಾಗಿ ಮಾಡಿದನು. ಆಗ ಆ ಮಕ್ಕಳು ರೋದಿಸಲು ಇಂದ್ರನನ್ನೂ ದಿತಿಯು ನೋಡಿದಳು. ಅವರಿಗೆ ಸಂವಾದವು ನಡೆಯಿತು. ಕೊನೆಗೆ ದಿತಿಯ ಪ್ರಾರ್ಥನೆಯಂತೆ ಆ ಒಂದೊಂದು ಭಾಗಗಳೂ ಒಂದೊಂದು ಮರುದ್ಗಣಗಳಾಗಿ ಪೃಥಿವ್ಯಾದಿ ಸಪ್ತಸ್ಕಂಧಗಳಲ್ಲಿಯೂ ಆವಹಾದಿ ನಾಮಗಳಿಂದ ಸಂಚರಿಸುತ್ತಾ ದೇವ ಮಾನ್ಯವಾಗಿಯೂ ಯಜ್ಞಭೋಕ್ತೃವಾಗಿಯೂ ಲೋಕಪೂಜ್ಯವಾಗಿಯೂ ಆದವು ಅವರೇ ನಲವತ್ತೊಂಭತ್ತು ಮರುತ್ತುಗಳ ಬಳಿಕ ದಿತೀದೇವಿಯು ಇಂದ್ರನೂ ಸ್ವರ್ಗಲೋಕಕ್ಕೆ ಹೋದರು. ಇವೇ ಮೊದಲಾದ ವಿಷಯಗಳು ವರ್ಣಿತವಾಗಿವೆ.



—: ಹರಿಃ ಓಂ :—

—ಶ್ರೀ ವೇದವ್ಯಾಸಾಯ ನಮಃ—

# ಶ್ರೀಮದ್ವಾಯು ಪುರಾಣಂ

## ಸಪ್ತಮೋಽಧ್ಯಾಯಃ

**॥ ಸೂತ ಉವಾಚ ॥**

**ಅತ ಊರ್ಧ್ವಂ ಪ್ರವಕ್ಷ್ಯಾಮಿ ದನುಪುತ್ರಾನ್ನಿಬೋಧತ ।**
**ಅಭವರ್ನ ದನುಪುತ್ರಾಸ್ತು ವಂಶೇ ಖ್ಯಾತಾ ಮಹಾಸುರಾಃ ॥ ೧ ॥**

**ವಿಪ್ರಚಿತ್ತಿಪ್ರಧಾನಾಸ್ತೇ ಶತಂ ತೀವ್ರಪರಾಕ್ರಮಾಃ ।**
**ಸರ್ವೇ ಲಬ್ಧವರಾಶ್ಚೈವ ಸುತಪ್ತ ತಪಸಸ್ತಥಾ ॥ ೨ ॥**

**ಸತ್ಯಸಂಧಾಃ ಪರಾಕ್ರಾಂತಾಃ ಕ್ರೂರಾ ಮಾಯಾವಿನಶ್ಚ ತೇ ।**
**ಮಹಾಬಲಾ ಅಯಜ್ವಾನೋ ಹ್ಯಬ್ರಹ್ಮಣ್ಯಾಶ್ಚ ದಾನವಾಃ ॥**
**ಕೀರ್ತ್ಯಮಾನಾನ್ಮಯಾ ಸರ್ವಾನ್ ಪ್ರಧಾನ್ಯೇನ ನಿಬೋಧತ ॥ ೩ ॥**

## ಏಳನೆಯ ಅಧ್ಯಾಯವು

೧. ಸೂತಮುನಿಯು ಹೇಳಿದನು.—ಎಲೈ ಮುನಿವರ್ಯರೇ, ಈಗ ದನೂದೇವಿಯ ಕುಮಾರರಾದ ದಾನವರ ವಿಚಾರಗಳನ್ನು ವಿಸ್ತಾರವಾಗಿ ನಿರೂಪಿಸುವೆನು ಕೇಳಿರಿ. ಕಶ್ಯಪ ಮುನಿಗೆ ದನೂದೇವಿಯಲ್ಲಿ ಮಹಾಸುರರು ಹುಟ್ಟಿ, ಮಹಾಶೂರರಾಗಿಯೂ, ಲೋಕಕಂಟಕರಾಗಿಯೂ, ಪ್ರಖ್ಯಾತರಾಗಿಯೂ ಇದ್ದರು

೨. ಅವರಲ್ಲಿ ವಿಪ್ರಚಿತ್ತಿಯೇ ಪ್ರಧಾನರಾದ ನೂರಾರು ದಾನವರು ಮಹಾಶೂರರಾಗಿಯೂ, ಬ್ರಹ್ಮಾದಿ ದೇವತೆಗಳಿಂದ ವರಗಳನ್ನು ಪಡೆದವರಾಗಿಯೂ, ಮಹಾತಪಸ್ವಿಗಳಾಗಿಯೂ ಲೋಕಕಂಟಕರಾಗಿಯೂ ಇರುವರು

೩. ದನೂದೇವಿಯ ಮಕ್ಕಳು ಸತ್ಯಸಂಧರೂ, ಮಹಾಪರಾಕ್ರಮಿಗಳೂ, ಅತಿಕ್ರೂರರೂ, ಮಾಯಾವಾದಿಗಳೂ, ಬಹಾಬಲಿಷ್ಠರೂ, ಯಾಗಬಾಹಿರರೂ, ಬ್ರಾಹ್ಮಘಾತಕರೂ, ದಾನವನಾಮಕರೂ ಆಗಿರುವರು ಆ ದಾನವರಲ್ಲಿ ಮುಖ್ಯರಾದವರನ್ನು ವರ್ಣಿಸುವೆನು ಕೇಳಿರೆಂದನು.

ದ್ವಿಮೂರ್ಧಾ ಶಂಕುವರ್ಣಶ್ಚ ತಥಾ ಶಂಕುನಿರಾಮಯಃ ।
ಶಂಕುಕರ್ಣೋ ಮಹಾವಿಶ್ವೋ ಗವೇಷ್ಠಿರ್ದುಂದುಭಿಸ್ತಥಾ ॥ ೪ ॥

ಅಜಾಮುಖೋಽಥ ಭಗವಾನ್ ಶಿಲೋ ವಾಮನಸಸ್ತಥಾ ।
ಮರೀಚಿರಕ್ಷಕಶ್ಚೈವ ಮಹಾಗಾರ್ಗ್ಯೋಽಂಗಿರಾವೃತಃ ॥ ೫ ॥

ವಿಕ್ಷೋಭ್ಯಶ್ಚ ಸುಕೇತುಶ್ಚ ಸುವೀರ್ಯಃ ಸುಹೃದಸ್ತಥಾ ।
ಇಂದ್ರಜಿದ್ವಿಶ್ವಜಿಚ್ಚೈವ ತಥಾಸುರವಿಮರ್ದನಃ ॥ ೬ ॥

ಏಕಚಕ್ರಃ ಸುಬಾಹುಶ್ಚ ತಾರಕಾಶ್ಚ ಮಹಾಬಲಃ ।
ವೈಶ್ವಾನರಃ ಪುಲೋಮಾ ಚ ಪ್ರವೀಣೋಽಥ ಮಹಾಶಿರಾಃ ॥ ೭ ॥

ಸ್ವರ್ಭಾನುರ್ವೃಷಪರ್ವಾ ಚ ಮುಂಡಕಶ್ಚ ಮಹಾಸುರಃ ।
ಧೃತರಾಷ್ಟ್ರಶ್ಚ ಸೂರ್ಯಶ್ಚ ಚಂದ್ರ ಇಂದ್ರಶ್ಚ ತಾಪಿನಃ ॥ ೮ ॥

ಸೂಕ್ಷ್ಮಶ್ಚೈವ ನಿಚಂದ್ರಶ್ಚ ಊರ್ಣನಾಭೋ ಮಹಾಗಿರಿಃ ।
ಅಸಿಲೋಮಾ ಸುಕೇಶಶ್ಚ ಸದಶ್ಚ ಬಲಕೋ ದಶ ॥ ೯ ॥

---

೪–೭. ಆ ದಾನವರಲ್ಲಿ ಮುಖಂಡರು ಯಾರೆಂದರೆ:— ದ್ವಿಮುಖ, ಶಂಕುಕರ್ಣ,:ಶಂಕುನಿರಾವಯ, ಶಕುವರ್ಣ, ಮಹಾವಿಶ್ವಗವೇಷ್ಟಿ, ದುಂದುಭಿ, ಅಜಾಮುಖ, ಪೂಜ್ಯನಾದ ಶಿಲ, ವಾಮನಸ, ಮರೀಚಿರಕ್ಷಕ, ಮಹಾಗಾರ್ಗ್ಯ, ಅಂಗಿರಾವೃತ, ವಿಕ್ಷೋಭ್ಯ, ಸುಕೇತು, ಸುವೀರ್ಯ, ಸ್ವಹೃದ, ಇಂದ್ರಜಿತ್, ವಿಶ್ವಜಿತ್, ಸುರವಿಮರ್ದನ, ಏಕಚಕ್ರ, ಸುಬಾಹು, ತಾರಕ, ಮಹಾಬಲ, ವೈಶ್ವಾನರ, ಪುಲೋಮ, ಪ್ರಧಾನ, ಪ್ರವೀಣ, ಮಹಾಶಿರಸ ಇವರೇ ಮೊದಲಾದವರು ದನೂದೇವಿಯ ಮುಖ್ಯ ಕುಮಾರರಾಗಿರುವರು.

೮–೧೩. ಮತ್ತು ಸ್ವರ್ಭಾನು, ವೃಷಪರ್ವಣ, ಮುಂಡಕ, ಮಹಾಸುರ, ಧೃತರಾಷ್ಟ್ರ, ಸೂರ್ಯ, ಚಂದ್ರ, ಇಂದ್ರರನ್ನು ತಾಪಗೊಳಿಸುವವರು, ರಾಕ್ಷಸರು, ಸೂಕ್ಷ್ಮ, ನಿಚಂದ್ರ, ಊರ್ಣನಾಭ, ಮಹಾಗಿರಿ, ಅಸಿಲೋಮ, ಸುಕೇಶ, ದಸ, ಬಲಕ,

ತಥಾ ಗಗನಮೂರ್ಧಾ ಚ ಕುಂಭನಾಭಾ ಮಹೋದರಃ ।
ಪ್ರಮೋದಾಹಶ್ಚ ಕುಪಥೋ ಹಯಗ್ರೀವಶ್ಚ ವೀರ್ಯವಾ ॥ ೧೦ ॥

ಅಸುರಶ್ಚ ವಿರೂಪಾಕ್ಷಃ ಸುಪಥೋಽಥ ಮಹಾಸುರಃ ।
ಅಜೋ ಹಿರಣ್ಮಯಶ್ಚೈವ ಶತಮಾಯುಶ್ಚ ಶಂಬರಃ ॥ ೧೧ ॥

ಶರಭಃ ಶಲಭಶ್ಚೈಪ ಸೂರ್ಯಾಚಂದ್ರಮಸಾವುಭೌ ।
ಅಸುರಾಣಾಂ ಸುರಾವೇತೌ ಸುರಾಣಾಂ ಸಾಂಪ್ರತಾವಿಮೌ ॥ ೧೨ ॥

ಇತಿ ಪುತ್ರಾ ದನೋರ್ವಂಶಾಃ ಪ್ರಧಾನಾಃ ಪರಿಕೀರ್ತಿತಾಃ ।
ತೇಷಾಮುಪರಿಸಂಖ್ಯೇಯಂ ಪುತ್ರಪೌತ್ರಾದ್ಯನಂತಕಂ ॥ ೧೩ ॥

ಇತ್ಯೇತೇ ತ್ವಸುರಾಃ ಪ್ರೋಕ್ತಾ ದೈತೇಯಾ ದಾನವಾಶ್ಚ ಯೇ ।
ಸ್ವರ್ಭಾನುಸ್ತು ಸ್ಮೃತೋ ದೈತ್ಯೋ ಹ್ಯನುಭಾನುರ್ದನೋಃ ಸುತಃ ।
ಇಮೇ ತು ವಂಶಾನುಗತಾ ದನೋಃ ಪುತ್ರಾಸ್ತು ಯೇ ಸ್ಮೃತಾಃ ॥ ೧೪ ॥

---

ಗಗನಮೂರ್ಧಾನ, ಕುಂಭನಾಭ, ಮಹೋದರ, ಪ್ರಮೋದಾಹ, ಕುಪಥ, ಶೂರನಾದ ಹಯಗ್ರೀವ, ಅಸುರ, ವಿರೂಪಾಕ್ಷ, ಸುಪಥ, ಮಹಾಸುರ, ಅಜ, ಹಿರಣ್ಮಯ, ಶತಮಾಯು, ಶಂಬರ, ಶರಭ, ಶಲಭ, ಸೂರ್ಯಾಚಂದ್ರಮಸರು, ಇವರು ದನೂದೇವಿಯ ಪ್ರಧಾನಪುರುಷರಾಗಿರುವರು. ಸೂರ್ಯಚಂದ್ರರಿಬ್ಬರೂ ಅಸುರರಿಗೂ ದೇವತೆಗಳಿಗೂ ದೇವತೆಗಳಾಗಿರುವರು (ಮಾನ್ಯರಾಗಿರುವರು). ಇವರ ಪುತ್ರ ಪೌತ್ರಾದಿಗಳು ಅಸಂಖ್ಯಾತರಾಗಿರುವರು

೧೪. ಇವರು ಅಸುರರಾಗಿರುವರು. ಉಳಿದ ದೈತ್ತೇಯರೂ, ದಾನವರೂ ಯಾರಿರುವರೋ ಅವರನ್ನು ಈಗ ನಿರೂಪಿಸುವೆನು ಇವರಲ್ಲಿ ಸ್ವರ್ಭಾನುವು ದೈತ್ಯನಾಗಿರುವನು. ಅನುಭಾನುವು ದನೂದೇವಿಯ ಕುಮಾರನಾಗಿರುವನು. ಇವರು ವಂಶಪರಂಪರೆಯಾಗಿ ಬಂದವರು. ಈ ದನೂದೇವಿಯ ಕುಮಾರರನ್ನು ತಿಳಿಸುವೆನು.

ಏಕಾಕ್ಷ ಋಷಭೋರಿಷ್ಟಃ ಪ್ರಭಂಧನರಕಾವಪಿ ।
ಇಂದ್ರಬಾಧನಕೇಶೀ ಚ ಮೇರುಃ ಶಂಬೋಽಥ ಧೇನುಕಃ ॥ ೧೫ ॥

ಗವೇಷ್ಟಿಶ್ಚ ಗವಾಕ್ಷಶ್ಚ ತಾಲಕೇತುಶ್ಚ ವೀರ್ಯವಾನ್ ।
ಏತೇ ಮನುಷ್ಯಧರ್ಮಾಸ್ತು ದನೋಃ ಪುತ್ರಾ ಮಯಾ ಸ್ಮೃತಾಃ ॥ ೧೬ ॥

ದೈತ್ಯದಾನವಸಂಹರ್ಷೇ ಜಾತಾ ಭೀಮಪರಾಕ್ರಮಾಃ ।
ಸಿಂಹಿಕಾಯಾಮಥೋತ್ಪನ್ನಾ ವಿಪ್ರಚಿತ್ತಿಸುತಾಸ್ತ್ವಮೇ ॥ ೧೭ ॥

ಸೈಂಹಿಕೇಯಾ ಇತಿ ಖ್ಯಾತಾಶ್ಚತುರ್ದಶ ಮಹಾಸುರಾಃ ।
ಶತಗಾಲಶ್ಚ ಬಲವಾನ್ಯಾಸಃ ಶಾಂಬಸ್ತಥೈವ ಚ ॥ ೧೮ ॥

ಅನುಲೋಮಃ ಶುಚಿಶ್ಚೈವ ವಾತಾಪಿಶ್ಚ ಸಿತಾಂಶುಕಃ ।
ಹರಃ ಕಲ್ಪಃ ಕಲಾನಾಭೋ ಭೌಮಶ್ಚ ನರಕಸ್ತಥಾ ॥ ೧೯ ॥

ರಾಹುರ್ಜ್ಯೇಷ್ಠಸ್ತು ತೇಷಾಂ ವೈ ಚಂದ್ರಸೂರ್ಯಪ್ರಮರ್ದನಃ ।
ಇತ್ಯೇತೇ ಸಿಂಹಿಕಾಪುತ್ರಾ ದೇವೈರಪಿ ದುರಾಸದಾಃ ॥ ೨೦ ॥

---

೧೫–೧೬. ಏಕಾಕ್ಷ, ಋಷಭ, ಅರಿಷ್ಠ, ಪ್ರಬಂಧ, ನರಕ, ಇಂದ್ರಬಾಧನ ಕೇಶೀ, ಮೇರು, ಶಂಖ, ಧೇನುಕ, ಗವೇಷ್ಠಿ, ಗವಾಕ್ಷ, ಶೂರನಾದ ತಾಲಕೇತು ಇವರು ಮನುಷ್ಯರಂತೆ ಧರ್ಮವುಳ್ಳ ದನೂದೇವಿಯ ಪುತ್ರರೆಂದು ನಾನು ಪೂರ್ವದಲ್ಲಿ ಕೇಳಿದ್ದೆನು.

೧೭. ದೈತ್ಯದಾನವರ ಸಂತೋಷ ಸಮಯದಲ್ಲಿ ಭಯಂಕರವಾದ ಪರಾಕ್ರಮ ವುಳ್ಳ ವಿಪ್ರಚಿತ್ತಿಯೇ ಮೊದಲಾದವರು ಸಿಂಹಿಕೆಯಲ್ಲಿ ಉದ್ಭವಿಸಿರುವ ಮಕ್ಕಳು ಪ್ರಸಿದ್ಧರಾಗಿರುವರು.

೧೮-೨೦. ಶತಗಾಲ ಬಲವಂತ ಶಾಂಬ ಅನುಲೋಮ ಶುಚಿವಾತಾಪಿ ಸಿತಾಂಶುಕ ಹರ ಕಲ್ಪ ಕಾಲನಾಭ ಭೌಮನರಕ ಚಂದ್ರಸೂರ್ಯಮರ್ದಕನಾದ ರಾಹು ಈ ಚತರ್ದಶ ಮಹಾಸುರರೂ ಸಿಂಹಿಕಾ ಪುತ್ರರಾಗಿರುವರು. ಈ ಸೈಂಹಿಕೇ ಯರು ದೇವತೆಗಳಿಗಿಂತಲೂ ಮಹಾಶೂರರೆಂದು ಪ್ರಖ್ಯಾತರಾಗಿರುವರು, ಇವರನ್ನು ಜಯಿಸಲು ದೇವತೆಗಳಿಗೂ ಸಾಧ್ಯವಿಲ್ಲ.

ದಾರುಣಾಭಿಜನಾಃ ಕ್ರೂರಾಃ ಸರ್ವೇ ಬ್ರಹ್ಮದ್ವಿಷಶ್ಚ ತೇ ।
ದಶಾನ್ಯಾನಿ ಸಹಸ್ರಾಣಿ ಸೈಂಹಿಕೇಯೋ ಗಣಃ ಸ್ಮೃತಃ ॥ ೨೧ ॥

ನಿಹತೋ ಜಾಮದಗ್ನ್ಯೇನ ಭಾರ್ಗವೇಣ ಬಲೀಯಸಾ ।
ಸ್ವರ್ಭಾನೋಸ್ತು ಪ್ರಭಾ ಕನ್ಯಾ ಪುಲೋಮ್ನೋಽಥ ಶುಚೀ ತಥಾ ॥ ೨೨ ॥

ಉಪದಾನವೀ ಯಮಸ್ಯಾಪಿ ಶರ್ಮಿಷ್ಠಾ ವಾರ್ಷಪರ್ವಣೀ ।
ಪುಲೋಮಾ ಕಾಲಿಕಾ ಚೈವ ವೈಶ್ವಾನರಸುತೇ ಉಭೇ ॥ ೨೩ ॥

ಪ್ರಭಾಯಾ ನಹುಷಃ ಪುತ್ರೋ ಜಯಂತಶ್ಚ ಶುಚೀಸುತಃ ।
ಪೂರಂ ಜಜ್ಞೇಽಥ ಶರ್ಮಿಷ್ಠಾ ದುಷ್ಮಂತಮುಪದಾನವೀ ॥ ೨೪ ॥

---

೨೧ ಸಿಂಹಿಕಾ ಪುತ್ರರು ಹತ್ತುಸಹಸ್ರಸಂಖ್ಯಾಕರಾಗಿರುವರು ಅವರೆಲ್ಲರೂ ಕ್ರೂರಿಗಳೂ ದುರ್ವಂಶೀಕರೂ ಬ್ರಹ್ಮದ್ವೇಷಿಗಳೂ ಲೋಕಕಂಟಕರೂ ಆಗಿರುವರು ಅವರವೇ ಒಂದು ಗಣವಿರುವುದು ಇದು ಮಹಾಪ್ರಬಲವಾಗಿದೆ

೨೨–೨೩ ಈ ಸಿಂಹಿಕೆಯ ಮಕ್ಕಳು ಅತಿ ಬಲಶಾಲಿಯೂ ಭೃಗುವಂಶೋತ್ಪನನೂ ಜಮದಗ್ನಿಯ ಕುಮಾರನೂ ಆದ ಪರಶುರಾಮನಿಂದ ಸಂಹೃತರಾದವರು ಅವರಲ್ಲಿ ಸ್ವರ್ಭಾನುವಿಗೆ ಪ್ರಭೆಯೆಂಬ ಕುಮಾರಿಯೂ ಪುಲೋಮನಿಗೆ ಶಚಿಯೆಂಬ ಪುತ್ರಿಯೂ ಯಮನಿಗೆ ಉಪದಾನವಿಯೆಂಬ ತನುಜೆಯೂ ವೃಷಪರ್ವನಿಗೆ ಶರ್ಮಿಷ್ಠೆಯೆಂಬ ಸುತೆಯೂ ವೈಶ್ವಾನರನಿಗೆ ಪುಲೋಮೆ ಕಾಲಿಕೆಯರೆಂಬ ಇಬ್ಬರು ಪುತ್ರಿಯರೂ ಉದ್ಭವಿಸಿದರು.

೨೪. ಆ ಕುಮಾರಿಯರಲ್ಲಿ ಪ್ರಭೆಗೆ ನಹುಷನೆಂಬ ಪುತ್ರನೂ ಶಚೀದೇವಿಗೆ ಜಯಂತನೆಂಬ ಕುಮಾರನೂ ಶರ್ಮಿಷ್ಠೆಗೆ ಪುರುವೆಂಬ ಸುತನೂ, ಉಪದಾನವಿಗೆ ದುಷ್ಯಂತನೆಂಬ ತನುಜನೂ ಜನಿಸಿ ಲೋಕದಲ್ಲಿ ವಿಖ್ಯಾತರೂ ಮಾನ್ಯರೂ ಆಗಿದ್ದರು ಮತ್ತು ಪ್ರಜಾಪಾಲಕರಾಗಿದ್ದರು.

**ವೈಶ್ವಾನರಸುತೇ ಹ್ಯೇತೇ ಪುಲೋಮಾ ಕಾಲಿಕಾ ಉಭೇ ।**
**ಉಭೇ ಹ್ಯಪಿ ತು ತೇ ಕನ್ಯೇ ಮಾರೀಚಸ್ಯ ಪರಿಗ್ರಹೇ ॥ ೨೫ ॥**

**ತಾಭ್ಯಾಂ ಪುತ್ರಸಹಸ್ರಾಣಿ ಷಷ್ಟಿರ್ದಾನವಪುಂಗವಾಃ ।**
**ಚತುರ್ದಶ ತಥಾನ್ಯಾನಿ ಹಿರಣ್ಯಪುರವಾಸಿನಾಂ ॥ ೨೬ ॥**

**ಪೌಲೋಮಾ ಕಾಲಕೇಯಾಶ್ಚ ದಾನವಾಃ ಸುಮಹಾಬಲಾಃ ।**
**ಅವಧ್ಯಾ ದಾರವಾನಾಂ ತೇ ನಿಹತಾಃ ಸವ್ಯಸಾಚಿನಾ ॥ ೨೭ ॥**

**ಮಯಸ್ಯ ಜಾತಾ ಯೇ ಪುತ್ರಾಃ ಸರ್ವೇ ವೀರಪರಾಕ್ರಮಾಃ ।**
**ಮಾಯಾವೀ ದುಂದುಭಿಶ್ಚೈವ ವೃಷಶ್ಚ ಮಹಿಷಸ್ತಥಾ ॥ ೨೮ ॥**

---

೨೫. ವೈಶ್ವಾನರನ ಕುಮಾರಿಯರಾದ ಪುಲೋಮೆ ಕಾಲಿಕೆಯರೆಂಬುವರಿಬ್ಬರೂ ಮಾರೀಚನನ್ನು ವರಿಸಿ ಮದುವೆಯಾದರು. ಇವರಿಬ್ಬರೂ ಮಾರೀಚನ ಪತ್ನಿಯರಾಗಿದ್ದರು.

೨೬. ಆ ಕುಮಾರಿಯರಿಬ್ಬರಿಗೂ ದಾನವರಲ್ಲಿ ಅತ್ಯುತ್ತಮರಾದ ಅರವತ್ತು ಸಾವಿರ ಮಕ್ಕಳು ಜನಿಸಿದರು. ಇದೂ ಅಲ್ಲದೆ ಸುವರ್ಣಪುರವಾಸಿಗಳಾದ ಹದಿನಾಲ್ಕು ಸಹಸ್ರ ಸಂಖ್ಯಾಕರಾದ ಸುಪ್ರಸಿದ್ಧ ಕುಮಾರರು ಉದ್ಭವಿಸಿದ್ದರು.

೨೭. ಮಹಾಬಲಶಾಲಿಗಳೂ, ಪೌಲೋಮರೂ, ಕಾಲಕೇಯರೆಂದು ಪ್ರಖ್ಯಾತರೂ ಆದ ದಾನವರು ದೇವತೆಗಳಿಂದ ಕೊಲ್ಲಲಶಕ್ಯರಾಗಿ, ಅರ್ಜುನನಿಂದ ರಣರಂಗದಲ್ಲಿ ಮೃತಿಯನ್ನು ಪಡೆದರು.

೨೮. ಯಮನ ಮಕ್ಕಳೆಲ್ಲರೂ ಮಹಾ ವೀರರೂ, ಶತ್ರುಸಂಹಾರಕರೂ ಆಗಿರುವರು. ಅವರಲ್ಲಿ ಮಾಯಾವೀ, ದುಂದುಭಿ, ವೃಷ, ಮಹಿಷ, ಬಾಲಕ, ವಜ್ರಕರ್ಣರೆಂಬುವರು ಮಹಾ ವೀರರಾಗಿರುವರು.

ಬಾಲಿಕೋ ವಜ್ರಕರ್ಣಶ್ಚ ಕನ್ಯಾ ಮಂದೋದರೀ ತಥಾ ।
ದೈತ್ಯಾನಾಂ ದಾನವಾನಾಂ ಚ ಸರ್ಗ ಏಷ ಪ್ರಕೀರ್ತಿತಃ || ೨೯ ||

ದನಾಯುಷಾಯಾಃ ಪುತ್ರಾಸ್ತು ಸ್ಮೃತಾಃ ಪಂಚ ಮಹಾಬಲಾಃ ।
ಆರೂರುರ್ಬಲಿಜಂಬೌ ಚ ವಿರಕ್ಷಶ್ಚ ವಿಷಸ್ತಥಾ || ೩೦ ||

ಅರುರೋಸ್ತನಯಃ ಕ್ರೂರೋ ದುಂದುರ್ನಾಮ ಮಹಾಸುರಃ ।
ನಿಹತಃ ಕುವಲಾಶ್ವೇನ ಉತ್ತಂಕವಚನಾತ್ ಕಿಲ || ೩೧ ||

ಬಲೇಃ ಪುತ್ರೌ ಮಹಾವೀರ್ಯೌ ತೇಜಸಾಽಪ್ರತಿಮಾವುಭೌ ।
ಕುಬಿಲಶ್ಚಕ್ರವರ್ಮಾ ಚ ಸ ಕರ್ಣಃ ಪೂರ್ವಜನ್ಮನಿ || ೩೨ ||

ವಿರಕ್ಷಸ್ಯಾಪಿ ಪುತ್ರೌ ದ್ವೌ ಕಾಲಕಶ್ಚ ವರಶ್ಚ ತೌ ।
ವಿಷಸ್ಯ ತ್ವಭರ್ವ ಪುತ್ರಾಶ್ಚತ್ವಾರಃ ಕ್ರೂರಕರ್ಮಣಃ ||
ಶ್ರಾದ್ಧಹಾ ಯಜ್ಞಹಾ ಚೈವ ಬ್ರಹ್ಮಹಾ ಪಶುಹಾ ತಥಾ || ೩೩ ||

---

೨೯-೩೦. ಮಂದೋಪರಿಯೆಂಬ ಒಬ್ಬ ಸುಂದರಿಯಾದ ಕುಮಾರಿಯೂ ಇರುವಳು ಹೀಗೆ ದೈತ್ಯದಾನವರ ಸೃಷ್ಟಿಕ್ರಮವನ್ನು ತಿಳಿಸಿರುವೆನು. ಈಗ ದನೂದೇವಿಯ ಪುತ್ರರ ವಿಷಯವನ್ನು ತಿಳಿಸುವೆನು ಅವರು ಐದುಜನಗಳಿರುವರು. ಮತ್ತು ಅತಿ ಬಲಿಷ್ಠರು. ಅರೂರು, ಬಲಿ, ಜಂಭ, ವಿರಕ್ಷ, ವಿಷರೆಂಬ ಈ ಐವರು ಪ್ರಸಿದ್ಧ ಪುರುಷರಾಗಿರುವರು

೩೧. ಆ ಐದು ಜನರಲ್ಲಿ ಅರಾರುವಿಗೆ ಅತಿಕ್ರೂರನೂ ಮಹಾಸುರನೂ ಆದ ದುಂಧುವೆಂಬ ಕುಮಾರನು ಜನಿಸಿದನು. ಅವನು ಉತ್ತಂಕಮುನಿಯ ಶಾಪದಿಂದ ಕುವಲಾಶ್ವನೆಂಬುವನಿಂದ ಕೊಲ್ಲಲ್ಪಟ್ಟನು

೩೨. ಬಲಿಯ ಪುತ್ರರು ಮಹಾ ವೀರ್ಯವಂತರೂ, ತೇಜಸ್ಸಿನಿಂದ ಅಸದೃಶರೂ ಆಗಿದ್ದರು. ಅಂತಹ ಕುಭಿಲ, ಚಕ್ರವರ್ಮರೆಂಬ ಇಬ್ಬರು ಪುತ್ರರೂ ಜನಿಸಿದರು. ಒಬ್ಬನು ಪೂರ್ವಜನ್ಮದಲ್ಲಿ ಕರ್ಣನಾಗಿದ್ದನು.

೩೩. ಅವರಲ್ಲಿ ವಿರಕ್ಷನಿಗೂ ಕೂಡ ಕಾಲಕ, ವರ ಎಂಬ ಇಬ್ಬರು ಮಕ್ಕಳು ಇದ್ದರು. ವಿಷನೆಂಬುವನಿಗೂ ಕೂಡ ಶ್ರಾದ್ಧಘಾತುಕ, ಯಜ್ಞಘಾತುಕ, ಬ್ರಹ್ಮಘಾತುಕ, ಪಶುಘಾತುಕರೆಂಬ ಕ್ರೂರಕರ್ಮಿಗಳಾದ ನಾಲ್ಕುಜನ ಲೋಕಕಂಟಕರಾದ ಮಕ್ಕಳಿದ್ದರು.

ಕ್ರಾಂತಾ ದನಾಯುಷಾಪುತ್ರಾ ವೃತ್ರಸ್ಯಾಪಿ ನಿಬೋಧತ ।
ಜಜ್ಞಿರೇ ಶ್ವಸನಾದ್ಘೋರಾದ್ವೃತ್ರಸ್ಯೇಂದ್ರೇಣ ಯುಧ್ಯತಃ ॥ ೩೪ ॥

ಭರ್ತಾರೋ ಮನಸಾ ಖ್ಯಾತಾ ರಾಕ್ಷಸಾ ಸುಮಹಾಬಲಾಃ ।
ಶತಂತಾನಿ ಸಹಸ್ರಾಣಿ ಮಹೇಂದ್ರಾನುಚರಾಃ ಸ್ಮೃತಾಃ ॥ ೩೫ ॥

ಸರ್ವೇ ಬ್ರಹ್ಮವಿದಃ ಸೌಮ್ಯಾ ಧಾರ್ಮಿಕಾಃ ಸೂಕ್ಷ್ಮಮೂರ್ತಯಃ ।
ಪ್ರಜಾಸ್ವಂತರ್ಗತಾಃ ಸರ್ವೇ ನಿವಸಂತಿ ಸುಧಾರ್ಮಿಕಾಃ ॥ ೩೬ ॥

ದೈತ್ಯಾನಾಂ ದಾನವಾನಾಂ ಚ ಸರ್ಗ ಏಷ ಪ್ರಕೀರ್ತಿತಃ ।
ಪ್ರವಾಹ್ಯಜನಯತ್ ಪುತ್ರಾನ್ ಯಜ್ಞೇ ವೈ ಗಾಯನೋತ್ತಮಾನ್॥ ೩೭ ॥

---

೩೪. ಹೀಗೆ ದನಾಯುಷಳ ಪುತ್ರರು ಲೋಕದಲ್ಲಿ ಎಲ್ಲೆಲ್ಲಿಯೂ ವ್ಯಾಪ್ತರಾಗಿದ್ದರು ಈಗ ವೃತ್ರಾಸುರನ ವಿಷಯವನ್ನು ಹೇಳುವೆನು ಕೇಳಿರೆಂದನು. ಪೂರ್ವದಲ್ಲಿ ವೃತ್ರಾಸುರನು ಇಂದ್ರನ ಸಂಗಡ ಘೋರವಾಗಿ ಯುದ್ಧವನ್ನು ಮಾಡಲಾಗಿ ಭಯಂಕರವಾಗಿ ಉಸಿರನ್ನು ಬಿಟ್ಟನು. ಆಗ ಅನೇಕರು ಉದ್ಭವಿಸಿದರು.

೩೫. ಹೀಗೆ ಮನಸ್ಸಿನಿಂದ ಜನ್ಯರಾದ ಆ ರಾಕ್ಷಸರು ಯಜಮಾನರಾಗಿಯೂ, ಪ್ರಖ್ಯಾತರಾಗಿಯೂ, ಲಕ್ಷ್ಯಸಂಖ್ಯಾಕರಾಗಿಯೂ, ಮಹೇಂದ್ರನ ಭೃತ್ಯರಾಗಿಯೂ ಇದ್ದರು.

೩೬ ಅವರೆಲ್ಲರೂ ಬ್ರಹ್ಮಜ್ಞಾನಿಗಳೂ, ಶಾಂತಮೂರ್ತಿಗಳೂ, ಧಾರ್ಮಿಕರೂ, ಸೂಕ್ಷ್ಮದರ್ಶಿಗಳೂ, ಅತ್ಯಂತ ಧರ್ಮಮೂರ್ತಿಗಳೂ ಆಗಿ, ಪ್ರಜೆಗಳೊಡನೆ ಬೆರತು ಅವರ ಸಂಗಡ ವಾಸಮಾಡುತ್ತಿದ್ದರು.

೩೭. ಓ ಮುನಿವರ್ಯರೇ, ನಿಮಗಾಗಿ ದೈತ್ಯ ದಾನವರ ಸೃಷ್ಟಿಕ್ರಮವನ್ನು ವಿಸ್ತಾರವಾಗಿ ನಿರೂಪಿಸಿರುವೆನು. ಅವರಲ್ಲಿ ಪ್ರವಾಹಿಯು ಯಾಗದಲ್ಲಿ ಗಾನಶೀಲರಾದ ಉತ್ತಮ ಪುತ್ರರನ್ನು ಪಡೆದಳು.

ಸತ್ವನಃ ಸತ್ವಾತ್ಮಕಶ್ಚೈವ ಕಲಾಪಶ್ಚೈವ ವೀರ್ಯವಾನ್ ।
ಕೃತವೀರ್ಯೋ ಬ್ರಹ್ಮಚಾರೀ ಸುಪಾಂಡುಶ್ಚೈವ ಸಪ್ತಮಃ ॥ ೩೮ ॥

ಪನಶ್ಚೈವ ತರಣ್ಯಶ್ಚ ಸುಚಂದ್ರೋ ದಶಮಸ್ತಥಾ ।
ಇತ್ಯೇತೇ ದೇವಗಂಧರ್ವಾ ವಿಜ್ಞೇಯಾಃ ಪರಿಕೀರ್ತಿತಾಃ ॥ ೩೯ ॥

ಇತಿ ಶ್ರೀ ಮಹಾಪುರಾಣೇ ವಾಯುಪ್ರೋಕ್ತೇ " ಕಶ್ಯಪೀಯ
ಪ್ರಜಾಸರ್ಗೋ " ನಾಮ ಸಪ್ತಮೋಽಧ್ಯಾಯಃ

---

೩೮–೩೯. ಯಜ್ಞದಲ್ಲಿ ಗಾಯಕರಾದ ಅವರು ಯಾರೆಂದರೆ:— ಸತ್ವನ, ಸತ್ವಾತ್ಮಕ, ಕಲಾಪ, ವೀರ್ಯವಂತ, ಕೃತವೀರ್ಯ, ಬ್ರಹ್ಮಚಾರೀ, ಸುಪಾಂಡು, ಪನ, ತರಣ್ಯ ಮತ್ತು ಸುಚಂದ್ರರೆಂಬ ಈ ಹತ್ತು ಜನರೂ ದೇವಗಂಧರ್ವರೆಂದು ಲೋಕದಲ್ಲಿ ಪ್ರಖ್ಯಾತರಾಗಿರುವರು.

ಹೀಗೆ ವಾಯುಪ್ರೋಕ್ತವಾದ ಮಹಾಪುರಾಣದಲ್ಲಿ " ಕಶ್ಯಪಮುನಿಯ ಪ್ರಜಾಸೃಷ್ಟಿ " ಯೆಂಬ ಏಳನೆಯ ಅಧ್ಯಾಯವು ಸಮಾಪ್ತವಾದುದು.



## ಏಳನೆಯ ಅಧ್ಯಾಯದ ಸಾರಾಂಶವು

ಈ ಅಧ್ಯಾಯದಲ್ಲಿ ದೈತ್ಯದಾನವರ ಸೃಷ್ಟಿ ವಿಷಯವು ಉಕ್ತವಾಗಿದೆ. ದನೂ ದೇವಿಗೆ ಅತಿಪರಾಕ್ರಮಿಗಳೂ, ಕ್ರೂರರೂ, ಮಾಯಾವಿಗಳೂ, ಬ್ರಹ್ಮಘಾತುಕರೂ ಆದ ದ್ವಿಮುಖ ಶಂಕುಕರ್ಣನೇ ಮೊದಲಾದ ಅಸಂಖ್ಯಾಕರಾದ ದಾನವರು ಉದ್ಭವಿಸಿದರು. ಅವರ ಪುತ್ರ ಪೌತ್ರಾದಿಗಳೂ ಕೂಡ ಅಸಂಖ್ಯಾತರಾಗಿದ್ದರು. ಆ ವಂಶದಲ್ಲಿ ಸಿಂಹಿಕೆಯೆಂಬ ರಾಕ್ಷಸಿಯೂ ಅವಳಿಗೆ ಶತಗಾಲನೇ ಮೊದಲಾದ ಹದಿನಾಲ್ಕು ಜನ ಮಕ್ಕಳೂ ಜನಿಸಿದರು. ಸೂರ್ಯಚಂದ್ರ ಹಿಂಸಕರಾದ ರಾಹುವೂ ಹುಟ್ಟಿದನು. ಸೈಂಹಿಕೇಯರು ಹತ್ತುಸಾವಿರ ಜನರಿದ್ದರು. ಇವರೆಲ್ಲರನ್ನೂ ಪರಶುರಾಮನು ಸಂಹರಿಸಿದನು. ಸ್ವರ್ಭಾನುವಿಗೆ ಪ್ರಭಾ ಶಚೀದೇವಿಯೇ ಮೊದಲಾದ ಮಕ್ಕಳೂ ಅವರಿಗೆ ದುಷ್ಯಂತ ಜಯಂತನೇ ಮೊದಲಾದವರೂ, ಹತ್ತುಸಾವಿರ ದಾನವರೂ ಉದ್ಭವಿಸಿದರು. ಅವರ ವಂಶದಲ್ಲಿ ವೃತ್ರಾಸುರನೇ ಮೊದಲಾದವರು ಹುಟ್ಟಿದರು. ಅವನು ಇಂದ್ರನ ಸಂಗಡ ಯುದ್ಧಮಾಡಿ ಮೃತನಾದನು. ಅವನ ನಿಶ್ವಾಸದಿಂದ ಇಂದ್ರಾನುಚರರೂ, ಬ್ರಹ್ಮಜ್ಞಾನಿಗಳೂ, ಸೌಮ್ಯರೂ, ಧಾರ್ಮಿಕರೂ ಆದ ಅನೇಕ ದಾನವರು ಉದ್ಭವಿಸಿದರು. ಹೀಗೆ ದೈತ್ಯದಾನವರ ಸೃಷ್ಟಿಕ್ರಮವು ವರ್ಣಿತವಾಗಿದೆ.



—॥ ಹರಿಃ ಓಂ ॥—

—ಶ್ರೀ ಗಣೇಶಾಯ ನಮಃ—

# ಶ್ರೀಮದ್ವಾಯು ಮಹಾಪುರಾಣಂ

## ಅಷ್ಟಮೋಽಧ್ಯಾಯಃ

**॥ ಸೂತ ಉವಾಚ ॥**

**ಗಂಧರ್ವಾಪ್ಸರಸಃ ಪುಣ್ಯಾ ಮೌನೇಯಾಃ ಪರಿಕೀರ್ತಿತಾಃ ।**
**ಚಿತ್ರಸೇನೋಗ್ರಸೇನಶ್ಚ ಊರ್ಣಾಯುರನಘಸ್ತಥಾ ॥ ೧ ॥**

**ಧೃತರಾಷ್ಟ್ರಃ ಪುಲೋಮಾ ಚ ಸೂರ್ಯವರ್ಚಾಸ್ತಥೈವ ಚ ।**
**ಯುಗಪತ್ತೃಣಪತ್ಕಾಲಿರ್ದಿತಿಶ್ಚಿತ್ರರಥಸ್ತಥಾ ॥ ೨ ॥**

**ತ್ರಯೋದಶೋ ಭ್ರಮಿಶಿರಾಃ ಪರ್ಜನ್ಯಶ್ಚ ಚತುರ್ದಶ ।**
**ಕಲಿಃ ಪಂಚದಶಶ್ಚೈವ ನಾರದಶ್ಚೈವ ಷೋಡಶಃ ॥**
**ಇತ್ಯೇತೇ ದೇವಗಂಧರ್ವಾ ಮೌನೇಯಾಃ ಪರಿಕೀರ್ತಿತಾಃ ॥ ೩ ॥**

---

## ಎಂಟನೆಯ ಅಧ್ಯಾಯವು ಪ್ರಾರಂಭವು

೧–೩. ಸೂತಮುನಿಯು ಹೇಳಿದನು :—ಮುನಿಯಕುಮಾರರಾದ ಗಂಧರ್ವರೂ ಮತ್ತು ಅಪ್ಸರಸಿಯರೂ, ಮಂಗಳಪ್ರದರೂ, ಲೋಕವಿಖ್ಯಾತರೂ ಆಗಿರುವರು. ಆ ಮುನಿಯ ಕುಮಾರರಲ್ಲಿ ಪ್ರಖ್ಯಾತರಾದವರು ಉಗ್ರಸೇನ, ಚಿತ್ರಸೇನ, ಊರ್ಣಾಯು ನಿರ್ದೋಷಿಯಾದ ಧೃತರಾಷ್ಟ್ರ. ಪುಲೋಮಾನ, ಸೂರ್ಯವರ್ಚಸ, ಯುಗಪತ್, ತೃಣವತ್, ಕಾಲ, ದಿತಿ, ಚಿತ್ರರಥ, ಭ್ರಮಿಶಿರ, ಪರ್ಜನ್ಯ, ಕಲಿ ಮತ್ತು ನಾರದ ಇವರು, ಇವರೆಲ್ಲರೂ ದೇವಗಂಧರ್ವರೆಂದು ಪ್ರಖ್ಯಾತರಾಗಿರುವರು.

ಚತುಸ್ತ್ರಿಂಶದ್ಯವೀಯಸ್ಯಸ್ತೇಷಾಮಪ್ಸರಸಃ ಶುಭಾಃ ।
ಅಂತರಾ ದಾರವಿತ್ಯಾ ಚ ಪ್ರಿಯಮುಖ್ಯಾ ಸುರೋತ್ತಮಾ ॥ ೪ ॥

ಮಿಶ್ರಕೇಶೀ ತಥಾಶಾಚೀ ಪರ್ಣಿನೀ ವಾಪ್ಯಲಂಬುಷಾ ।
ಮಾರೀಚೀ ಪುತ್ರಿಕಾ ಚೈವ ವಿದ್ಯುದ್ವರ್ಣಾ ತಿಲೋತ್ತಮಾ ॥ ೫ ॥

ಅದ್ರಿಕಾ ಲಕ್ಷಣಾ ಚೈವ ದೇವೀ ರಂಭಾ ಮನೋರಮಾ ।
ಸುವರಾ ಚ ಸುಬಾಹುಶ್ಚ ಪೂರ್ಣಿತಾ ಸುಪ್ರತಿಷ್ಠಿತಾ ॥ ೬ ॥

ಪುಂಡರೀಕಾ ಸುಗಂಧಾ ಚ ಸುದಂತಾ ಸುರಸಾ ತಥಾ ।
ಹೇಮಸಾರಾ ಸುತೀ ಚೈವ ಸುವೃತ್ತಾ ಕಮಲಾ ಚ ಯಾ ॥ ೭ ॥

ಸುಭುಜಾ ಹಂಸಪಾದಾ ಚ ಲೌಕಿಕ್ಯೋಽಪ್ಸರಸಸ್ತಥಾ ।
ಗಂಧರ್ವಾಪ್ಸರಸೋ ಹ್ಯೇತಾ ಮೌನೇಯಾಃ ಪರಿಕೀರ್ತಿತಾಃ ॥ ೮ ॥

ಗಂಧರ್ವಾಣಾಂ ದುಹಿತರೋ ಮಯಾ ಯಾಃ ಪರಿಕೀರ್ತಿತಾಃ ।
ತಾಸಾಂ ನಾಮಾನಿ ಸರ್ವಾಸಾಂ ಕೀರ್ತ್ಯಮಾನಾನಿ ಮೇ ಶೃಣು ॥ ೯ ॥

---

೪–೮. ಇವರಿಗೆ ಸಹೋದರಿಯರಾದ ಅಪ್ಸರಸಿಯರು, ಮಂಗಳಾಂಗಿಯರೂ, ಸುಂದರಿಯರೂ, ಸುಪ್ರಸಿದ್ಧರೂ ಆಗಿರುವರು. ಅಂತರಾ, ದಾರವತ್ಯಾ, ಪ್ರಿಯಮುಖ್ಯಾ, ಸುರೋತ್ತಮಾ, ಮಿಶ್ರಕೇಶೀ, ಶಾಚೀ, ಪರ್ಣಿನೀ, ಅಲಂಬುಷಾ, ಮಾರೀಚೀ ಪುತ್ರಿಕಾ, ವಿದ್ಯುದ್ವರ್ಣಾ, ತಿಲೋತ್ತಮಾ, ಅದ್ರಿಕಾ, ಲಕ್ಷಣಾದೇವಿಯಾದ ರಂಭಾ, ಮನೋರಮಾ, ಸುವರಾ, ಸುಬಾಹು, ಪೂರ್ಣಿತಾ, ಸುಪ್ರತಿಷ್ಠಿತಾ, ಪುಂಡರೀಕಾ, ಸುಗಂಧಾ, ಸುದಂತಾ, ಸುರಸಾ, ಹೇಮಸಾರಾ, ಸತೀ, ಸುವೃತ್ತಾ, ಕಮಲಾ, ಸುಭುಜಾ, ಹಂಸಪಾದಾ, ಲೌಕಿಕಾಪ್ಸರಸಿಯರು ಕೆಲವರು ಇವರು ಗಂಧರ್ವಾಪ್ಸರ, ಸಿಯರೆಂದು ಪ್ರಖ್ಯಾತರಾಗಿರುವರು. ಇವರೆಲ್ಲರೂ ಮುನಿಯ ಪುತ್ರಿಯರಾಗಿಯೂ, ಲೋಕಮಾನ್ಯರಾಗಿಯೂ ಇರುವರು.

೯. ಎಲೈ ಮುನಿವರ್ಯರೇ, ನಾನು ನಿಮಗಾಗಿ ಯಾವ ಗಂಧರ್ವ ಕುಮಾರಿಯರನ್ನು ನಿರೂಪಿಸಿದ್ದೇನೆಯೋ ಅವರ ವಿಷಯಗಳನ್ನೂ, ಅವರೆಲ್ಲರ ನಾಮಗಳನ್ನೂ ನಿರೂಪಿಸುವೆನು ಕೇಳಿರೆಂದು ಹೇಳಿದನು.

ಸುಯಶಾ ಪ್ರಥಮಾ ತಾಸಾಂ ಗಾಂಧರ್ವೀ ತದನಂತರಂ ।
ವಿದ್ಯಾವತೀ ಚಾರುಮುಖೀ ಸುಮುಖೀ ಚ ವರಾನನಾ ॥ ೧೦ ॥

ತತ್ರ ಮೇ ಸುಯಶಾಪುತ್ರಾ ಮಹಾಬಲಪರಾಕ್ರಮಾಃ ।
ಪ್ರಚೇತಸಃ ಸುತಾ ಯಕ್ಷಾಸ್ತೇಷಾಂ ನಾಮಾನಿ ಮೇ ಶೃಣು ॥ ೧೧ ॥

ಕಂಬಲೋ ಹರಿಕೇಶಶ್ಚ ಕಪಿಲಃ ಕಾಂಚನಸ್ತಥಾ ।
ಮೇಘಮಾಲೀ ತು ಯಕ್ಷಾಣಾಂ ಗಣ ಏಷ ಉದಾಹೃತಃ ॥ ೧೨ ॥

ಸುಯಶಾಯಾ ದುಹಿತರಶ್ಚತಸ್ರೋಽಪ್ಸರಸಃ ಸ್ಮೃತಾಃ ।
ತಾಸಾಂ ನಾಮಾನಿ ವೈ ಸಂಯಗ್ ಬ್ರುವತೋ ಮೇ ನಿಬೋಧತ ॥ ೧೩ ॥

---

೧೦. ಆ ಗಂಧರ್ವ ಕುಮಾರಿಯರಲ್ಲಿ ಸುಯಶಾ ಎಂಬ ಕುಮಾರಿಯು ಮೊದಲು ಜನಿಸಿದಳು ತರುವಾಯ ಗಾಂಧರ್ವಿಯು ಉದ್ಭವಿಸಿದಳು. ಅನಂತರ ವಿದ್ಯಾವತೀ, ಚಾರುಮುಖೀ, ಸುಮುಖೀ, ವರಾನನೆಯೆಂಬ ಪುತ್ರಿಯರು ಅವತರಿಸಿರುವರು

೧೧. ಅವರಲ್ಲಿ ಸುಯಶಾದೇವಿಯ ಪುತ್ರರಾದ ಇವರು ಮಹಾ ಬಲಶಾಲಿಗಳೂ, ಅತ್ಯಂತ ಶೂರರೂ ಆಗಿರುವರು ಪ್ರಚೇತಸನಿಗೆ ಯಕ್ಷರು ಪುತ್ರರಾಗಿ ಉದ್ಭವಿಸಿದರು. ಅವರ ನಾಮಧೇಯಗಳನ್ನು ಕ್ರಮವಾಗಿ ವಿವರಿಸುವೆನು ಸಾವಧಾನದಿಂದ ಕೇಳಿರೆಂದನು

೧೨. ಕಂಬಲ, ಹರಿಕೇಶ, ಕಪಿಲ, ಕಾಂಚನ ಮತ್ತು ಮೇಘಮಾಲಿಯೆಂಬುವರು ಯಕ್ಷರಾಗಿರುವರು. ಇವರ ಗಣಗಳೇ ಪ್ರತ್ಯೇಕ ಪ್ರತ್ಯೇಕವಾಗಿರುವುವು. ಮತ್ತು ಪ್ರಸಿದ್ಧವಾಗಿಯೂ ಇರುವುವು.

೧೩. ಸುಯಶಾ ಎಂಬುವಳಿಗೆ ನಾಲ್ಕುಜನ ಕುಮಾರಿಯರಿರುವರು. ಅವರು ಅಪ್ಸರಸಿಯರೆಂದು ಪ್ರಖ್ಯಾತರಾಗಿರುವರು ಅವರ ನಾಮುಗಳನ್ನು ವಿಶದವಾಗಿಯೂ, ಕ್ರಮವಾಗಿಯೂ ನಿರೂಪಿಸುವೆನು ಕೇಳಿರೆಂದನು.

ಲೋಹೇಯಿಾ ತ್ವಭವಜ್ಜ್ಯೇಷ್ಠಾ ಭರತಾ ತದನಂತರಂ ।
ಕೃಶಾಂಗೀ ಚ ವಿಶಾಲಾ ಚ ರೂಪೇಣಾಪ್ರತಿಮಾ ತಥಾ ॥ ೧೪ ॥

ತಾಭ್ಯೋಽಪರೇ ಯಕ್ಷಗಣಾಶ್ಚತ್ವಾರಃ ಪರಿಕೀರ್ತಿತಾಃ ।
ಉತ್ಪಾದಿತಾ ವಿಶಾಲೇನ ವಿಕ್ರಾಂತೇನ ಮಹಾತ್ಮನಾ ॥ ೧೫ ॥

ಲೋಹೇಯೋ ಭರತೇಯಶ್ಚ ಕೃಶಾಂಗೇಯಶ್ಚ ವಿಶ್ರುತಃ ।
ವಿಶಾಲೇಯಶ್ಚ ಯಕ್ಷಾಣಾಂ ಪುರಾಣೇ ಪ್ರಥಿತಾ ಗಣಾಃ ॥ ೧೬ ॥

ಇತ್ಯೇತೈರಸುರೈರ್ಘೋರೈರ್ಮಹಾಬಲಪರಾಕ್ರಮೈಃ ।
ಲೋಕೈರ್ಯಕ್ಷಗಣೈರ್ವ್ಯಾಪ್ತಾ ಲೋಕಾಲೋಕವಿದಾಂ ವರಾಃ ॥ ೧೭ ॥

---

೧೪. ಆ ನಾಲ್ಕು ಅಪ್ಸರಸಿಯಲ್ಲಿ ಲೋಹೇಯಿಾ ಎಂಬುವಳು ಜ್ಯೇಷ್ಠಳಾಗಿರುವಳು. ಅವಳ ನಂತರ ಭರತಾ ಎಂಬುವಳು ಜನಿಸಿದಳು. ಅವಳ ತರುವಾಯ ಕೃಶಾಂಗೀ, ವಿಶಾಲಾ ಎಂಬ ಇಬ್ಬರು ನಾರೀಮಣಿಗಳು ಸೌಂದರ್ಯದಿಂದ ಅಸದೃಶರಾಗಿದ್ದರು.

೧೫. ಅವರಿಗಿಂತಲೂ ಭಿನ್ನರಾದ ಯಕ್ಷರ ನಾಲ್ಕು ಗಣಗಳು ವಿಖ್ಯಾತವಾಗಿದ್ದುವು. ವಿಶಾಲಹೃದಯರೂ ಮಹಾಪರಾಕ್ರಮಿಗಳೂ ಆದ ಮಹಾತ್ಮರಿಂದ ಆ ಗಣಗಳು ಏರ್ಪಟ್ಟವುಗಳಾಗಿವೆ.

೧೬. ಅವರು ಲೋಹೇಯರು, ಭರತೇಯರು, ಕೃಶಾಂಗೇಯರು, ವಿಶಾಲೆಯರೆಂದು ಪ್ರಸಿದ್ಧರಾಗಿರುವರು. ಯಕ್ಷರ ಈ ನಾಲ್ಕು ಗಣಗಳು ಪುರಾಣವಲ್ಲಿಯೂ ವರ್ಣಿತವಾಗಿವೆ.

೧೭. ಅತಿ ಶೂರರೂ, ಮಹಾ ಬಲಿಷ್ಠರೂ, ಅತಿ ಭಯಂಕರರೂ ಆದ ಅಸುರರೂ, ಯಕ್ಷರೂ ಆದ ಇವರ ಗಣಗಳಿಂದ ಮೂರು ಲೋಕಗಳೂ ವ್ಯಾಪ್ತವಾಗಿವೆಯೆಂದು ಲೋಕವ್ಯವಹಾರವನ್ನು ತಿಳಿದ ಮಹಾತ್ಮರು ಹೇಳುವರು.

ಗಂಧರ್ವಾಶ್ಚಾಥ ಪಾಲೇಯಾ ವಿಕ್ರಾಂತೇನ ಮಹಾತ್ಮನಾ ।
ಉತ್ಪಾದಿತಾ ಮಹಾವೀರ್ಯಾ ಮಹಾಗಂಧರ್ವನಾಯಕಾಃ ॥ ೧೮ ॥

ವಿಕ್ರಮೌದಾರ್ಯಸಂಪನ್ನಾ ಮಹಾಬಲಪರಾಕ್ರಮಾಃ ।
ತೇಷಾಂ ನಾಮಾನಿ ವಕ್ಷ್ಯಾಮಿ ಯಥಾವದನುಪೂರ್ವಶಃ ॥ ೧೯ ॥

ಚಿತ್ರಾಂಗದೋ ಮಹಾವೀರ್ಯಶ್ಚಿತ್ರವರ್ಮಾ ತಥೈವ ಚ ।
ಚಿತ್ರಕೇತುರ್ಮಹಾಭಾಗಾ ಸೋಮದತ್ತೋಽಥ ವೀರ್ಯವಾ ॥
ತಿಸ್ರೋದುಹಿತರಶ್ಚೈವ ತಾಸಾಂ ನಾಮಾನಿ ವಕ್ಷ್ಯತೇ ॥ ೨೦ ॥

ಪ್ರಥಮಾ ತ್ವಗ್ನಿಕಾ ನಾಮ ಕಂಬಲಾ ತದನಂತರಂ ।
ತಥಾ ವಸುಮತೀ ನಾಮ ರೂಪೇಣಾಪ್ರತಿಮೌಜಸಃ ॥ ೨೧ ॥

---

೧೮. ಪಾಲೇಯನಾಮಕರಾದ ಗಂಧರ್ವರು ಮಹಾ ಶೂರರೂ ಮಹಾತ್ಮರೂ ಆಗಿರುವರು. ಈ ಗಂಧರ್ವರ ನಾಯಕರೂ ಕೂಡ ಮಹಾ ಶೂರರೂ, ಅತ್ಯಂತ ವಿಕ್ರಾಂತರೂ, ಲೋಕಮಾನ್ಯರೂ, ಸುಪ್ರಸಿದ್ಧರೂ ಆಗಿರುವರು.

೧೯. ಆ ಗಂಧರ್ವನಾಯಕರು ವಿಕ್ರಮ, ಔದಾರ್ಯ, ಮಹಾಬಲ ಮತ್ತು ಪರಾಕ್ರಮ ಇವುಗಳಿಂದ ಸಂಪನ್ನರಾಗಿರುವರು ಅವರ ನಾಮಧೇಯಗಳನ್ನು ಕ್ರಮವಾಗಿಯೂ, ಯಥಾಸ್ಥಿತವಾಗಿಯೂ ನಿರೂಪಿಸುವೆನು ಕೇಳಿರೆಂದನು.

೨೦. ಆ ಗಂಧರ್ವನಾಯಕರಲ್ಲಿ ಮಹಾ ಶೂರನಾದ ಚಿತ್ರಾಂಗದನೂ, ಅತ್ಯಂತ ಶೂರನಾದ ಚಿತ್ರವರ್ಮನೂ, ಮಹಾನುಭಾವನಾದ ಚಿತ್ರಕೇತುವೂ, ಮಹಾ ಪರಾಕ್ರಮಿಯಾದ ಸೋಮದತ್ತನೂ ಲೋಕದಲ್ಲಿ ಸುಪ್ರಸಿದ್ಧರಾಗಿರುವರು. ಅವರಿಗೆ ಮೂವರು ಕುಮಾರಿಯರಿರುವರು. ಅವರ ನಾಮಗಳನ್ನು ಕ್ರಮವಾಗಿ ತಿಳಿಸುವೆನು ಕೇಳಿರಿ.

೨೧. ಅವರಲ್ಲಿ ಹಿರಿಯಳು ಅಗ್ನಿಕೆ ಎಂಬುವಳು ಎರಡನೆಯವಳು ಕಂಬಲೆಯು ಮೂರನೆಯವಳು ವಸುಮತಿಯು ಇವರು ಮೂವರೂ ರೂಪದಲ್ಲಿ ರತಿಗೆ ಸಮಾನರೂ ಅತಿ ಸುಂದರಿಯರೂ ಆಗಿದ್ದರು.

ತಾಭ್ಯಃ ಪರೇ ಕುಮಾರೇಣ ಗಣಾ ಉತ್ಪಾದಿತಾಸ್ತ್ವಿವೇ ।
ತ್ರಯೋ ಗಂಧರ್ವಮುಖ್ಯಾನಾಂ ವಿಕ್ರಾಂತಾ ಯುದ್ಧದುರ್ಮದಾಃ ॥ ೨೨ ॥

ಆಗ್ನೇಯಾಃ ಕಾಂಬಲೇಯಾಶ್ಚ ತಥಾ ವಸುವತೀಸುತಾಃ ।
ತೈರ್ಗಣೈರ್ವಿವಿಧೈರ್ವ್ಯಾಪ್ತಮಿದಂ ಲೋಕಚರಾಚರಂ ॥ ೨೩ ॥

ವಿದ್ಯಾವಂತಶ್ಚ ತೇನೈವ ವಿಕ್ರಾಂತೇನ ಮಹಾತ್ಮನಾ ।
ಉತ್ಪಾದಿತಾ ಮಹಾಭಾಗಾ ರೂಪವಿದ್ಯಾಧನೇಶ್ವರಾಃ ॥ ೨೪ ॥

ತೇಷಾಮುದೀರ್ಣವೀರ್ಯಾಣಾಂ ಗಂಧರ್ವಾಣಾಂ ಮಹಾತ್ಮನಾಂ ।
ನಾಮಾನಿ ಕೀರ್ತ್ಯಮಾನಾನಿ ಶೃಣುಧ್ವಂ ಮೇ ವಿವಕ್ಷತಃ ॥ ೨೫ ॥

---

೨೨. ಆ ಗಂಧರ್ವ ಸಾಧ್ವೀಮಣಿಗಳಿಗೆ ಅನೇಕ ಪುತ್ರರು ಜನಿಸಿದರು. ಅವರು ಗುಂಪುಗುಂಪಾಗಿ ಪ್ರಸಿದ್ಧರಾಗಿರುವರು. ಅಂತಹ ಗಂಧರ್ವನಾಯಕರಲ್ಲಿ ಮೂವರು ನಾಯಕರು ಅತ್ಯಂತ ಶೂರರೂ, ಸಂಗ್ರಾಮಕುಶಲರೂ, ಯುದ್ಧದರ್ಮದರೂ ಆಗಿರುವರು.

೨೩. ಆಗ್ನೇಯರೂ, ಕಾಂಬಲೇಯರೂ ಮತ್ತು ವಸುಮತೀಕುಮಾರರೆಂದು ಆ ಗಣಗಳು ಚರಾಚರಾತ್ಮಕವಾದ ಲೋಕವೆಲ್ಲವನ್ನೂ ವ್ಯಾಪಿಸಿಕೊಂಡು ಸುಪ್ರಸಿದ್ಧವಾಗಿದ್ದುವು.

೨೪. ಅತಿ ಶೂರನೂ, ಮಹಾತ್ಮನೂ ಆದ ಆ ಗಂಧರ್ವನಾಯಕರಿಂದ ವಿದ್ಯಾವಂತರೂ, ಮಹಾನುಭಾವರೂ, ರೂಪ, ವಿದ್ಯಾ, ಧನ ಇವುಗಳಿಂದ ಮಂಡಿತರೂ ಆದ ಕುಮಾರರು ಉದ್ಭವಿಸಿ ಲೋಕಮಾನ್ಯರಾಗಿದ್ದರು.

೨೫. ಎಲೈ ವಿಪ್ರವರ್ಯರೇ, ಅತ್ಯಂತ ಶೂರರೂ, ಮಹಾತ್ಮರೂ, ಮಹಾನುಭಾವರೂ ಆದ ಗಂಧರ್ವರ ನಾಮಧೇಯಗಳನ್ನು ವರ್ಣಿಸುವೆನು ಸಾವಧಾನವಾಗಿ ಕೇಳಿರೆಂದನು.

ಹಿರಣ್ಯರೋಮಾ ಕಪಿಲಃ ಸುಲೋಮಾ ಮಾಗಧಸ್ತಥಾ ।
ಚಂದ್ರಕೇತುಶ್ಚ ವೈ ಗಾಂಗೋ ಗೋದಶ್ಚೈವ ಮಹಾಬಲಃ ॥ ೨೬ ॥

ಮಹಾವಿದ್ಯಾಪದಾತಾನಾಂ ವಿಖ್ಯಾತಾನಾಂ ತಪಸ್ವಿನಾಂ ।
ಇತ್ಯೇವಮಾದಿರ್ಹಿ ಗಣೋ ದ್ವೇ ಚಾನ್ಯೇ ಚ ಸುಲೋಚನೇ ॥ ೨೭ ॥

ಶಿವಾ ಚ ಸುಮನಾಶ್ಚೈವ ತಾಭ್ಯಾಮಪಿ ಮಹಾತ್ಮನಾ ।
ಉತ್ಪಾದಿತಾ ವಿಶ್ರವಸಾ ವಿದ್ಯಾಚರಣಗೋಚರಾಃ ॥ ೨೮ ॥

ಶೈನೇಯಾಶ್ಚೈವ ವಿಕ್ರಾಂತಾಸ್ತಥಾ ಸೌಮನಸೋ ಗಣಾಃ ।
ಏತೈರ್ವ್ಯಾಪ್ತಮಿದಂ ಲೋಕಂ ವಿದ್ಯಾಧರಗಣೈಸ್ತ್ರಿಭಿಃ ॥ ೨೯ ॥

---

೨೬. ಆ ಗಂಧರ್ವರಲ್ಲಿ ಹಿರಣ್ಯಲೋಮ, ಕಪಿಲ, ಸುಲೋಮ, ಮಾಗಧ, ಚಂದ್ರಕೇತು, ಗಾಂಗ, ಗೋದ, ಮಹಾಬಲ ಎಂಬ ಇವರು ಪ್ರಮುಖರಾಗಿಯೂ, ಸುಪ್ರಸಿದ್ಧರಾಗಿಯೂ ಇರುವರು

೨೭. ಅವರೆಲ್ಲರೂ ಮಹಾ ವಿದ್ಯೆಗಳಿಂದಲಂಕೃತರೂ, ಲೋಕವಿಖ್ಯಾತರೂ, ಮಹಾ ತಪಸ್ವಿಗಳೂ ಆಗಿರುವರು. ಅವರ ಗಣಗಳು ಪ್ರತ್ಯೇಕವಾಗಿಯೂ ಪ್ರಸಿದ್ಧವಾಗಿಯೂ ಇರುವುವು. ಮತ್ತು ಇಬ್ಬರು ಕನ್ನಿಕೆಯರು ಸುಪ್ರಸಿದ್ಧರಾಗಿರುವರು.

೨೮. ಶಿವಾ, ಸುಮನಸ್ಸೆಂಬ ಇಬ್ಬರು ಮಹಾತ್ಮರು ಅವತರಿಸಿದರು. ಮಹಾತ್ಮರಾದ ವಿಶ್ರವಸನಿಂದ ವಿದ್ಯಾವಂತರಾದ ಮಹಾತ್ಮರು ಅನೇಕರು ಜನಿಸಿದರು.

೨೯. ತರುವಾಯ ಶೈನೇಯರು ವಿಕ್ರಾಂತರಾಗಿರುವರು. ಸೌಮನಸರು ಸುಪ್ರಸಿದ್ಧರಾಗಿರುವರು. ಈ ಮೂರು ವಿದ್ಯಾಧರ ಗಣಗಳಿಂದ ಚರಾಚರಾತ್ಮಕವಾದ ಲೋಕವೆಲ್ಲವೂ ವ್ಯಾಪ್ತವಾಗಿದೆ.

ಏಭ್ಯೋಽನೇಕಾನಿ ಜಾತಾನಿ ಅಂಬರಾಂತರ ಚಾರಿಣಾಂ ।
ಲೋಕೇ ಗಣಶತಾನ್ಯೇವ ವಿದ್ಯಾಧರವಿಚೇಷ್ಟಿತಾತ್ ॥ ೩೦ ॥

ಅಶ್ವಮುಖಾಶ್ಚ ತೇನೈವ ವಿಕ್ರಾಂತೇನ ಮಹಾತ್ಮನಾ ।
ಉತ್ಪಾದಿತಾ ಹ್ಯಶ್ವಮುಖಾಃ ಕಿನ್ನರಾಂಸ್ತಾನ್ನಿಬೋಧತ ॥ ೩೧ ॥

ಸಮುದ್ರಃ ಸೇನಃ ಕಾಲಿಂದೋ ಮಹಾನೇತ್ರೋ ಮಹಾಬಲಃ ।
ಸುವರ್ಣಘೋಷಃ ಸುಗ್ರೀವೋ ಮಹಾಘೋಷಶ್ಚ ವೀರ್ಯವಾನ್ ॥ ೩೨ ॥

ಇತ್ಯೇವಮಾದಿರ್ಹಿ ಗಣಃ ಕಿನ್ನರಾಣಾಂ ಮಹಾತ್ಮನಾಂ ।
ಹಯಾನನಾನಾಂ ವಿದ್ವದ್ಭಿರ್ವಿಸ್ತೀರ್ಣಃ ಪರಿಕೀರ್ತ್ಯತೇ ॥ ೩೩ ॥

---

೩೦. ಇವರಿಂದ ಅಂಬರಚಾರಿಗಳಾದ ವಿದ್ಯಾಧರರ ಅಸಂಖ್ಯಾತವಾದ ಗುಂಪುಗಳು ಲೋಕವಿಖ್ಯಾತವಾಗಿರುತ್ತವೆ. ಆ ವಿದ್ಯಾಧರರ ಗಣಗಳು ನೂರಾರು ಸುಪ್ರಸಿದ್ಧಗಳಾಗಿವೆ.

೩೧. ಮಹಾ ಪರಾಕ್ರಮಿಗಳಾದ ಆಂತಹ ಮಹಾತ್ಮರಿಂದ ಅಶ್ವಮುಖಿಗಳೂ, ಅಸಂಖ್ಯಾತರೂ ಆದ ಕಿನ್ನರರು ಅವತರಿಸಿದರು. ಅವರ ನಾಮಧೇಯಗಳನ್ನು ಕ್ರಮವಾಗಿ ನಿರೂಪಿಸುವೆನು ಕೇಳಿರೆಂದನು.

೩೨. ಮಹಾತ್ಮರಾದ ಕಿನ್ನರರ ಗಣವು ಯಾವುವೆಂದರೆ:— ಸಮುದ್ರ, ಸೇನ, ಕಾಲಿಂದ, ಮಹಾನೇತ್ರ, ಮಹಾಬಲ, ಸುವರ್ಣಘೋಷ, ಸುಗ್ರೀವ, ವೀರ್ಯವಂತನಾದ ಮಹಾಘೋಷ ಇವೇ ಮೊದಲಾದ ಕಿನ್ನರರ ಗಣಗಳು ಸುಪ್ರಸಿದ್ಧಗಳಾಗಿವೆಯೆಂದು ಪಂಡಿತರು ವರ್ಣಿಸುವರು.

೩೩. ಹೀಗೆ ಮಹಾತ್ಮರಾದ ಕಿನ್ನರರ ಗುಂಪು ಸುಪ್ರಸಿದ್ಧವಾಗಿದೆ, ಈ ಮಹಾತ್ಮರು ಅಶ್ವಮುಖಿಗಳಾಗಿಯೂ, ಲೋಕಮಾನ್ಯರಾಗಿಯೂ, ಗಾಯಕರಾಗಿಯೂ ಇರುವರು.

ತಥಾಸಮುತ್ಥಿತೇನೈವ ವಿಕ್ರಾಂತೇನ ಮಹಾತ್ಮನಾ ।
ಉತ್ಪಾದಿತಾ ನರಮುಖಾಃ ಕಿನ್ನರಾಃ ಶಾಂಶಪಾಯನಾಃ || ೩೪ ||

ಹರಿಷೇಣಃ ಸುಷೇಣಶ್ಚ ವಾರಿಶೇಣಶ್ಚ ವೀರ್ಯವಾನ್ ।
ರುದ್ರದತ್ತೇಂದ್ರದತ್ತೌ ಚ ಚಂದ್ರದ್ರುಮಮಹಾದ್ರುಮೌ || ೩೫ ||

ಬಿಂದುಶ್ಚ ಬಿಂದುಸಾರಶ್ಚ ಚಂದ್ರವಂಶಾಶ್ಚ ಕಿನ್ನರಾಃ ।
ಇತ್ಯೇತೇ ಕಿನ್ನರಾ ಶ್ರೇಷ್ಠಾ ಲೋಕೇ ಖ್ಯಾತಃ ಸುಶೋಭನಾಃ || ೩೬ ||

ನೃತ್ಯಗೀತಪ್ರಗಲ್ಭಾನಾಮೇತೇಷಾಂ ದ್ವಿಜಸತ್ತಮಾಃ ।
ಲೋಕೇ ಗಣಶತಾನ್ಯೇವ ಕಿನ್ನರಾಣಾಂ ಮಹಾತ್ಮನಾಂ || ೩೭ ||

ಯಕ್ಷಾ ಯಕ್ಷೋಪಶಾಂತಶ್ಚ ಲೌಹೇಯಾ ರೂಪಶಾಲಿನೀ ।
ದುಹಿತಾ ಸುರವಿಂದೇತಿ ಪ್ರಕಾಶಾ ಸಿದ್ಧಸನ್ಮತಾ || ೩೮ ||

---

೩೪–೩೬. ಹೀಗೆ ಉತ್ಪನ್ನರೂ, ಮಹಾತ್ಮರೂ, ಶೂರರೂ ಆದ ಆ ಕಿನ್ನರರ ಗುಂಪಿನಿಂದ ಮನುಷ್ಯರಂತೆ ಮುಖವುಳ್ಳವರೂ, ಶಾಂಶಪಾಯನನಾಮಕರೂ ಆದ ಕಿನ್ನರರು ಅವತರಿಸಿದರು. ಅವರು ಯಾರಂದರೆ :–ಹರಿಷೇಣ, ಸುಷೇಣ, ವಾರಿಷೇಣ, ವೀರ್ಯವಂತನಾದ ರುದ್ರದತ್ತೇಂದ್ರರು, ಚಂದ್ರಮದ್ರ ಮಹಾದ್ರುಮರು, ಬಿಂದು, ಬಿಂದುಸಾರ, ಚಂದ್ರವಂಶ ಇವರು ಕಿನ್ನರರಾಗಿವರು. ಈ ಕಿನ್ನರೋತ್ತಮರು ಅತ್ಯಂತ ಶ್ರೇಷ್ಠರೂ, ಲೋಕವಿಖ್ಯಾತರೂ, ಅತಿ ಸುಂದರರೂ ಆಗಿರುವರು.

೩೭. ಎಲೈ ವಿಪ್ರವರ್ಯರೇ, ನೃತ್ಯಗೀತ ಪ್ರವೀಣರೂ, ಮಹಾತ್ಮರೂ ಆದ ಈ ಕಿನ್ನರ ಗಣಗಳು ಲೋಕಗಳಲ್ಲಿ ನೂರಾರು ಪ್ರಖ್ಯಾತವಾಗಿವೆ.

೩೮. ಲೌಹೇಯರೂ, ಯಕ್ಷಕುಮಾರಿಯೂ, ಯಕ್ಷೋಪಶಾಂತರೂ ಆಗಿರುವರು. ಅತ್ಯಂತ ರೂಪವತಿಯಾದ ಆ ಯಕ್ಷಕುಮಾರಿಯು ಸುರವಿಂದನಾಮಕಳೂ, ಪ್ರಕಾಶಕಳೂ, ಸಿದ್ಧಸಮ್ಮತಳೂ ಆಗಿರುವಳು.

ಉಪಾಯಾಕೇತನಸ್ಯಾಹಿ ಸ್ವಯಮುತ್ಪಾದಿತೋ ಗಣಃ ।
ಕರಾಲಕೇನ ಭೂತಾನಾಂ ತೇಷಾಂ ನಾಮಾನಿ ಮೇ ಶೃಣು || ೩೯ ||

ಭೂತಾ ಭೂತಗಣೈರ್ಜ್ಞೇಯಾ ಆವೇಶಕನಿವೇಶಕಾಃ ।
ಇತ್ಯೇವಮಾದಿರ್ಗ ಗಣೋ ಭೂಮಿಗೋಚರಕಃ ಸ್ಮೃತಃ || ೪೦ ||

ವಿಜ್ಞೇಯ ಇಹ ಲೋಕೇಸ್ಮಿ ಭೂತಾದಾಂ ಭೂತನಾಯಕಃ ।
ಯೇ ಉತ್ಕೃಷ್ಟಾ ಭವಂತ್ಯೇಷಾಮಂಬರಾಂತರಚಾರಿಣಾಂ ||
ವೃಕ್ಷಾಗ್ರಮಾತ್ರಮಾಕಾಶಾಂ ತೇ ಚರಂತಿ ನ ಸಂಶಯಃ || ೪೧ ||

ತತ್ರೇಮೇ ದೇವಗಂಧರ್ವಾಃ ಪ್ರಾಯೇಣ ಕಥಿತಾ ಮಯಾ ।
ದೇವೋಪಸ್ಥಾನನಿರತಾ ವಿಜ್ಞೇಯಾಸ್ತೇ ಯಶಸ್ವಿನಃ || ೪೨ ||

---

೩೯. ಉಪಾಯಕೇತನನಿಗೂ ಕೂಡ ಒಂದು ಪ್ರಸಿದ್ಧವಾದ ಗಣವಿತ್ತು. ಆ ಗಣಕ್ಕೆ ಕರಾಲನೆಂಬುವನು ಕಾರಣನಾಗಿದ್ದನು. ಅವರ ಹೆಸರನ್ನು ಹೇಳುವೆನು ಕೇಳಿರೆಂದನು.

೪೦. ಭೂತಗಳು ಆವೇಶಕ ನಿವೇಶಕವೆಂಬ ಗಣಗಳಿಂದ ಪ್ರಸಿದ್ಧವಾಗಿವೆ ಯೆಂದು ಹೇಳಲಾಗಿವೆ. ಇವೇ ಮೊದಲಾದ ಭೂತಗಣಗಳು ಭೂಲೋಕವಲ್ಲಿ ಪ್ರಖ್ಯಾತವಾಗಿವೆ

೪೧. ಈ ಲೋಕದಲ್ಲಿ ಭೂತಗಳೂ, ಭೂತನಾಯಕರೂ ಇರುತ್ತಾರೆಂದು ತಿಳಿಯಬೇಕು. ಆಕಾಶಚಾರಿಗಳ ಮಧ್ಯದಲ್ಲಿ ಯಾವ ಭೂತಗಳು ಉತ್ಕೃಷ್ಟವಾಗಿ ವೆಯೋ, ಇವು ವೃಕ್ಷಾಗ್ರವೆಂಬ ಆಕಾರದಲ್ಲಿ ಸಂಚರಿಸುತ್ತವೆ. ಈ ವಿಷಯದಲ್ಲಿ ಯಾವ ಸಂದೇಹವೂ ಇಲ್ಲ.

೪೨. ನಾನು ನಿಮಗಾಗಿ ದೇವಗಂಧರ್ವರ ವಿಷಯಕವಾದ ಸಂಗತಿಗಳನ್ನು ಪ್ರಾಯಕವಾಗಿ ತಿಳಿಸಿರುತ್ತೇನೆ. ಯಾರು ದೇವತೆಗಳ ಪೂಜಾದಿ ಸತ್ಕಾರಗಳಲ್ಲಿ ನಿರತ ರಾಗಿರುವರೋ, ಅವರೇ ಕೀರ್ತಿವಂತರೆಂದೂ, ಉತ್ತಮರೆಂದೂ ತಿಳಿಯಬೇಕು.

**ನಾರಾಯಣಂ ಸುರಗುರುಂ ವಿರಜಂ ಪುಷ್ಕರೇಕ್ಷಣಂ |**
**ಹಿರಣ್ಯಗರ್ಭಂ ಚ ತಥಾ ಚತುರ್ವಕ್ತ್ರಂ ಸ್ವಯಂಭುವಮ್ || ೪೩ ||**

**ಶಂಕರಂ ಚ ಮಹಾದೇವಮೀಶಾನಂ ಚ ಜಗತ್ಪ್ರಭುಂ |**
**ಇಂದ್ರಪೂರ್ವಾಂಸ್ತಥಾದಿತ್ಯಾನ್ ರುದ್ರಾಂಶ್ಚ ವಸುಭಿಃ ಸಹ || ೪೪ ||**

**ಉಪತಸ್ಥುಃ ಸ ಗಂಧರ್ವಾ ನೃತ್ಯಗೀತವಿಶಾರದಾಃ |**
**ತ್ರಿದಶಾಃ ಸರ್ವಲೋಕಸ್ಥಾ ನಿಪುಣಾ ಗೀತವಾದಿನಃ || ೪೫ ||**

**ಹಂಸೋ ಜ್ಯೇಷ್ಠಃಕನಿಷ್ಠೋಽನ್ಯೋ ಮಧ್ಯಮೌ ಚ ಹಹಾ ಹುಹೂಃ |**
**ಚತುರ್ಥೋ ಧಿಷಣಶ್ಚೈವ ತತೋ ವಾಸಿರುಚಿಸ್ತಥಾ || ೪೬ ||**

**ಷಷ್ಠಸ್ತು ತುಂಬುರುಸ್ತೇಷಾಂ ತತೋ ವಿಶ್ವಾವಸುಃ ಸ್ಮೃತಃ |**
**ಇಮಾಶ್ಚಾಪ್ಸರಸೋ ದಿವ್ಯಾ ವಿಹಿತಾಃ ಪುಣ್ಯಲಕ್ಷಣಾಃ || ೪೭ ||**

---

೪೩–೪೫. ನೃತ್ಯಗೀತವಿಶಾರದರೂ, ಸರ್ವಲೋಕಸಂಚಾರಿಗಳೂ, ಅತ್ಯಂತ ನಿಪುಣರೂ, ಗಾನಲೋಲರೂ ಆದ ಗಂಧರ್ವರಿಂದ ಸಹಿತರಾದ ದೇವತೆಗಳು ದೇವ ಗುರುವೂ. ರಜೋಗುಣಶೂನ್ಯನೂ, ಕಮಲೇಕ್ಷನೂ ಆದ ಶ್ರೀಮನ್ನಾರಾಯಣನನ್ನೂ, ಹಿರಣ್ಯಗರ್ಭನೂ, ಚತುರ್ಮುಖನೂ, ಸ್ವಯಂಭುವನೂ ಆದ ಬ್ರಹ್ಮದೇವನನ್ನೂ, ಸುಖಪ್ರದನೂ, ಜಗದೊಡೆಯನೂ, ಈಶಾನನೂ ಆದ ಮಹಾದೇವನನ್ನೂ, ಇಂದ್ರನೇ ಮೊದಲಾದ ದ್ವಾದಶಾದಿತ್ಯರನ್ನೂ, ಏಕಾದಶರುದ್ರರನ್ನೂ. ಅಷ್ಟವಸುಗಳನ್ನೂ ಸಹ ಸೇವಿಸುವರು

೪೬-೪೭. ಆ ವಿದ್ಯಾಧರರಲ್ಲಿ ಹಂಸನು ಹಿರಿಯವನು. ಚಿತ್ರರಥನು ಕನಿಷ್ಠನು. ಹಾಹಾ, ಹೂಹೂ ಎಂಬುವರು ಮಧ್ಯಮರಾಗಿರುವರು. ನಾಲ್ಕನೆಯವನು ಧಿಷಣನಾಗಿರುವನು. ಐದನೆಯವನು ವಾಸಿರುಚಿಯು. ಆರನೆಯವನು ತುಂಬುರು ವಾಗಿರುವನು. ವಿಶ್ವಾವಸುವು ಏಳನೆಯವನಾಗಿರುವನು. ಈ ಅಪ್ಸರಸರು ದಿವ್ಯರೂ, ಅತಿ ಸುಂದರರೂ ಆಗಿರುವರು.

ಸುಷುವೇಽಷ್ಟೌ ಮಹಾಭಾಗಾ ವರಿಷ್ಠಾ ದೇವಪೂಜಿತಾಃ ।
ಅನವದ್ಯಾಮನವಶಾಮನ್ವತಾಂ ಮದನಪ್ರಿಯಾಂ ॥
ಅರೂಪಾಂ ಸುಭಗಾಂ ಭಾಸೀಮರಿಷ್ಟಾಽಷ್ಟೌ ವ್ಯಜಾಯತ ॥ ೪೮ ॥

ಮನೋವತೀ ಸುಕೇಶಾ ಚ ತುಂಬುರೋಸ್ತು ಸುತೇ ಉಭೇ ।
ಪಂಚಚೂಡಾಸ್ತ್ವಿಮಾ ದಿವ್ಯಾ ದೈವಿಕ್ಯೋಽಪ್ಸರಸೋ ದಶ ॥ ೪೯ ॥

ಮೇನಕಾ ಸಹಜನ್ಯಾ ಚ ಪರ್ಣಿನೀ ಪುಂಜಿಕಸ್ಥಲಾ ।
ಘೃತಸ್ಥಲಾ ಘೃತಾಚೀ ಚ ವಿಶ್ವಾಚೀ ಪೂರ್ವಚೀತ್ಯಪಿ ॥
ಪ್ರಮ್ಲೋಚೇತ್ಯಭಿವಿಖ್ಯಾತಾನುಲ್ಮೋಚಂತೀ ತಥೈವ ಚ ॥ ೫೦ ॥

ಅನಾದಿನಿಧನಸ್ಯಾಥ ಜಜ್ಞೇ ನಾರಾಯಣಸ್ಯ ಯಾ ।
ಊರೋಃ ಸರ್ವಾನವದ್ಯಾಂಗೀ ಊರ್ವಶ್ಯೇಕಾದಶೀ ಸ್ಮೃತಾಃ ॥ ೫೧ ॥

---

೪೮. ಅರಿಷ್ಟೆಯು ಮಹಾ ಭಾಗ್ಯಶಾಲಿಗಳೂ, ಉತ್ತಮರೂ, ದೇವವಂದಿತರೂ ಆದ ಎಂಟುಜನ ಪುತ್ರಿಯರನ್ನು ಪಡೆದಳು ಅರಿಷ್ಟೆಯು ಅನವದ್ಯಾ, ಅನವಶಾ, ಅನ್ವತಾ, ಮದನಪ್ರಿಯಾ, ಅರೂಪಾ, ಸುಭಗಾ, ಭಾಸೀ ಮೊದಲಾದ ಎಂಟುಜನ ಸುಂದರಿಯರನ್ನು ಪಡೆದಳು.

೪೯. ತುಂಬುರುವಿಗೆ ಮನೋವತೀ, ಸುಕೇಶಾ ಎಂಬುವ ಕುಮಾರಿಯರು ಉದ್ಭವಿಸಿದರು. ದೇವಲೋಕದ ಈ ಅಪ್ಸರಸಿಯರು ಪಂಚಚೂಡರೆಂದೂ, ದಿವ್ಯರೆಂದೂ, ದಶಸಂಖ್ಯಾಕರೆಂದೂ ಪ್ರಸಿದ್ಧರಾಗಿರುವರು.

೫೦. ಮೇನಕಾ, ಪರ್ಣಿನೀ, ಪುಂಜಿಕಸ್ಥಲಾ, ಘೃತಸ್ಥಾಲಾ, ಘೃತಾಚೀ, ವಿಶ್ವಾಚೀ, ಪೂರ್ವಚೀ, ಪ್ರಮ್ಲೋಚಾ, ಅನುಮ್ಲೋಚಂತೀ, ಸಹಜನ್ಯಾ ಈ ಹತ್ತು ಜನ ಅಪ್ಸರಸಿಯರು ಜನಿಸಿ ಲೋಕಮಾನ್ಯರಾಗಿರುವರು.

೫೧. ಅನಾದ್ಯನಂತನಾದ ಶ್ರೀಮನ್ನಾರಾಯಣನ ತೊಡೆಯಿಂದ ಸರ್ವಾವಯವ ಸುಂದರಿಯಾದ ಊರ್ವಶಿಯು ಜನಿಸಿದಳು. ಅವಳು ಅತಿ ಸುಂದರಿಯೂ, ಹನ್ನೊಂದನೆಯವಳೂ, ಅಪ್ಸರಸಿಯೂ, ಸುಪ್ರಸಿದ್ಧಳೂ ಆಗಿರುವಳು.

**ಮೇನಸ್ಯ ಮೇನಕಾ ಕನ್ಯಾ ಬ್ರಹ್ಮಣೋ ಹೃಷ್ಟಚೇತಸಃ ।**
**ಸರ್ವಾಶ್ಚ ಬ್ರಹ್ಮವಾದಿನ್ಯೋ ಮಹಾಯೋಗಾಶ್ಚ ತಾಃ ಸ್ಮೃತಾಃ ॥ ೫೨ ॥**

**ಗಣಾ ಅಪ್ಸರಸಾಂಖ್ಯಾತಾಃ ಪುಣ್ಯಾಸ್ತೇ ವೈ ಚತುರ್ದಶ ।**
**ಆಹೂತಾಃ ಶೋಭಯಂತಶ್ಚ ಗಣಾ ಹ್ಯೇತೇ ಚತುರ್ದಶ ॥ ೫೩ ॥**

**ಬ್ರಹ್ಮಣೋ ಮಾನಸಾಃ ಕನ್ಯಾಃ ಶೋಭಯಂತ್ಯೋ ಮನೋಃ ಸುತಾಃ ।**
**ವೇಗವಂತ್ಯಸ್ತ್ವರಿಷ್ಟಾಯಾ ಊರ್ಜಾಯಾಶ್ಚಾಗ್ನಿಸಂಭವಾಃ ॥ ೫೪ ॥**

**ಆಯುಷ್ಮಂತ್ಯಶ್ಚ ಸೂರ್ಯಸ್ಯ ರಶ್ಮಿಜಾತಾಃ ಸುಭಾಸ್ವರಾಃ ।**
**ವಾರಿಜಾ ಹ್ಯಮೃತೋತ್ಪನ್ನಾ ಅಮೃತಾ ನಾಮತಃ ಸ್ಮೃತಾಃ ॥ ೫೫ ॥**

---

೫೨. ಮೇನನಾಯಕನಿಗೆ ಮೇನಕೆಯೆಂಬ ಕುಮಾರಿಯು ಜನಿಸಿ ಲೋಕ ವಿಖ್ಯಾತಳಾಗಿರುವಳು. ಪ್ರಸನ್ನನಾದ ಬ್ರಹ್ಮದೇವನಿಗೆ ಅನ್ಯರಾದ ಅಪ್ಸರಸಿಯರು ಪುತ್ರಿಯರಾಗಿ ಜನಿಸಿದರು. ಇವರೆಲ್ಲರೂ ಬ್ರಹ್ಮವಾದಿಗಳೂ, ಮಹಾ ಯೋಗಿನಿಯರೂ, ಸುಪ್ರಸಿದ್ಧರೂ ಆಗಿರುವರು.

೫೩. ಅಪ್ಸರಸಿಯರ ಈ ಹದಿನಾಲ್ಕು ಗಣಗಳೂ ಪುಣ್ಯಕಾರಿಗಳೂ ಲೋಕ ಮಾನ್ಯಗಳೂ ಆಗಿದ್ದುವು. ಈ ಹದಿನಾಲ್ಕು ಗಣಗಳೂ ದೇವೇಶನಿಂದ ಆಹೂತರಾಗಿ, ಇಂದ್ರದೇವನ ಮಹಾಸಭೆಗೆ ಅಲಂಕಾರಪ್ರಾಯರಾಗಿರುವರು.

೫೪. ಅವರಲ್ಲಿ ಕೆಲವರು ಬ್ರಹ್ಮದೇವನ ಮಾನಸಪುತ್ರಿಯರಾಗಿಯೂ, ಕೆಲವರು ಮನುವಿನ ಕುಮಾರಿಯರಾಗಿಯೂ ಇರುವರು. ಇವರೆಲ್ಲರೂ ಅತಿ ರಮಣೀಯರೂ, ವೇಗವಂತರೂ ಆಗಿರುವರು. ಅವರಲ್ಲಿ ಕೆಲವರು ಅರಿಷ್ಟೆಯಿಂದಲೂ, ಮತ್ತೆ ಕೆಲವರು ಊರ್ಜೆಯಿಂದಲೂ, ಇನ್ನು ಕೆಲವರು ಅಗ್ನಿಯಿಂದಲೂ ಉತ್ಪನ್ನರಾಗಿರುವರು.

೫೫. ಆಯುಷ್ಮಂತರೂ, ಕಾಂತಿಯುತರೂ ಆದ ಕೆಲವರು ಸೂರ್ಯನ ರಶ್ಮಿಗಳಿಂದ ಸಂಭೂತರಾಗಿರುವರು. ಕೆಲವರು ಜಲದಿಂದಲೂ ಅಮೃತದಿಂದಲೂ ಜನಿಸಿ, ಅಮೃತರೆಂಬ ನಾಮಧೇಯಗಳಿಂದ ವಿಖ್ಯಾತರಾಗಿರುವರು.

ವಾಯೂತ್ಪನ್ನಾ ಮುದಾ ನಾಮ ಭೂಮಿಜಾತಾ ಭವಾಸ್ತು ವೈ ।
ವಿದ್ಯುತಶ್ಚ ರುಚೋ ನಾಮ ಮೃತ್ಯೋಃ ಕನ್ಯಾಶ್ಚ ಭೈರವಾಃ ॥ ೫೬ ॥

ಶೋಭಯಂತ್ಯಃ ಕಾಮಗುಣಾ ಗಣಾಃ ಪ್ರೋಕ್ತಾಶ್ಚತುರ್ದಶ ।
ಸೇಂದ್ರೋಪೇಂದ್ರೈಃ ಸುರಗಣೈ ರೂಪಾತಿಶಯನಿರ್ಮಿತಾಃ ॥ ೫೭ ॥

ಶುಭರೂಪಾ ಮಹಾಭಾಗಾ ದಿವ್ಯಾ ನಾರೀ ತಿಲೋತ್ತಮಾ ।
ಬ್ರಹ್ಮಣಶ್ಚಾಗ್ನಿಕುಂಡಾಚ್ಚ ದೇವನಾರೀ ಪ್ರಭಾವತೀ ॥
ರೂಪಯೌವನಸಂಪನ್ನಾ ಉತ್ಪನ್ನಾ ಲೋಕವಿಶ್ರುತಾ ॥ ೫೮ ॥

ವೇದೀತಲಸಮುತ್ಪನ್ನಾ ಚತುರ್ವಕ್ತ್ರಸ್ಯ ಧೀಮತಃ ।
ನಾಮ್ನಾ ವೇದವತೀ ನಾಮ ಸುರನಾರೀ ಮಹಾಪ್ರಭಾ ॥ ೫೯ ॥

---

೫೬. ವಾಯುವಿನಿಂದ ಉತ್ಪನ್ನರಾದವರು ಮುದಾನಾಮದಿಂದಲೂ, ಭೂಜಾತರಾದವರು ಭುವಾನಾಮದಿಂದಲೂ, ಮಿಂಚಿನಿಂದ ಉತ್ಪನ್ನರಾದವರು ರುಚೆಯೆಂಬ ಅಭಿಧಾನದಿಂದಲೂ, ಯಮದೇವನಿಂದ ಸಂಭೂತರಾದವರು ಭೈರವೆಯೆಂಬ ಸಂಜ್ಞೆಯಿಂದಲೂ ಸುಪ್ರಸಿದ್ಧರಾಗಿರುವರು

೫೭. ಅಪ್ಸರಸಿಯರ ಈ ಹದಿನಾಲ್ಕು ಗಣಗಳೂ ಅತಿ ಪ್ರಕಾಶಕಗಳೂ, ಕಾಮಜನಕಗಳೂ ಆಗಿರುತ್ತವೆ. ರೂಪಾತಿಶಯದಿಂದ ರಂಜಿಸುವ ಈ ಅಪ್ಸರಸಿಯರ ಗಣಗಳನ್ನು ಇಂದ್ರೋಪೇಂದ್ರರೂ, ಸುರರೂ ಸೃಷ್ಟಿಮಾಡಿರುವರು.

೫೮. ಅವರಲ್ಲಿ ತಿಲೋತ್ತಮೆಯೆಂಬ ಅಪ್ಸರಸಿಯು ಶುಭರೂಪಿಯೂ, ಮಹಾನುಭಾವಳೂ, ದಿವ್ಯಳೂ, ನಾರೀಮಣಿಯೂ ಆಗಿರುವಳು. ಬ್ರಹ್ಮದೇವನ ಅಗ್ನಿಕೊಂಡದಿಂದ ಪ್ರಭಾವತಿಯೆಂಬ ದೇವತೆಗಳ ರಮಣಿಯು ಆವಿರ್ಭವಿಸಿದಳು. ಅವಳು ರೂಪಯೌವನಸಂಪನ್ನಳೂ, ಲೋಕವಿಶ್ರುತಳೂ ಆಗಿರುವಳು.

೫೯. ಮಹಾ ಕಾಂತಿಯುತಳೂ, ವೇದವತೀನಾಮಕಳೂ, ದೇವತಾರಮಣಿಯೂ ಆದ ಅಪ್ಸರಸಿಯು ಜ್ಞಾನಿಯಾದ ಬ್ರಹ್ಮದೇವನ ಯಾಗ ಕೊಂಡದ ಜಗುಲಿಯಿಂದ ಉತ್ಪನ್ನಳಾದ ನಾರೀಮಣಿಯಾಗಿರುವಳು.

ತಥಾ ಯಮಸ್ಯ ದುಹಿತಾ ರೂಪಯೌವನಶಾಲಿನೀ ।
ವರಹೇಮವಿಭಾ ಹೇಮಾ ದೇವನಾರೀ ಸುಲೋಚನಾ ॥ ೬೦ ॥

ಇತ್ಯೇತೇ ಬಹುಸಾಹಸ್ರಂ ಭಾಸ್ವರಾಹ್ಯಪ್ಸರೋಗಣಾಃ ।
ದೇವತಾನಾಮೃಷೀಣಾಂ ಚ ಪತ್ನ್ಯಸ್ತಾ ಮಾತರಶ್ಚ ಹ ॥ ೬೧ ॥

ಸುಗಂಧಾಶ್ಚಂಪವರ್ಣಾಶ್ಚ ಸರ್ವಾಶ್ಚಾಪ್ಸರಸಃ ಸಮಾಃ ।
ಸಂಪ್ರಯೋಗೇ ತು ಕಾಂತೇನ ಮಾದ್ಯಂತಿ ಮದಿರಾಂ ವಿನಾ ॥
ತಾಸಾಮಾಪ್ಯಾಯತೇ ಸ್ಪರ್ಶಾದಾನಂದಶ್ಚ ವಿವರ್ಧತೇ ॥ ೬೨ ॥

ವಿನತಾಯಾಸ್ತು ಪುತ್ರೌ ದ್ವಾವರುಣೋ ಗರುಡಶ್ಚ ಹ ।
ಷಟ್‌ತ್ರಿಂಶತ್ತು ಸ್ವಸಾರಶ್ಚ ಯವೀಯಸ್ಯಸ್ತು ತಾಃ ಸ್ಮೃತಾಃ ॥ ೬೩ ॥

---

೬೦. ಇವರಂತೆ ಯಮರಾಯನ ಕುವರಿಯಾದ ಸುಲೋಚನೆಯು ರೂಪಯೌವನವಂತಳೂ, ತಪ್ತಕಾಂಚನ ಪ್ರಭೆಯುಳ್ಳವಳೂ, ಹೇಮಾಂಗಿಯೂ, ಅಪ್ಸರಸಿಯೂ, ಲೋಕಮಾನ್ಯಳೂ ಆಗಿರುವಳು

೬೧. ಈ ರೀತಿಯಾಗಿ ಅಪ್ಸರಸಿಯರ ಗಣಗಳು ಅನೇಕ ಸಹಸ್ರ ಸಂಖ್ಯಾಕವಾಗಿಯೂ, ಅತ್ಯಂತ ಕಾಂತಿಯುಕ್ತರಾಗಿಯೂ, ಅನೇಕ ದೇವತೆಗಳಿಗೂ ಋಷಿಗಳಿಗೂ ಪತ್ನಿಯರಾಗಿಯೂ, ಕೆಲವರಿಗೆ ಮಾತೃಗಳಾಗಿಯೂ ಇರುವುವು.

೬೨. ಅವರಲ್ಲಿ ಪ್ರತಿಯೊಬ್ಬ ನಾರೀಮಣಿಯೂ ಸುಗಂಧಯುತಳೂ, ಸಂಪಿಗೆಯ ಪುಷ್ಪದ ಕಾಂತಿಯುಳ್ಳವಳೂ, ಅಪ್ಸರಸಿಯರಿಗೆ ಸಮಾನಳೂ ಆಗಿರುವಳು. ಆ ದೇವನಾರಿಯರು ಮದ್ಯವಿಲ್ಲದೆಯೇ ತಮ್ಮ ಸ್ಪರ್ಶಮಾತ್ರದಿಂದ ಪತಿಗಳನ್ನು ಮತ್ತರನ್ನಾಗಿ ಮಾಡುವರು. ಅವರ ಸಂಬಂಧದಿಂದ ಶರೀರಕ್ಕೆ ಆಪ್ಯಾಯನವೂ, ಹೃದಯಕ್ಕೆ ಆನಂದಾಭಿವೃದ್ಧಿಯೂ ಉಂಟಾಗುವುವು.

೬೩. ಕಶ್ಯಪರ ಪತ್ನಿಯಾದ ವಿನತಾದೇವಿಗೆ ಅರಣ ಗರುಡರೆಂಬ ಇಬ್ಬರು ಕುಮಾರರೂ, ಮೂವತ್ತಾರುಜನ ಪುತ್ರಿಯರೂ ಅವತರಿಸಿದ್ದರು. ಅರುಣ ಗರುಡರೆಂಬ ಕುಮಾರರೇ ಹಿರಿಯರಾಗಿದ್ದರು. ಹೆಣ್ಣುಮಕ್ಕಳೆಲ್ಲರೂ ಕಿರಿಯವರಾಗಿಯೇ ಇದ್ದರು.

ಗಾಯತ್ರ್ಯಾದೀನಿ ಛಂದಾಂಸಿ ಸೌಪರ್ಣೇಯಾಶ್ಚ ಪಕ್ಷಿಣಃ ।
ಇಕ್ಷ್ಯೇವಾಹಾನಿ ಸರ್ವಾಣಿ ದಿಕ್ಷು ಸನ್ನಿಹಿತಾನಿ ಚ ॥ ೬೪ ॥

ಕದ್ರೂರ್ನಾಗಸಹಸ್ರಂ ವೈ ಚರಾಚರಮಜೀಜನತ್ ।
ಅನೇಕಶಿರಸಾಂ ತೇಷಾಂ ಖೇಚರಾಣಾಂ ಮಹಾತ್ಮನಾಂ ॥
ಬಹುಧಾನಾಮಧೇಯಾನಾಂ ಪ್ರಾಯಶಸ್ತು ನಿಬೋಧತ ॥ ೬೫ ॥

ತೇಷಾಂ ಪ್ರಧಾನನಾಗಾಶ್ಚ ಶೇಷವಾಸುಕಿತಕ್ಷಕಾಃ ।
ಸಕಣೀರಶ್ಚ ಜಂಬಶ್ಚ ಅಂಜನೋ ವಾಮನಸ್ತಥಾ ॥ ೬೬ ॥

ಐರಾವತಮಹಾಪದ್ಮೌ ಕಂಬಲಾಶ್ವತರಾವುಭೌ ।
ಏಲಪತ್ರಶ್ಚ ಶಂಖಶ್ಚ ಕರ್ಕೋಟಕಧನಂಜಯೌ ॥ ೬೭ ॥

ಮಹಾಕರ್ಣೋ ಮಹಾನೀಲೋ ಧೃತರಾಷ್ಟ್ರಬಲಾಹಕೌ ।
ಕುಮಾರಃ ಪುಷ್ಪದಂತಶ್ಚ ಸುಮುಖೋ ದುರ್ಮುಖಸ್ತಥಾ ॥ ೬೮ ॥

---

೬೪. ಗಾಯತ್ರೀ, ಉಷ್ಣಿಕ್ ಮೊದಲಾದ ಛಂದಸ್ಸುಗಳೇ ಉತ್ತಮವಾದ ರೆಕ್ಕೆಗಳುಳ್ಳ ಪಕ್ಷಿಗಳಾಗಿ ಅವತರಿಸಿದುವು. ಆ ಗಾಯತ್ರಿಗಳೇ ಅಹಸ್ಸುಗಳಾಗಿ ಸಮಸ್ತ ದಿಕ್ಕುಗಳಲ್ಲಿಯೂ ವ್ಯಾಪ್ತವಾಗಿರುವುವು.

೬೫. ಕಶ್ಯಪರ ಪತ್ನಿಯಾದ ಕದ್ರೂದೇವಿಯಲ್ಲಿ ಸಹಸ್ರಾರು ಸರ್ಪಗಳು ಜನಿಸಿ, ಚರಾಚರಾತ್ಮಕವಾದ ಸಮಸ್ತ ಜಗತ್ತಿನಲ್ಲಿಯೂ ವ್ಯಾಪ್ತವಾಗಿದ್ದುವು. ಖೇಚರರಾದ ಮಹಾತ್ಮರು ಅನೇಕ ಶಿರಸ್ಸುಗಳಿರುವ ಸರ್ಪಗಳಾಗಿ ಜನಿಸಿ, ನಾನಾವಿಧ ನಾಮಗಳಿಂದ ಪ್ರಖ್ಯಾತವಾದರು. ಅವುಗಳನ್ನು ನಾಮಧೇಯಗಳೊಡನೇ ನಿರೂಪಿಸುವೆನು ಕೇಳಿರೆಂದನು.

೬೬-೭೧. ಕದ್ರೂದೇವಿಯ ಪುತ್ರರಲ್ಲಿ ಪ್ರಧಾನರಾದವರು ಯಾರೆಂದರೆ :–ಶೇಷ, ವಾಸುಕಿ, ತಕ್ಷಕ, ಸಕಣೀರ, ಜಂಭ, ಅಂಜನ, ವಾಮನ, ಐರಾವತ, ಮಹಾಪದ್ಮ, ಕಂಬಲ, ಅಶ್ವತರ, ಐಲಪತ್ರ, ಶಂಖ, ಕರ್ಕೋಟಕ, ಧನಂಜಯ, ಮಹಾಕರ್ಣ, ಮಹಾನೀಲ, ಧೃತರಾಷ್ಟ್ರ, ಬಲಾಹಕ ಕುಮಾರ, ಪುಷ್ಪದಂತ, ಸುಮುಖ, ದುರ್ಮುಖ,

ಶಿಲೀಮುಖೋ ದಧಿಮುಖಃ ಕಾಲೀಯಃ ಶಾಲಿಪಿಂಡಕಃ ।
ಬಿಂದುಪಾದಃ ಪುಂಡರೀಕೋ ನಾಗಶ್ಚಾಪೂರಣಸ್ತಥಾ ॥ ೬೯ ॥

ಕಪಿಲಶ್ಚಾಂಬರೀಷಶ್ಚ ಧೃತಪಾದಶ್ಚ ಕಚ್ಛಪಃ ।
ಪ್ರಹ್ಲಾದಃ ಪದ್ಮಚಿತ್ರಶ್ಚ ಗಂಧರ್ವೋsಥ ನಮುಸ್ವಿಕಃ ॥ ೭೦ ॥

ನಹುಷಃ ಖರರೋಮಾ ಚ ಮಣಿರಿತ್ಯೇವಮಾದಯಃ ।
ಕಾದ್ರವೇಯಾ ಮಯಾ ಖ್ಯಾತಾಃ ಖಶಾಯಾಂಸ್ತು ನಿಬೋಧತ ॥ ೭೧ ॥

ಖಶಾ ವಿಜಜ್ಞೇ ಪುತ್ರೌ ದ್ವೌ ವಿಶ್ರುತೌ ಪುರುಷಾದಕೌ ।
ಜ್ಯೇಷ್ಠಂ ಪಶ್ಚಿಮಸಂಖ್ಯಾಯಾಂ ಪೂರ್ವಸ್ಯಾಂ ಮನುಜಾಸ್ತಥಾ ॥ ೭೨ ॥

ವಿಲೋಹಿತಂ ವಿಕರ್ಣಂ ಚ ಪೂರ್ವಂ ಸಾsಜನಯತ್ ಸುತಂ ।
ಚತುರ್ಭುಜಂ ಚತುಷ್ಪಾದಂ ದ್ವಿಮೂರ್ಧಾನಂ ದ್ವಿಧಾಗತಿಂ ॥ ೭೩ ॥

ಸರ್ವಾಂಗಕೇಶಂಸ್ಥೂಲಾಂಗಂ ತುಂಗನಾಸಂ ಮಹೋದರಂ ।
ಸ್ಥೂಲಶೀರ್ಷಂ ಮಹಾಕರ್ಣಂ ಮುಂಜಾಕೇಶಂ ಮನೋರಥಂ ॥ ೭೪ ॥

---

ಶಿಲೀಮುಖ, ದಧಿಮುಖ, ಕಾಲೀಯ, ಶಾಲಿಪಿಂಡಕ, ಬಿಂದುಪಾದ, ಪುಂಡರೀಕ, ನಾಗ, ಆಪೂರಣ, ಕಪಿಲ, ಅಂಬರೀಷ, ಧೃತಪಾದ, ಕಚ್ಛಪ, ಪ್ರಹ್ಲಾದ, ಪದ್ಮಚಿತ್ರ, ಗಂಧರ್ವ, ನಮುಸ್ಕಿಕ, ನಹುಷ, ಖರರೋಮ, ಮಣಿ ಇವರೇ ಮೊದಲಾದವರು. ಇವರೆಲ್ಲರೂ ಕದ್ರೂದೇವಿಯ ಮಕ್ಕಳಾಗಿರುವರು. ಮತ್ತು ಸುಪ್ರಸಿದ್ಧರಾಗಿಯೂ ಇರುವರು ಈಗ ಖಶಾದೇವಿಯ ಪುತ್ರರ ವಿಷಯವನ್ನು ಹೇಳುವೆನು ಕೇಳಿರೆಂದನು

೭೨. ಖಶೆಯು ಪುರುಷಭಕ್ಷರೂ ಸುಪ್ರಸಿದ್ಧರೂ ಆದ ಇಬ್ಬರು ಮಕ್ಕಳನ್ನು ಪಡೆದಳು. ಅವರಲ್ಲಿ ಹಿರಿಯವನನ್ನು ಪಶ್ಚಿಮ ದಿಕ್ಕಿನಲ್ಲಿಯೂ ಕನಿಷ್ಠನನ್ನು ಪೂರ್ವ ದಿಕ್ಕಿನಲ್ಲಿಯೂ ಸ್ಥಾಪಿಸಿದಳು.

೭೩–೭೬. ಅವಳು ಮೊದಲು ವಿಲೋಹಿತ ವಿಕರ್ಣರೆಂಬ ಇಬ್ಬರು ಮಕ್ಕಳನ್ನು ಪಡೆದಳು. ಅವರಲ್ಲೊಬ್ಬನಿಗೆ ನಾಲ್ಕು ಭುಜಗಳೂ ನಾಲ್ಕು ಪಾದಗಳೂ ಎರಡು ಶಿರಸ್ಸೂ ದ್ವಿವಿಧಗಮನವೂ ಸರ್ವಾಂಗಗಳಲ್ಲಿ ಕೇಶವೂ ಸ್ಥೂಲವಾದ ಅವಯುವವೂ ಉನ್ನತ ನಾಸಿಕೆಯೂ ಮಹತ್ತಾದ ಉದರವೂ ಸ್ಥೂಲವಾದ ಶಿರಸ್ಸು ವಿಶಾಲವಾದ ಕಿವಿಗಳೂ ನೊಸೆಹುಲ್ಲಿನಂತೆ ಕೇಶವೂ ಮನೋರಧವೂ ಆನೇತುಟಿಯಂತೆ ತುಟಿಯೂ

ಹಸ್ತ್ಯೋಷ್ಠಂ ದೀರ್ಘಜಂಘಂಚ ಅಶ್ವದಂಷ್ಟ್ರಂ ಮಹಾಹನುಂ ।
ರಕ್ತಜಿಹ್ವಂ ಜಟಾಕ್ಷಂ ಚ ಸ್ಥೂಲಾಸ್ಯಂ ದೀರ್ಘನಾಸಿಕಂ ॥ ೭೫ ॥

ಗುಹ್ಯಕಂ ಶಿತಿಕರ್ಣಂ ಚ ಮಹಾನಂದಂ ಮಹಾಮುಖಂ ।
ಏವಂ ವಿಧಂ ಖಶಾಪುತ್ರಂ ವಿಜಜ್ಞೇ ಸಾಽತಿಭೀಷಣಂ ॥ ೭೬ ॥

ತಸ್ಯಾನುಜಂ ದ್ವಿತೀಯಂ ತು ಖಶಾ ಚೈವ ವ್ಯಜಾಯತ ।
ತ್ರಿಶೀರ್ಷಂ ಚ ತ್ರಿಪಾದಂ ಚ ತ್ರಿಹಸ್ತಂ ಕೃಷ್ಣಲೋಚನಂ ॥ ೭೭ ॥

ಊರ್ಧ್ವಕೇಶಂ ಹರಿಚ್ಛ್ಮಶ್ರುಂ ಶಿಲಾಸಂಹನನಂ ಧೃಢಂ ।
ಹ್ರಸ್ವಕಾಯಂ ಸುಬಾಹುಂ ಚ ಮಹಾಕಾಯಂ ಮಹಾಬಲಂ ॥ ೭೮ ॥

ಆಕರ್ಣದಾರಿತಾಸ್ಯಂ ಚ ಲಂಬಭ್ರೂಂ ಸ್ಥೂಲನಾಸಿಕಂ ।
ಸ್ಥೂಲೋಷ್ಠಮಷ್ಟದಂಷ್ಟ್ರಂ ಚ ದ್ವಿಜಿಹ್ವಂ ಶಂಕುಕರ್ಣಕಂ ॥ ೭೯ ॥

ಪಿಂಗಲೋದ್ವೃತ್ತನಯನಂ ಜಟಿಲಂ ಪಿಂಗಲಂ ತಥಾ ।
ಮಹಾಕರ್ಣಂ ಮಹೋರಸ್ಕಂ ಕಟಿಹೀನಂ ಕೃಶೋದರಂ ॥
ನಖಿನಂ ಲೋಹಿತಗ್ರೀವಂ ಸಾಕನಿಷ್ಠಂ ಪ್ರಸೂಯತೇ ॥ ೮೦ ॥

---

ದೀರ್ಘವಾದ ಮೊಳಕಾಲೂ ಅಶ್ವದಂತೆ ಹಲ್ಲುಗಳೂ ಮಹತ್ತಾದ ಗಲ್ಲವೂ ಕೆಂಪಾದ ನಾಲಿಗೆಯೂ ಜಟೆಯಲ್ಲಿ ನೇತ್ರಗಳೂ ವಿಶಾಲಮುಖವೂ ದೀರ್ಘವಾದ ಮೂಗೂ ಗುಹ್ಯೇಂದ್ರಿಯವೂ ಕಪ್ಪಾದ ಶ್ರೋತ್ರಗಳೂ ಮಹಾನಂದವೂ ಮಹಾಮುಖವೂ ಇವುಗಳು ಇದ್ದುವು. ಆ ಖಶೆಯು ಈ ರೀತಿಯಾಗಿ ಅತಿಭಯಂಕರನಾದ ಪುತ್ರನನ್ನು ಪಡೆದಳು.

೭೭–೮೦. ಅನಂತರ ಖಶೆಯು ವಿಲೋಹಿತನ ತಮ್ಮನೂ ಅತಿಭಯಂಕರನೂ ಆದ ದ್ವಿತೀಯಕುಮಾರನನ್ನು ಪಡೆದಳು. ಆ ಖಶೆಯ ಕುಮಾರನಿಗೆ ಮೂರು ತಲೆಗಳು ಮೂರು ಕಾಲುಗಳು ಮೂರು ಹಸ್ತಗಳು ಕೆಂಪುಕಣ್ಣುಗಳು ಮೇಲಕ್ಕ ಎದ್ದು ನಿಂತಿರುವ ಕೇಶಗಳೂ ಹಸುರಾದ ಮೀಸೆದಾಡಿಗಳೂ ಕಲ್ಲಿನಂತೆ ಕಠಿಣವಾದ ಅಂಗಗಳೂ ವೃಢವಾದ ಗಾತ್ರವೂ ಮೋಟಾದ ಶರೀರವೂ ಉದ್ದವಾದ ಭುಜಗಳೂ ದಪ್ಪವಾದ ಗಾತ್ರವು ಮಹಾಶಕ್ತಿಯೂ ಅಗಲವಾದ ಬಾಯಿ ನೇತಾಡುವ ಹುಬ್ಬುಗಳು ದಪ್ಪವಾದ ಮೂಗು ಸ್ಥೂಲವಾದ ತುಟಿ ಉದ್ದವಾದ ಕೋರೆ ಹಲ್ಲುಗಳು ಗೊರೋಚನಂತೆಯೂ ದುಂಡಗೂ ಇರುವ ನೇತ್ರಗಳು ಜಟೆಯು ಗೋರೋಚನ ವರ್ಣವು ಅಗಲವಾದ ಕಣ್ಣುಗಳು ವಿಶಾಲವಾದ ಹೃದಯವು ಕೃಶೋದರವು ಉದ್ದವಾದ ನಖಗಳು ಕೆಂಪಾದ ಕತ್ತು ಇವುಗಳು ಇದ್ದವು. ಇಂತಹ ಘೋರ ರೂಪಿಯಾದ ಕನಿಷ್ಠ ಕುಮಾರನನ್ನು ಹೆತ್ತಳು.

ಸದ್ಯಃ ಪ್ರಸೂತಮಾತ್ರೌ ತು ವಿವೃದ್ಧೌ ಚ ಪ್ರಮಾಣತಃ ।
ಉಪಭೋಗಸಮರ್ಥಾಭ್ಯಾಂ ಶರೀರಾಭ್ಯಾಮುಪಸ್ಥಿತೌ ।
ಸದ್ಯೋಜಾತವಿವೃದ್ಧಾಂಗೌ ಮಾತರಂ ಪರ್ಯಭೂಷ್ಯತಾಂ ॥ ೮೧ ॥

ಜ್ಯಾಯಾಂಸ್ತಯೋಸ್ತು ಯಃ ಕ್ರೂರೋ ಮಾತರಂ ಸೋಭ್ಯಕರ್ಷತ ।
ಅಬ್ರವೀನ್ಮಾನತರಾಯಾಹಿ ಭಕ್ಷ್ಯಾರ್ಥೇ ಕ್ಷುದಯಾರ್ದಿತಃ ॥ ೮೨ ॥

ನ್ಯಷೇಧಯತ್ ಪುನರ್ಹ್ಯೇನಂ ಜ್ಯಾಯಾಂಸಂ ತು ಕನಿಷ್ಠಕಃ ।
ಅಬ್ರವೀತ್ ಸೋಽಸಕೃತ್ತ್ವಂ ವೈ ರಕ್ಷೇಮಾಂ ಮಾತರಂ ಖಶಾಂ ॥
ಬಾಹುಭ್ಯಾಂ ಪರಿಗೃಹ್ಯೇನಂ ಮಾತರಂತಾಂ ವ್ಯಮೋಚಯತ್ ॥ ೮೩ ॥

ಏತಸ್ಮಿನ್ನೇವ ಕಾಲೇ ತು ಪ್ರಾದುರ್ಭೂತಸ್ತಯೋಃ ಪಿತಾ ।
ತೌ ದೃಷ್ಟ್ವಾ ವಿಕೃತಾಕಾರೌ ವಸತಾಂ ಹೀತ್ಯಭಾಷತ ॥ ೮೪ ॥

---

೮೧. ಇಂತಹ ಪುತ್ರರು ಜನಿಸಿದ ಕೂಡಲೆ ವೃದ್ಧಿಯನ್ನು ಪಡೆದು ಉಪಭೋಗಾರ್ಹರಾದ ಶರೀರಗಳಿಂದ ತರುಣರಾದರು ಆಗಲೇ ಹುಟ್ಟಿ ತಕ್ಷಣದಲ್ಲಿಯೇ ಯುವಕರಾದ ಆ ಇಬ್ಬರು ಕುಮಾರರ ಸಂಗಡ ತಾಯಿಯು ಹೊಳೆಯುತ್ತಿದ್ದಳು.

೮೨. ಅವರಿಬ್ಬರಲ್ಲಿ ಅತಿಕ್ರೂರನಾದ ಹಿರಿಯ ಮಗನು ಹಸಿವು ಬಾಯಾರಿಕೆಗಳಿಂದ ಪೀಡಿತನಾಗಿ ತಾಯಿಯನ್ನು ಎಳೆದು ಎಲೈ ತಾಯಿಯೆ ಬಹಳ ಹಸಿವು ಉಂಟಾಗಿರುವುದರಿಂದ ನಿನ್ನನ್ನೇ ಭಕ್ಷಿಸುವೆನೆಂದು ಹೇಳಿದನು.

೮೩. ಆಗ ಕಿರಿಯ ಮಗನು ಹೀಗೆ ತಾಯಿಯನ್ನೇ ಭಕ್ಷಿಸಲು ಹಿಂಸಿಸುತ್ತಿರುವ ಅಣ್ಣನನ್ನು ತಡೆದನು, ಮತ್ತು ಎಲೈ ಸಹೋದರನೇ ಮಾತೆಯಾದ ಈ ಖಶೆಯನ್ನು ಹಿಂಸಿಸಬೇಡ ಇವಳನ್ನು ಸರ್ವಕಾಲದಲ್ಲಿಯೂ ರಕ್ಷಣೆಮಾಡುವುದು ನಮ್ಮ ಕರ್ತವ್ಯವಾಗಿದೆಯೆಂದು ಹೇಳಿ ತನ್ನೆರಡು ಕೈಯ್ಗಳಿಂದ ಎಳೆದು ಆ ವಿಪತ್ತಿನಿಂದ ಬಿಡಿಸಿದನು.

೮೪. ಅದೇ ಸಮಯದಲ್ಲಿ ಆ ಕುಮಾರರ ತಂದೆಯು ಅಕಸ್ಮಾತ್ತಾಗಿ ಅಲ್ಲಿಗೆ ಬಂದನು. ಆ ತಂದೆಯು ಭಯಂಕರಾಕಾರಿಗಳಾದ ಆ ಪುತ್ರರನ್ನು ನೋಡಿ ವಿಸ್ಮಿತನಾಗಿ, ಎಲೈ ಕುಮಾರರೇ, ನೀವು ಇತರ ಸಾಮಾನ್ಯ ಶಿಶುಗಳಂತೆ ತಾಯಿಯ ಬಳಿಯಲ್ಲಿ ವಾಸಿಸಿರೆಂದು ಹೇಳಿದನು.

**ತೌ ತು ತಂ ಪಿತರಂ ದೃಷ್ಟ್ವಾ ಬಲವಂತೌ ತ್ವರಾನ್ವಿತೌ ।**
**ಮಾತುರೇವ ಪುನಶ್ಚಾಂಕೇ ಪ್ರಲಪೇತಾಂ ಸ್ವಮಾಯಯಾ ॥ ೮೫ ॥**

**ಅಥೋಽಬ್ರವೀತ್ ಋಷಿರ್ಭಾರ್ಯಾಮಾವಾಭ್ಯಾಮುಕ್ತವತ್ಯಸಿ ।**
**ಪೂರ್ವಮಾಚಕ್ಷ್ವತತ್ಕೇನ ತಥೈವಾಭ್ಯಾಂ ವ್ಯತಿಕ್ರಮಂ ॥ ೮೬ ॥**

**ಮಾತುಲಂ ಭಜತೇ ಪುತ್ರಃ ಪಿತ್ರ್ಯಂ ಭಜತಿ ಕನ್ಯಕಾ ।**
**ಯಥಾಶೀಲಾ ಭವೇನ್ಮಾತಾ ತಥಾಶೀಲೋ ಭವೇತ್ ಸುತಃ ॥ ೮೭ ॥**

**ಯದ್ವರ್ಣಾ ತು ಭವೇದ್ಭೂಮಿಸ್ತದ್ವರ್ಣಂ ಸಲಿಲಂ ಧ್ರುವಂ ।**
**ಮಾತೄಣಾಂ ಶೀಲದೋಷೇಣ ತಥಾ ಶೀಲಗುಣೈಃ ಪುನಃ ॥**
**ವಿಭಿನ್ನಾಸ್ತು ಪ್ರಜಾಃ ಸರ್ವಾಸ್ತಥಾ ಖ್ಯಾತಿವಶೇನ ಚ ॥ ೮೮ ॥**

---

೮೫. ಅನಂತರ ಬಲಿಷ್ಠರಾದ ಆ ಮಕ್ಕಳು ತಮ್ಮ ತಂದೆಯನ್ನು ನೋಡಿ, ಬೇಗನೇ ತಮ್ಮ ತಾಯಿಯ ತೊಡೆಯ ಮೇಲೆ ಸಾಮಾನ್ಯ ಬಾಲಕರಂತೆ ಅಳುತ್ತಿದ್ದರು.

೮೬. ಆಗ ಕಶ್ಯಪ ಮುನಿಯು ಪತ್ನಿಯಾದ ಖಶೆಗೆ ನಾನು ಪೂರ್ವದಲ್ಲಿ ತಿಳಿಸಿದಂತೆಯೇ ಈ ಮಕ್ಕಳು ನಿನ್ನನ್ನು ಅತಿಕ್ರಮಿಸಿರುವರು. ಇದಕ್ಕೇನುಕಾರಣವೆಂದರೆ! ಮಾತಾಪಿತೃಗಳ ದೋಷಗಳೇ ಇದಕ್ಕೆ ಕಾರಣವೆಂದನು

೮೭. ಸಾಮಾನ್ಯವಾಗಿ ಲೋಕದಲ್ಲಿ ಕುಮಾರರು ಸೋದರಮಾವನನ್ನೂ, ಕುಮಾರಿಯರು ತಂದೆಯನ್ನೂ, ಹೋಲುವುದು ಸಹಜವಾಗಿರುತ್ತದೆ ವಿಶೇಷವಾಗಿ ತಾಯಿಯಲ್ಲಿರುವ ಗುಣಗಳೇ ಬರುವುವು. ತಾಯಿಯಂತೆ ಮಕ್ಕಳೆಂಬ ಗಾದೆಯೂ ಲೋಕದಲ್ಲಿ ವಾಡಿಕೆಯಾಗಿದೆ.

೮೮. ಈ ಜಗತ್ತಿನಲ್ಲಿ ಭೂಮಿಯು ಯಾವ ವರ್ಣವಾಗಿರುತ್ತದೆಯೋ ಜಲವೂ ಅದೇ ವರ್ಣವಾಗಿರುವುದು ಸಹಜವಾಗಿದೆ. ತಾಯಿಯಲ್ಲಿರುವ ಶೀಲಸ್ವಭಾವಗಳೇ ಮಕ್ಕಳಲ್ಲಿ ಉಂಟಾಗುವುವು. ಮಾತೃವಿನ ಗುಣದೋಷಗಳೇ ಮಕ್ಕಳಲ್ಲಿ ಸಂಭವಿಸುತ್ತವೆ. ಈ ಶೀಲಭಾವಗಳೂ, ಪ್ರಖ್ಯಾತಿಯೇ ಮೊದಲಾದ ಗುಣಗಳೂ ಪ್ರತಿ ವ್ಯಕ್ತಿಯಲ್ಲಿಯೂ ಬೇರೆ ಬೇರೆಯಾಗಿರುವುದಕ್ಕೆ ಇದೇ ಮುಖ್ಯಕಾರಣವಾಗಿರುತ್ತದೆ.

ಬಲಶೀಲಾದಿಭಿಸ್ತ್ವಸಾವದಿತಿರ್ಧರ್ಮತತ್ಪರಾ ।
ಧರ್ಮಶೀಲಾದಿಭಿಶ್ಚೈವ ಪ್ರಬೋಧಬಲಶಾಲಿನೀ ॥ ೮೯ ॥

ಗೀತಶೀಲಾ ತಥಾಽರಿಷ್ಟಾ ಮಾಯಾಶೀಲಾ ದನುಃ ಸ್ಮೃತಾ ।
ವಿನತಾ ತು ಪುನರ್ದೇವೀ ವೈಹಾಯಸಗತಿಪ್ರಿಯಾ ॥ ೯೦ ॥

ತಪೋಮಯೇನ ಶೀಲೇನ ಸುರಭಿಃ ಸಮಲಂಕೃತಾ ।
ಕ್ರೋಧಶೀಲಾ ತಥಾ ಕದ್ರೂಃ ಕ್ರೋಧೇನಾಸುಖಶೀಲಕಾ ॥ ೯೧ ॥

ದನಾಯುಷಾಯಾಃ ಶೀಲಂ ವೈ ವೈರಾನುಗ್ರಹಲಕ್ಷಣಂ ।
ತ್ವಂ ಚ ದೇವೀ ಮಹಾಭಾಗೇ ಕ್ರೋಧಶೀಲಾ ಮತಾಸಿ ಮೇ ॥ ೯೨ ॥

ಇತ್ಯೇತಾನಿ ಸ ಶೀಲಾನಿ ಸ್ವಭಾವಾಲ್ಲೋಕನಾನ್ನೃಣಾಂ ।
ಕರ್ಮತೋ ಯತ್ನತೋ ಬುದ್ಧ್ಯಾ ರೂಪತೋ ಬಲತಸ್ತಥಾ ॥
ಕ್ಷಮಾತಶ್ಚೈವ ಭಿನ್ನಾನಿ ಭಾವಿತಾರ್ಥಬಲೇನ ಚ ॥ ೯೩ ॥

---

೮೯ ಮಾತೃಗತವಾದ ಬಲಶೀಲಾದಿಗಳೇ ಪುತ್ರರಿಗೆ ಉಂಟಾಗುವುವು. ಆದುದರಿಂದ ಅದಿತಿಯು ಧರ್ಮಪರಾಯಣೆಯು. ಮತ್ತು ಶೀಲಸ್ವಭಾವಗಳು ಉತ್ತಮವಾಗಿವೆ ಅವಳು ಜ್ಞಾನಬಲಶಾಲಿಯಾಗಿಯೂ, ಸತ್ವಗುಣಸಂಪನ್ನಳಾಗಿಯೂ ಇರುವಳು. ಆದುದರಿಂದ ಅವಳ ಕುಮಾರರಾದ ದೇವತೆಗಳು ಸತ್ವಾದಿಗುಣಸಂಪನ್ನರಾಗಿರುವರು.

೯೦–೯೩. ಅರಿಷ್ಟೆಯು ಗಾನಶೀಲಳು. ದನೂದೇವಿಯು ಮಾಯಾಸ್ವಭಾವವಂತಳು. ವಿನತಾದೇವಿಯಾದರೋ ಆಕಾಶಯಾನದಲ್ಲಿ ಪ್ರೀತಿಯುಳ್ಳವಳು. ಸುರಭಿಯಾದರೋ ತಪೋಮಯವಾದ ಶೀಲದಿಂದ ಅಲಂಕೃತಳು. ಕದ್ರೂದೇವಿಯು ಕೋಪಶಾಲಿನಿಯು. ಕ್ರೋಧವಶದಿಂದ ದುಃಖಿತವಾದ ಸ್ವಭಾವವಂತಳು. ದನಾಯುಷೆಯ ಸ್ವಭಾವವಾದರೋ ವೈರ ಮತ್ತು ಆಗ್ರಹವೇ ಆಗಿರುತ್ತದೆ. ದೇವಿಯಾದ ನೀನಾದರೋ ಭಾಗ್ಯಶಾಲಿನಿಯಾಗಿದ್ದರೂ ಕ್ರೋಧಪರಾಯಣೆಯಾಗಿರುತ್ತೀಯೆ. ಹೀಗೆ ಲೋಕದಲ್ಲಿ ಪ್ರತಿಯೊಬ್ಬರ ಸ್ವಭಾವಗಳೂ ಬೇರೆಬೇರೆಯಾಗಿರುವುದಕ್ಕೆ ಮಾತೃಸ್ವಭಾವವೇ ಕಾರಣವಾಗಿರುತ್ತದೆ. ಆದುದರಿಂದ ಪ್ರತಿಯೊಬ್ಬರ ಕರ್ಮ, ಪ್ರಯತ್ನ, ಬುದ್ಧಿ, ರೂಪ, ಬಲ, ಶಾಂತತೆ ಇವುಗಳು ಅರ್ಥಾನುಗುಣವಾಗಿ ಭಿನ್ನಭಿನ್ನಗಳಾಗಿವೆ.

ರಜಃಸತ್ವತಮೋವೃತ್ತೀರ್ವಿಶ್ವರೂಪಾಃ ಸ್ವಭಾವತಃ ।
ಮಾತುಲಂತ್ವನುಯಾತಾಸ್ತೇ ಪುತ್ರಕಾ ಗುಣವೃತ್ತಿಭಿಃ ॥ ೯೪ ॥

ಇತ್ಯೇವಮುಕ್ತ್ವಾ ಭಗವಾನ್ ಖಶಾಮುಪ್ರತಿಮಾಂ ತದಾ ।
ಪುತ್ರಾನಾಹೂಯ ಸಾಮ್ನಾ ವೈ ಚಕ್ರೇ ಸೋಮಮಭೀತಯಃ ॥ ೯೫ ॥

ತಾಭ್ಯಾಂ ಚ ಯತ್ ಕೃತಂ ತಸ್ಯಾಸ್ತದಾಚಷ್ಟ ತದಾ ಖಶಾ ।
ಮಾತ್ರಾ ಯಥಾ ಸಮಾಖ್ಯಾತಂ ಕರ್ಮ ತಾಭ್ಯಾಂ ಪೃಥಕ್ ಪೃಥಕ್ ॥
ತೇನ ಧಾತ್ವರ್ಥಯೋಗೇನ ತತ್ವದರ್ಶೀ ಚಕಾರ ಹ ॥ ೯೬ ॥

ಯಕ್ಷ ಇತ್ಯೇಷ ಧಾತುರ್ವೈ ಖಾದನೇ ಕೃಷಣೇ ಚ ಸಃ ।
ಯಕ್ಷಯೇತ್ಯುಕ್ತವಾನ್ ಯಸ್ಮಾತ್ ತಸ್ಮಾದ್ಯಕ್ಷೋ ಭವತ್ಯಯಂ ॥ ೯೭ ॥

---

೯೪. ಕಾರಣದಲ್ಲಿರುವ ಸತ್ವರಜಸ್ತಮೋಗುಣಗಳಿಗೆ ಅನುಸಾರವಾಗಿ ಲೋಕದಲ್ಲಿ ಸರ್ವತ್ರ ನಡೆನುಡಿಗಳುಂಟಾಗುವುವು. ಸಾಮಾನ್ಯವಾಗಿ ಸೋದರ ಮಾವನಲ್ಲಿರುವ ಶೀಲಸ್ವಭಾವಗಳನ್ನೇ ಗಂಡುಮಕ್ಕಳು ಅನುಸರಿಸುತ್ತಾರೆ ಎಂದು ತಿಳಿಸಿದನು.

೯೫. ಹೀಗೆ ಕಶ್ಯಪ ಮಹರ್ಷಿಗಳು ಪ್ರಿಯಳಾದ ಖಶಾದೇವಿಗೆ ಉಪದೇಶಿಸಿ, ಪುತ್ರರನ್ನು ಕರೆದು, ಸಾಮಾದ್ಯುಪಾಯಗಳಿಂದ ಭೀತಿರಹಿತರನ್ನಾಗಿ ಮಾಡಿದರು.

೯೬. ತರುವಾಯ ಖಶಾದೇವಿಯು ತನ್ನ ಮಕ್ಕಳು ಮಾಡಿದ ಕಾರ್ಯಗಳನ್ನು ಅರಿಕೆಮಾಡಿಕೊಂಡಳು. ಆ ಮಕ್ಕಳ ತಾಯಿಯಾದ ಖಶೆಯು ಆ ಹುಡುಗರ ವಿಲಕ್ಷಣ ವ್ಯಾಪಾರಗಳನ್ನು ಪತಿಗೆ ತಿಳಿಸಿದಳು. ಆ ಮಾತುಗಳನ್ನು ಕೇಳಿದ ತತ್ವದರ್ಶಿಗಳಾದ ಕಶ್ಯಪರು ಧಾತ್ವರ್ಥಗಳಿಂದ ಅನುಗುಣವಾದ ನಾಮಕರಣವನ್ನು ಮಾಡಿದನು.

೯೭ ಯಕ್ಷವೆಂಬ ಧಾತುವು ಭಕ್ಷಣಾರ್ಥದಲ್ಲಿಯೂ ಆಕರ್ಷಣಾರ್ಥದಲ್ಲಿಯೂ ಪ್ರಸಿದ್ಧವಾಗಿದೆ. ಇವನು ತಾಯಿಯನ್ನು ಎಳೆದು ತಿನ್ನುತ್ತೇನೆಂದು ಯಕ್ಷಧಾತುವಿನ ಅರ್ಥವನ್ನು ಹೇಳಿರುವುದರಿಂದ ಯಕ್ಷನಾಗಲೆಂದು ತಿಳಿಸಿದನು.

ರಕ್ಷ ಇತ್ಯೇಷ ಧಾತುರ್ಯಃ ಪಾಲೇನ ಸ ವಿಭಾವ್ಯತೇ ।
ಉಕ್ತವಾಂಶ್ಚೈವ ಯಸ್ಮಾತ್ತು ರಕ್ಷ ಮೇ ಮಾತರಂ ಖಶಾಂ ॥
ನಾಮ್ನಾಽಯಂ ರಾಕ್ಷಸಸ್ತಸ್ಮಾತ್ ಭವಿಷ್ಯತಿ ತವಾತ್ಮಜಃ ॥ ೯೮ ॥

ಸ ತದಾ ತದ್ವಿಧೌ ದೃಷ್ಟ್ವಾ ವಿಸ್ಮಿತಃ ಪರಿಮೃಗ್ಯ ಚ ।
ತಯೋಃ ಪ್ರಾದಿಶದಾಹಾರಂ ಪ್ರಜಾಪತಿರಸೃಗ್ವಸೇ ॥ ೯೯ ॥

ಪಿತಾ ತೌ ಕ್ಷುಧಿತೌ ದೃಷ್ಟ್ವಾ ವರಂಚೇಮಂ ತಯೋರ್ದದೌ ।
ಯುವಯೋರ್ಹಸ್ತಸಂಪರ್ಶೋ ನಕ್ತಮೇವ ತು ಸರ್ವಶಃ ॥ ೧೦೦ ॥

ನಕ್ತಾಹಾರವಿಹಾರೌ ಚ ದಿವಾ ಸ್ವಪ್ನೋಪಭೋಗಿನೌ ।
ನಕ್ತಂಚೈವ ಬಲೀಯಾಂಸೌ ದಿವಾ ಸುಪ್ತಾವುಭೌ ಯುವಾಂ ॥ ೧೦೧ ॥

---

೯೮. ರಕ್ಷವೆಂಬ ಧಾತುವು ಪಾಲನಾರ್ಥಕವಾಗಿದೆ ಈ ಬಾಲಕನು ತನ್ನ ತಾಯಿಯಾದ ಖಶೆಯನ್ನು ರಕ್ಷಿಸೆಂದು ಅಣ್ಣನನ್ನು ಪ್ರಾರ್ಥಿಸಿಕೊಂಡಿದ್ದರಿಂದ ಈ ನಿನ್ನ ಕುಮಾರನು ರಾಕ್ಷಸ ನಾಮಕನಾಗಲೆಂದು ಖಶೆಗೆ ಹೇಳಿದನು

೯೯ ಅನಂತರ ಪ್ರಜಾಪತಿಯಾದ ಕಶ್ಯಪನು ಆ ವಿಧವಾದ ಮಕ್ಕಳನ್ನು ನೋಡಿ ಆಶ್ಚರ್ಯಗೊಂಡವನಾಗಿ ಅವರಿಬ್ಬರಿಗೂ ಅಭಿಮತವಾದ ರಕ್ತಮಾಂಸಗಳೆಂಬ ಆಹಾರವನ್ನು ಅವರಿಬ್ಬರಿಗೂ ಕೊಡಿಸಿದನು.

೧೦೦. ತರುವಾಯ ತಂದೆಯಾದ ಮುನಿಯು ಕುಮಾರರಿಬ್ಬರೂ ಹಸಿದಿರುವರೆಂದು ತಿಳಿದು ಅವರಿಬ್ಬರಿಗೂ ಒಂದು ವರವನ್ನು ಕೊಟ್ಟನು. ನಿಮ್ಮಿಬ್ಬರಿಗೂ ರಾತ್ರಿಯ ಕಾಲದಲ್ಲಿ ಆಹಾರವು ಯಥೇಚ್ಛವಾಗಿ ಕರಗತವಾಗಲಿ ಎಂದು ವರಗಳನ್ನು ಕೊಟ್ಟನು.

೧೦೧ ಮತ್ತು ನಿಮಗೆ ಆಹಾರವಿಹಾರಗಳು ರಾತ್ರಿಯ ಕಾಲದಲ್ಲಿ ಉಂಟಾಗಲಿ ಹಗಲಲ್ಲಿ ನಿದ್ರೆಯೂ ಸ್ವಪ್ನವೂ ಸಂಭವಿಸಲಿ ನಿಮಗೆ ಶಕ್ತಿಸಾಮರ್ಥ್ಯಗಳು ಹಗಲಲ್ಲಿಯೇ ಹೆಚ್ಚಾಗದೇ ರಾತ್ರಿಯ ಕಾಲದಲ್ಲಿಯೂ ಅಧಿಕವಾಗಲಿ, ಹಗಲಲ್ಲಿ ನಿಮಗೆ ನಿದ್ರೆಯು ಸಂಭವಿಸಲೆಂದು ವರವನ್ನು ಕೊಟ್ಟನು.

ಮಾತಂ ರಕ್ಷತಂಚೈವ ಧರ್ಮಶ್ಚೈವಾನುಶಿಷ್ಯತಾಂ ।
ಇತ್ಯುಕ್ತ್ವಾ ಕಶ್ಯಪಃ ಪುತ್ರೌ ತತ್ರೈವಾಂತರಧೀಯತ ॥ ೧೦೨ ॥

ಗತೇ ಪಿತರಿ ತೌ ವೀರೌ ನಿಸರ್ಗಾದೇವ ದಾರುಣೌ ।
ವಿಪರ್ಯಯೇಣ ವರ್ತಂತೌ ಕಿಂಭಕ್ಷ್ಯೌ ಪ್ರಾಣಿಹಿಂಸಕೌ ॥ ೧೦೩ ॥

ಮಹಾಬಲೌ ಮಹಾಸತ್ವೌ ಮಹಾಕಾಯೌ ದುರಾಸದೌ ।
ಮಾಯಾವಿನೌ ಚ ದೃಶ್ಯೌ ತಾವಂತರ್ಧಾನಗತಾವುಭೌ ॥ ೧೦೪ ॥

ತೌ ಕಾಮರೂಪಿಣೌ ಘೋರೌ ವಿಕೃತಾಙ್ಗೌ ಸ್ವಭಾವತಃ ।
ರೂಪಾನುರೂಪೈರಾಹಾರೈಃ ಪ್ರಭವೇತಾಮುಭಾವಪಿ ॥ ೧೦೫ ॥

---

೧೦೨. ಮತ್ತು ನೀವು ನಿಮ್ಮ ಧರ್ಮಗಳನ್ನೂ ತ್ಯಜಿಸದೇ ನಿಮ್ಮ ಆಹಾರ ವಿಹಾರಗಳನ್ನು ನಿರ್ವಹಿಸಿಕೊಂಡು ನಿಮ್ಮ ಜನನಿಯನ್ನು ರಕ್ಷಿಸಿರಿ ನಿಮ್ಮ ಧರ್ಮ ಗಳನ್ನು ಪಾಲಿಸಿರೆಂದು ಕಶ್ಯಪ ಮಹರ್ಷಿಯು ಆ ಇಬ್ಬರು ಮಕ್ಕಳಿಗೂ ಹೇಳಿ ಅಲ್ಲಿಯೇ ಯೋಗಮಹಿಮೆಯಿಂದ ಮಾಯವಾದನು.

೧೦೩. ತಂದೆಯು ಹೀಗೆ ಹೇಳಿ ಹೊರಟು ಹೋಗಲಾಗಿ ಸ್ವಭಾವದಿಂದ ಶೂರರೂ ಅತಿ ಕಠಿಣರೂ ಆದ ಅವರಿಬ್ಬರೂ ವಿರುದ್ಧಾಚಾರಿಗಳೂ ಪ್ರಾಣಿಹಿಂಸಕರೂ ಆಹಾರಾಕಾಂಕ್ಷಿಗಳೂ ಆಗಿ ಸಂಚರಿಸಿದರು.

೧೦೪. ಅವರಿಬ್ಬರೂ ಮಹಾಬಲಿಷ್ಠರೂ ಮಹಾಶಕ್ತಿವಂತರೂ ಮಹಾ ಕಾಯರೂ ಶತ್ರುಗಳಿಗೆ ಅಸಾಧ್ಯರೂ ಮಾಯಾವಿಗಳೂ ಆಗಿ ಅಂತರ್ಧಾನವಾದರು ಮಾಯವಾದರು.

೧೦೫. ಸ್ವೇಚ್ಛಾರೂಪಿಗಳೂ ಘೋರರೂ ಸಹಜವಾಗಿ ವಿಕೃತ ರೂಪಿಗಳೂ ಆದ ಅವರು ತಮತಮಗೆ ಅನುಗಣವಾದ ಆಹಾರವನ್ನು ಹುಡುಕುತ್ತಾ ಸಂಚರಿಸು ತ್ತಿದ್ದರು.

ದೇವಾಸುರನೃಷೀಂಶ್ಚೈವ ಗಂಧರ್ವಾನ್ ಕಿನ್ನರಾನಪಿ ।
ಪಿಶಾಚಾಂಶ್ಚ ಮನುಷ್ಯಾಂಶ್ಚ ಪನ್ನಗಾನ್ ಪಕ್ಷಿಣಃ ಪಶೂನ್ ॥ ೧೦೬ ॥
ಭಕ್ಷಾರ್ಥಮಪಿ ಲಿಪ್ಸಂತೌ ಸರ್ವತಸ್ತೌ ನಿಶಾಚರೌ ।
ಇಂದ್ರೇಣ ತು ವರೌ ಚೈವ ಧೃತೌ ದತ್ವಾ ಸುವಧ್ಯತಾಂ ॥ ೧೦೭ ॥

ಯಕ್ಷಸ್ತು ನ ಕದಾಚಿದ್ವೈ ನಿಶೀಥೇ ಹ್ಯೇಕಕಶ್ಚಿರಂ ।
ಆಹಾರಂ ಸ ಪರೀಪ್ಸನ್ ವೈ ಶಬ್ದೇನಾನುಚಚಾರ ಹ ॥ ೧೦೮ ॥

ಆಸಸಾದ ಪಿಶಾಚೌ ದ್ವೌ ಜಂತುಚಂಡೌ ಚ ತಾವುಭೌ ।
ಪಿಂಗಾಕ್ಷಾವೂರ್ಧ್ವರೋಮಾಣೌ ವೃತ್ತಾಕ್ಷೌ ತು ಸುದಾರುಣೌ ॥ ೧೦೯ ॥

ಅಸೃಙ್ಮಾಂಸವಸಾಹಾರೌ ಪುರುಷಾದೌ ಮಹಾಬಲೌ ।
ಕನ್ಯಾಭ್ಯಾಂ ಸಹಿತೌ ತೌ ತು ತಾಭ್ಯಾಂ ಪ್ರಿಯಚಿಕೀರ್ಷಯಾ ॥ ೧೧೦ ॥

---

೧೦೬-೧೦೭. ಕಾಮರೂಪಿಗಳಾದ ಅವರಿಬ್ಬರೂ ತಪಸ್ಸನ್ನು ಮಾಡಿ ಇಂದ್ರನಿಂದ ಸಾವಿಲ್ಲದ ವರಗಳನ್ನು ಪಡೆದು ಗರ್ವಿಷ್ಠರಾಗಿ, ದೇವತೆಗಳು, ಅಸುರರು, ಋಷಿಗಳು, ಗಂಧರ್ವರು, ಕಿನ್ನರರು, ಪಿಶಾಚಿಗಳು, ಮನುಷ್ಯರು, ಸರ್ಪಗಳು, ಪಕ್ಷಿಗಳು, ಪಶುಗಳು ಇವುಗಳನ್ನು ಭಕ್ಷಿಸುವುದಕ್ಕಾಗಿ ಹುಡುಕುತ್ತಾ. ರಾತ್ರಿಯಲ್ಲೆಲ್ಲಾ ಸಂಚರಿಸಿದರು

೧೦೮. ಯಕ್ಷನಾದರೋ ಒಂದಾನೊಂದು ದಿನ ರಾತ್ರಿಯ ಕಾಲದಲ್ಲಿ ಆಹಾರಕ್ಕಾಗಿ ಏಕಾಂಗಿಯಾಗಿ (ಸಂಚರಿಸುತ್ತಾ) ಗರ್ಜಿಸುತ್ತಾ ಹೊರಟನು.

೧೦೯–೧೧೦. ಹೀಗಿರುವಲ್ಲಿ ಒಂದಾನೊಂದು ದಿವಸ ಆ ಯಕ್ಷನು ಬಾಯಿಯಲ್ಲಿ ಪ್ರಾಣಿಗಳನ್ನು ಕಚ್ಚಿಕೊಂಡಿರುವುವೂ, ಕೆಂಪಾದ ಕಣ್ಣುಳ್ಳವೂ, ಮೇಲಕ್ಕೆ ಎತ್ತಿರುವ ರೋಮಗಳುಳ್ಳವೂ, ಗುಂಡಾದ ಕಣ್ಣುಗಳುಳ್ಳವೂ, ಅತ್ಯಂತ ಭಯಂಕರಗಳೂ, ರಕ್ತಮಾಂಸ ಮೇಧಸ್ಸು ಇವುಗಳೇ ಆಹಾರವುಳ್ಳವೂ, ಪುರುಷಭಕ್ಷಕಗಳೂ, ಮಹಾಬಲಿಷ್ಠಗಳೂ, ಕುಮಾರಿಯರಿಂದ ಸಹಿತವೂ, ಪುತ್ರಿಯರ ಹಿತಾಕಾಂಕ್ಷಿಗಳೂ ಆದ ಎರಡು ಪಿಶಾಚಿಗಳನ್ನು ನೋಡಿದನು.

**ದ್ವೇ ಕನ್ಯೇ ಕಾಮರೂಪಿಣ್ಯೌ ತದಾಚಾರೇ ಚ ತೇ ಶುಭೇ ।**
**ಆಹಾರಾರ್ಥಮಟಂತೌ ತೌ ಕನ್ಯಾಭ್ಯಾಂ ಸಹಿತಾವುಭೌ ॥ ೧೧೧ ॥**

**ತೇಽಪಶ್ಯತಾಂ ರಾಕ್ಷಸಂ ತತ್ರ ಕಾಮರೂಪಂ ಮಹಾಬಲಂ ।**
**ಸಹಸಾ ಸನ್ನಿಪಾತೇ ತು ದೃಷ್ಟ್ವಾ ಚೈವ ಪರಸ್ಪರಂ ॥ ೧೧೨ ॥**

**ರಕ್ಷಮಾಣೌ ತತೋಽನ್ಯೋನ್ಯಂ ಪರಸ್ಪರಜಿಘೃಕ್ಷವಃ ।**
**ಪಿತರಾವೂಚತುಃ ಕನ್ಯೇ ಯುವಾಮಾನಯತ ದ್ರುತಂ ॥ ೧೧೩ ॥**

**ಜೀವಗ್ರಾಹಂ ವಿಗೃಹ್ಯೈನಂ ವಿಸ್ಫುರಂತಂ ಪದೇ ಪದೇ ।**
**ತತಃ ಸಮಭಿಸೃತ್ಯೈನಂ ಕನ್ಯೇ ಜಗೃಹತುಸ್ತದಾ ॥**
**ಗೃಹೀತ್ವಾ ಹಸ್ತಯೋಸ್ತಾಭ್ಯಾಮಾನೀತೇ ಪಿತೃಸಂಸದಿ ॥ ೧೧೪ ॥**

---

೧೧೧. ಆ ಇಬ್ಬರು ಕುಮಾರಿಯರೂ ಕಾಮರೂಪಿಯರೂ, ತಂದೆಯಂತೆ ನಡೆನುಡಿಗಳುಳ್ಳವರೂ, ಮಂಗಳಾಂಗಿಯರೂ ಆಗಿದ್ದರು. ಆ ಪಿಶಾಚಿಗಳೆರಡು ಆಹಾರಕ್ಕಾಗಿ ತಮ್ಮ ಪುತ್ರಿಯರೊಡನೆ ಸಂಚಾರಮಾಡುತ್ತಿದ್ದರು

೧೧೨. ಅನಂತರ ಆ ಪಿಶಾಚಿಗಳೆರಡೂ ಕಾಮರೂಪಿಯೂ, ಮಹಾಬಲಿಷ್ಠನೂ ಆದ ಯಕ್ಷನನ್ನು ನೋಡಿದರು ಈ ಸಮಾಗಮವು ಅವರಿಗೆ ಅಕಸ್ಮಾತ್ತಾಗಿ ಆದುದರಿಂದ ಅನ್ಯೋನ್ಯವಾಗಿ ಕ್ರೂರದೃಷ್ಟಿಯಿಂದ ನೋಡಿದರು

೧೧೩. ಅನಂತರ ಅವರು ತಮ್ಮ ತಮ್ಮನ್ನು ರಕ್ಷಿಸಿಕೊಳ್ಳುವುದಕ್ಕಾಗಿ ಅನ್ಯೋನ್ಯವಾಗಿ ಹಿಡಿದುಕೊಳ್ಳಲು ಉದ್ಯುಕ್ತರಾದರು. ಆಗ ಆ ಕನ್ನಿಕೆಯರು ತಮ್ಮ ತಂದೆಯನ್ನು ಕುರಿತು ಬೇಗನೇ ಆ ಪುರುಷನನ್ನು (ಯಕ್ಷನನ್ನು) ಕರತರುವಂತೆ ಹೇಳಿದರು.

೧೧೪. ತರುವಾಯ ಆ ಕನ್ನಿಕೆಯರಿಬ್ಬರೂ ಪ್ರತಿಕ್ಷಣದಲ್ಲಿಯೂ ನಾನಾ ರೀತಿಯಾಗಿ ಹೊಳೆಯುತ್ತಿರುವ ಆ ಯಕ್ಷನನ್ನು ಪ್ರಾಣಸಹಿತವಾಗಿ ಹಿಡಿದು ತರುವಂತೆ ತಮ್ಮ ತಂದೆಗೆ ಹೇಳಿ, ತಾವೇ ಅವನ ಬಳಿಗೆ ಹೋಗಿ, ಅವನ ಕೈಯ್ಗಳನ್ನು ಸ್ವೀಕರಿಸಿ ತಮ್ಮ ತಂದೆಯ ಸಮೀಪಕ್ಕೆ ಕರೆತಂದರು.

**ತಾಭ್ಯಾಂ ಕರೇ ಗೃಹೀತಂ ತಂ ಪಿಶಾಚಮುಖ ರಾಕ್ಷಸಂ ।**
**ಪೃಚ್ಛತಾಂ ಕೋಽಸಿ ಕಸ್ಯ ತ್ವಂ ಸ ಚ ಸರ್ವಮಭಾಷತ ॥ ೧೧೫ ॥**

**ತಸ್ಯ ಕರ್ಮೋರ್ಜಿವಿಜ್ಞಾತಂ ಜ್ಞಾತ್ವಾ ತೌ ರಾಕ್ಷಸರ್ಷಭೌ ।**
**ಅಜಂಚ ಖಂಡಂ ತಸ್ಮೈತೇ ಪ್ರತ್ಯಪಾದಯತಾಂ ಸುತೇ ॥**
**ತೌ ತುಷ್ಟೌ ಕರ್ಮಣಾ ತಸ್ಯ ಕನ್ಯೇ ದ್ವೇ ದದತುಃ ಸುತೇ ॥ ೧೧೬ ॥**

**ಪೈಶಾಚೇನ ವಿವಾಹೇನ ಸುದತ್ತ್ಯಾ ಬುದ್ಧವಾಹನಃ ।**
**ಅಜಃ ಖಂಡಶ್ಚ ತಾಭ್ಯಾಂ ತೌ ತದಾಶ್ರಾವಯತಾಂ ಧನಂ ॥ ೧೧೭ ॥**

**ಇಯಂ ಬ್ರಹ್ಮಧನಾ ನಾಮ ಮಮ ಕನ್ಯಾ ಹ್ಯಲೋಮಿಕಾ ।**
**ಬ್ರಹ್ಮಸತ್ವಧನಾಹಾರಾ ಇತಿ ಖಂಡೋಽಭ್ಯಭಾಷತ ॥ ೧೧೮ ॥**

**ಇಯಂ ಜಂತುಧನಾ ನಾಮ ಕನ್ಯಾ ಸರ್ವಾಂಗಸುಂದರೀ ।**
**ಜಂತವೋಽಸ್ಯಾ ಧನಾಹಾರಾ ಸ್ತಾವಶ್ರಾವಯತಾಂ ಧನಂ ॥ ೧೧೯ ॥**

---

೧೧೫. ಅನಂತರ ಆ ಪಿಶಾಚಿಗಳೆರಡೂ ತಮ್ಮ ಕುಮಾರಿಯರೇ ಕರೆದುತಂದ ರಾಕ್ಷಸನನ್ನು ನೋಡಿ, ನೀನು ಯಾರು? ಯಾರ ಕುಮಾರನು? ಇಲ್ಲಿಗೆ ಏಕೆ ಬಂದಿರುವೆ? ಎಂದು ಕೇಳಿದರು. ತರುವಾಯ ಅವನು ಸರ್ವವನ್ನೂ ವಿವರಿಸಿದನು.

೧೧೬. ಅನಂತರ ರಾಕ್ಷಸೋತ್ತಮರಾದ ಅಜ ಖಂಡರಂಬುವರು ಆ ಯಕ್ಷನ ಪರಾಕ್ರಮಗಳನ್ನು ಕೇಳಿ ಸಂತುಷ್ಟರಾಗಿ ತಮ್ಮ ಕುಮಾರಿಯರಿಬ್ಬರನ್ನೂ ಅವನಿಗೆ ಕೊಟ್ಟರು. ಆ ಯಕ್ಷನ ಪರಾಕ್ರಮದಿಂದ ಮೆಚ್ಚಿದ ರಾಕ್ಷಸರು ಸಂತೋಷದಿಂದ ತಮ್ಮ ಕುಮಾರಿಯರನ್ನು ಅವನಿಗೆ ಕನ್ಯಾದಾನ ಮಾಡಿದರು

೧೧೭. ಆಗ ಅಜ ಖಂಡರೆಂಬ ಇಬ್ಬರು ರಾಕ್ಷಸರು ಪೈಶಾಚವಿಧಿಯಿಂದ ಸುದತಿಯರಿಗೆ ವಿವಾಹವನ್ನು ಮಾಡಿಕೊಟ್ಟರು. ಆ ಕನ್ಯಾದಾನವನ್ನು ಮಾಡುವ ಕಾಲದಲ್ಲಿ ಆ ರಾಕ್ಷಸರಿಬ್ಬರೂ ವರೋಪಚಾರದ ಧನವನ್ನು ಘೋಷಿಸಿ ಹೇಳಿದರು.

೧೧೮–೧೧೯. ಈ ನನ್ನ ಕುಮಾರಿಯು ಬ್ರಹ್ಮಧನವೆಂಬ ನಾಮವುಳ್ಳವಳೂ, ಅಲೋಮಿಕಾನಾಮಕಳೂ ಆಗಿರುವಳು. ಇವಳು ಬ್ರಹ್ಮಧನಳೂ, ಸತ್ವಾಹಾರಿಯೂ ಆಗಿರುವಳು ಎಂಬುದಾಗಿ ಖಂಡನು ಯಕ್ಷನಿಗೆ ಹೇಳಿದನು. ಈ ಸರ್ವಾಂಗಸುಂದರಿ ಯಾದ ನನ್ನ ಕುಮಾರಿಯು ಜಂತುಧನನಾಮಕಳಾಗಿರುವಳು. ಇವಳಿಗೆ ಪ್ರಾಣಿಗಳೇ ಆಹಾರ ಮತ್ತು ಧನವಾಗಿರುವುವು ಎಂದು ಹೇಳಿದರು.

ಸರ್ವಾಂಗಕೇಶೀ ನಾಮ್ನಾ ಚ ಕನ್ಯಾ ಜಂತುಧನಾ ತಥಾ ।
ಅಕರ್ಣಾಂತಾಪ್ಯರೋಮಾ ಚ ಕನ್ಯಾ ಬ್ರಹ್ಮಧನಾ ತು ಯಾ ॥ ೧೨೦ ॥

ಬ್ರಹ್ಮಧನಂ ಪ್ರಸೂತಾ ಸಾ ಧನಾನಾಚ್ಚೈವ ಕನ್ಯಕಾ ।
ಏವಂ ಪಿಶಾಚಕನ್ಯೇ ತೇ ಮಿಥುನೇ ದ್ವೇ ಪ್ರಸೂಯತಾಂ ॥
ತಯೋಃ ಪ್ರಜಾವಿಸರ್ಗಂ ಚ ಬ್ರುವತೋ ಮೇ ನಿಬೋಧತ ॥ ೧೨೧ ॥

ಹೇತಿಃ ಪ್ರಹೇತಿರುಗ್ರಶ್ಚ ಪೌರುಷೇಯೋ ವಧಸ್ತಥಾ ।
ವಿಸ್ಫೂರ್ಜಿಶ್ಚೈವ ವಾತಶ್ಚ ಆಪೋವ್ಯಾಘ್ರಸ್ತಥೈವ ಚ ॥ ೧೨೨ ॥

ಸರ್ಪಶ್ಚ ರಾಕ್ಷಸಾ ಹ್ಯೇತೇ ಯಾತುಧಾನಾತ್ಮಜಾ ದಶ ।
ಸೂರ್ಯಸ್ಯಾನುಚರಾ ಹ್ಯೇತೇ ಸಹ ತೇನ ಭ್ರಮಂತಿ ಚ ॥ ೧೨೩ ॥

---

೧೨೦ ಸರ್ವಾಂಗ ಕೇಶಿನಾಮಕಳೂ ಪ್ರಾಣಿಗಳೇ ಧನವಾಗಿಯುಳ್ಳವಳೂ ಆದ ಈ ಕುಮಾರಿಯು, ಸುಪ್ರಸಿದ್ಧಳಾಗಿರುವಳು ಬ್ರಹ್ಮಧನ ನಾಮಕಳಾದ ಈ ಕುಮಾರಿಯು ರೋಮರಹಿತಳಾಗಿಯೂ ಕರ್ಣಗಳವರೆಗೂ ನೇತ್ರವುಳ್ಳವಳಾಗಿಯೂ ರೋಮಶೂನ್ಯಳಾಗಿಯೂ ಇರುವಳು ಎಂದು ಅವರು ಹೇಳಿದರು.

೧೨೧. ಆ ಬ್ರಹ್ಮಧನವೆಂಬ ಕುಮಾರಿಯು ಧ್ಯಾನಯೋಗದಿಂದ ಬ್ರಹ್ಮಜ್ಞಾನದಿಂದ ಮಗನನ್ನು ಹೆತ್ತಳು. ಹೀಗೆ ಪಿಶಾಚಕನ್ಯೆಯಾದ ಅವರಿಬ್ಬರೂ ಎರಡು ಮಿಥುನಗಳನ್ನು ಪಡೆದರು. ಆ ಪಿಶಾಚಿಯರ ಸಂತಾನವನ್ನು ಹೇಳುವೆನು ಕೇಳಿರೆಂದನು.

೧೨೨-೧೨೩. ಹೇತಿ, ಪ್ರಹೇತಿ, ಉಗ್ರ, ಪೌರುಷೇಯ, ವಧ, ವಿಸ್ಫಪೂರ್ಜಿ, ವಾತ, ಆಪವ್ಯಾಘ್ರ, ಸರ್ಪ ರಾಕ್ಷಸರೆಂಬ ಈ ಹತ್ತುಜನರೂ ಯಾತುಧಾನರ ಮಕ್ಕಳಾಗಿರುವರು. ಇವರು ಸೂರ್ಯದೇವನ ಭೃತ್ಯರಾಗಿ ಅವನ ಸಂಗಡ ಸಂಚರಿಸುವರು.

ಹೇತಿಪುತ್ರಸ್ತಥಾ ಲಂಕುರ್ಲಂಕೋದ್ವಾವೇವ ಚಾತ್ಮಜೌ ।
ಮಾಲ್ಯವಾಂಶ್ಚ ಸುಮಾಲೀ ಚ ಪ್ರಹೇತನಯಾರ್ ಶೃಣು ॥
ಪ್ರಹೇತಿತನಯಃ ಶ್ರೀಮಾನ್ ಪುಲೋಮಾ ನಾಮ ವಿಶ್ರುತಃ ॥ ೧೨೪ ॥

ವಧಪುತ್ರೋ ನಿಕುಂಭಶ್ಚ ಕ್ರೂರೋ ವೈ ಬ್ರಹ್ಮರಾಕ್ಷಸಃ ।
ವಾತಪುತ್ರೋ ವಿರಾಗಸ್ತು ಆಪಪುತ್ರಸ್ತು ಜಂಬುಕಃ ॥ ೧೨೫ ॥

ವ್ಯಾಘ್ರಪುತ್ರೋ ನಿರಾನಂದೋ ಜಂತೂನಾಂ ವಿಘ್ನಕಾರಕಃ ।
ಇತ್ಯೇತೇ ವೈ ಪರಿಕ್ರಾಂತಾಃ ಕ್ರೂರಾಃ ಸರ್ವೇ ತು ರಾಕ್ಷಸಾಃ ॥ ೧೨೬ ॥

ಕೀರ್ತಿತಾ ಯಾತುಧಾನಾಸ್ತು ಬ್ರಹ್ಮಧಾನಾನ್ ನಿಬೋಧತ ।
ಯಜ್ಞಃ ಪಿತಾ ಧುನಿಃ ಕ್ಷೇಮೋ ಬ್ರಹ್ಮಾ ಪಾಪೋಽಥ ಯಜ್ಞಹಾ ॥ ೧೨೭ ॥

ಸ್ವಾಕೋಟಕಃ ಕಲಿಃ ಸರ್ಪೋ ಬ್ರಹ್ಮಧಾನಾತ್ಮಜಾ ದಶ ।
ಸ್ವಸಾರೋ ಬ್ರಹ್ಮರಾಕ್ಷಸ್ಯ ತೇಷಾಂಚೇಮಾಃ ಸುದಾರುಣಾಃ ॥ ೧೨೮ ॥

---

೧೨೪. ಆ ಹತ್ತು ಜನರಲ್ಲಿ ಹೇತಿಯೆಂಬುವನಿಗೆ ಲಂಕುವೆಂಬ ಕುಮಾರನೂ ಆ ಲಂಕುವಿಗೆ ಮಾಲ್ಯವಂತ ಸುಮಾಲಿಯೆಂಬ ಇಬ್ಬರು ಕುಮಾರರೂ ಜನಿಸಿದರು. ಈಗ ಪ್ರಹೇತಿಯ ಕುಮಾರರನ್ನು ತಿಳಿಸುವೆನು ಕೇಳಿರೆಂದನು. ಪ್ರಹೇತಿಯ ಕುಮಾರನು ಶ್ರೀಮಂತನೂ ಪುಲೋಮನಾಮಕನೂ ಪ್ರಖ್ಯಾತನೂ ಆಗಿರುವನು.

೧೨೫. ವಧನ ಕುಮಾರನಾದ ನಿಕುಂಭನು ಕ್ರೂರನೂ ಬ್ರಹ್ಮರಾಕ್ಷಸನೂ ಆಗಿರುವನು ವಾತನಿಗೆ ವಿರಾಗನೆಂಬ ಪುತ್ರನೂ, ಆವನಿಗೆ ಜಂಬುಕನೆಂಬ ಸುತನೂ ಜನಿಸಿ ಲೋಕ ವಿಖ್ಯಾತವಾಗಿರುವರು.

೧೨೬ ವ್ಯಾಘ್ರನಿಗೆ ನಿರಾನಂದನೆಂಬ ಪುತ್ರನು ಜನಿಸಿದನು. ಅವನು ಸರ್ವಪ್ರಾಣಿಗಳಿಗೂ ವಿಘ್ನಕಾರಿಯಾಗಿಯೂ ಹಿಂಸಕನಾಗಿಯೂ ಇದ್ದನು. ಹೀಗೆ ಈ ರಾಕ್ಷಸರೆಲ್ಲರೂ ಅತಿಕ್ರೂರರಾಗಿಯೂ ಭ್ರಮಣಶೀಲರಾಗಿಯೂ ಇದ್ದರು

೧೨೭–೧೨೮. ಎಲೈ ವಿಪ್ರವರ್ಯರೇ ಇದುವರೆಗೂ ಯಾತುದಾನರ ವಿಷಯ ಗಳನ್ನು ಹೇಳಿದ್ದಾಗಿದೆ. ಬ್ರಹ್ಮಧಾನರನ್ನು ಈಗ ನಿರೂಪಿಸುವೆನು ಕೇಳಿರಿ. ಬ್ರಹ್ಮ ಧಾನನಿಗೆ ಯಜ್ಞಪಿತಾ, ಧುನಿ, ಕ್ಷೇಮ, ಬ್ರಹ್ಮ, ಪಾಪ ಯಜ್ಞಘಾತುಕ, ಸ್ವಾಕೋಟಿಕ, ಕಲಿ, ಸರ್ಪರೆಂಬ ಹತ್ತು ಜನ ಮಕ್ಕಳು ಜನಿಸಿ ಪ್ರಸಿದ್ಧರಾಗಿದ್ದರು. ಅವರಿಗೆ ಅತಿಕ್ರೂರರಾದ, ಬ್ರಹ್ಮರಾಕ್ಷಸಿಯರು ಭಗಿನಿಯರಾಗಿದ್ದರು.

ರಕ್ತಕರ್ಣಾ ಮಹಾಜಿಹ್ವಾಽಕ್ಷಯಾ ಚೈವೋಪಹಾರಿಣೀ ।
ಏತಾಸಾಮನ್ವಯೇ ಜಾತಾಃ ಪೃಥಿವ್ಯಾಂ ಬ್ರಹ್ಮರಾಕ್ಷಸಾಃ || ೧೨೯ ||

ಶ್ಲೇಷ್ಮಾತಕತರುಷ್ವೇತೇ ಪ್ರಾಯಶಸ್ತು ಕೃತಾಲಯಾಃ ।
ಇತ್ಯೇತೇ ರಾಕ್ಷಸಾಃ ಕ್ರಾಂತಾ ಯಕ್ಷಸ್ಯಾಪಿ ನಿಬೋಧತ || ೧೩೦ ||

ಚಕಮೇಽಪ್ಸರಸಂ ಯಕ್ಷಃ ಪಂಚಸ್ಥೂಲಾಂ ಕ್ರತುಸ್ಥಲೀಂ ।
ತಾಂ ಲಿಪ್ಸುಶ್ಚಿಂತಯಾನಶ್ಚ ನಂದನಂ ಸ ಚಚಾರ ಹ || ೧೩೧ ||

ವೈಭ್ರಾಜಂ ಸುರಭಿಂಚೈವ ತಥಾ ಚೈತ್ರರಥಂ ಚ ಯತ್ ।
ದೃಷ್ಟವಾನ್ ನಂದನೇ ತಸ್ಮಿನ್ನಪ್ಸರೋಭಿಃ ಸಹಾಸತೀಂ || ೧೩೨ ||

---

೧೨೯. ರಕ್ತಕರ್ಣಾ, ಮಹಾಜಿಹ್ವಾ, ಅಕ್ಷಯಾ, ಉಪಹಾರಿಣೀ, ಇವರು ನಾಲ್ವರೂ ಬ್ರಹ್ಮರಾಕ್ಷಸಿಯರಾಗಿದ್ದರು ಇವರ ವಂಶದಲ್ಲಿ ಹುಟ್ಟಿದವರೇ ಈಗಲೂ ಈ ಲೋಕದಲ್ಲಿ ಬ್ರಹ್ಮರಾಕ್ಷಸರಾಗಿರುವರು.

೧೩೦. ಈ ಮೇಲೆ ನಿರೂಪಿಸಿದ ರಾಕ್ಷಸರೆಲ್ಲರೂ ಪ್ರಾಯಿಕವಾಗಿ ಚಳ್ಳೀ ಮರಗಳಲ್ಲಿಯೇ ಮನೆಗಳನ್ನು ಮಾಡಿಕೊಂಡು ವಾಸವಾಗಿರುವರು ಈ ರೀತಿಯಾಗಿ ಈ ರಾಕ್ಷಸರು ಜಗತ್ತಿನಲ್ಲಿ ವ್ಯಾಪ್ತರಾಗಿರುವರು. ಈಗ ಯಕ್ಷರ ವಿಷಯಗಳನ್ನು ಸಾಂಗವಾಗಿ ನಿರೂಪಿಸುವೆನು ಕೇಳಿರೆಂದನು.

೧೩೧. ಯಕ್ಷೇಶ್ವರನು, ಕ್ರತುಸ್ಥಲಿಯಲ್ಲಿ ವಾಸಿಸುವಳೂ ಪಂಚಸ್ಥೂಲ ನಾಮಕಳೂ ಆದ ಅಪ್ಸರಸಿಯನ್ನು ಮದುವೆಯಾಗಲು ಬಯಿಸಿ ಅವಳನ್ನು ಪಡೆಯು ವುದಕ್ಕಾಗಿ ನಂದನವನದಲ್ಲಿ ಇಲ್ಲಿಂದಲ್ಲಿ ಸಂಚರಿಸುತ್ತಿದ್ದನು.

೧೩೨. ತರುವಾಯ ಅಪರ್ಸಸಿಯನ್ನು ಹೊಂದುವುದಕ್ಕಾಗಿ ವೈಭ್ರಾಜ, ಸುರಭಿ ಮತ್ತು ಚೈತ್ರರಥ ಇವುಗಳಲ್ಲಿ ಸಂಚಾರಮಾಡಿ, ಕೊನೆಗೆ ನಂದನ ವನದಲ್ಲಿ ಅಪ್ಸರಸಿಯ ರೊಡನೆ ವಾಸಿಸುವ ಆಕೆಯನ್ನು ನೋಡಿದನು.

**ನೋಪಾಯಂ ವಿಂದತೇ ತತ್ರ ತಸ್ಯಾ ಲಾಭಾಯ ಚಿಂತಯನ್ ।**
**ದೂಷಿತಃ ಸ್ವೇನ ರೂಪೇಣ ಕರ್ಮಣಾ ತೇನ ದೂಷಿತಃ ॥ ೧೩೩ ॥**

**ಮನೋದ್ವಿಜಂತೇ ಭೂತಾನಿ ಭಯಾವೃತ್ತಸ್ಯ ಸರ್ವಶಃ ।**
**ತತ್ಕಥಂ ನಾಮ ಚಾರ್ವಂಗೀಂ ಪ್ರಾಪ್ನುಯಾಮಹಮಂಗನಾಂ ॥ ೧೩೪ ॥**

**ದೃಷ್ಟ್ವೋಪಾಯಂ ತತಃ ಸೋಽಥ ಶೀಘ್ರಕಾರೀ ವ್ಯವರ್ತತ ।**
**ಕೃತ್ವಾ ರೂಪಂ ಬಹುಮತಂ ಗಂಧರ್ವಸ್ಯ ತು ಗುಹ್ಯಕಃ ॥**
**ತತಃ ಸೋಽಪ್ಸರಸಾಂ ಮಧ್ಯೇ ತಾಂ ಜಗ್ರಾಹ ಕ್ರತುಸ್ಥಲೀಂ ॥ ೧೩೫ ॥**

**ಬುಧ್ವಾ ಚ ಸುರುಚಿಂತಂ ಸಾ ಭಾವೇನೈವಾಭ್ಯವರ್ತತ ।**
**ಸಂವೃತಃ ಸ ತಯಾ ಸಾರ್ಧಂ ದೃಶ್ಯಮಾನೋಽಪ್ಸರೋಗಣೈಃ ॥ ೧೩೬ ॥**

---

೧೩೩. ತರುವಾಯ ಯಕ್ಷನು ಅಪ್ಸರಸಿಯನ್ನು ಪಡೆಯುವ ಕ್ರಮವು ಯಾವುದು. ಹೇಗೆ ಹೊಂದಬೇಕೆಂದು ಯೋಚಿಸಿದರೂ ಉಪಾಯವು ಮಾತ್ರ ತಿಳಿಯಲಿಲ್ಲ. ಆಗ ಅವನು ಆ ಅಪ್ಸರಸಿಯರ ರೂಪವನ್ನು ನೋಡಿ, ತನ್ನ ವಿಕಾರವಾದ ರೂಪವನ್ನೂ ನಡೆನುಡಿಗಳನ್ನೂ ದೂಷಿಸಿಕೊಂಡನು.

೧೩೪. ಲೋಕದಲ್ಲಿರುವ ಸರ್ವಪ್ರಾಣಿಗಳೂ ನನ್ನ ಈ ಭಯಂಕರವಾದ ರೂಪವನ್ನು ನೋಡಿ ಬೇಸರಗೊಳ್ಳುತ್ತವೆ. ಮತ್ತು ಭಯವನ್ನೂ ಹೊಂದುತ್ತವೆ ಆದುದರಿಂದ ಸರ್ವಾಂಗಸುಂದರಿಯಾದ ಈ ನಾರೀಮಣಿಯನ್ನು ಹೇಗೆ ಹೊಂದಲೆಂದು ಬಹಳವಾಗಿ ಚಿಂತಿಸುತ್ತಿದ್ದನು.

೧೩೫. ಅನಂತರ ಆ ಯಕ್ಷನು ಒಂದು ಉಪಾಯವನ್ನು ಹುಡುಕಿ, ಸರ್ವಕಾರ್ಯಗಳಿಗೂ ವಿಘ್ನಕಾರಿಯಾದ ತನ್ನ ಆ ಘೋರರೂಪವನ್ನು ಮರೆಮಾಚಿಕೊಂಡು ಗಂಧರ್ವರಿಗೆ ಯೋಗ್ಯವೂ, ಅತಿ ಸುಂದರವೂ ಆದ ರೂಪವನ್ನು ಸ್ವೀಕರಿಸಿದನು. ತರುವಾಯ ನಂದನವನದಲ್ಲಿ ಸಂಚರಿಸಲು, ಅವಳು ಆ ದಿವ್ಯರೂಪವನ್ನು ನೋಡಿ ಮೆಚ್ಚಿದಳು ತರುವಾಯ ಯಕ್ಷನು ಅಪ್ಸರಸಿಯರ ಮಧ್ಯದಲ್ಲಿರುವ ಕ್ರತುಸ್ಥಲಿಯನ್ನು ಹೊಂದಿದನು.

೧೩೬. ಆ ಕ್ರತುಸ್ಥಲಿಯು ಆ ಯಕ್ಷನ ಸುಂದರವಾದ ರೂಪವನ್ನು ನೋಡಿ, ಇದೇ ಸಹಜವಾದ ರೂಪವೆಂದು ಭಾವಿಸಿ ಮೆಚ್ಚಿದಳು. ಆಗ ಯಕ್ಷನು ಅಪ್ಸರಸಿಯರ ಮಧ್ಯದಲ್ಲಿ ಕ್ರಕುಸ್ಥಲಿಯೆಂಬ ಅಪ್ಸರಸಿಯನ್ನು ವರಿಸಿದನು.

ತತ್ರ ಸ ಸಿದ್ಧಕರಣಃ ಸದ್ಯೋ ಜಾತಃ ಸುತೋಽಸ್ಯ ವೈ ।
ಪರಿಣಾಹೋಚ್ಛ್ರಯೈರ್ಯುಕ್ತಃ ಸದ್ಯೋ ವೃತ್ತೋ ಜ್ವಲನ್ ಶ್ರಿಯಾ॥೧೩೭॥

ರಾಜಾಹಮಿತಿ ನಾಭಿರ್ಹಿ ಪಿತರಂ ಸೋಽಭ್ಯಭಾಷತ ।
ತವಾತ್ರ ಜಾತೇ ನ ಭೀತಿಃ ಪಿತಾ ತಂ ಪ್ರತ್ಯುವಾಚ ಹ ॥ ೧೩೮ ॥

ಮಾತ್ರಾನುರೂಪೋ ರೂಪೇಣ ಪಿತುರ್ವೀರ್ಯೇಣ ಜಾಯತೇ ।
ಜಾತೇ ಸ ತಸ್ಮಿನ್ ಹರ್ಷೇಣ ಸ್ವರೂಪಂ ಪ್ರತ್ಯಪದ್ಯತ ॥ ೧೩೯ ॥

ಸ್ವಭಾವಂ ಪ್ರತಿಪದ್ಯಂತೇ ಬೃಹಂತೋ ಯಕ್ಷರಾಕ್ಷಸಾಃ ।
ಮ್ರಿಯಮಾಣಾಃ ಪ್ರಸುಪ್ತಾಶ್ಚ ಕ್ರುದ್ಧಾ ಭೀತಾಃ ಪ್ರಹರ್ಷಿತಾಃ ॥ ೧೪೦ ॥

---

೧೩೭. ಹೀಗೆ ಆ ದಂಪತಿಗಳು ಸುಖಿಯಾಗಿರಲು ತಕ್ಷಣದಲ್ಲಿಯೇ ಅವಳಿಗೆ ಪುತ್ರ ಜನನವಾಯಿತು. ಆ ಕುಮಾರನು ಅತ್ಯುನ್ನತನೂ, ಅತಿಸ್ಥೂಲನೂ, ಕಾಂತಿಯುತನೂ ಆಗಿ ಹೊಳೆಯುತ್ತಿದ್ದನು.

೧೩೮. ಹುಟ್ಟಿದ ಆ ಹುಡುಗನು ತೇಜೋವಂತನಾಗಿ, ತಂದೆಯನ್ನು ನೋಡಿ ನಾನು ರಾಜನಾಗಿರುವೆನೆಂದು ತಿಳಿಸಿದನು. ಆಗ ತಂದೆಯು ನಿನಗೆ ಯಾವ ವಿಧವಾದ ಭೀತಿಯೂ ಇಲ್ಲ ನಿನ್ನ ಇಷ್ಟದಂತೆಯೇ ಆಗಲೆಂದು ಸಮಾಧಾನಮಾಡಿದನು.

೧೩೯. ಈ ಜಗತ್ತಿನಲ್ಲಿ ಸಾಮಾನ್ಯವಾಗಿ ಪುತ್ರನು ತಾಯಿಯ ರೂಪ ಸೌಂದರ್ಯಗಳನ್ನೂ, ತಂದೆಯ ಶೌರ್ಯೋದಾರ್ಯಗಳನ್ನೂ ಪಡೆಯುವನು. ಅಂದರೆ ಮಗನಿಗೆ ತಾಯಿಯ ರೂಪವೂ, ತಂದೆಯ ಪರಾಕ್ರಮವೂ ಉಂಟಾಗುವುವು. ಪುತ್ರನು ಹೀಗೆ ಜನಿಸಲಾಗಿ ಆ ಯಕ್ಷನು ಸಂತೋಷದಿಂದ ತನ್ನ ನಿಜರೂಪವನ್ನು ಹೊಂದಿದನು.

೧೪೦. ಮಹಾರಾಕ್ಷಸರು ಮತ್ತು ಯಕ್ಷರು ಸಾಯುವಾಗಲೂ, ನಿದ್ರಿಸುವಾಗಲೂ, ಕೋಪಿಸಿಗೊಂಡಾಗಲೂ, ಭೀತರಾದಾಗಲೂ, ಸಂತೋಷ ಹೊಂದಿದಾಗಲೂ ತಮ್ಮ ತಮ್ಮ ನಿಜರೂಪಗಳನ್ನು ಹೊಂದುವರು. ಆದುದರಿಂದ ಯಕ್ಷನು ಪುತ್ರೋತ್ಸವ ಕಾಲದಲ್ಲಿ ತನ್ನ ಸಹಜವಾದ ರೂಪವನ್ನು ಹೊಂದಿದನು.

ತತೋಽಬ್ರವೀದಪ್ಸರಸಃ ಸ್ಮಯಮಾನಃ ಸ ಗುಹ್ಯಕಃ ।
ಗೃಹಂ ಮೇ ಗಚ್ಛ ಸುಶ್ರೋಣಿ ಸ ಪುತ್ರಾ ವರವರ್ಣಿನೀ ॥ ೧೪೧ ॥

ಇತ್ಯುಕ್ತ್ವಾ ಸಹಸಾ ತಂ ಚ ದೃಷ್ಟ್ವಾ ಸ್ವಂ ರೂಪಮಾಸ್ಥಿತಂ ।
ವಿಭ್ರಾಂತಾಃ ಪ್ರಾದ್ರವನ್ ಭೀತಾಃ ಕ್ರೋಧಮಾನಾಽಪ್ಸರೋಗಣಾಃ ॥ ೧೪೨ ॥

ಗಚ್ಛಂತೀರನ್ವಗಚ್ಛದ್ಯಾ ಪುತ್ರಸ್ತಾಂ ಸಾಂತ್ವಯನ್ ಗಿರಾ ।
ಗಂಧರ್ವಾಪ್ಸರಸಾಂ ಮಧ್ಯೇ ತಾಂ ನೀತ್ವಾ ಸ ನ್ಯವರ್ತತ ॥ ೧೪೩ ॥

ತಾಂ ಚ ದೃಷ್ಟ್ವಾ ಸಮುತ್ಪತ್ತಿಂ ಯಕ್ಷಸ್ಯಾಪ್ಸರಸಾಂಗಣಾಃ ।
ಯಕ್ಷಾಣಾಂ ತ್ವಂ ಜನಿತ್ರೀತಿ ಪ್ರೋಚುಸ್ತಾಂ ವೈ ಕ್ರತುಸ್ಥಲೀಂ ॥ ೧೪೪ ॥

---

೧೪೧. ಅನಂತರ ಸಂತೋಷಯುಕ್ತನಾದ ಆ ಯಕ್ಷನು ಎಲೌ ವರಾಂಗಿಯೂ, ಸುಂದರಿಯೂ ಆದ ಪ್ರಿಯಳೇ, ನೀನು ಪುತ್ರಸಹಿತಳಾಗಿ ನಮ್ಮ ಮನೆಗೆ ಹೊರಡೆಂದು ಹೇಳಿದನು

೧೪೨. ತರುವಾಯ ಆ ಮಾತನ್ನು ಕೇಳಿದ ಅಪ್ಸರಸಿಯು ಪತಿಯ ಘೋರವಾದ ಆ ಆಕಾರವನ್ನು ನೋಡಿ ವಿಭ್ರಾಂತಳಾಗಿ ಭಯದಿಂದಲೂ ಕೋಪದಿಂದಲೂ ಕೂಡಿ ಅಪ್ಸರಸಿಯರ ಗುಂಪಿನೊಡನೆ ಓಡಿಹೋದಳು.

೧೪೩. ಆಗ ಆ ಕುಮಾರನು ಅಪ್ಸರಸಿಯಗಣದೊಂದಿಗೆ ಓಡಿಹೋಗುವ ತಾಯಿಯನ್ನು ನೋಡಿ ಸಮಾಧಾನ ಮಾಡಿದನು. ತರುವಾಯ ಗಂಧರ್ವಾಪ್ಸರಸಿಯರ ಮಧ್ಯದಲ್ಲಿ ಆ ತಾಯಿಯನ್ನು ಕರೆತಂದು ನೀತಿಯನ್ನು ಹೇಳಿ ಹಿಂತಿರುಗಿಸಿದನು.

೧೪೪. ಆಗ ಅಪ್ಸರಸಿಯರ ಗುಂಪು ಆ ಯಕ್ಷಕುಮಾರನ ಉತ್ಪತ್ತಿಯನ್ನು ಕೇಳಿ ಆ ಕ್ರತುಸ್ಥಳಿಯನ್ನು ನೋಡಿ ಎಲೌ ಸಖಿಯೇ ನೀನು ಯಕ್ಷನ ಮಾತೆಯಾಗಿರುತ್ತೀಯೆ ಆದುದರಿಂದ ಪತಿಯ ಬಳಿಗೆ ಹೋಗುವುದು ಉಚಿತವೆಂದು ಅಪ್ಸರಸಿಯರು ಸಮಾಧಾನವನ್ನು ಹೇಳಿದರು.

ಜಗಾಮ ಸಹ ಪುತ್ರೇಣ ತತೋ ಯಕ್ಷಃ ಸ್ವಮಾಲಯಂ ।
ನ್ಯಗ್ರೋಧರೋಹಿಣಂ ನಾಮ ಗುಹ್ಯಕಾ ಯತ್ರ ಶೇರತೇ ॥
ತಸ್ಮಾನ್ನಿವಾಸೋ ಯಕ್ಷಾಣಾಂ ನ್ಯಗ್ರೋಧಃ ಸರ್ವತಃ ಪ್ರಿಯಃ ॥ ೧೪೫ ॥

ಯಕ್ಷೋ ರಜತನಾಭಸ್ತು ಗುಹ್ಯಕಾನಾಂ ಪಿತಾಮಹಃ ।
ಅನುಹ್ರಾದಸ್ಯ ದೈತಸ್ಯ ಭದ್ರಾಮತಿವರಾಂ ಸುತಾಂ ॥
ಉಪಯೇಮೇ ಸ ಭದ್ರಾಯಾಂ ಯಸ್ಯಾಂ ಮಣಿವರೋ ವಶೀ ॥ ೧೪೬ ॥

ಜಜ್ಞೇ ಸ ಮಣಿಭದ್ರಂ ಚ ಶಕ್ರತುಲ್ಯಪರಾಕ್ರಮಂ ।
ತಯೋಃ ಪತ್ನ್ಯೌ ಭಗಿನ್ಯೌ ತು ಕ್ರತುಸ್ಥಲ್ಯಾತ್ಮಜೇ ಶುಭೇ ॥ ೧೪೭ ॥

ನಾಮ್ನಾ ಪುಣ್ಯಜನೀ ಚೈವ ತಥಾ ದೇವಜನೀ ಚ ಯಾ ।
ವಿಜಜ್ಞೇ ಮಣಿಭದ್ರಾತ್ತು ಪುತ್ರಾನ್ ಪುಣ್ಯಜನೀ ಶುಭಾನ್ ॥ ೧೪೮ ॥

---

೧೪೫. ತರುವಾಯ ಯಕ್ಷನು ತನ್ನ ಕುಮಾರನ ಸಂಗಡ ಗುಹ್ಯಕರಿಗೆ ಆಶ್ರಯವೂ ನ್ಯಗ್ರೋಧರೋಹಿಣ ನಾಮಕವೂ ಆದ ತನ್ನ ಮನೆಗೆ ಹೊರಟನು. ಯಾವ ಪ್ರದೇಶದಲ್ಲಿ ಸರ್ವ ಯಕ್ಷರಿಗೂ ಪ್ರಿಯವಾದ ಆಲದ ವೃಕ್ಷಗಳು ಎಲ್ಲೆಲ್ಲಿಯೂ ವ್ಯಾಪ್ತವಾಗಿರುತ್ತವೆಯೋ ಅಂತಹ ವಾಸಸ್ಥಾನಕ್ಕೆ ಯಕ್ಷನು ಹೋದನು.

೧೪೬. ರಜತನಾಭನೆಂಬ ಯಕ್ಷನು ಗುಹ್ಯಕರಿಗೆ ಪಿತಾಮಹನಾಗಿದ್ದನು. ಅವನು ಅನುಹ್ರಾದನೆಂಬ ದೈತ್ಯನ ಪುತ್ರಿಯೂ ಅತ್ಯಂತ ಸುಂದರಿಯೂ ಆದ ಭದ್ರೆಯೆಂಬುವಳನ್ನು ಮದುವೆಯಾದನು. ಅವನು ಭದ್ರೆಯಲ್ಲಿ ಮಣಿವರನೆಂಬ ಕುಮಾರನನ್ನು ಪಡೆದನು.

೧೪೭. ಆ ಭದ್ರೆಯು, ಶಕ್ರನಿಗೆ ಸಮಾನ ಪರಾಕ್ರಮಿಯಾದ ಮಣಿಭದ್ರನೆಂಬ ಕುಮಾರನನ್ನು ಪಡೆದಳು. ಆ ದಂಪತಿಗಳ ಕುಮಾರ ಕುಮಾರಿಯರು ಇಂದ್ರನಿಗೆ ಸಮಾನ ಪರಾಕ್ರಮಿಗಳಾಗಿದ್ದರು.

೧೪೮. ಆ ಮಣಿಭದ್ರನಿಗೆ ಪುಣ್ಯಜನೀ ದೇವಜನೀ ಎಂಬ ಇಬ್ಬರು ಪುತ್ರಿಯರು ಉದ್ಭವಿಸಿದರು. ಅವರಲ್ಲಿ ಪುಣ್ಯಜನೀ ಎಂಬುವಳು ಮಂಗಳಪ್ರದರಾದ ಇಪ್ಪತ್ತುನಾಲ್ಕು ಜನ ಕುಮಾರರನ್ನು ಪಡೆದಳು.

ಸಿದ್ಧಾರ್ಥಂ ಸೂರ್ಯತೇಜಂ ಚ ಸುಮಂತಂ ನಂದನಂ ತಥಾ ।
ಕನ್ಯಕಂ ಯವಿಕಂಚೈವ ಮಣಿದತ್ತಂ ವಸುಂ ತಥಾ || ೧೪೯ ||

ಸರ್ವಾನುಭೂತಂ ಶಂಖಂ ಚ ಪಿಂಗಾಕ್ಷಂ ಭೀರುಮೇವ ಚ ।
ತಥಾ ಮಂದರಶೋಭಿಂ ಚ ಪದ್ಮಂ ಚಂದ್ರಪ್ರಭಂ ತಥಾ || ೧೫೦ ||

ಮಘಪೂರ್ಣಂ ಸುಭದ್ರಂ ಚ ಪ್ರದ್ಯೋತಂ ಚ ಮಹೌಜಸಂ ।
ದ್ಯುತಿಮುತ್ಕೇತುಮಂತೌ ಚ ಮಿತ್ರಂ ಮೌಲಿಸುದರ್ಶನಾ || ೧೫೧ ||

ಚತ್ವಾರೋ ವಿಂಶತಿಶ್ಚೈವ ಪುತ್ರಾಃ ಪುಣ್ಯಜನಾಃ ಶುಭಾಃ ।
ಜಜ್ಞಿರೇ ಮಣಿಭದ್ರಸ್ಯ ತೇ ಸರ್ವೇ ಪುಣ್ಯಲಕ್ಷಣಾಃ ||
ತೇಷಾಂ ಪುತ್ರಾಶ್ಚ ಪೌತ್ರಾಶ್ಚ ಯಕ್ಷಾಃ ಪುಣ್ಯಜನಾಃ ಶುಭಾಃ || ೧೫೨ ||

ವಿಜಜ್ಞೇ ದೇವಜನನೀ ಪುತ್ರಾನ್ ಮಣಿವರಾತ್ಮಜಾನ್ ।
ಪೂರ್ಣಭದ್ರಂ ಹೇಮರಥಂ ಮಣಿಮನ್ನಂದಿವರ್ಧನೌ || ೧೫೩ ||

ಕುಸ್ತುಂಬುರುಂ ಪಿಶಂಗಾಭಂ ಸ್ಥೂಲಕರ್ಣಂ ಮಹಾಜಯಂ ।
ಶ್ವೇತಂ ಚ ವಿಪುಲಂ ಚೈವ ಪುಷ್ಪವಂತಂ ಭಯಾವಹಂ || ೧೫೪ ||

---

೧೪೯–೧೫೧. ಅವರು ಯಾರಂದರೆ :–ಸಿದ್ಧಾರ್ಥ, ಸೂರ್ಯತೇಜ, ಸುಮಂತ, ನಂದನ, ಕನ್ಯಕ, ಯವಿಕ, ಮಣಿದತ್ತ ವಸು, ಸರ್ವಾನುಭೂತ, ಶಂಖ, ಪಿಂಗಾಕ್ಷ ಭೀರು, ಮಂದರಶೋಭಿ, ಪದ್ಮ, ಚಂದ್ರಪ್ರಭ, ಮಘಪೂರ್ಣ, ಸುಭದ್ರ, ಪ್ರದ್ಯೋತ, ಮಹೌಜಸ, ದ್ಯುತಿಮಂತ, ಕೇತುಮಂತ, ಮಿತ್ರ, ಮೌಲಿ, ಸುದರ್ಶನರೆಂಬವರು.

೧೫೨ ಈ ಇಪ್ಪತ್ತುನಾಲ್ಕು ಜನರೂ ಮಂಗಳಪ್ರದರಾದ ಪುಣ್ಯಜನರೆಂದು ಪ್ರಖ್ಯಾತರಾಗಿರುವರು. ಹೀಗೆ ಮುನಿಭದ್ರನಿಗೆ ಶೋಭನಾಂಗಗಳೂ ಪುಣ್ಯಲಕ್ಷಣ ವುಳ್ಳವರೂ ಆದ ಈ ಪುತ್ರರು ಸುಪ್ರಸಿದ್ಧರಾಗಿರುವರು. ಆ ಯಕ್ಷನ ಮಕ್ಕಳು ಮೊಮ್ಮಕ್ಕಳೂ ಆದ ಯಕ್ಷರೂ ಸಹ ಸುಪ್ರಸಿದ್ಧರಾಗಿಯೂ ಮಂಗಳಕರರಾಗಿಯೂ ಇದ್ದರು

೧೫೩–೧೫೭. ಆ ಮಣಿವರನಿಗೆ ದೇವ ಜನನಿಯಲ್ಲಿ ಪೂರ್ಣಭದ್ರ ಹೇಮ ರಥ, ಮಣಿಮಂತ, ನಂದಿವರ್ಧನ, ಕುಸ್ತುಂಬುರು, ಪಿಶಂಗಾಭ, ಸ್ಥೂಲಕರ್ಣ, ಮಹಾಜಯ, ಶ್ವೇತ, ವಿಪುಲ, ಪುಷ್ಪವಂತ, ಭಯಾವಹ, ಪದ್ಮವರ್ಣ, ಸುನೇತ್ರ,

ಪದ್ಮವರ್ಣಂ ಸುನೇತ್ರಂ ಚ ಯಕ್ಷಂ ಬಾಲಂ ಬಕಂ ತಥಾ ।
ಕುಮುದಂ ಕ್ಷೇಮಕಂಚೈವ ವರ್ಧಮಾನಂ ತಥಾ ದಮಂ ॥ ೧೫೫ ॥

ಪದ್ಮನಾಭಂ ವರಾಂಗಂ ಚ ಸುವೀರಂ ವಿಜಯಂ ಕೃತಿಂ ।
ಪೂರ್ಣಮಾಸಂ ಹಿರಣ್ಯಾಕ್ಷಂ ಸುರೂಪಂಚೈವಮಾದಯಃ ॥ ೧೫೬ ॥
ಪುತ್ರಾ ಮಣಿವರಸ್ಯೈತೇ ಯಕ್ಷಾ ವೈ ಗುಹ್ಯಕಾಃ ಸ್ಮೃತಾಃ ।

ಸುರೂಪಾಶ್ಚ ವಿರೂಪಾಶ್ಚ ಸ್ರಗ್ವಿಣಃ ಪ್ರಿಯದರ್ಶನಾಃ ॥
ತೇಷಾಂ ಪುತ್ರಾಶ್ಚ ಪೌತ್ರಾಶ್ಚ ಶತಶೋಽಥ ಸಹಸ್ರಶಃ ॥ ೧೫೭ ॥

ಖಶಾಯಾಸ್ತ್ವಪರೇ ಪುತ್ರಾ ರಾಕ್ಷಸಾಃ ಕಾಮರೂಪಿಣಃ ।
ತೇಷಾಂ ಯಥಾ ಪ್ರಧಾನಾನ್ ವೈ ವರ್ಣ್ಯಮಾನಾನ್ನಿಬೋಧತ ॥ ೧೫೮ ॥

ಲಾಲಾವಿಃ ಕುಥನೋಽಭೀಮಃ ಸುಮಾಲೀ ಮಧುರೇವ ಚ ।
ವಿಸ್ಫೂರ್ಜಿತೋ ವಿದ್ಯುಜ್ಜಿಹ್ವೋ ಮಾತಂಗೋ ಧೂಮ್ರಿತಸ್ತಥಾ ॥ ೧೫೯ ॥

---

ಯಕ್ಷ, ಬಾಲ, ಬಕ, ಕುಮುದ, ಕ್ಷೇಮಕ. ವರ್ಧಮಾನ, ದಮ, ಪದ್ಮನಾಭ, ವರಾಂಗ, ಸುವೀರ, ವಿಜಯ, ಕೃತಿ, ಪೂರ್ಣಮಾಸ, ಹಿರಣ್ಯಾಕ್ಷ, ಸುರೂಪ ಇವರೇ ಮೊದಲಾದ ಅನೇಕ ಸುಪ್ರಸಿದ್ಧರಾದ ಪುತ್ರರು ಜನಿಸಿದರು. ಮಣಿವರನ ಕುಮಾರರಾದ ಈ ಯಕ್ಷರೆಲ್ಲರೂ ಗುಹ್ಯಕರೆಂದು ಪ್ರಸಿದ್ಧರಾಗಿದ್ದರು. ಅವರೆಲ್ಲರೂ ಸುರೂಪರೂ, ವಿರೂಪಿಗಳೂ, ಮಾಲೆಧಾರಿಗಳೂ, ಪ್ರಿಯದರ್ಶಿಗಳೂ ಆಗಿರುವರು. ಅವರ ಮಕ್ಕಳೂ ಪೌತ್ರರೂ ಆದ ಸಾವಿರಾರು ಜನರು ಸುಪ್ರಸಿದ್ದರು.

೧೫೮. ಖಶೆಯ ಇತರರಾದ ಪುತ್ರರು, ರಾಕ್ಷಸರೂ ಕಾಮರೂಪಿಗಳೂ ಆಗಿರುವರು. ಅವರಲ್ಲಿ ಪ್ರಮುಖರಾದವರನ್ನು ವರ್ಣಿಸುವೆನು ಕೇಳಿರೆಂದನು. ಅವರು ಯಾರೆಂಬುದನ್ನು ವಿಸ್ತಾರವಾಗಿ ವರ್ಣಿಸುವೆನು.

೧೫೯–೧೬೨. ಲಾಲಾವಿ, ಕುಥನ, ಭೀಮ, ಸುಮಾಲೀ, ಮಧು, ವಿಸ್ಫೂರ್ಜಿತ, ವಿದ್ಯುಜ್ಜಿಹ್ವ, ಮಾತಂಗ, ಧೂಮ್ರಿತಿ, ಚಂದ್ರಾರ್ಕ, ಸುಕರ, ಬುಧ್ನ, ಕಪಿಲೋಮ, ಪ್ರಹಾಸಕ, ಕ್ರೀಡ, ಪರಶುನಾಭ, ಚಕ್ರಾಕ್ಷ, ನಿಶಾಚರ, ತ್ರಿಶಿರಸ,

ಚಂದ್ರಾರ್ಕಃ ಸುಕರೋ ಬುಧ್ನಃ ಕಪಿಲೋಮಾ ಪ್ರಹಾಸಕಃ ।
ಕ್ರೀಡಃ ಪರಶುನಾಭಶ್ಚ ಚಕ್ರಾಕ್ಷಶ್ಚ ನಿಶಾಚರಃ ॥ ೧೬೦ ॥

ತ್ರಿಶಿರಾಃ ಶತದಂಷ್ಟ್ರಶ್ಚ ತುಂಡಕೇಶಶ್ಚ ರಾಕ್ಷಸಃ ।
ಯಕ್ಷಶ್ಚಾಕಂಪನಶ್ಚೈವ ದುರ್ಮುಖಶ್ಚ ಶಿಲೀಮುಖಃ ॥ ೧೬೧ ॥

ಇತ್ಯೇತೇ ರಾಕ್ಷಸಾವರಾ ವಿಕ್ರಾಂತಾ ಗಣರೂಪಿಣಃ ।
ಸರ್ವಲೋಕಚರಾಸ್ತೇ ತು ತ್ರಿದಶಾನಾಂ ಸಮುಕ್ರಮಾಃ ॥ ೧೬೨ ॥

ಸಪ್ತ ಚಾನ್ಯಾ ದುಹಿತರಸ್ತಾಃ ಶೃಣುಧ್ವಂ ಯಥಾಕ್ರಮಂ ।
ತಾಸಾಂ ಚ ಯಃ ಪ್ರಜಾಸರ್ಗೋ ಯೇನ ಚೋತ್ಪಾದಿತಾ ಗಣಾಃ ॥ ೧೬೩ ॥

ಆಲಂಬಾ ಉತ್ಕಚಾ ಕೃಷ್ಣಾ ನಿರ್ಋತಾ ಕಪಿಲಾ ಶಿವಾ ।
ಕೇಶಿನೀ ಚ ಮಹಾಭಾಗಾ ಭಗಿನ್ಯಃ ಸಪ್ತಯಾಃ ಸ್ಮೃತಾಃ ॥ ೧೬೪ ॥

---

ಶತದಂಷ್ಟ್ರ, ತುಂಡಕೇಶ, ರಾಕ್ಷಸ, ಯಕ್ಷ, ಅಕಂಪನ, ದುರ್ಮುಖ, ಶಿಲೀಮುಖ ಇವರೇ ಮೊದಲಾದ ರಾಕ್ಷಸೋತ್ತಮರೂ ಮಹಾ ಶೂರರೂ, ಗುಣವಂತರೂ, ಸುಂದರರೂ, ಸರ್ವಲೋಕಚಾರಿಗಳೂ, ದೇವತೆಗಳಿಗೆ ಸಮಾನ ಪರಾಕ್ರಮಿಗಳೂ, ಲೋಕವಿಖ್ಯಾತರೂ ಆಗಿರುವರು.

೧೬೩. ಇವರಲ್ಲದೆ ಏಳುಜನ ಹೆಣ್ಣುಮಕ್ಕಳೂ ಸಹ ಖಶೆಗೆ ಉತ್ಪನ್ನರಾದರು. ಅವರ ವಿಷಯಗಳನ್ನೂ ಸಹ ವಿಸ್ತಾರವಾಗಿ ನಿರೂಪಿಸುವೆನು ಕೇಳಿರೆಂದನು. ಆಹೆಣ್ಣುಮಕ್ಕಳಿಂದ ಯಾವ ಪ್ರಜಾಸೃಷ್ಟಿಯಾಯಿತು. ಆ ಗಣಗಳು ಆವುವು ? ಇವನ್ನು ತಿಳಿಸುವೆನು ಕೇಳಿರೆಂದನು

೧೬೪. ಆಲಂಬಾ, ಉತ್ಕಚಾ, ಕೃಷ್ಣಾ, ನಿರ್ಋತಾ, ಕಪಿಲಾ, ಶಿವಾ, ಕೇಶಿನೀ ಎಂಬ ಸಪ್ತಭಗಿನಿಯರು ಮಹಾನುಭಾವರಾಗಿ ಹುಟ್ಟಿದರು ಅವರು ಲೋಕ ವಿಖ್ಯಾತರಾಗಿದ್ದರು.

**ತಾಭ್ಯೋ ಲೋಕಾಮಿಷಾದಶ್ಚ ಹಂತಾರೋ ಯುದ್ಧದುರ್ಮದಾಃ ।**
**ಉದೀರ್ಣಾ ರಾಕ್ಷಸಗಣಾ ಇಮೇ ಉತ್ಪಾದಿತಾಃ ಶುಭಾಃ ॥ ೧೬೫ ॥**

**ಆಲಂಬೇಯೋ ಗಣಃ ಕ್ರೂರ ಉತ್ಕಚೇಯೋ ಗಣಸ್ತಥಾ ।**
**ತಥಾ ಕಾರ್ಷ್ಣೇಯಶ್ಶೈವೇಯಾ ರಾಕ್ಷಸಾಹ್ಯುತ್ತಮಾ ಗಣಾಃ ॥ ೧೬೬ ॥**

**ತಥೈವ ನೈರ್ಋತೋ ನಾಮ ತ್ರ್ಯಂಬಕಾನುಚರೇಣ ಹ ।**
**ಉತ್ಪಾದಿತಃ ಪ್ರಜಾಸರ್ಗೋ ಗಣೇಶ್ವರಚರೇಣ ತು ॥ ೧೬೭ ॥**

**ಉತ್ಪಾದಿತಾ ಬಲವತಾ ಉದೀರ್ಣಾ ಯಕ್ಷರಾಕ್ಷಸಾಃ ।**
**ವಿಕ್ರಾಂತಾಃ ಶೌರ್ಯಸಂಪನ್ನಾ ನೈರ್ಋತಾ ದೇವರಾಕ್ಷಸಾಃ ॥**
**ಯೇಷಾಮಧಿಪತಿರ್ಯುಕ್ತೋ ನಾಮ್ನಾ ಖ್ಯಾತೋ ವಿರೂಪಕಃ ॥ ೧೬೮ ॥**

---

೧೬೫. ಈ ಸಪ್ತಜನರಿಗೂ ಲೋಕಮಾಂಸಭಕ್ಷಕರೂ, ಲೋಕನಾಶಕರೂ, ಯುದ್ಧದಲ್ಲಿ ದುರ್ಮದರೂ, ಉದೀರ್ಣ ಪರಾಕ್ರಮಿಗಳೂ, ಶುಭ್ರರೂ ಆದ ರಾಕ್ಷಸರ ಗಣಗಳು ಉತ್ಪನ್ನವಾದುವು.

೧೬೬. ಆ ಗಣಗಳಲ್ಲಿ ಆಲಂಬೆಯರ ಗಣವು ಅತಿ ಕ್ರೂರವಾಗಿರುವುದು. ಇದರಂತೆ ಉತ್ಕಚೇಯರ ಗಣವೂ ಸಹ ಅತಿ ಕ್ರೂರವೂ ಲೋಕಕಂಟಕವೂ ಆಗಿರುವುದು. ಇದರಂತೆ ಕಾರ್ಷ್ಣೇಯರು ಮತ್ತು ಶೈವೇಯರಾದ ರಾಕ್ಷಸರ ಗಣಗಳೂ ಸಹ ಅತ್ಯುತ್ತಮವಾಗಿರುವುವು.

೧೬೭. ಹಾಗೆಯೇ ಈಶ್ವರನ ಅನುಚರನೂ, ಗಣೇಶ್ವರರಲ್ಲಿ ಉತ್ತಮನೂ ಆದ ನೈರ್ಋತನೂ ಕೂಡ ಅನೇಕ ಉತ್ತಮವಾದ ಪ್ರಜಾಸೃಷ್ಟಿಯನ್ನು ಮಾಡಿದನು.

೧೬೮. ಮಹಾ ಬಲಿಷ್ಠರೂ, ಸುಪ್ರಸಿದ್ಧರೂ ಆದ ಯಕ್ಷರಾಕ್ಷಸರು ನೈರ್ಋತನ ವಂಶದಲ್ಲಿ ಉದ್ಭವಿಸಿದರು. ನೈರ್ಋತವಂಶದಲ್ಲಿ ಮಹಾ ಪರಾಕ್ರಮಿಗಳೂ, ಶಕ್ತಿಸಂಪನ್ನರೂ ಆದ ಯಕ್ಷರಾಕ್ಷಸರು ಅವತರಿಸಿದರು. ಆ ಯಕ್ಷರಾಕ್ಷಸರಿಗೆ ವಿರೂಪಕನು ಪ್ರಸಿದ್ಧನಾದ ನಾಯಕನಾದನು.

**ತೇಷಾಂ ಗಣಶತಾನೇಕಾ ಉದ್ಧೃತಾನಾಂ ಮಹಾತ್ಮನಾಂ।**
**ಪ್ರಾಯೇಣಾನುಚರಂತ್ಯೇತೇ ಶಂಕರಂ ಜಗತಃ ಪ್ರಭುಂ ॥ ೧೬೯ ॥**

**ದೈತ್ಯರಾಜೇನ ಕುಂಭೇನ ಮಹಾಕಾಯಾ ಮಹಾತ್ಮನಾ।**
**ಉತ್ಪಾದಿತಾ ಮಹಾವೀರ್ಯಾ ಮಹಾಬಲಪರಾಕ್ರಮಾಃ ॥ ೧೭೦ ॥**

**ಕಪಿಲೇಯಾ ಮಹಾವೀರ್ಯಾ ಉದೀರ್ಣಾ ದೈತ್ಯರಾಕ್ಷಸಾಃ।**
**ಕಂಪನೇನ ಚ ಯಕ್ಷೇಣ ಕೇಶಿನ್ಯಾಸ್ತೇಽಪರೇ ಜನಾಃ ॥ ೧೭೧ ॥**

**ಉತ್ಪಾದಿತಾ ಮಹಾವಾತಾ ಉದೀರ್ಣಾ ಯಕ್ಷರಾಕ್ಷಸಾಃ।**
**ಕೇಶಿನೀದುಹಿತುಶ್ಚೈವ ನೀಲಾಯಾಃ ಕ್ಷುದ್ರಮಾನಸಾಃ ॥ ೧೭೨ ॥**

**ಆಲಂಬೇಯೇನ ಜನಿತಾ ನೈಕಾಃ ಸುರಸಿಕೇನ ಹಿ।**
**ನೈಲಾ ಇತಿ ಸಮಾಖ್ಯಾತಾ ದುರ್ಜಯಾ ಘೋರವಿಕ್ರಮಾಃ ॥ ೧೭೩ ॥**

---

೧೬೯. ಮಹಾತ್ಮರೂ, ಉತ್ಕೃಷ್ಟಬಲಶಾಲಿಗಳೂ ಆದ ಆ ಯಕ್ಷರಾಕ್ಷಸರ ನೂರಾರು ಗಣಗಳು ಪ್ರಾಯಕವಾಗಿ, ಲೋಕನಾಯಕನೂ ಪ್ರಭುವೂ ಆದ ಈಶ್ವರ ನನ್ನು ಅನುಸರಿಸಿ ಸೇವಿಸುತ್ತಿದ್ದುವು.

೧೭೦. ದೈತ್ಯರಾಜನೂ ಮಹಾತ್ಮನೂ ಆದ ಕುಂಭನಿಗೆ ಮಹಾಕಾಯರೂ, ಮಹಾವೀರ್ಯವಂತರೂ, ಮಹಾಬಲ ಪರಾಕ್ರಮಿಗಳೂ ಅಸಂಖ್ಯಾಕರೂ ಆದ ದೈತ್ಯ ರಾಕ್ಷಸರು ಉದ್ಭವಿಸಿದರು.

೧೭೧. ಕಪಿಲೇಯ ನಾಮಕರಾದ ಯಕ್ಷರಾಕ್ಷಸರು ಮಹಾಶೂರರೂ ಉತ್ಕೃಷ್ಟಪರಾಕ್ರಮಿಗಳೂ ಆಗಿರುವರು ಉಳಿದ ಉತ್ಕೃಷ್ಟರಾದ ಯಕ್ಷ ರಾಕ್ಷಸರು ಕಂಪನಾಮಕ ಯಕ್ಷನಿಂದ ಕೇಶಿನಿಯಲ್ಲಿ ಹುಟ್ಟಿದರು.

೧೭೨. ಕೇಶಿನಿಯ ಪುತ್ರಿಯಾದ ನೀಲೆಗೆ ಕ್ಷುದ್ರಮನಸ್ಕರೂ ಮಹಾವಾತ ನಾಮಕರೂ ಅತ್ಯಧಿಕ ಪರಾಕ್ರಮಿಗಳೂ ಅಸಂಖ್ಯಾಕರೂ ಆದ ಯಕ್ಷರಾಕ್ಷಸರು ಉತ್ಪನ್ನರಾದರು.

೧೭೩. ಆ ಲಂಬೇಯನೂ ಸುರಸಿಕನಾಮಕನೂ ಆದ ಯಕ್ಷನಿಂದ ಜಯಿಸ ಲಸಾಧ್ಯರೂ ಘೋರಪರಾಕ್ರಮಿಗಳೂ ಬಹುಸಂಖ್ಯಾಕರೂ ನೈಲಾನಾಮಕರೂ ಆದ ಯಕ್ಷರು ಆವಿರ್ಭವಿಸಿದರು

**ಚರಂತಿ ಪೃಥಿವೀಂ ಕೃತ್ಸ್ನಾಂ ತತ್ರ ತೇ ದೇವ ಲೌಕಿಕಾಃ ।**
**ಬಹುತ್ವಾಚ್ಚೈವ ಸರ್ಗಸ್ಯ ತೇಷಾಂ ವಕ್ತುಂ ನ ಶಕ್ಯತೇ ॥ ೧೭೪ ॥**

**ತಸ್ಯಾಸ್ತ್ವಪಿ ಚ ನೀಲಾಯಾ ವಿಕಚಾ ನಾಮ ರಾಕ್ಷಸೀ ।**
**ದುಹಿತಾ ಸ್ವಭಾವವಿಕಚಾ ಮಂದಸತ್ವಪರಾಕ್ರಮಾ ॥ ೧೭೫ ॥**

**ತಸ್ಯಾ ಅಪಿ ವಿರೂಪೇಣ ನೈಋತೇನೇಹ ಚ ಪ್ರಜಾಃ ।**
**ಉತ್ಪಾದಿತಾಃ ಸುರಾ ಘೋರಾಃ ಶೃಣು ತಾಸ್ತ್ವನುಪೂರ್ವಶಃ ॥ ೧೭೬ ॥**

**ದಂಷ್ಟ್ರಾಕರಾಲ ವಿಕೃತಾ ಮಹಾಕರ್ಣಾ ಮಹೋದರಾಃ ।**
**ಹಾರಕಾ ಭೀಷಕಾಶ್ಚೈವ ತಥೈವ ಕ್ರಾಮುಕಾಃ ಪರೇ ॥ ೧೭೭ ॥**

**ವೈನಕಾಶ್ಚ ಪಿಶಾಚಾಶ್ಚ ವಾಹಕಾಃ ಪ್ರಾಶಕಾಃ ಪರೇ ।**
**ಭೂಮಿರಾಕ್ಷಸಕಾ ಹ್ಯೇತೇ ಮಂದಾಃ ಪುರುಷವಿಕ್ರಮಾಃ ॥ ೧೭೮ ॥**

---

೧೭೪. ಆ ಯಕ್ಷನ ವಂಶದಲ್ಲಿ ದೇವಲೋಕಕ್ಕೆ ಲೌಕಿಕರಾದ ಅನೇಕ ಯಕ್ಷ ರಾಕ್ಷಸರು (ಜನಿಸಿ) ಉದ್ಭವಿಸಿ ಸಮಸ್ತ ಭೂಮಂಡಲದಲ್ಲಿಯೂ ಸಂಚರಿಸುವರು. ಅವರ ಸಂತತಿಯು ಅಸಂಖ್ಯಾಕವಾಗಿರುವುದರಿಂದ ಸಂಪೂರ್ಣವಾಗಿಯೂ ಕ್ರಮ ವಾಗಿಯೂ ವರ್ಣಿಸಲು ಶಕ್ಯವಲ್ಲ.

೧೭೫. ನೀಲಾನಾಮಕಳಾದ ರಾಕ್ಷಸಿಗೆ ಅಲ್ಪವಾದ ಬಲಪರಾಕ್ರಮಗಳುಳ್ಳ ವಳೂ ಸಹಜ ಸುಂದರಿಯೂ ವಿಕಚನಾಮಕಳೂ ಆದ ರಾಕ್ಷಸಿಯು ಉತ್ಪನ್ನಳಾದಳು.

೧೭೬. ವಿರೂಪಿಯೂ ನೈರ್ಋತನಾಮಕನೂ ಆದ ಯಕ್ಷನಿಗೆ ಪಿಕಡೆಯೆಂಬು ವಳಲ್ಲಿ ಘೋರರೂಪಿಗಳಾದ ದೇವತೆಗಳು ಉದ್ಭವಿಸಿದರು. ಅವರ ವಿಷಯಗಳನ್ನು ಕ್ರಮವಾಗಿ ಯಥಾಸ್ಥಿತವಾಗಿಯೂ ಹೇಳುವೆನು ಕೇಳಿರೆಂದನು.

೧೭೭. ಭಯಂಕರವಾದ ಕೋರೆ ಹಲ್ಲುಗಳಿಂದ ಭಯಂಕರರೂ ವಿಶಾಲವಾದ ಕರ್ಣಗಳುಳ್ಳವರೂ, ಮಹೋದರವುಳ್ಳವರೂ, ಹಾರಕರೂ, ಭಯಂಕರರೂ, ಕ್ರಾಮಕರೂ, ಆದ ಇತರ ರಾಕ್ಷಸರೂ ಜನಿಸಿದರು.

೧೭೮. ಕೆಲವು ರಾಕ್ಷಸರು ವೈನಕ, ಪಿಶಾಚಕ, ವಾಹಕ, ಪ್ರಾಶಕನಾಮಗ ಳಿಂದ ಪ್ರಖ್ಯಾತರಾಗಿರುವರು. ಮನುಷ್ಯರಂತೆ ಅಲ್ಪಶಕ್ತಿಯಿರುವ ಅಲಸರಾದ ಕೆಲವು ರಾಕ್ಷಸರು ಭೂಮಿಯ ರಾಕ್ಷಸರಾಗಿರುವರು.

**ಚರಂತ್ಯದೃಷ್ಟಪೂರ್ವಾಶ್ಚ ನಾನಾಕಾರಾ ಹ್ಯನೇಕಶಃ ।**
**ಉತ್ಕೃಷ್ಟಬಲಸತ್ತ್ವಾ ಯೇ ತೇ ಚ ವೈ ಖೇಚರಾಃ ಸ್ಮೃತಾಃ ॥ ೧೭೯ ॥**

**ಲಕ್ಷಮಾತ್ರೇಣ ಚಾಕಾಶಂ ಸ್ವಲ್ಪಾಃ ಸ್ವಲ್ಪಂ ಚರಂತಿ ವೈ ।**
**ಏತೈರ್ವ್ಯಾಪ್ತಮಿಮಂ ಲೋಕಂ ಶತಶೋಽಥ ಸಹಸ್ರಶಃ ॥ ೧೮೦ ॥**

**ಭೂಮಿರಾಕ್ಷಸಕೈಃ ಸರ್ವೈರನೇಕೈಃ ಕ್ಷುದ್ರರಾಕ್ಷಸೈಃ ।**
**ನಾನಾಪ್ರಕಾರೈರಾಕ್ರಾಂತಾ ನಾನಾದೇಶಾಃ ಸಮಂತತಃ ॥ ೧೮೧ ॥**

**ಸಮಾಸಾಭಿಹತಾಶ್ಚೈವ ಹ್ಯಷ್ಟೌ ರಾಕ್ಷಸಮಾತರಃ ।**
**ಅಷ್ಟೌ ವಿಭಾಗಾ ಹ್ಯೇಷಾಂ ಹಿ ವಿಖ್ಯಾತಾ ಅನುಪೂರ್ವಶಃ ॥ ೧೮೨ ॥**

**ಭದ್ರಕಾ ನಿಕರಾಃ ಕೇಚಿದ್ಯಜ್ಞನಿಷ್ಪತ್ತಿಹೇತುಕಾಃ ।**
**ಸಹಸ್ರಶತಸಂಖ್ಯಾತಾ ಮರ್ತ್ಯಲೋಕವಿಚಾರಿಣಃ ॥ ೧೮೩ ॥**

---

೧೭೯. ಅವರಲ್ಲಿ ಅದೃಷ್ಟಪೂರ್ವರೂ, ನಾನಾಕಾರಿಗಳೂ, ಅಸಂಖ್ಯಾಕರೂ, ಉತ್ಕೃಷ್ಟವಾದ ಬಲಪರಾಕ್ರಮವುಳ್ಳವರೂ ಆದ ಕೆಲವು ರಾಕ್ಷಸರು ಅಂತರಿಕ್ಷಚಾರಿಗಳಾಗಿರುವರು.

೧೮೦ ಇಂತಹ ಅಲ್ಪರಾದ ಕೆಲವು ರಾಕ್ಷಸರು ತಮ್ಮ ಶಕ್ತಿಗನುಗುಣವಾಗಿ ಆಕಾಶದಲ್ಲಿ ಲಕ್ಷಯೋಜನಗಳವರೆಗೂ ಸಂಚಾರಮಾಡುವರು. ಇಂತಹ ಅಸಂಖ್ಯಾಕರಾದ ರಾಕ್ಷಸರಿಂದ ಈ ಲೋಕವೆಲ್ಲವೂ ವ್ಯಾಪ್ತವಾಗಿದೆ

೧೮೧. ಭೂಮಿಯಲ್ಲಿ ಸಂಚರಿಸುವ ರಾಕ್ಷಸರು ಬಹುಸಂಖ್ಯಾಕರಾಗಿದ್ದರೂ ಕ್ಷುದ್ರರಾಕ್ಷಸರಾಗಿರುವರು. ಅವರು ನಾನಾ ರೀತಿಯಲ್ಲಿ ಅನೇಕ ದೇಶಗಳನ್ನು ಸ್ವಪರಾಕ್ರಮಗಳಿಂದ ಆಕ್ರಮಿಸಿಗೊಂಡು ಸರ್ವತ್ರ ಸಂಚರಿಸುವರು

೧೮೨. ಎಂಟುಜನ ರಾಕ್ಷಸರ ಮಾತೆಯರನ್ನೂ, ಅವರ ಸಂತಾನವನ್ನೂ ಸಂಕ್ಷೇಪವಾಗಿ ನಿರೂಪಿಸಿರುವೆನು. ಅವರ ಗುಣಗಳೂ ಕೂಡ ಅಷ್ಟವಿಧವಾಗಿ ಕ್ರಮವಾಗಿ ಲೋಕವಿಖ್ಯಾತವಾಗಿವೆ.

೧೮೩. ಭದ್ರಕರೆಂಬ ರಾಕ್ಷಸರ ಗುಂಪುಗಳು ಯಜ್ಞನಿಷ್ಪಾದನ ಸಮರ್ಥಗಳಾಗಿಯೂ, ಲಕ್ಷ್ಯಸಂಖ್ಯಾಕವಾಗಿಯೂ, ಮರ್ತ್ಯಲೋಕಸಂಚಾರಿಗಳಾಗಿಯೂ ಇರುವುವು.

ಪೂತನಾ ಮಾತೃಸಾಮಾನ್ಯಾಸ್ತ್ವಥಾಭೂತಭಯಂಕರಾ ।
ಬಾಲಾನಾಂ ಮಾನುಷೇ ಲೋಕೇ ಗ್ರಹಾ ವೈಮಾನಹೇತುಕಾಃ ॥ ೧೮೪ ॥

ಸ್ಕಂದಗ್ರಹಾದಯಶ್ಚೈವ ಆಪಕಾಸ್ತ್ರಾಸಕಾದಯಃ ।
ಕೌಮಾರಾಸ್ತೇ ತು ವಿಜ್ಞೇಯಾ ಬಾಲಾನಾಂ ಗ್ರಹವೃತ್ತಯಃ ॥ ೧೮೫ ॥

ಸ್ಕಂದಗ್ರಹವಿಶೇಷಾಣಾಂ ಮಾಯಿಕಾನಾಂ ತಥೈವ ಚ ।
ಪೂತನಾನಾಮಭೂತಾನಾಂ ಯೇ ಚ ಲೋಕವಿನಾಯಕಾಃ ॥ ೧೮೬ ॥

ಸಹಸ್ರಶತಸಂಖ್ಯಾನಾಂ ಮರ್ತ್ಯಲೋಕವಿಚಾರಿಣಾಂ ।
ಏವಂ ಗಣಶತಾನ್ಯೇವ ಚರಂತಿ ಪೃಥಿವೀಮಿಮಾಂ ॥ ೧೮೭ ॥

ಯಕ್ಷಾಃ ಪುಣ್ಯತಮಾ ನಾಮ ತಥಾ ಯೇ ಕೇಽಪಿ ಗುಹ್ಯಕಾಃ ।
ಯಕ್ಷಾ ದೇವಜನಾಶ್ಚೈವ ತಥಾ ಪುಣ್ಯಜನಾಶ್ಚ ಯೇ ॥ ೧೮೮ ॥

---

೧೮೪. ಪೂತನೆಯೇ ಮೊದಲಾದ ರಾಕ್ಷಸಿಯರ ಮಕ್ಕಳೂ, ಭೂತಗಳಿಗೆ ಭಯಂಕರರೂ, ಬಾಲಸಂಹಾರಕರೂ, ಬಾಲಗ್ರಹರೂಪಿಗಳೂ, ಗರ್ವಿಷ್ಠರೂ ಆದ ರಾಕ್ಷಸರು ಈ ಭೂಮಂಡಲವನ್ನೇ ಆಕ್ರಮಿಸಿಕೊಂಡಿರುವರು.

೧೮೫. ಸ್ಕಂಡಗ್ರಹಾದಿಗಳೂ, ಆಪಕರೂ, ತ್ರಾಸಕರೂ, ಕೌಮಾರಕರೂ, ಇವರೇ ಮೊದಲಾದ ರಾಕ್ಷಸರು ಬಾಲಕರನ್ನು ಹಿಡಿದು ಹಿಂಸಿಸುವ ವೃತ್ತಿಯುಳ್ಳವರಾಗಿಯೂ ಲೋಕಕಂಟಕರಾಗಿಯೂ ಇರುವರು

೧೮೬–೧೮೭. ಸ್ಕಂದಗ್ರಹವಿಶೇಷನಾಮಕಗಳೂ, ಮಾಯಾವಿಗಳೂ, ಲೋಕವಿನಾಶಕರೂ, ಲಕ್ಷ್ಯಸಂಖ್ಯಾಕರೂ, ಮರ್ತ್ಯಲೋಕಚಾರಿಗಳೂ, ಪೂತನಾದಿ ನಾಮಕರೂ, ಭೂತನಾಮಕಗರೂ ಆದ ರಾಕ್ಷಸರು ಈ ಭೂಮಂಡಲದಲ್ಲಿ ಸಂಚರಿಸುವರು.

೧೮೮. ಪುಣ್ಯಕನಾಮಕರೂ, ಗುಹ್ಯಕಾಭಿಧೇಯರೂ, ದೇವಜನನಾಮಧೇಯರೂ, ಪುಣ್ಯಜನರೆಂಬ ನಾಮವುಳ್ಳವರೂ ಆದ ಯಕ್ಷರು ಲೋಕದಲ್ಲಿ ಪ್ರಖ್ಯಾತರಾಗಿರುವರು.

ಗುಹ್ಯಕಾನಾಂ ಚ ಸರ್ವೇಷಾಮಗಸ್ತ್ಯೋ ಯೇ ಚ ರಾಕ್ಷಸಾಃ ।
ಪೌಲಸ್ತ್ಯಾ ರಾಕ್ಷಸಾ ಯೇ ಚ ವಿಶ್ವಾಮಿತ್ರಾಶ್ಚ ಯೇ ಸ್ಮೃತಾಃ ॥ ೧೮೯ ॥

ಯಕ್ಷಾಣಾಂ ರಾಕ್ಷಸಾನಾಂ ಚ ಪೌಲಸ್ತ್ಯಾಗಸ್ತ್ಯಯಶ್ಚ ಯೇ ।
ತೇಷಾಂ ರಾಜಾ ಮಹಾರಾಜಃ ಕುಬೇರೋ ಹ್ಯಲಕಾಧಿಪಃ ॥ ೧೯೦ ॥

ಯಕ್ಷಾ ದೃಷ್ಟ್ವಾ ಪಿಬಂತೀಹ ನೃಣಾಂ ಮಾಂಸಮಸೃಗ್ವಸಾಂ ।
ರಕ್ಷಾಂಸ್ಯನುಪ್ರವೇಶೇನ ಪಿಶಾಚಾಃ ಪರಿಪೀಡನೈಃ ॥ ೧೯೧ ॥

ಸರ್ವಲಕ್ಷಣಸಂಪನ್ನಾಃ ಸಮುಕ್ಷೇತ್ರಾಶ್ಚ ದೈವತೈಃ ।
ಭಾಸ್ವರಾ ಬಲವಂತಶ್ಚ ಈಶ್ವರಾಃ ಕಾಮರೂಪಿಣಃ ॥ ೧೯೨ ॥

ಅನಾಭಿಭಕ್ಷಾ ವಿಕ್ರಾಂತಾಃ ಸರ್ವಲೋಕನಮಸ್ಕೃತಾಃ ।
ಸೂಕ್ಷ್ಮಾಶ್ಚೌಜಸ್ವಿನೋ ಮೇಧ್ಯಾ ವರದಾ ಯಜ್ಞಿಯಾಶ್ಚ ಯೇ ॥ ೧೯೩ ॥

---

೧೮೯–೧೯೦. ಸಮಸ್ತರಾದ ಗುಹ್ಯಕರೂ, ಅಗಸ್ತ್ಯನಾಮಕರಾದ ರಾಕ್ಷಸರೂ, ಪೌಲಸ್ತ್ಯಾಭಿಧೇಯರಾದ ರಾಕ್ಷಸರೂ, ವಿಶ್ವಾಮಿತ್ರಾಭಿಧಾನವುಳ್ಳ ಯಕ್ಷರೂ ಯಾರು ಇರುವವರೋ, ಅಂತಹ ಯಕ್ಷರು, ರಾಕ್ಷಸರು, ಪೌಲಸ್ತ್ಯರು ಇವರಿಗೆ ಕುಬೇರನು ರಾಜನಾಗಿಯೂ, ನಿಯಾಮಕನಾಗಿಯೂ, ಅಲಕಾಧಿಪತಿಯಾಗಿಯೂ ಇರುವನು.

೧೯೧. ಅವರಲ್ಲಿ ಯಕ್ಷರು ಮನುಷ್ಯರನ್ನು ನೋಡಿದರೆ ಅವರನ್ನು ಕೊಂದು, ರಕ್ತ, ಮಾಂಸ, ಮೇಧಸ್ಸು ಇವುಗಳನ್ನು ಕುಡಿದು ಮತ್ತು ತಿಂದು ಬದುಕುತ್ತಾರೆ. ರಾಕ್ಷಸರು ಮನುಷ್ಯರನ್ನು ಪ್ರವೇಶಿಸಿ ಪೀಡಿಸುತ್ತಾರೆ. ಪಿಶಾಚಿಗಳು ಪರಪೀಡನೆಗಳಿಂದ ಜೀವಿಸಿ ಕೊನೆಗೆ ಮನುಷ್ಯರನ್ನು ಕೊಲ್ಲುತ್ತವೆ.

೧೯೨. ಯಕ್ಷರು ಸರ್ವಲಕ್ಷಣಸಂಪನ್ನರೂ, ದೇವತೆಗಳ ಸಂಗಡ ವಾಸಿಸುವರೂ, ಪ್ರಕಾಶಮಾನರೂ, ಬಲಿಷ್ಠರೂ, ಈಶ್ವರರೂ, ಸ್ವೇಚ್ಛಾರೂಪಿಗಳೂ, ಆಗಿರುವರು.

೧೯೩. ಕೆಲವು ಯಕ್ಷರಾಕ್ಷಸರು ಅಭಕ್ಷ್ಯಭಕ್ಷಕರಾಗದೆಯೂ, ಶೂರರೂ, ಸರ್ವಜನರಿಂದ ವಂದಿತರೂ, ಸೂಕ್ಷ್ಮರೂಪಿಗಳೂ, ಮಹಾತೇಜಸ್ವಿಗಳೂ, ಪವಿತ್ರರೂ ವರಪ್ರದರೂ, ಯಜ್ಞಯಾಗಾದಿಗಳಲ್ಲಿ ನಿರತರೂ ಆಗಿರುವರು.

ದೇವಾನಾಂ ತುಲ್ಯಧರ್ಮಾಣಾಂ ಹ್ಯಸುರಾಃ ಸರ್ವಶಃ ಸ್ಮೃತಾಃ ।
ತ್ರಿಭಿಃ ಪಾದೈಸ್ತು ಗಂಧರ್ವಾ ದೇವೈರ್ಹೀನಾಃ ಪ್ರಭಾವತಃ ॥ ೧೯೪ ॥

ಗಂಧರ್ವೇಭ್ಯಸ್ತ್ರಿಭಿಃ ಪಾದೈರ್ಹೀನಾ ವೈ ಸರ್ವಗುಹ್ಯಕಾಃ ।
ಪ್ರಭಾವತುಲ್ಯಾ ಯಕ್ಷಾಣಾಂ ವಿಜ್ಞೇಯಾಃ ಸರ್ವರಾಕ್ಷಸಾಃ ॥
ಐಶ್ವರ್ಯಹೀನಾ ಯಕ್ಷೇಭ್ಯಃ ಪಿಶಾಚಾಸ್ತ್ರಿಗುಣಂ ಪುನಃ ॥ ೧೯೫ ॥

ಏವಂ ಧನೇನ ರೂಪೇಣ ಆಯುಷಾ ಚ ಬಲೇನ ಚ ।
ಧರ್ಮೇಶ್ವೈಯೇರ್ಣ ಬುದ್ಧ್ಯಾ ಚ ತಪಃಶ್ರುತಪರಾಕ್ರಮೈಃ ॥ ೧೯೬ ॥

ದೇವಾಸುರೇಭ್ಯೋ ಹೀಯಂತೇ ತ್ರೀನ್ ಪಾದಾನ್ ವೈ ಪರಸ್ಪರಂ ।
ಗಂಧರ್ವಾದ್ಯಾಃ ಪಿಶಾಚಾಂತಶ್ಚ ತಸ್ರೋ ದೇವಯೋನಯಃ ॥ ೧೯೭ ॥

---

೧೯೪. ಅಸುರರು, ದೇವತೆಗಳಿಗೆ ಸಮಾನವಾದ ಧರ್ಮ, ಸಾಮರ್ಥ್ಯ, ಶೌರ್ಯ ಮೊದಲಾದ ಗುಣವುಳ್ಳವರಾಗಿರುವರು. ಗಂಧರ್ವರಾದರೋ ದೇವತೆಗಳಿಗಿಂತಲೂ ಮೂರುಭಾಗ ಧರ್ಮಾದಿಗಳಿಂದ ಹೀನರಾಗಿರುವರು. ನಾಲ್ಕರಲ್ಲಿ ಒಂದು ಭಾಗದಷ್ಟು ಸಾಮರ್ಥ್ಯಾದಿಗಳುಳ್ಳವರಾಗಿರುವರು. ಅಂದರೆ, ಗಂಧರ್ವರು ಅಸುರರಿಗಿಂತಲೂ ಹೀನಶಕ್ತರಾಗಿರುವರೆಂದು ಜ್ಞಾನಿಗಳು ಹೇಳುವರು.

೧೯೫. ಸಮಸ್ತರಾದ ಗುಹ್ಯಕರು ಗಂಧರ್ವರಿಗಿಂತಲೂ ಸಾಮರ್ಥ್ಯಾದಿಗಳಲ್ಲಿ ಮೂರು ಭಾಗದಷ್ಟು ಹೀನರಾಗಿರುವರು. ಯಕ್ಷರೂ ರಾಕ್ಷಸರೂ ಸರ್ವವಿಷಯದಲ್ಲಿಯೂ ಸಮಾನರಾಗಿರುವರು. ಯಕ್ಷರಿಗಿಂತಲೂ ಪಿಶಾಚಿಗಳು ಮೂರು ಭಾಗದಷ್ಟು ಐಶ್ವರ್ಯಹೀನರಾಗಿರುವುವು.

೧೯೬–೧೯೭ ದೇವಾಸುರರು ಹೀಗೆ ಧನ, ರೂಪ, ಆಯುಷ್ಯ, ಶಕ್ತಿ, ಧರ್ಮ, ಐಶ್ವರ್ಯ, ಬುದ್ಧಿ, ತಪಸ್ಸು, ಜ್ಞಾನ, ಪರಾಕ್ರಮ ಇವುಗಳಲ್ಲಿ ಸಮಾನರಾಗಿರುವರು. ದೇವಾಸುರರಿಗಿಂತಲೂ ಗಂಧರ್ವ, ಯಕ್ಷ, ರಾಕ್ಷಸ, ಪಿಶಾಚಿಗಳೆಂಬ ಈ ನಾಲ್ಕು ದೇವಯೋನಿಗಳಾದವರು ಮೇಲೆ ಹೇಳಿದ ಶಕ್ತಿಸಾಮರ್ಥ್ಯಾದಿಗಳಲ್ಲಿ ಮೂರುಪಾಲು ಹೀನರಾಗಿರುವರು. ಅಂದರೆ, ದೇವತೆಗಳಿಗಿಂತಲೂ ಗಂಧರ್ವರು ಶಕ್ತ್ಯಾದಿಗಳಲ್ಲಿ ಮೂರುಭಾಗ ಹೀನರಾಗಿರುವರು. ಆ ಗಂಧರ್ವರಿಗಿಂತಲೂ ಯಕ್ಷರೂ, ಅವರಿಗಿಂತ ರಾಕ್ಷಸರೂ, ಆ ರಾಕ್ಷಸರಿಗಿಂತಲೂ ಪಿಶಾಚಿಗಳೂ ಹೀನರಾಗಿರುವರೆಂದು ಮಹಾತ್ಮರು ಹೇಳುವರು.

॥ ಸೂತ ಉವಾಚ ॥

ಅತಃ ಶೃಣುತ ಭದ್ರಂ ವಃ ಪ್ರಜಾಃ ಕ್ರೋಧವಶಾತ್ಮಕಾಃ ।
ಕ್ರೋಧಾಯಾಂ ಕನ್ಯಕಾ ಜಜ್ಞೇ ದ್ವಾದಶಹ್ಯಾತ್ಮಸಂಭವಾಃ ॥
ತಾ ಭಾರ್ಯಾಃ ಪುಲಹಸ್ಯಾಸನ್ನಾಮತಸ್ತಾ ನಿಬೋಧತ ॥ ೧೯೮ ॥

ಮೃಗೀ ಚ ಮೃಗಮಂದಾ ಚ ಹರಿಭದ್ರಾ ಇರಾವತೀ ।
ಭೂತಾ ಚ ಕಪಿಶಾ ದ್ರಂಷ್ಟ್ರಾ ನಿಶಾ ತಿರ್ಯಾ ತಥೈವ ಚ ॥
ಶ್ವೇತಾ ಚೈವ ಸ್ವರಾ ಚೈವ ಸುರಸಾ ಚೇತಿ ವಿಶ್ರುತಾಃ ॥ ೧೯೯ ॥

ಮೃಗ್ಯಾಸ್ತು ಹರಿಣಾಃ ಪುತ್ರಾ ಮೃಗಾಶ್ಚಾನ್ಯೇ ಶಶಾಸ್ತಥಾ ।
ನ್ಯಂಕವಃ ಶರಭಾ ಯೇ ಚ ರುರವಃ ಪೃಷತಾಶ್ಚ ಯೇ ॥ ೨೦೦ ॥

ಮೃಗರಾಜಾ ಮೃಗಮಂದಾಯಾ ಗವಯಾಶ್ಚಾಪರೇ ತಥಾ ।
ಮಹಿಷೋಷ್ಟ್ರವರಾಹಾಶ್ಚ ಖಡ್ಗಗೌರಮುಖಾಸ್ತಥಾ ॥ ೨೦೧ ॥

---

೧೯೮. ಸೂತಮುನಿಗಳು ಹೇಳಿದರು:— ಎಲೈ ಮುನಿವರ್ಯರೇ, ಈಗ ಮುಂದಿನ ಕ್ರೋಧವಶಳ ಸೃಷ್ಟಿಕ್ರಮವನ್ನು ವರ್ಣಿಸುವೆನು. ಅದನ್ನು ಕೇಳಿರಿ. ನಿಮಗೆ ಮಂಗಳವಾಗುವುದು. ಕಶ್ಯಪಮುನಿಗೆ ಕ್ರೋಧಾದೇವಿಯಲ್ಲಿ ಹನ್ನೆರಡುಜನ ಕುಮಾರಿಯರು ಜನಿಸಿದರು. ಅವರೆಲ್ಲರೂ ಮಹಾನುಭಾವರಾದ ಪುಲಹಮಹರ್ಷಿಯನ್ನು ವರಿಸಿ ಅವರ ಪತ್ನಿಯರಾದರು. ಅವರ ನಾಮಗಳನ್ನು ಹೇಳುವೆನು ಕೇಳಿರೆಂದು ಹೇಳಿದನು

೧೯೯. ಆ ಕ್ರೋಧಾದೇವಿಯಲ್ಲಿ ಮೃಗೀ, ಮೃಗಮಂದಾ, ಹರಿಭದ್ರಾ, ಇರಾವತೀ, ಭೂತಾ, ಕಪಿಶಾ, ದಂಷ್ಟ್ರಾ, ನಿಶಾ, ತಿರ್ಯಾ, ಶ್ವೇತಾ, ಸ್ವರಾ, ಸುರಸಾ ಎಂದು ಪ್ರಖ್ಯಾತರಾದ ಹನ್ನೆರಡುಜನ ಪುತ್ರಿಯರು ಜನಿಸಿದರು.

೨೦೦. ಆ ಹನ್ನೆರಡುಜನ ಭಾರ್ಯೆಯರಲ್ಲಿ ಮೃಗಿಯೆಂಬುವಳಿಗೆ ಜಿಂಕೆಗಳೂ, ಮೃಗಗಳೂ, ಮೊಲಗಳೂ, ನ್ಯಂಕುವೆಂಬ ಜಿಂಕೆಯ ಜಾತಿಯ ಪ್ರಾಣಿಗಳೂ, ಶರಭಮೃಗಗಳೂ, ರುತುಗಳೂ, ಪೃಷದವೆಂಬ ಜಿಂಕೆಯ ಜಾತಿಯ ಪ್ರಾಣಿಗಳೂ ಮಕ್ಕಳಾಗಿ ಜನಿಸಿದುವು. ನ್ಯಂಕು, ರುರು, ಪೃಷದ ಇವು ಜಿಂಕೆಯ ಜಾತಿಯಲ್ಲಿ ಒಂದು ಭೇದವು.

೨೦೧. ಮೃಗಮಂದೆ ಎಂಬುವಳಿಗೆ ಸಿಂಹಗಳೂ, ಗವಯವೆಂಬ ಕಾಡುಪಶುಗಳೂ, ಮಹಿಷ, ಒಂಟೆ, ಹಂದಿ, ಖಡ್ಗಮೃಗ, ಕೆಂಪು ಮುಖವುಳ್ಳ ಕಪಿಗಳು ಇವೇ ಮೊದಲಾದ ಪ್ರಾಣಿಗಳೂ ಉದ್ಭವಿಸಿದುವು.

ಹರೇಸ್ತು ಹರಯಃ ಪುತ್ರಾ ಗೋಲಾಂಗುಲತರಕ್ಷವಃ ।
ವಾನರಾಃ ಕಿನ್ನರಾಶ್ಚೈವ ವ್ಯಾಘ್ರಾಃ ಕಿಂಪುರುಷಾಸ್ತಥಾ ॥
ಇತ್ಯೇವಮಾದಯೋಽನ್ಯೇಪಿ ಇರಾವತ್ಯಾ ನಿಬೋಧತ ॥ ೨೦೨ ॥

ಸೂರ್ಯಸ್ಯಾಂಡಕಪಾಲೇ ದ್ವೇ ಸಮಾನೀಯ ತು ಭೌವನಃ ।
ಹಸ್ತಾಭ್ಯಾಂ ಪರಿಗೃಹ್ಯಾಥ ರಥಂತರಮಗಾಯತ ॥ ೨೦೩ ॥

ಸಾಮ್ನಾ ಪ್ರಸೂಯಮಾನೇನ ಸದ್ಯ ಏವ ಗಜೋಽಭವತ್ ।
ಸ ಪ್ರಾಯಚ್ಛದಿರಾವತ್ಯೈ ಪುತ್ರಾರ್ಥೇ ಸ ತು ಭೌವನಃ ॥ ೨೦೪ ॥

ಇರಾವತ್ಯಾಃ ಸುತೋ ಯಸ್ಮಾತ್ತಸ್ಮಾದೈರಾವತಃ ಸ್ಮೃತಾಃ ।
ದೇವರಾಜೋಪವಾಹ್ಯತ್ವಾತ್ ಪ್ರಥಮಃ ಸ ಮತಂಗರಾಟ್ ॥
ಶುಭ್ರಾಭ್ರಾಭಶ್ಚತುರ್ದಂಷ್ಟ್ರಃ ಶ್ರೀಮಾನೈರಾವತೋ ಗಜಃ ॥ ೨೦೫ ॥

---

೨೦೨. ಅವರಲ್ಲಿ ಹರಿಯೆಂಬುವಳಿಗೆ ಕಪಿಗಳೂ, ಕಾಡುಕೋತಿಗಳೂ, ಕರಡಿಗಳೂ, ವಾನರಗಳೂ, ಕಿನ್ನರರೂ, ಹುಲಿಗಳೂ, ಕಿಂಪುರುಷರೂ ಇವೇ ಮೊದಲಾದ ಪ್ರಾಣಿಗಳು ಉತ್ಪನ್ನವಾದುವು. ಈಗ ಇರಾವತಿಯ ಸಂತಾನವನ್ನು ತಿಳಿಸುವೆನು ಕೇಳಿರೆಂದನು.

೨೦೩. ಭೌಮನನೆಂಬುವನು ಸೂರ್ಯನ ಎರಡು ಅಂಡ ಕಪಾಲಗಳನ್ನು ತಂದು, ಎರಡು ಹಸ್ತಗಳಲ್ಲಿಯೂ ಸ್ವೀಕರಿಸಿ, ರಥಂತರವೆಂಬ ಸಾಮವನ್ನು ಗಾನ ಮಾಡಿದನು.

೨೦೪-೨೦೫. ಹೀಗೆ ಸಾಮವನ್ನು ಗಾನಮಾಡಲಾಗಿ ಆ ಕ್ಷಣದಲ್ಲಿಯೇ ಗಜವು ಉತ್ಪನ್ನವಾಯಿತು. ತರುವಾಯ ಭೌವನನು ಆ ಗಜವನ್ನು ಇರಾವತಿಗೆ ಸಂತಾನಕ್ಕಾಗಿ ಕೊಟ್ಟನು. ಆ ಗಜವನ್ನು ಇರಾವತಿಗೆ ಕೊಟ್ಟದ್ದರಿಂದ ಐರಾವತವೆಂಬ ನಾಮವನ್ನು ಹೊಂದಿತು. ಆ ಗಜರಾಜನು ಮೊದಲು ದೇವೇಂದ್ರನಿಗೆ ವಾಹನನಾದನು. ಆ ಐರಾವತನಾಮಕವಾದ ಗಜಕ್ಕೆ ನಾಲ್ಕು ದಂತಗಳಿದ್ದುವು. ಅದು ಅತಿ ಶುಭ್ರವಾಗಿಯೂ, ಅತಿ ಕಾಂತಿಯುಕ್ತವಾಗಿಯೂ, ಇಂದ್ರನ ವಾಹನವಾಗಿಯೂ ಸಂಭವಿಸಿತು.

ಅಪ್ಸುಜಸ್ಯೈಕಮೂಲಸ್ಯ ಸುವರ್ಣಾಭಸ್ಯ ಹಸ್ತಿನಃ ।
ಷಡ್ದಂತಸ್ಯ ಹಿ ಭದ್ರಸ್ಯ ಔಪವಾಹ್ಯಶ್ಚ ವೈ ಬಲಃ ॥ ೨೦೬ ॥

ತಸ್ಯ ಪುತ್ರೋಽಂಜನಶ್ಚೈವ ಸುಪ್ರತೀಕೋಽಥ ವಾಮನಃ ।
ಪದ್ಮಶ್ಚೈವ ಚತುರ್ಥೋಽಭೂದ್ಧಸ್ತಿನೀಚಾಭ್ರಮುಸ್ತಥಾ ॥ ೨೦೭ ॥

ದಿಗ್ಗಜಾಂಸ್ತಾಂಶ್ಚ ಚತ್ವಾರಃ ಶ್ವೇತಾಽಜನಯತಾಶುಗಾನ್ ।
ಭದ್ರಂ ಮೃಗಂ ಚ ಮಂದಂ ಚ ಸಂಕೀರ್ಣಂ ಚತುರಃ ಸುತಾ ॥ ೨೦೮ ॥

ಸಂಕೀರ್ಣೋಽಪ್ಯಂಜನೋ ಯಸ್ತು ಉಪವಾಹ್ಯೋ ಯಮಸ್ಯ ತು ।
ಭದ್ರೋ ಯಃ ಸುಪ್ರತೀಕಸ್ತು ಹರಿತಃ ಸ ಹ್ಯಪಾಂಪತೇಃ ॥ ೨೦೯ ॥

ಪದ್ಮೋ ಮಂದಸ್ತು ಯೋ ಗೌರೋ ದ್ವಿಪೋ ಹ್ಯೈಲವಿಲಸ್ಯ ಸಃ ।
ಮೃಗಃ ಶ್ಯಾಮಸ್ತು ಯೋ ಹಸ್ತೀ ಉಪವಾಹ್ಯಃ ಸ ಪಾವಕ್ಯೇಃ ॥ ೨೧೦ ॥

---

೨೦೬. ಆ ಐರಾವತವು ಜಲಜವೂ, ಏಕಮೂಲವೂ, ಸುವರ್ಣದಂತೆ ಕಾಂತಿಯುತವೂ, ಆರು ದಂತವುಳ್ಳದ್ದೂ ಆದ ಭದ್ರವೆಂಬ ಗಜಕ್ಕಿಂತಲೂ ಬಲಿಷ್ಠವೂ, ಭಾರವಾಹಕವೂ, ಸುಪ್ರಸಿದ್ಧವೂ ಆಗಿದೆ.

೨೦೭. ಆ ಐರಾವತನಿಗೆ ಅಂಜನ, ಸುಪ್ರತೀಕ, ವಾಮನ, ಪದ್ಮವೆಂಬ ನಾಲ್ಕು ಗಜಗಳೂ, ಹಸ್ತಿನೀ, ಅಭ್ರಮುವೆಂಬ ಎರಡು ಗಜಗಳೂ ಸಹ ಉದ್ಭವಿಸಿದುವು.

೨೦೮. ಶ್ವೇತಾದೇವಿಯು, ದಿಗ್ಗಜಗಳೂ ಅತಿ ವೇಗಿಗಳೂ ಆದ ಭದ್ರ, ಮೃಗ, ಮಂದ, ಸಂಕೀರ್ಣವೆಂಬ ನಾಲ್ಕು ಗಜಗಳನ್ನು ಪಡೆದಳು.

೨೦೯. ಕಾಡಿಗೆಯಂತೆ ಕಪ್ಪಾದ ಸಂಕೀರ್ಣವೆಂಬ ಗಜವು ಯಮದೇವನಿಗೆ ವಾಹನವಾಯಿತು ಹಸರು ಬಣ್ಣವುಳ್ಳದ್ದೂ, ಮಂಗಳಕರವೂ, ಸುಪ್ರತೀಕನಾಮಕವೂ ಆದ ಗಜವು ಜಲಾಭಿಮಾನಿಯಾದ ವರುಣದೇವನಿಗೆ ವಾಹನವಾಯಿತು.

೨೧೦. ಪದ್ಮನಾಮಕವೂ, ಮಂದವಾದ ಗಮನವುಳ್ಳದ್ದೂ, ಶುಭ್ರವರ್ಣವಿರುವುದೂ ಆದ ಗಜವು ಕುಬೇರನಿಗೆ ವಾಹನವಾಗಿ ಸಂಭವಿಸಿತು. ಕಪ್ಪು ಬಣ್ಣವಿರುವ ಮೃಗವೆಂಬ ಗಜವು ಅಗ್ನಿದೇವನಿಗೆ ವಾಹನವಾಯಿತು.

ಪದ್ಮೋತ್ತರಸ್ತು ಯಃ ಪದ್ಮೌ ಗಜೋ ವೈ ವರುಣೋ ಗಣಃ ।
ಉಪಲೇಪನಮೇಷಶ್ಚ ತಸ್ಯಾಷ್ಟೌ ಜಜ್ಞಿರೇ ಸುತಾಃ ॥ ೨೧೧ ॥

ಉದಗ್ರಭಾವೇನೋಪೇತಾ ಜಾಯಂತೇ ತಸ್ಯ ಚಾನ್ವಯೇ ।
ಶ್ವೇತಬಾಲನಖಾಃ ಪಿಂಗಾ ವರ್ಷ್ಮವಂತೋ ಮತಂಗಜಾಃ ।
ಮತಂಗಜಾರ್ ಪ್ರವಕ್ಷ್ಯಾಮಿ ನಾಗಾನನ್ಯಾನಪಿ ಕ್ರಮಾತ್ ॥ ೨೧೨ ॥

ಕಪಿಲಃ ಪುಂಡರೀಕಶ್ಚ ಸುಮನಾಭೋ ರಥಾಂತರಃ ।
ಜಾತೌ ನಾಮ್ನಾ ಸುತೌ ತಾಭ್ಯಾಂ ಸುಪ್ರತಿಷ್ಠಪ್ರಮರ್ದನೌ ॥ ೨೧೩ ॥

ಶೂಲಾಃ ಸ್ಥೂಲಾಃ ಶಿರೋದಾಂತಾಃ ಶುದ್ಧಬಾಲನಖಾಸ್ತಥಾ ।
ಬಲಿನಃ ಶಕ್ತಿನಶ್ಚೈವ ಸ್ಮೃತಾಸ್ತ್ವಾಕುಲಿಕಾ ಗಜಾಃ ॥ ೨೧೪ ॥

---

೨೧೧. ಎರಡು ಕಮಲದಂತೆ ಗುರುತುಗಳಿರುವ ಪದ್ಮನಾಮಕ ಗಜವು ವರುಣನ ಗಜಗಳ ಗುಂಪಿಗೆ ಸೇರಿದೆ. ಇದು ವಾಹನಾರ್ಹವಾಗಿದೆ. ಅದಕ್ಕೆ ಎಂಟು ಮರಿಗಳು ಹುಟ್ಟಿದುವು.

೨೧೨. ಅದರ ವಂಶದಲ್ಲಿ ಉನ್ನತಭಾವದಿಂದ ಕೂಡಿದ ಅನೇಕ ಗಜಗಳು ಉತ್ಪನ್ನವಾದುವು. ಆ ಆನೆಗಳ ಬಾಲ ಮತ್ತು ನಖಗಳು ಬೆಳ್ಳಗಿದ್ದುವು. ಅವು ಹೊಂಬಣ್ಣವಾಗಿದ್ದುವು. ಮತ್ತು ಮದೋದಕಗಳನ್ನು ಸುರಿಸುತ್ತಿದ್ದುವು. ಇತರವಾದ ಆ ವಂಶದಲ್ಲಿ ಹುಟ್ಟಿದ ಗಜಗಳನ್ನು ಈಗ ನಿರೂಪಿಸುವೆನು ಕೇಳಿರೆಂದನು.

೨೧೩. ಮೊದಲು ಕಪಿಲ, ಪುಂಡರೀಕ, ಸುಮನಾಭ, ರಥಂತರಗಳೆಂಬ ಗಜಗಳು ಹುಟ್ಟಿದುವು. ಅವುಗಳಲ್ಲಿ ಕಪಿಲ ಪುಂಡರೀಕಗಳಿಗೆ ಸುಪ್ರತಿಷ್ಠ, ಪ್ರಮರ್ದನ ನಾಮಕ ಗಜಗಳು ಉತ್ಪನ್ನವಾದುವು.

೨೧೪. ಸ್ಥೂಲವಾದ ಕುಂಭಸ್ಥಳ, ಶೂಲಾಯುಧದಂತೆ ಚೂಪಾದ ದಂತ, ಶುದ್ಧ ಬಿಳುಪಾದ ಬಾಲನಖಗಳು ಇವುಗಳುಳ್ಳವೂ, ಬಲಿಷ್ಠಗಳೂ, ಶಕ್ತಿಯುಕ್ತಗಳೂ ಆದ ಗಜಗಳು ಆಕುಲಿಕನಾಮಕಗಳಾಗಿಯೂ ಸುಪ್ರಸಿದ್ಧಗಳಾಗಿಯೂ ಇರುತ್ತವೆ.

ಪುಷ್ಪದಂತೋ ಬೃಹತ್ಸಾಮಾ ಷಡ್ದಂತೋ ದಂತಪುಷ್ಪವಾನ್ ।
ತಾಮ್ರವರ್ಣೋ ಚ ತತ್ಪುತ್ರಃ ಸಹಚಾರಿವಿಷಾಣಿತಃ ॥ ೨೧೫ ॥

ಅನ್ವಯೇ ಚಾಸ್ಯ ಜಾಯಂತೇ ಲಂಬೋಷ್ಠಾಶ್ಚಾರುದರ್ಶಿನಃ ।
ಶ್ಯಾಮಾಃ ಸುದರ್ಶಶಾಶ್ಚಂಡಾ ನಾನಾಪೀಡಾಯತಾನನಾಃ ॥ ೨೧೬ ॥

ವಾಮದೇವೋಂಜನಶ್ಯಾಮಃ ಸಾಮ್ನೋ ಜಜ್ಞೇಽಥ ವಾಮನಃ ।
ಭಾರ್ಯಾ ಚೈವಾಂಗದಾ ತಸ್ಯ ನೀಲವಲ್ಲಕ್ಷಣೌ ಸುತೌ ॥ ೨೧೭ ॥

ಚಂಡಾಶ್ಚಾರುಶಿರೋಗ್ರೀವಾ ವ್ಯೂಢೋರಸ್ಕಾಸ್ತರಸ್ವಿನಃ ।
ನರ್ಮೈರ್ಬದ್ಧಾಃ ಕುಲೇ ತೇಷಾಂ ಜಾಯಂತೇ ವಿಕೃತಾ ಗಜಾಃ ॥ ೨೧೮ ॥

---

೨೧೫. ಮತ್ತು ಪುಷ್ಪದಂತ, ಬೃಹತ್ಸಾಮ, ಷಡ್ದಂತ, ದಂತಪುಷ್ಪವಂತ, ತಾಮ್ರವರ್ಣವೆಂಬ ಆನೆಗಳೂ ಪ್ರಖ್ಯಾತವಾಗಿವೆ. ಅವುಗಳ ಜೊತೆಯಲ್ಲಿ ಸಂಚರಿಸುವವೂ, ದಂತಗಳಿಂದ ಪ್ರಖ್ಯಾತವೂ ಆದ, ಮೇಲೆ ನಿರೂಪಿಸಿರುವ ಗಜಗಳ ಮರಿಗಳೂ ಕೂಡ ವಿಖ್ಯಾತವಾಗಿವೆ.

೨೧೬. ಈ ಗಜಗಳ ವಂಶಗಳಲ್ಲಿ ನೇತಾಡುವ ತುಟಿಗಳಿಂದ ಯುಕ್ತವಾಗಿಯೂ ನೋಡಲು ಸುಂದರವಾಗಿಯೂ ಕಪ್ಪಾಗಿಯೂ ಇರುವ ಆನೆಗಳೂ ಮತ್ತು ಗಂಭೀರ ದರ್ಶಿಗಳೂ ಭಯಂಕರಗಳೂ ವಿವಿಧ ಹಿಂಸೋತ್ಪಾದಕಗಳೂ ವಿಶಾಲವದನಗಳೂ ಆದ ಕೆಲವು ಗಜಗಳೂ ಉದ್ಭವಿಸಿದವು

೨೧೭. ಅವುಗಳ ವಂಶದಲ್ಲಿ ಅಂಜನದಂತೆ ಕಪ್ಪಗೂ ಸಾಮಗಾನ ಪ್ರಿಯವೂ ಅತ್ಯಂತ ಕುಳ್ಳಗೂ ಆಗಿರುವ ವಾಮದೇವವೆಂಬ ಗಜವು ಜನಿಸಿತು. ಆ ಗಜಕ್ಕೆ ಅಂಗದ ನಾಮಕ ಪತ್ನಿಯೂ ನೀಲಿವಾಗಿಯೂ ಸುಲಕ್ಷಣವಾಗಿಯೂ ಇರುವ ಎರಡು ಮರಿಗಳೂ ಇದ್ದವು.

೨೧೮. ಅವುಗಳ ವಂಶಗಳಲ್ಲಿ ಅತಿಭಯೋತ್ಪಾದಗಳೂ ಸುಂದರವಾದ ಶಿರಸ್ಸು ಕತ್ತು ಇವುಗಳುಳ್ಳವೂ ವಿಶಾಲ ಹೃದಯಗಳೂ ಅತಿವೇಗಿಗಳೂ ವಿಕಾರಿಗಳೂ ಆದ ಅನೇಕ ಗಜಗಳು ಜನಿಸಿ ಜನಗಳ ಕಾರ್ಯಗಳಿಗೆ ಸಾಧಕಗಳಾಗಿದ್ದುವು.

**ಸುಪ್ರತೀಕಸ್ತು ರೂಪೇಣ ನಾಸ್ತ್ಯಸ್ಯ ಸದೃಶೋ ಗಜಃ ।**
**ತಸ್ಯ ಪ್ರಹಾರೀ ಸಂಪಾತೀ ಪೃಥುಶ್ಚಿತ್ತಿ ಸುತಾಸ್ತ್ರಯಃ ॥ ೨೧೯ ॥**

**ಪಶವೋ ದೀರ್ಘತಾಲ್ವೋಷ್ಠಾಃ ಸುವಿಭಕ್ತಶಿರೋದರಾಃ ।**
**ಜಾಯಂತೇ ಮೃದುಸಂಭೂತಾ ವಂಶೇ ತಸ್ಯ ಮತಂಗಜಾಃ ॥ ೨೨೦ ॥**

**ಅಂಜನಾದಂಜನಾ ಸಾಮ್ನೋ ವಿಜಜ್ಞೇ ಚಾಂಜನಾವತೀ ।**
**ಏವಂ ಮಾತಾ ತಯೋಶ್ಚಾಪಿ ಪ್ರಥಿತಾಯುರಜಃ ಸುತೌ ॥ ೨೨೧ ॥**

**ಮಹಾವಿಭಕ್ತಶಿರಸಃ ಸ್ನಿಗ್ಧಜೀಮೂತಸನ್ನಿಭಾಃ ।**
**ಸುದರ್ಶನಾಃ ಸುವರ್ಷ್ಮಾಣಃ ಪದ್ಮಾಭಾಃ ಪರಿಮಂಡಲಾಃ ॥**
**ಶೂನಾಃ ಪೀತಾಯುತಮುಖಾ ಗಜಾಸ್ತಸ್ಯಾನ್ವಯೇಽಭವನ್ ॥ ೨೨೨ ॥**

---

೨೧೯. ಆ ವಂಶದಲ್ಲಿ ಹುಟ್ಟಿದ ಸುಪ್ರತೀಕವೆಂಬ ಗಜಕ್ಕೆ ಸಮಾನವಾದ ಬೇರೊಂದು ಗಜವು ಈ ಲೋಕದಲ್ಲಿಯೇ ಇಲ್ಲ. ಆ ಸುಪ್ರತೀಕನಿಗೆ ಪ್ರಹಾರೀ ಸಂಪಾತೀ ಪೃಥುವೆಂಬ ಮೂವರು ಪುತ್ರರು ಜನಿಸಿದರು.

೨೨೦. ಆ ಸುಪ್ರತೀಕದ ವಂಶದಲ್ಲಿ ಡೀರ್ಘವಾದ ಕಾಲು ತುಟಿ ಇವುಗಳುಳ್ಳವುಗಳೂ ಅತಿ ಸ್ಪಷ್ಟವಾದ ತಲೆ ಉದರ ಇವುಗಳಿರುವುವೂ ಅತಿ ಸಾಧುಗಳೂ ಆದ ಅನೇಕ ಗಜಗಳು ಹುಟ್ಟಿದವು.

೨೨೧. ಸಾಮಪ್ರಿಯವಾದ ಅಂಜನಗೆ ಅಂಜನಾ ಅಂಜನಾವತೀ ಎಂಬ ಎರಡು ಹೆಣ್ಣಾನೆಗಳು ಹುಟ್ಟಿದವು. ಈ ಮರಿಗಳಿಂದ ತಾಯಿಯು ಪ್ರಸಿದ್ಧವಾಯಿತು. ಅದಕ್ಕೆ ಆಯು ಅಜವೆಂಬ ಎರಡು ಮರಿಗಳು ಹುಟ್ಟಿದುವು.

೨೨೨. ಅದರ ವಂಶದಲ್ಲಿ ವಿಭಾಗಿಸಲ್ಪಟ್ಟ ಮಹಾಶಿರಸ್ಸುಳ್ಳವೂ ಮನೋಹರವಾದ ಮೇಘದಂತೆ ಸುಂದರವೂ, ನೋಡಲು ಅತ್ಯಂತ ಸುಂದರಗಳೂ ಮಹಾಕಾಯಗಳೂ ಕಮಲದಂತೆ ಕಾಂತಿಯುಕ್ತವೂ ಮಂಡಲಾಕಾರಿಗಳೂ ಹಳದಿಯೂ ವಿಶಾಲವೂ ಆದ ಮುಖವುಳ್ಳವೂ ಸ್ಥೂಲಕಾಯಗಳೂ ಆದ ಗಜಗಳು ಉತ್ಪನ್ನವಾದವು.

ಜಜ್ಞೇ ಚಂದ್ರಮಸಃ ಸಾಮ್ನಃ ಪಿಂಗಲಾ ಕುಮುದದ್ಯುತಿಃ ।
ಪಿಂಗಲಾಯಾಃ ಸುತೌ ತಸ್ಯಾ ಮಹಾಪದ್ಮೋರ್ಮಿಮಾಲಿನೌ ॥ ೨೨೩ ॥

ಸಮಾಯುವರದಾಂಶ್ಚಂಡಾ ಪ್ರವೃದ್ಧಬಲಿನೋದರಾ ।
ಹಸ್ತಿಯುದ್ಧೇ ಪ್ರಿಯಾನ್ನಾಗಾ ವಿದ್ಧಿ ತಸ್ಯ ಕುಲೋದ್ಭವಾ ॥ ೨೨೪ ॥

ಏತಾ ದೇವಾಸುರೇ ಯುದ್ಧೇ ಜಯಾರ್ಥೇ ಜಗೃಹುಃ ಸುರಾಃ ।
ಕೃಥಾರ್ಥೈಶ್ಚ ವಿಸೃಷ್ಟಾಸ್ತೈಃ ಪೂರ್ವೋಕ್ತಾಃ ಪ್ರಯಯುರ್ದಿಶಃ ॥ ೨೨೫ ॥

ಏತೇಷಾಮನ್ವಯೇ ಜಾತಾ ವಿನೀತಾಂಸ್ತ್ರಿದಶಾ ದದುಃ ।
ಅಂಗಾಯ ಲೋಮಪಾದಾಯ ಸೂತ್ರಕಾರಾಯ ವೈ ದ್ವಿಪಾ ॥ ೨೨೬ ॥

---

೨೨೩. ನಾಮಪ್ರಿಯವಾದ ಚಂದ್ರಮಸವೆಂಬ ಗಜಕ್ಕೆ ಪಿಂಗಲಾ ಕಮಲ ದ್ಯುತಿಗಳೆಂಬ ಎರಡು ಹೆಣ್ಣಾನೆಗಳು ಉತ್ಪನ್ನವಾದವು. ಪಿಂಗಳೆಯೆಂಬ ಆ ಗಜಕ್ಕೆ ಮಹಾಪದ್ಮ ಊರ್ಮಿಮಾಲಿಯೆಂಬ ಎರಡು ಮರಿಗಳು ಉತ್ಪನ್ನವಾದವು ಮತ್ತು ಪ್ರಖ್ಯಾತವಾದವು.

೨೨೪. ಅವುಗಳ ಸಂತತಿಯಲ್ಲಿ ಸಮವೂ ವಿಶಾಲವೂ ಉತ್ತಮವೂ ಆದ ದಂತಗಳುಳ್ಳವೂ ಅತ್ಯುನ್ನತವೂ ಬಲಿಷ್ಠವೂ ಸ್ಥೂಲವೂ ಗಜಯುದ್ಧ ಪ್ರಿಯವೂ ಆದ ಅನೇಕ ಗಜಗಳು ಉತ್ಪನ್ನವಾದುವೆಂದು ತಿಳಿಯಿರಿ.

೨೨೫. ಪೂರ್ವದಲ್ಲಿ ದೇವಾಸುರರಿಗೆ ಯುದ್ಧವಾಯಿತು. ಆ ಕಾಳಗದಲ್ಲಿ ಜಯವನ್ನು ಪಡೆಯಲು ದೇವತೆಗಳು ಈ ಆನೆಗಳನ್ನು ಯುದ್ಧದಲ್ಲಿ ಉಪಯೋಗಿಸಿ ಕೊಂಡು ಜಯವನ್ನು ಪಡೆದರು. ಹೀಗೆ ಈ ಗಜಗಳಿಂದ ಕೃತಾರ್ಥರಾದ ದೇವತೆಗಳು ಗಜಳನ್ನು ಸ್ವೇಚ್ಛೆಯಾಗಿ ಸಂಚರಿಸಲು ಬಿಟ್ಟರು, ಹೀಗೆ ದೇವತೆಗಳಿಂದ ತ್ಯಕ್ತವಾದ ಗಜಗಳು ಸ್ವೇಚ್ಛೆಯಾಗಿ ದಿಗಂತಗಳಲ್ಲಿ ಸಂಚರಿಸಿದುವು.

೨೨೬. ದೇವತೆಗಳು ಅವುಗಳ ವಂಶದಲ್ಲಿ ಉತ್ಪನ್ನವೂ ಸಾಧುವೂ ಆದ ಗಜಗಳನ್ನು ಸೂತ್ರಕಾರನೂ ಲೋಮಪಾದನಾಮಕನೂ ಆದ ಅಂಗರಾಜನಿಗೆ ರಾಜಮರ್ಯಾದೆಗಾಗಿಯೂ, ಇತರ ಕಾರ್ಯಗಳಿಗಾಗಿಯೂ ಕೊಟ್ಟರು.

ದ್ವಿರದೋ ದ್ವಿರದಾಭ್ಯಾಂ ಚ ಹಸ್ತಾದ್ಧಸ್ತೀ ಕರಾತ್ಕರೀ ।
ವರಣಾದ್ವಾರಣೋ ದಂತೀ ದಂತಾಭ್ಯಾಂ ಗರ್ಜನಾದ್ಗಜಃ ॥ ೨೨೭ ॥

ಕುಂಜರಃ ಕುಂಜಚಾರಿತ್ವಾನ್ನಾಗೋ ನಗವಿರೋಧತಃ ।
ಮತಂಗಾದಿತಿ ಮಾತಂಗೋ ದ್ವಿಪೋ ದ್ವಾಭ್ಯಾಮುಪಿ ಸ್ಮೃತಃ ॥
ಸಾಮಜಃ ಸಾಮಜಾತತ್ವಾದಿತಿ ನಿರ್ವಚನಕ್ರಮಃ ॥ ೨೨೮ ॥

ಏಷಾಂ ಜಿಹ್ವಾಪರಾವೃತ್ತಿರಿವಾಕ್ತಂ ಹ್ಯಗ್ನಿಶಾಪಜಂ ।
ಬಲಸ್ಯಾನವತೋ ಯಾ ತು ಯಾ ಚೈಷಾಂಗೂಢಮುಷ್ಕತಾ ॥
ಉಭಯಂ ದಂತಿನಾಮೇತಸ್ತ್ವಯಂಭೂಸುರಶಾಪಜಂ ॥ ೨೨೯ ॥

ದೇವದಾನವಗಂಧರ್ವಾಃ ಪಿಶಾಚೋರಗರಾಕ್ಷಸಾಃ ।
ಕನ್ಯಾಸು ಜಾತಾ ದಿಂಙ್ನಾಗೈರ್ನಾನಾಸತ್ವಾಸ್ತತೋ ಗಜಾಃ ॥ ೨೩೦ ॥

---

೨೨೭–೨೨೮. ಗಜಗಳಿಗೆ ಎರಡು ದಂತಗಳಿರುವುದರಿಂದ ದ್ವಿರದವೆಂದೂ, ಹಸ್ತವಿರುವುದರಿಂದ ಹಸ್ತಿಯೆಂದೂ, ಕರವಿರುವುದರಿಂದ ಕರಿಯೆಂದೂ, ಯುದ್ಧದಲ್ಲಿ ಶತ್ರುಗಳನ್ನು ತಡೆಯುವುದರಿಂದ ವಾರಣವೆಂದೂ, ದಂತಗಳಿರುವುದರಿಂದ ದಂತಿಯೆಂದೂ, ಭಯಂಕರವಾಗಿ ಗರ್ಜಿಸುವುದರಿಂದ ಗಜವೆಂದೂ, ಪೊದರುಗಳಲ್ಲಿ ಸ್ವೇಚ್ಛೆಯಾಗಿ ಸಂಚರಿಸುವುದರಿಂದ ಕುಂಜರವೆಂದೂ, ಗಿರಿಗಳಿಗೆ ವಿರೋಧಿಗಳಾದುದರಿಂದ ನಾಗವೆಂದೂ, ಮದಿಸುವುದರಿಂದ ಮಾತಂಗವೆಂದೂ, ಎರಡುಸಲ ಜಲವನ್ನು ಪಾನಮಾಡುವುದರಿಂದ ದ್ವಿಪವೆಂದೂ, ಸಾಮಗಾನದಿಂದ ಜನ್ಯವಾದುದರಿಂದ ಸಾಮಜವೆಂದೂ, ನಾಮಗಳು ಅನ್ವರ್ಥಕವಾಗಿ ಸಂಭವಿಸಿರುತ್ತವೆ. ಹೀಗ ಗಜಗಳ ಪ್ರತಿಯೊಂದು ನಾಮಗಳೂ ನಿರ್ವಚನಾರ್ಹವಾಗಿವೆ. ಅಂದರೆ ಅನ್ವರ್ಥಕವಾಗಿವೆ.

೨೨೯. ಇಂತಹ ಗಜಗಳಿಗೆ ಅಗ್ನಿದೇವನ ಶಾಪದಿಂದ ಜಿಹ್ವಾಪರಿವರ್ತಿಯಾಗಿದೆ. ನಾಲಿಗೆ ತಿರಿಗಿಹೋಗಿದೆ. ಮತ್ತು ಬೆನ್ನಿನ ಮೂಳೆಯು ಬಗ್ಗಿರುವುದೂ, ವೃಷಣಗಳು (ಬೀಜಗಳು) ಕಾಣದಿರುವುದೂ, ಬ್ರಹ್ಮದೇವ ಮತ್ತು ದೇವತೆಗಳ ಶಾಪದಿಂದ ಉಂಟಾಗಿರುವುವು.

೨೩೦. ಹೀಗೆ ಪುಲಸ್ತ್ಯರ ಪತ್ನಿಯರೂ ಕ್ರೋಧಾದೇವಿಯ ಕುಮಾರಿಯರೂ ಆದ ಮೃಗೀ ಮೊದಲಾದ ಕನ್ನೆಯರಲ್ಲಿ ದೇವದಾನವಗಂಧರ್ವರೂ, ಪಿಶಾಚ, ಉರಗ, ರಾಕ್ಷಸ, ಇವರೂ ದಿಗ್ಗಜಗಳೂ, ಮಹಾ ಬಲಿಷ್ಠಗಳಾದ ಉಳಿದ ಗಜಗಳೂ ಉತ್ಪನ್ನವಾದುವು.

ಸಂಭೂತಿಶ್ಚ ಪ್ರಭೂತಿಶ್ಚ ನಾಮನಿರ್ವಚನಂ ತಥಾ ।
ಏತದ್ಗಜಾನಾಂ ವಿಜ್ಞೇಯಂ ಯೇಷಾಂ ರಾಜಾ ವಿಭಸುಃ ॥ ೨೩೧ ॥

ಕೌಶಿಕಾದ್ಯಾ ಸಮುದ್ರಾತ್ತು ಗಂಗಾಯಾಸ್ತದನಂತರಂ ।
ಅಂಜನಸ್ಯೈಕಮೂಲಸ್ಯ ಪ್ರಾಚ್ಯಾನ್ನಾಗವನಂ ತು ತತ್ ॥ ೨೩೨ ॥

ಉತ್ತರಾ ತಸ್ಯ ವಿಂಧ್ಯಸ್ಯ ಗಂಗಾಯಾ ದಕ್ಷಿಣಂ ಚ ಯತ್ ।
ಗಂಗೋದ್ಭೇದಾತ್ಕರೂಷೇಭ್ಯಃ ಸುಪ್ರತೀಕಸ್ಯ ತದ್ವನಂ ॥ ೨೩೩ ॥

ಅಪರೇಣೋತ್ಕಲಾಚ್ಚೈವ ಹ್ಯಾವೇದಿಭ್ಯಶ್ಚ ಪಂಚಮಂ ।
ಏಕಭೂತಾತ್ಮನೋಽಸ್ಯೈತದ್ವಾಮನಸ್ಯ ವನಂ ಸ್ಮೃತಂ ॥ ೨೩೪ ॥

---

೨೩೧. ಎಲೈ ಮುನಿವರ್ಯರೇ, ಹೀಗೆ ಈ ಗಜಗಳ ಉತ್ಪತ್ತಿ, ಐಶ್ವರ್ಯ, (ಶಕ್ತಿ) ನಾಮಗಳು ಬರಲು ಕಾರಣ ಇವುಗಳನ್ನು ನಿಮಗಾಗಿ ವಿವರಿಸಿರುವೆನು. ಇವುಗಳಿಗೆಲ್ಲಾ ವಿಭಾವಸುವು ರಾಜನಾಗಿರುವನು.

೨೩೨–೩೩. ಮೇಲೆ ಹೇಳಿದ ಗಜಗಳು ಕೌಶಿಕೀ, ಗಂಗಾ, ಸಮುದ್ರ ಮೊದಲಾದವುಗಳ ದಡಗಳಲ್ಲಿಯೂ, ಅಂಜನಾಚಲದ ತಪ್ಪಲಲ್ಲಿಯೂ, ಪೂರ್ವದಿಕ್ಕಿನಲ್ಲಿರುವ ನಾಗವನದಲ್ಲಿಯೂ ಸಂಚರಿಸುವುವು (ವಾಸಿಸುವುವು). ವಿಂಧ್ಯಪರ್ವತದ ಉತ್ತರ ಭಾಗವೂ, ಗಂಗಾನದಿಯ ದಕ್ಷಿಣದಡವೂ, ಗಂಗೋತ್ಪತ್ತಿಗೂ ಕುರೂಷದೇಶಕ್ಕೂ ಮಧ್ಯಗತವಾದ ಪ್ರದೇಶವೂ ಸಹ ಸುಪ್ರತೀಕವೆಂಬ ಗಜವು ವಾಸಿಸುವ ಸ್ಥಾನವಾಗಿದೆ.

೨೩೪. ಉತ್ಕಲದೇಶದ ಆಚೆ, ಆವೇದಿದೇಶದ ಪಶ್ಚಿಮಕ್ಕೂ ಇರುವ ಪ್ರದೇಶವು ಏಕಾಕಿಯಾದ ವಾಮನವೆಂಬ ಗಜವು ಸಂಚರಿಸುವ ಸ್ಥಾನವಾಗಿದೆ.

೨೩೫. ಲೌಹಿತ್ಯಗಿರಿಗಿಂತಲೂ ಆಚೆ, ಸಮುದ್ರಕ್ಕಿಂತಲೂ ಪಶ್ಚಿಮಕ್ಕೂ ಇರುವ ವನಕ್ಕೆ ಯಮದೇವನ ವನವೆಂದು ನಾಮವು ಸಂಭವಿಸಿರುತ್ತದೆ. ಅದರಲ್ಲಿಯೂ ಪರ್ವತದ ಸಮೀಪದಲ್ಲಿಯೂ ಗಜಗಳು ವಾಸಿಸುತ್ತವೆ.

**ಅಪರೇಣ ತು ಲೌಹಿತ್ಯಮಾಸಿಂಧೋಃ ಪಶ್ಚಿಮೇನ ತು ।**
**ಯಮಸ್ಯೈತದ್ವನಂ ಪ್ರೋಕ್ತಮನುಪರ್ವತಮೇವ ತತ್ ॥ ೨೩೫ ॥**

**ಭೂತಿರ್ವಿಜಜ್ಞೇ ಭೂತಾಂಶ್ಚ ರುದ್ರಸ್ಯಾನುಚರಾನ್ ಪ್ರಭೋಃ ।**
**ಸ್ಥೂಲಾನ್ ಕೃಶಾಂಶ್ಚ ದೀರ್ಘಾಂಶ್ಚ ವಾಮನಾನ್ ಹ್ರಸ್ವಕಾನ್ ಸಮಾನ್ ॥ ೨೩೬ ॥**

**ಲಂಬಕರ್ಣಾನ್ ಪ್ರಲಂಬೋಷ್ಠಾನ್ ಲಂಬಜಿಹ್ವಾಸ್ತನೋದರಾನ್ ।**
**ಏಕರೂಪಾನ್ ದ್ವಿರೂಪಾಂಶ್ಚ ಲಂಬಸ್ಫಿಕ್ಸ್ಥೂಲಪಿಂಡಿಕಾನ್ ॥ ೨೩೭ ॥**

**ಸರೋವರ ಸಮುದ್ರಾದಿನದೀ ಪುಲಿನವಾಸಿನಃ ।**
**ಕೃಷ್ಣಾನ್ ಗೌರಾಂಶ್ಚ ನೀಲಾಂಶ್ಚ ಶ್ವೇತಾಂಶ್ಚ ಲೋಹಿತಾರುಣಾನ್ ॥ ೨೩೮ ॥**

**ಬಭ್ರೂನ್ ವೈ ಶಬಲಾನ್ ಧೂಮ್ರಾನ್ ಕದ್ರೂನ್ ರಾಸಭದಾರುಣಾನ್ ।**
**ಮುಂಜಕೇಶಾನ್ ಹೃಷೀಕೇಶಾನ್ ಸರ್ಪಯಜ್ಞೋಪವೀತಿನಃ ॥ ೨೩೯ ॥**

**ವಿಸೃಷ್ಟಾಕ್ಷಾನ್ ವಿರೂಪಾಕ್ಷಾನ್ ಕೃಶಾಕ್ಷಾನೇಕಲೋಚನಾನ್ ।**
**ಬಹುಶೀರ್ಷಾನ್ ವಿಶೀರ್ಷಾಶ್ಚ ಏಕಶೀರ್ಷಾಂಶ್ಚ ಶೀರ್ಷಕಾನ್ ॥ ೨೪೦ ॥**

---

೨೩೬. ಭೂತಿದೇವಿಯು ಸ್ವಾಮಿಯಾದ ರುದ್ರದೇವನ ಭೃತ್ಯರೂ, ಸ್ಥೂಲರೂ, ಕೃಶರೂ, ಉನ್ನತರೂ, ಮೋಟರೂ, ಕುಳ್ಳರೂ, ಸಮರೂ ಆದ ಭೂತಗಳನ್ನು ಸೃಷ್ಟಿಸಿದಳು.

೨೩೭–೨೪೦. ರುದ್ರದೇವನ ಭೃತ್ಯರು ಲಂಬಕರ್ಣಿಗಳೂ, ನೇತಾಡುವ ತುಟಿಗಳುಳ್ಳವರೂ, ಜೋಲಾಡುವ ನಾಲಿಗೆಯುಳ್ಳವರೂ, ಕೃಶೋದರರೂ, ಏಕರೂಪರೂ, ದ್ವಿರೂಪರೂ. ಜೋಲುವ ಪೃಷ್ಠಭಾಗವುಳ್ಳವರೂ, ಸ್ಥೂಲಕಾಯರೂ, ಸರೋವರ, ಸಮುದ್ರ, ನದೀ, ಮರುಳು, ದಿಣ್ಣೆ, ಇವೇ ಮೊದಲಾದ ಪ್ರದೇಶದಲ್ಲಿ ಸಂಚರಿಸುವವರೂ, ಕಪ್ಪು, ಬಿಳಿಪು, ನೀಲಿ, ಹಸರು, ಕೆಂಪು, ಅರುಣ ಈ ಬಣ್ಣವಳ್ಳವರೂ, ಜಟಾಧಾರಿಗಳೂ, ಜಿತೇಂದ್ರಿಯರೂ, ಸರ್ಪಯಜ್ಞೋಪವೀತಿಗಳೂ, ನೇತ್ರಶೂನ್ಯರೂ, ವಿರೂಪಾಕ್ಷರೂ, ಕೃತಾಕ್ಷರೂ, ಏಕಲೋಚನರೂ, ಬಹುಶಿರಸ್ಕರೂ, ಶಿರಸ್ಸಿಲ್ಲದವರೂ, ಏಕಶಿರಸ್ಕರೂ ಅಲ್ಪ ಶೀರ್ಷರೂ ಆಗಿದ್ದರು.

ಚಂಡಾಂಶ್ಚ ವಿಕಟಾಂಶ್ಚೈವ ವಿರೋಮಾನ್ ರೋಮಶಾಂಸ್ತಥಾ ।
ಅಂಧಾಂಶ್ಚ ಜಟಿಲಾಂಶ್ಚೈವ ಕುಂಜಾನ್ ಹೇಷಕವಾಮನಾನ್ ॥ ೨೪೧ ॥

ಸರೋವರ ಸಮುದ್ರಾದಿನದೀಪುಲಿನಸೇವಿನಃ ।
ಏಕಕರ್ಣಾನ್ ಮಹಾಕರ್ಣಾನ್ ಶಂಕುಕರ್ಣಾನ ಕರ್ಣಿಕಾನ್ ॥ ೨೪೨ ॥

ದಂಷ್ಟ್ರಿಣೋ ನಖಿನಶ್ಚೈವ ನಿರ್ದಂತಾಂಶ್ಚ ದ್ವಿಜಿಹ್ವಕಾನ್ ।
ಏಕಹಸ್ತಾನ್ ದ್ವಿಹಸ್ತಾಂಶ್ಚ ತ್ರಿಹಸ್ತಾಂಶ್ಚಾಪ್ಯಹಸ್ತಕಾನ್ ॥ ೨೪೩ ॥

ಏಕಪಾದಾನ್ ದ್ವಿಪಾದಾಂಶ್ಚ ತ್ರಿಪಾದಾನ್ ಬಹುಪಾದಕಾನ್ ।
ಮಹಾಯೋಗಾನ್ ಮಹಾಸತ್ವಾನ್ ಸುತಪಕ್ವಾನ್ ಮಹಾಬಲಾನ್ ॥ ೨೪೪ ॥

ಸರ್ವತ್ರಗಾನಪ್ರತಿಘಾನ್ ಬ್ರಹ್ಮಜ್ಞಾನ್ ಕಾಮರೂಪಿಣಃ ।
ಘೋರಾನ್ ಕ್ರೂರಾಂಶ್ಚ ಮೇಧ್ಯಾಂಶ್ಚ ಶಿವಾನ್ ಪುಣ್ಯಾನ ಸವಾದಿನಃ॥ ೨೪೫ ॥

---

೨೪೧–೨೪೫. ಮತ್ತು ಭೂತಿದೇವಿಯು, ಚಂಡರೂ, ವಿಕಾರರೂ, ರೋಮಶೂನ್ಯರೂ, ಅತಿ ರೋಮಿಗಳೂ, ಅಂಧರೂ, ಜಟಾಧಾರಿಗಳೂ, ಕುಬ್ಜರೂ, ಮೋಟರೂ, ವಾಮನರೂ, ಸರೋವರ, ಸಮುದ್ರ, ನದೀ, ಮರಳು, ದಿಣ್ಣೆ ಇವುಗಳಲ್ಲಿ ವಾಸಿಸುವವರೂ, ಒಂದೇ ಕಿವಿಯಿರುವವರೂ, ಮಹಾಕರ್ಣರೂ, ಶಂಕುವಿನಂತೆ ಉದ್ದವಾದ ಕಿವಿಗಳುಳ್ಳವರೂ, ಬಹು ಕಿವಿಯುಳ್ಳವರೂ, ಕೋರೆ ಹಲ್ಲುಗಳಿರುವರೂ, ನಖಾಯುಧ ಧಾರಿಗಳೂ, ದಂತವಿಲ್ಲದವರೂ, ದ್ವಿಜಿಹ್ವೆಯುಳ್ಳವರೂ, ಒಂದು, ಎರಡು, ಮೂರು ಕೈಗಳುಳ್ಳವರೂ, ಹಸ್ತಶೂನ್ಯರೂ, ಏಕ ಪಾದ, ಎರಡು ಪಾದ, ಮೂರು ಪಾದ, ಬಹು ಪಾದ ಇವುಗಳುಳ್ಳವರೂ, ಮಹಾ ಯೋಗಿಗಳೂ, ಮಹಾ ಬಲವಂತರೂ, ಪಕ್ವವಾದ ಜ್ಞಾನವಂತರೂ, ಮಹಾ ಸಮರ್ಥರೂ, ಸಮಸ್ತವಾದ ಗಾನನಾಶಕರೂ, ಬ್ರಹ್ಮಜ್ಞಾನಿಗಳೂ, ಸ್ವೇಚ್ಛಾರೂಪಿಗಳೂ, ಘೋರರೂಪಿಗಳೂ, ಕ್ರೂರರೂ, ಅತ್ಯಂತ ಪವಿತ್ರರೂ, ಮಂಗಳಕರರೂ, ಪುಣ್ಯ ಪುರುಷರೂ, ವಾದನಶೀಲರೂ ಆದ ಪುತ್ರರನ್ನು ಪಡೆದಳು.

ಕುಶಹಸ್ತಾನ್ ಮಹಾಜಿಹ್ವಾನ್ ಮಹಾಕರ್ಣಾನ್ಮಹಾನನಾನ್ ।
ಹಸ್ತಾದಾಂಶ್ಚ ಮುಖಾದಾಂಶ್ಚ ಶಿರೋದಾಂಶ್ಚ ಕಪಾಲಿನಃ ॥ ೨೪೬ ॥

ಧನ್ವಿನೋ ಮುದ್ಗರಧರಾನಸಿಶೂಲಧರಾಂಸ್ತಥಾ ।
ದೀಪ್ತಾಸ್ಯಾನಃ ದೀಪ್ತನೇತ್ರಾಂಶ್ಚ ಚಿತ್ರಮಾಲ್ಯಾನುಲೇಪನಾನ್ ॥ ೨೪೭ ॥

ಅನ್ನಾದಾನ್ ಪಿಶಿದಾತಾಂಶ್ಚ ಬಹುರೂಪಾನ್ ಸುರೂಪಕಾನ್ ।
ರಾತ್ರಿಸಂಧ್ಯಾಚರಾನ್ ಘೋರಾನ್ ಕ್ವಚಿತ್ಸಾಮ್ಯಾನ್ ದಿವಾಚರಾನ್ ॥
ನಕ್ತಂಚರಾನ್ ಸುದುಷ್ಪ್ರೇಕ್ಷ್ಯಾನ್ ಘೋರಾಂಸ್ತಾನ್ ವೈ ನಿಶಾಚರಾನ್ ॥

ಪರತ್ವೇ ಚ ಭಯಂ ದೈವಂ ಸರ್ವೇ ತೇ ಗತಮಾನಸಾಃ ।
ನೈಷಾಂ ಭಾರ್ಯಾಸ್ತಿ ಪುತ್ರೋ ವಾ ಸರ್ವೇ ತೇ ಹ್ಯೂರ್ಧ್ವರೇತಸಃ ॥ ೨೪೯ ॥

ಶತಂತಾನಿ ಸಹಸ್ರಾಣಿ ಭೂತಾನಾಮಾತ್ಮಯೋಗಿನಾಂ ।
ಏತೇ ಸರ್ವೇ ಮಹಾತ್ಮನೋ ಭೂತ್ಯಾಃ ಪುತ್ರಾಃ ಪ್ರಕೀರ್ತಿತಾಃ ॥ ೨೫೦ ॥

---

೨೪೬–೨೪೮. ಆ ಪುತ್ರರಲ್ಲಿ ಕೆಲವರು ದರ್ಭಪಾಣಿಗಳೂ, ದೀರ್ಘವಾದ ನಾಲಿಗೆಯುಳ್ಳವರೂ, ವಿಶಾಲ ಕಿವಿಗಳುಳ್ಳವರೂ, ವಿಶಾಲ ಮುಖಿಗಳೂ, ಹಸ್ತಗಳಿಂದ ಭಕ್ಷಿಸುವವರೂ, ಬಾಯಿಯಿಂದ ಭಕ್ಷಿಸುವವರೂ, ತಲೆಯಿಂದ ಭಕ್ಷಿಸುವವರೂ, ಕಪಾಲ ಧಾರಿಗಳೂ, ಧನುರ್ಧಾರಿಗಳೂ, ಗದಾಧಾರಿಗಳೂ, ಖಡ್ಗ, ಶೂಲ ಇವುಗಳನ್ನು ಧರಿಸಿರುವವರೂ, ಪ್ರಕಾಶಿಸುವ ಮುಖ ನೇತ್ರಗಳುಳ್ಳವರೂ, ವಿಚಿತ್ರವಾದ ಮಾಲೆಗಳು ವಿಲೇಪನ ಇವುಗಳನ್ನು ಧರಿಸಿರುವವರೂ, ಅನ್ನ ಭಕ್ಷಕರೂ, ಮಾಂಸಭಕ್ಷರೂ, ಬಹುರೂಪಿಗಳೂ, ಸುರೂಪಿಗಳೂ, ರಾತ್ರಿ ಸಂಧ್ಯಾಕಾಲಗಳಲ್ಲಿ ಸಂಚಾರಿಗಳೂ, ಘೋರರೂ, ಸೌಮ್ಯರೂ, ಹಗಲಲ್ಲಿ ಸಂಚರಿಸುವವರೂ, ರಾತ್ರಿಂಚರರೂ, ನೋಡಲು ಭಯಂಕರರೂ, ಘೋರ ರೂಪಿಗಳೂ, ನಿಶಾಚಾರಿಗಳೂ ಆಗಿದ್ದರು. ಇಂತಹ ಪುತ್ರರನ್ನು ಪಡೆದಳು.

೨೪೯. ಈ ಪುತ್ರರೆಲ್ಲರೂ ಪರಮಪುರುಷನಾದ ದೇವನಲ್ಲಿ ಭಯ ಭಕ್ತಿಯುಳ್ಳವರೂ ಶುದ್ಧಮನಸ್ಕರೂ ಆಗಿರುವರು. ಅವರಿಗೆ ಹೆಂಡರು ಮಕ್ಕಳು ಯಾರೂ ಇರಲಿಲ್ಲ. ಸರ್ವರೂ ಜಿತೇಂದ್ರಿಯರಾಗಿರುವರು.

೨೫೦. ಮಹಾಯೋಗಿಗಳಾದ ಭೂತಗಳು ಒಂದು ಲಕ್ಷ ಸಂಖ್ಯಾಕಗಳಾಗಿರುವುವು. ಮೇಲೆ ನಿರೂಪಿತರಾದ ಸರ್ವರಾದ ಮಹಾತ್ಮರೂ ಭೂತಿಯ ಮಕ್ಕಳಾಗಿಯೂ ಸುಪ್ರಸಿದ್ಧರಾಗಿಯೂ ಇರುವರೆಂದು ಜ್ಞಾನಿಗಳು ಹೇಳುವರು.

**ಕಪಿಶಾ ಚೈವ ಕೂಷ್ಮಾಂಡೀ ಕೂಷ್ಮಾಂಡಾಂಜಜ್ಞಿರೇ ಪುನಃ ।**
**ಮಿಥುನಾನಿ ಪಿಶಾಚಾನಾಂ ವರ್ಣೇನ ಕಪಿಶೇನ ಚ ॥**
**ಕಪಿಶತ್ವಾತ್ ಪಿಶಾಚಾಸ್ತೇ ಸರ್ವೇಚ ಪಿಶಿತಾಶನಾಃ ॥ ೨೫೧ ॥**

**ಯುಗ್ಮಾನಿ ಷೋಡಶಾನ್ಯಾನಿ ವರ್ತಮಾನಾಸ್ತದನ್ವಯಾಃ ।**
**ನಾಮತಸ್ತಾನ್ ಪ್ರವಕ್ಷ್ಯಾಮಿ ಪುರುಷಾದಾಂಸ್ತದನ್ವಯಾನ್ ॥ ೨೫೨ ॥**

**ಛಗಲಶ್ಛಗಲೀ ಚೈವ ವಕ್ರೋ ವಕ್ರಮುಖೀ ತಥಾ ।**
**ಷೋಡಶಾನಾಂ ಗಣಾಶ್ಚೈವ ಸೂಚೀ ಸೂಚೀಮುಖಸ್ತಥಾ ॥ ೨೫೩ ॥**

**ಕುಂಬಪಾತ್ರಶ್ಚ ಕುಂಬೀ ಚ ವಜ್ರದಂಷ್ಟ್ರಂಶ್ಚ ದುಂದುಭಿಃ ।**
**ಉಪಚಾರೋಪಚಾರೋಪಚಾರಶ್ಚ ಉಲೂಖಲ ಉಲೂಖಲೀ ॥ ೨೫೪ ॥**

**ಅನರ್ಕಶ್ಚ ಅನರ್ಕಾ ಚ ಕುಖಂಡಶ್ಚ ಕುಖಂಡಿಕಾ ।**
**ಪಾಣಿಪಾತ್ರಃ ಪಾಣೀಪಾತ್ರೀ ಪಾಂಶುಃ ಪಾಂಶುಮತೀ ತಥಾ ॥ ೨೫೫ ॥**

---

೨೫೧. ಪುಲಹರ ಪತ್ನಿಯಾದ ಕಪಿಶಾ ಎಂಬುವಳಿಗೆ ಕುಷ್ಮಾಂಡಾನಾಮಕಳಾದ ಕುಮಾರಿಯು ಹುಟ್ಟಿದಳು. ಅವಳಿಗೆ ಪಿಶಾಚಗಳ ಮಿಥುನಗಳು, ಸ್ವಲ್ಪ ಕೆಂಪು ಮಿಶ್ರವಾದ ದೂಸರವರ್ಣವಾಗಿ ಜನಿಸಿದುವು. ಹೀಗೆ ಸಮಸ್ತ ಪಿಶಾಚಗಳೂ ದೂಸರ ವರ್ಣವಾಗಿಯೂ, ಮಾಂಸಭಕ್ಷಕಗಳಾಗಿಯೂ ಇದ್ದುವು.

೨೫೨. ಎಲೈ ವಿಪ್ರೋತ್ತಮರೇ, ಆ ಪಿಶಾಚಗಳ ವಂಶದಲ್ಲಿ ಹದಿನಾರು ದಂಪತಿಗಳು ಉದ್ಭವಿಸಿದುವು. ಅವುಗಳ ನಾಮಗಳನ್ನೂ, ವಂಶಗಳನ್ನೂ ತಿಳಿಸುವೆನು ಕೇಳಿರೆಂದು ಹೇಳಿದನು.

೨೫೩—೨೫೬. ಆ ಷೋಡಶ ಗಣಗಳು ಯಾವುವೆಂದರೆ:—ಛಗಲ ಛಗಲೀ, ವಕ್ರ ವಕ್ರಮುಖೀ, ಸಚೀ, ಸೂಚೀ ಸೂಚೀಮುಖ, ಕುಂಭಪಾತ್ರ ಕುಂಭೀ, ವಜ್ರ ದಂಷ್ಟ್ರ ದುಂದುಭೀ, ಉಪಚಾರಾ ಉಪಚಾರ, ಉಲೂಖಲ ಉಲೂಖಲೀ, ಅನರ್ಕ ಅನರ್ಕಾ, ಕುಖಂಡ ಕುಖಂಡಿಕಾ, ಪಾಣಿಪಾತ್ರ ಪಾಣಿಪಾತ್ರೀ, ಪ್ರಾಂಶು ಪ್ರಾಂಶು

ನಿತುಂಡಶ್ಚ ನಿತುಂಡೀ ಚ ನಿಪುಣಾ ನಿಪುಣಸ್ತಥಾ ।
ಛಲಾದೋಚ್ಛೇಷಣಾ ಚೈವ ಪ್ರಸ್ಕಂದಃ ಸ್ಕಂದಿಕಾ ತಥಾ ॥
ಷೋಡಶಾನಾಂ ಪಿಶಾಚಾನಾಂ ಗಣಾಃ ಪ್ರೋಕ್ತಾಸ್ತು ಷೋಡಶ ॥ ೨೫೬ ॥

ಅಜಾಮುಖಾ ವಕ್ರಮುಖಾಃ ಪೂರಿಣಃ ಸ್ಕಂದಿನಸ್ತಥಾ ।
ವಿಪಾದಾಂಗಾರಿಕಾಶ್ಚೈವ ಕುಂಭಪಾತ್ರಾಃ ಪ್ರಕುಂದಕಾಃ ॥ ೨೫೭ ॥

ಉಪಚಾರೋಲೂಖಲಿಕಾ ಹ್ಯನರ್ಕಾಶ್ಚ ಕುಖಂಡಿಕಾಃ ।
ಪಾಣಿಪಾತ್ರಾಶ್ಚ ನೈತುಂಡಾ ಊರ್ಣಾಶಾ ನಿಪುಣಾಸ್ತಥಾ ॥ ೨೫೮ ॥

ಸೂಚೀಮುಖೋಚ್ಛೇಷಣಾದಾಃ ಕುಲಾನ್ಯೇತಾನಿ ಷೋಡಶ ।
ಇತ್ಯೇತಾ ಹ್ಯಭಿಜಾತಾಸ್ತು ಕೂಷ್ಮಾಂಡಾನಾಂ ಪ್ರಕೀರ್ತಿತಾಃ ॥ ೨೫೯ ॥

ಪಿಶಾಚಾಸ್ತೇ ತು ವಿಜ್ಞೇಯಾಃ ಸುಕಲ್ಪಾ ಇತಿ ಜಜ್ಞಿರೇ ।
ಬೀಭತ್ಸಂ ವಿಕೃತಾಚಾರಂ ಪುತ್ರಪೌತ್ರಮನಂತಕಂ ॥
ಅತಸ್ತೇಷಾಂ ಪಿಶಾಚಾನಾಂ ಲಕ್ಷಣಂ ಚ ನಿಬೋಧತ ॥ ೨೬೦ ॥

---

ಮತೀ, ನಿತುಂಡ ನಿತುಂಡೀ, ನಿಪುಣ ನಿಪುಣಾ, ಛಲದ ಉಚ್ಛೇಷಣ, ಪ್ರಸ್ಕಂದ ಪ್ರಸ್ಕಂದಿಕಾ ಎಂಬ ಹದಿನಾರು ಪಿಶಾಚಗಳ ದಂಪತಿಗಳು ಉತ್ಪನ್ನಗಳಾದುವು. ಈ ದಂಪತಿಗಳಿಂದ ಹದಿನಾರು ಗಣಗಳು ಉದ್ಭವಿಸಿದುವು.

೨೫೭-೨೫೯. ಆ ಷೋಡಶಗಣಗಳನ್ನು ಈಗ ತಿಳಿಸುವೆನು ಕೇಳಿರಿ. ಅಜಾಮುಖ, ವಕ್ರಮುಖ, ಪೂರಿಣ, ಸ್ಕಂದಿನ, ವಿವಾದಾಂಗಾರಿಕಾ, ಕುಂಭಪಾತ್ರ, ಪ್ರಕುಂದಕ, ಉಪಚಾರ, ಉಲೂಖಲಿಕ, ಅನರ್ಕ, ಕುಖಂಡಿಕ, ಪಾಣಿಪಾತ್ರ, ನೈತುಂಡ, ಊರ್ಣಶ, ನಿಪುಣ, ಸೂಚೀಮುಖ, ಉಚ್ಛೇಷಣದವೆಂಬ ಹದಿನಾರು ಗಣಗಳು ಜನಿಸಿ ಸುಪ್ರಸಿದ್ಧವಾಗಿವೆ. ಇವು ಕೂಷ್ಮಾಂಡವೆಂಬ ವಂಶದಲ್ಲಿ ಉತ್ಪನ್ನವಾದ ಪಿಶಾಚಗಳ ಗಣಗಳು ಷೋಡಶಸಂಖ್ಯಾಕಗಳಾಗಿಯೂ, ಸದ್ವಂಶಜಾತಗಳಾಗಿಯೂ ಇರುತ್ತವೆ.

೨೬೦. ಆ ಪಿಶಾಚಗಳು ಮತ್ತೆ ಸುಕಲ್ಪಸಂಜ್ಞಿಕಗಳಾಗಿಯೂ, ಸುಪ್ರಸಿದ್ಧಗಳಾಗಿಯೂ ಇವೆಯೆಂದು ತಿಳಿಯಬೇಕು. ಆ ಪಿಶಾಚಗಳ ನಡೆನುಡಿಗಳು ಭಯಂಕರಗಳಾಗಿಯೂ, ವಿಕೃತಾಚಾರಗಳಾಗಿಯೂ ಇರುತ್ತವೆ. ಆ ಪಿಶಾಚಗಳ ಪುತ್ರಪೌತ್ರರ ವಿಷಯವನ್ನು ತಿಳಿಸುವೆನು. ಅವರು ಅನಂತವಾಗಿರುವರು. ಆದುದರಿಂದ ಆ ಪಿಶಾಚಗಳ ಸ್ವರೂಪ ಲಕ್ಷಣಗಳನ್ನು ತಿಳಿಸುವೆನು ಕೇಳಿರೆಂದನು.

ಸರ್ವಾಂಗಕೇಶಾ ವೃತ್ತಾಖ್ಯಾ ದಂಷ್ಟ್ರಿಣೋ ನಖಿನಸ್ತಥಾ ।
ತಿರ್ಯಗಂಗಾಃ ಪುರುಷಾದಾಶ್ಚ ಪಿಶಾಚಾಸ್ತೇ ಹ್ಯಧೋಮುಖಾಃ ॥ ೨೬೧ ॥

ಅಕೇಶಕಾ ಹ್ಯರೋಮಾಣಸ್ತ್ವಗ್ವಸಾಶ್ಚರ್ಮವಾಸಸಃ ।
ಕೂಷ್ಮಾಂಡಿಕಾಃ ಪಿಶಾಚಾಸ್ತೇ ತಿಲಭಕ್ಷ್ಯಾಃ ಸದಾಮಿಷಾಃ ॥ ೨೬೨ ॥

ವಕ್ರಾಂಗಹಸ್ತಪಾದಾಶ್ಚ ವಕ್ರಶೀಲಾಗತಾಸ್ತಥಾ ।
ಜ್ಞೇಯಾ ವಕ್ರಪಿಶಾಚಾಸ್ತೇ ವಕ್ರಗಾಃ ಕಾಮರೂಪಿಣಃ ॥ ೨೬೩ ॥

ಲಂಬೋದರಾಸ್ತುಂಡನಾಶಾ ಹ್ರಸ್ವಕಾಯಶಿರೋಭುಜಾಃ ।
ನಿತುಂದಕಾಃ ಪಿಶಾಚಾಸ್ತೇ ತಿಲತಕ್ಷ್ಯಾಃ ಪ್ರಿಯಶ್ರವಾಃ ॥ ೨೬೪ ॥

ವಾಮನಾಕೃತಯಶ್ಚೈವ ವಾಚಾಲಾಃ ಪ್ಲುತಗಾಮಿನಃ ।
ಪಿಶಾಚಾನರ್ಕಮರ್ಕಾಸ್ತೇ ವೃಕ್ಷವಾಸಾದನಪ್ರಿಯಾಃ ॥ ೨೬೫ ॥

---

೨೬೧–೨೬೨. ಕೂಷ್ಮಾಂಡ ಪಿಶಾಚಗಳು ಸರ್ವಾಂಗಗಳಲ್ಲಿ ಕೇಶವುಳ್ಳವುಗಳೂ, ವೃತ್ತನಾಮಕಗಳೂ, ದಂಷ್ಟ್ರಿಗಳೂ, ನಖಾಯುಧಗಳೂ, ಅಡ್ಡಡ್ಡವಾದ ಅವಯವವುಳ್ಳವುಗಳೂ, ನರಭಕ್ಷಕಗಳೂ, ಅಧೋಮುಖಿಗಳೂ, ಬಹಳವಾಗಿ ರೋಮಶೂನ್ಯಗಳೂ, ತೊಗಟೆ, ಮೇಧಸ್ಸು, ಚರ್ಮ ಇವುಗಳೇ ವಸ್ತ್ರಗಳಾಗಿ ಉಳ್ಳವುಗಳೂ, ತಿಲಭಕ್ಷಕಗಳೂ, ಸರ್ವದಾ ಮಾಂಸಪ್ರಿಯಗಳೂ ಆಗಿರುತ್ತವೆ.

೨೬೩. ವಕ್ರಪಿಶಾಚಗಳು ವಕ್ರವಾದ ಅಂಗ, ಹಸ್ತ, ಪಾದ ಇವುಗಳುಳ್ಳವುಗಳೂ ಏಕವಾದ ನಡೆನುಡಿಗಳುಳ್ಳವುಗಳೂ, ವಕ್ರಸ್ವಭಾವಿಗಳೂ, ವಕ್ರಾಕಾರಿಗಳೂ, ವಕ್ರಗಮನಗಳೂ, ಕಾಮರೂಪಿಗಳೂ ಆಗಿರುವುವು.

೨೬೪. ನಿತುಂದಕ ಗಣಕ್ಕೆ ಸೇರಿರುವ ಪಿಶಾಚಿಗಳೂ, ನೇತಾಡುವ ಉದರವುಳ್ಳವೂ, ದುಂಡಾದ ಮೂಗು ವಿಶಿಷ್ಟವೂ ಮೋಟಾದ ಶರೀರ, ಶಿರಸ್ಸು, ಭುಜ ಇವುಗಳುಳ್ಳವೂ ತಿಲಭಕ್ಷಕಗಳೂ ಪ್ರಿಯವಾದ ಕಿವಿಗಳಿರುವವೂ ಆಗಿರುತ್ತವೆ.

೨೬೫. ಆನರ್ಕಪಿಶಾಚಗಳಿಗೆ ಆಕಾರವು ಸಣ್ಣದಾಗಿಯೂ, ಮಾತು ಅತಿಯಾಗಿಯೂ ಗಮನವು ಅತಿ ವೇಗವಾಗಿಯೂ ವಾಸವು ವೃಕ್ಷಗಳಲ್ಲಿಯೂ ಭೋಜನದಲ್ಲಿ ಅತಿ ಪ್ರೀತಿಯೂ ಇರುತ್ತವೆ.

**ಊರ್ಧ್ವಬಾಹೂರ್ದ್ಧ್ವರೋಮಾಣ ಊರ್ದ್ಧ್ವವೃಕ್ಷಾಸ್ತಥಾಲಯಾಃ ।**
**ಮುಂಚಂತೀ ಪಾಂಶುನಂಗೇಭ್ಯಃ ಪಿಶಾಚಾಃ ಪಾಂಶವಶ್ಚ ತೇ ॥ ೨೬೬ ॥**

**ಧಮನೀಮತಕಾಃ ಶುಷ್ಕಾಃ ಶ್ಮಶುಲಾಶ್ಚೀರವಾಸಸಃ ।**
**ಉಪವೀರಾಃ ಪಿಶಾಚಾಶ್ಚ ಶ್ಮಶಾನಾಯತನಾಸ್ತಥಾ ॥ ೨೬೭ ॥**

**ವಿಷ್ಟಬ್ಧಾಕ್ಷಾ ಮಹಾಜಿಹ್ವಾ ಲೇಲಿಹಾನಾ ಹ್ಯುಲೂಖಲಾಃ ।**
**ಹಸ್ತ್ಯಶ್ವಸ್ಥೂಲಶಿರಸೋ ವಿರತಾ ಬದ್ಧಪಿಂಡಕಾಃ ॥ ೨೬೮ ॥**

**ಪಿಶಾಚಾಃ ಕುಂಭಪಾತ್ರಾಸ್ತೇ ಅದೃಷ್ಟಾನ್ನಾನಿ ಭುಂಜತೇ ।**
**ಸೂಕ್ಷ್ಮಾಸ್ತು ರೋಮಶಾಃ ಪಿಂಗಾ ದೃಷ್ಟಾದೃಷ್ಟಾಶ್ಚರಂತಿ ವೈ ॥ ೨೬೯ ॥**

---

೨೬೬ ಪಾಂಶುಪಿಶಾಚಗಳಿಗೆ ಭುಜಗಳು ಊರ್ಧ್ವವಾಗಿರುತ್ತವೆ. ಉನ್ನತವಾದ ವೃಕ್ಷಗಳಲ್ಲಿ ವಾಸಿಸುತ್ತವೆ. ತಮ್ಮ ಅಂಗಗಳಿಂದ ಧೂಳುಗಳನ್ನು ಸದಾಕಾಲದಲ್ಲಿಯೂ ಎರುಚುತ್ತವೆ. ಇವು ಪಾಂಶುಪಿಶಾಚಗಳ ಲಕ್ಷಣಗಳಾಗಿವೆ.

೨೬೭. ಧಮನೀಮತಕಗಳಾದ ಪಿಶಾಚಗಳು ಶುಷ್ಕವದನಗಳೂ ದಾಡೀಮೀಸೆಗಳಿರುವುವೂ, ಚೀರವಾಸಿಗಳೂ ಉಪವೀತಿಗಳೂ ಶ್ಮಶಾನವಾಸಿಗಳೂ ಶಿವಪ್ರಿಯಗಳೂ ಆಗಿರುತ್ತವೆ

೨೬೮. ಉಲೂಖಲ ನಾಮಕ ಪಿಶಾಚಗಳು ಕ್ಷುಭಿತವಾದ ಕಣ್ಣುಗಳುಳ್ಳವೂ ಸ್ಥೂಲವಾದ ನಾಲಿಗೆಯುಳ್ಳವುಗಳೂ, ಸರ್ಪಾಕಾರಿಗಳೂ, ಆನೆ, ಕುದುರೆ, ಒಂಟೆ ಇವುಗಳಂತೆ ದಪ್ಪವಾದ ಕತ್ತುಳ್ಳವುಗಳೂ ವಿಶೇಷವಾಗಿ ಕಾರ್ಯಾಸಗಳೂ ಪಿಂಡಾಕಾರಿಗಳೂ ಆಗಿರುತ್ತವೆ.

೨೬೯. ಕುಂಭಪಾತ್ರನಾಮಕ ಪಿಶಾಚಗಳು ಜನಗಳಿಗೆ ಕಾಣದೆಯೇ ಭೋಜನ ಮಾಡುತ್ತವೆ. ಅವು ಅತಿ ಸೂಕ್ಷ್ಮವಾಗಿಯೂ ರೋಮಸಹಿತವಾಗಿಯೂ ಹೊಂಬಣ್ಣವುಳ್ಳವುಗಳಾಗಿಯೂ, ಕಂಡು ಕಾಣದೇ ಸಂಚಾರಮಾಡುವುಗಳಾಗಿಯೂ ಇರುತ್ತವೆ.

**ಅಯುಕ್ತಾಶ್ಚ ವಿಶಂತೀಹ ನಿಪುಣಾಸ್ತೇ ಪಿಶಾಚಕಾಃ |**
**ಆಕರ್ಣದಾರಿತಾಸ್ಯಾಶ್ಚ ಲಂಬಭ್ರೂಸ್ಥೂಲನಾಸಿಕಾಃ || ೨೭೦ ||**

**ಹಸ್ತಪಾದಾಕ್ರಾಂತಗಣಾ ಹ್ರಸ್ವಕಾಃ ಕ್ಷಿತಿದೃಷ್ಟಯಃ |**
**ಬಾಲಾದಾಸ್ತೇ ಪಿಶಾಚಾ ವೈ ಸೂತಿಕಾಗೃಹಸೇವಿನಃ || ೨೭೧ ||**

**ಪೃಷ್ಠತಃ ಪಾಣಿಪಾದಾಶ್ಚ ಹ್ರಸ್ವಕಾ ವಾತರಂಹಸಃ |**
**ಪಿಶಿತಾದಾಃ ಪಿಶಾಚಾಸ್ತೇ ಸಂಗ್ರಾಮೇ ರುಧಿರಾಶಿನಃ || ೨೭೨ ||**

**ನಗ್ನಕಾ ಹ್ಯನಿಕೇತಾಶ್ಚ ಲಂಬಕೇಶಾಶ್ಚ ಪಿಂಡಕಾಃ |**
**ಪಿಶಾಚಾಃ ಸ್ಕಂದಿನಸ್ತೇ ವೈ ಅನ್ಯಾ ಉಚ್ಛ್ವಸನಾಶಿನಃ ||**
**ಷೋಡಶ ಜಾತಯಸ್ತೇಷಾಂ ಪಿಶಾಚಾನಾಂ ಪ್ರಕೀರ್ತಿತಾಃ || ೨೭೩ ||**

---

೨೭೦ ಅತ್ಯಂತ ಸಮರ್ಥವಾದ ಕೆಲವು ಪಿಶಾಚಗಳು ಅಯೋಗ್ಯಗಳೂ, ಅತ್ಯಂತ ಕುಶಲಿಗಳೂ, ಕಿವಿಗಳವರೆಗೂ ಸೀಳಿರುವ ಮುಖಗಳೂ ಆಗಿರುತ್ತವೆ. ಅವುಗಳ ಹುಬ್ಬುಗಳು ನೇತಾಡುತ್ತಿರುತ್ತವೆ ಮೂಗು ದಪ್ಪವಾಗಿರುತ್ತವೆ.

೨೭೧ ಬಾಲಾರಿಷ್ಟಗಳೂ ಅಂದರೆ ಬಾಲಕರನ್ನೇ ಹಿಂಸಿಸುವುದೂ, ಹ್ರಸ್ವ ಕಾಯಗಳೂ, ಅಧೋಮುಖಿಗಳೂ ಆದ ಕೆಲವು ಪಿಶಾಚಗಳು ತಮ್ಮ ಕೈಕಾಲುಗಳಿಂದಲೇ ಜನರ ತಂಡವನ್ನು ಆಕ್ರಮಿಸಿಕೊಂಡು ಸೂತಿಕಾಗೃಹಗಳಲ್ಲಿ ವಾಸಿಸುತ್ತವೆ

೨೭೨. ಪಿಶಿತಾದಿನಾಮಕ ಕೆಲವು ಪಿಶಾಚಗಳಿಗೆ ಹಿಂಭಾಗದಲ್ಲಿ ಕೈಕಾಲುಗಳಿರುತ್ತವೆ. ಅವು ಮೋಟಾಗಿಯೂ, ವಾಯುವೇಗಿಯಾಗಿಯೂ, ರಣಾಂಗದಲ್ಲಿ ರಕ್ತಪಾಯಿಗಳಾಗಿಯೂ ಇರುತ್ತವೆ

೨೭೩ ಸ್ಕಂದಿನನಾಮಕ ಪಿಶಾಚಗಳು ದಿಗಂಬರಗಳಾಗಿಯೂ, ನಿರಾಶ್ರಯಗಳಾಗಿಯೂ, ಜೋಲಾಡುವ ಕೇಶವುಳ್ಳವುಗಳಾಗಿಯೂ, ಪಿಂಡಾಕಾರಿಗಳಾಗಿಯೂ, ಪರರವಾಯುನಿರೋಧಕಗಳಾಗಿಯೂ ಆಗಿರುತ್ತವೆ ಈ ರೀತಿಯಲ್ಲಿ ಹದಿನಾರುವಿಧ ಪಿಶಾಚಗಳ ಸ್ವರೂಪವನ್ನು ನಿಮಗಾಗಿ ನಿರೂಪಿಸಿರುವೆನು.

ಏವಂವಿಧಾನ್ಪಿಶಾಚಾಂಸ್ತು ದೀನಾಂದೃಷ್ಟ್ವಾನುಕಂಪಯಾ ।
ತೇಭ್ಯೋ ಬ್ರಹ್ಮಾ ವರಂ ಪ್ರಾದಾತ್ಕಾರುಣ್ಯಾದಲ್ಪಚೇತಸಃ ॥
ಅಂತರ್ಧಾನಂ ಪ್ರಜಾಸ್ತೇಷಾಂ ಕಾಮರೂಪತ್ವಮೇವ ಚ ॥ ೨೭೪ ॥

ಉಭಯೋಃ ಸಂಧ್ಯಯೋಶ್ಚಾರಂ ಸ್ಥಾನಾನ್ಯಾಜೀವಮೇವ ಚ ।
ಗೃಹಾಣಿ ಯಾನಿ ಭಗ್ನಾನಿ ಶೂನ್ಯಾನ್ಯಲ್ಪಜನಾನಿ ಚ ॥ ೨೭೫ ॥

ವಿಧ್ವಸ್ತಾನಿ ಚ ಯಾನಿ ಸ್ಯುರನಾಚಾರೋಷಿತಾನಿ ಚ ।
ಅಸಂಪೃಷ್ಟೋಪಲಿಪ್ತಾನಿ ಸಂಸ್ಕಾರೈರ್ವರ್ಜಿತಾನಿ ಚ ॥ ೨೭೬ ॥

ರಾಜಮಾರ್ಗೋಪರಥ್ಯಾಶ್ಚ ನಿಷ್ಕುಂಠಾಶ್ಚ ಪರಾಣಿ ಚ ।
ದ್ವಾರಾಣ್ಯಟ್ಟಾಲಕಾಶ್ಚೈವ ನಿರ್ಗಮಾ ಸಂಕ್ರಮಾಂಸ್ತಥಾ ॥ ೨೭೭ ॥

ಪಥೋ ನದ್ಯೋಥ ತೀರ್ಥಾನಿ ಚೈತ್ಯವೃಕ್ಷಾನ್ಮಹಾಪಥಾ ।
ಪಿಶಾಚಾ ವಿನಿವಿಷ್ಟಾ ವೈ ಸ್ಥಾನೇಷ್ವೇತೇಷು ಸರ್ವಶಃ ॥ ೨೭೮ ॥

---

೨೭೪–೨೭೫. ಬ್ರಹ್ಮದೇವನು ಅತಿಶೋಚನೀಯಾವಸ್ಥೆಯುಳ್ಳ ಈ ರೀತಿಯಾದ ಪಿಶಾಚಗಳನ್ನು ನೋಡಿ ಅತಿ ದಯೆಯಿಂದ ಕನಿಕರಪಟ್ಟು, ಅವುಗಳಿಗೆ ಅಂತರ್ಧಾನವಾಗುವ ಶಕ್ತಿಯನ್ನೂ, ಸ್ವೇಚ್ಛಾ ಸಂಚಾರವಮಾಡುವ ಸಾಮರ್ಥ್ಯವನ್ನೂ, ವರರೂಪವಾಗಿ ಕೊಟ್ಟನು. ಅವು ಬದುಕಿರುವವರೆಗೂ ಉಭಯ ಸಂಧ್ಯೆಗಳಲ್ಲಿ ಸಂಚರಿಸುವಂತೆಯೂ, ಮುರಿದು ಕುಸಿದು ಬಿದ್ದಿರುವುದೂ, ವಾಸವಿಲ್ಲದುವೂ, ಅಲ್ಪವೂ, ದುಷ್ಕಾರ್ಯಗಳಿಗೆ ಆಶ್ರಯವೂ ಆದ ಮನೆಗಳಲ್ಲಿ ವಾಸಿಸುವಂತೆಯೂ, ವರಗಳನ್ನು ಕೊಟ್ಟನು

೨೬–೨೭೮. ಪಿಶಾಚಗಳು ಸಾಮಾನ್ಯವಾಗಿ ಮುರಿದುಬಿದ್ದಿರುವುದೂ, ಅನಾಚಾರಿಗಳೂ, ಅಯೋಗ್ಯರು ವಾಸಿಸುವುದೂ, ಸಂಮಾರ್ಜನಾದಿ ಸಂಸ್ಕಾರಶೂನ್ಯವೂ, ಗೃಹಪ್ರವೇಶ ಪುಣ್ಯಾಹಾದಿ ಕರ್ಮವರ್ಜಿತಗಳೂ, ಆದ ಹಾಳುಮನೆಗಳಲ್ಲಿಯೂ, ರಾಜಮಾರ್ಗ, ಅಲ್ಪಮಾರ್ಗ, ಚೌಕ, ಉದ್ಯಾನ, ರಾಜದ್ವಾರ, ಅಟ್ಟ, ಕೆರೆಕಟ್ಟೆಗಳು ಮಹಾಮಾರ್ಗ, ನದೀತೀರ್ಥಗಳು, ಬಸತಿಗಳು, ದೇವಾಲಯಗಳು ದೊಡ್ಡ ವೃಕ್ಷಗಳು, ಇವೇ ಮೊದಲಾದ ಪ್ರದೇಶಗಳಲ್ಲಿ ವಾಸಮಾಡಿಕೊಂಡು ಆಮರಣಾಂತವಾಗಿ ಜೀವಿಸಲೆಂದು ಬ್ರಹ್ಮದೇವನು ವರಗಳನ್ನು ಕೊಟ್ಟಿರುವನು.

ಅಧಾರ್ಮಿಕಾ ಜನಾಸ್ತೇ ವೈ ಆಜೀವಾ ವಿಹಿತಾಃ ಸುರೈಃ ।
ವರ್ಣಾಶ್ರಮಾಃ ಸಂಕರಿಕಾಃ ಕಾರುಶಿಲ್ಪಿಜನಾಸ್ತಥಾ ॥ ೨೭೯ ॥

ಅವೃತೋಪಮಸತ್ವಾನಾಂ ಚಾರವಿಶ್ವಾಸಘಾತಿನಾಂ ।
ಏತೈರನ್ಯೈಶ್ಚ ಬಹುಭಿರನ್ಯಾಯೋಪಾರ್ಜಿತೈರ್ಧನೈಃ ॥
ಆರಭಂತೇ ಕ್ರಿಯಾ ಯಾಸ್ತು ಪಿಶಾಚಾಸ್ತತ್ರ ದೇವತಾಃ ॥ ೨೮೦ ॥

ಮಧುಮಾಂಸೌದನೈರ್ದಧ್ನಾ ತಿಲಚೂರ್ಣಸುರಾಸವೈಃ ।
ಧೂಪೈರ್ಹಾರಿದ್ರಕೃಶರೈಸ್ತೈಲಭದ್ರಗುಡೌದನೈಃ ॥ ೨೮೧ ॥

ಕೃಷ್ಣಾನಿ ಚೈವ ವಾಸಾಂಸಿ ಧೂಪಾಃ ಸುಮನಸಸ್ತಥಾ ।
ಏವಂ ಯುಕ್ತಾಃ ಸುಬಲಯಸ್ತೇಷಾಂ ವೈ ಪರ್ವಸಂಧಿಷು ।
ಪಿಶಾಚಾನಾಮನುಜ್ಞಾಯ ಬ್ರಹ್ಮಾ ಸೋಽಧಿಪತಿರ್ದದೌ ॥ ೨೮೨ ॥

---

೨೭೯–೨೮೦. ಧರ್ಮವರ್ಜಿತರೂ, ಅನಾಚಾರಿಗಳೂ, ದುರಾಚಾರಿಗಳೂ, ವರ್ಣಾಶ್ರಮಧರ್ಮಶೂನ್ಯರೂ, ಸಂಕರಜಾತೀಯರೂ, ವಂಚಕರಾದ ಕುಶಲ ಕೆಲಸವನ್ನು ಮಾಡುವವರೂ, ಮತ್ತು ಶಿಲ್ಪಿಗಳೂ, ನಂಬಿಕೆಯನ್ನು ಹೇಳಿ ವಿಶ್ವಾಸಘಾತುಕರೂ, ಚೋರರೂ, ಅನ್ಯಾಯದಿಂದ ದ್ರವ್ಯವನ್ನು ಸಂಪಾದಿಸಿ ಧರ್ಮವನ್ನು ಮಾಡುವವರೂ, ಇವರೇ ಮೊದಲಾದ ಅಸಜ್ಜನರಿಂದ ವಿಹಿತವಾದ ಕರ್ಮಗಳಿಗೆ ಪಿಶಾಚಗಳೇ ದೇವತೆಯಾಗಲೆಂದು ಬ್ರಹ್ಮದೇವನು ವರವನ್ನು ಕೊಟ್ಟನು ಅಂದರೆ ವಿಶ್ವಾಸಘಾತುಕಾದಿಗಳು ಮಾಡುವ ಕರ್ಮಗಳು ಪಿಶಾಚಗಳ ಪಾಲಾಗುತ್ತವೆ. ಅವುಗಳಿಂದ ದೇವತೆಗಳು ಎಂದಿಗೂ ತೃಪ್ತರಾಗುವುದಿಲ್ಲ

೨೮೧. ಮದ್ಯ, ಮಾಂಸ, ಅನ್ನ, ಮೊಸರು, ಎಳ್ಳುಪುಡಿ, ಹೆಂಡ, ಸುರಾ, ಅರಸಿನಕುಂಕುಮ, ಎಣ್ಣೆ, ಬೆಲ್ಲ, ಧೂಪ, ದೀಪ, ಇವುಗಳಿಂದ ಸಹಿತವಾದ ಬಲಿದಾನದಿಂದ ಪಿಶಾಚಗಳು ತೃಪ್ತಿಪಡುತ್ತವೆಯೆಂದು ಹೇಳಿದನು.

೨೮೨ ಪೂರ್ವೋಕ್ತಗಳಾದ ಬಲಿಯನ್ನು ಕೊಡುವಾಗ ಕಪ್ಪುವಸ್ತ್ರಗಳು, ಧೂಪದೀಪಗಳು, ಪುಷ್ಪಗಳು, ಇವುಗಳನ್ನೂ ಸೇರಿಸಬೇಕು. ಈ ರೀತಿಯಾಗಿ ಬಲಿಯನ್ನು ಪಿಶಾಚಗಳಿಗೋಸ್ಕರ ಪರ್ವಕಾಲದಲ್ಲಿಯೂ, ಸಂಧಿಕಾಲದಲ್ಲಿಯೂ, ಕೊಡಬೇಕು. ಇದರಿಂದ ತೃಪ್ತವಾದ ಪಿಶಾಚಗಳು ಸಕಲೇಷ್ಟಾರ್ಥಗಳನ್ನೂ ಕೊಡುತ್ತವೆಯೆಂದು ಬ್ರಹ್ಮನು ವರವನ್ನು ಕೊಟ್ಟನು ಇಂತಹ ಸರ್ವಭೂತಗಳಿಗೂ, ಪಿಶಾಚಗಳಿಗೂ, ಶೂಲಪಾಣಿಯಾದ ಪರಮೇಶ್ವರನು ಅಧಿಪತಿಯಾಗಿರಲೆಂದು ವರಗಳನ್ನು ಕೊಟ್ಟನು. ಅದರಂತೆ ಪರಮೇಶ್ವರನು ಅವುಗಳಿಗೆ ನಿಯಾಮಕನಾದನು.

ಸರ್ವಭೂತಪಿಶಾಚಾನಾಂ ಗಿರಿಶಂ ಶೂಲಪಾಣಿನಂ |
ದೃಷ್ಟ್ವಾ ತ್ವಜನಯನ್ಪುತ್ರಾನ್ವ್ಯಾಘ್ರಾನ್ಸಿಂಹಾಂಶ್ಚ ಭಾಮಿನೀ || ೨೮೩ ||

ದ್ವಿಪಿನಶ್ಚ ಸುತಾಸ್ತಸ್ಯಾ ವ್ಯಾಲೇಯಾಶ್ಚಾ ಮಿಷಾಶಿನಃ |
ಋಷಯಶ್ಚಾಪಿ ಕಾರ್ತ್ಸ್ನ್ಯೇನ ಪ್ರಜಾಸರ್ಗಂ ನಿಬೋಧತ ||
ತಸ್ಯಾ ದುಹಿತರಃ ಪಂಚ ತಾಸಾಂನಾಮಾನಿ ಮೇ ಶೃಣು || ೨೮೪ ||

ಮೀನಾ ಮಾತಾ ಕ್ರಾ ವೃತ್ತಾ ಪರಿವೃತ್ತಾ ತಥೈವ ಚ |
ಅನುವೃತ್ತಾ ತು ವಿಜ್ಞೇಯಾ ತಾಸಾಂ ವೈ ಶೃಣುತ ಪ್ರಜಾಃ || ೨೮೫ ||

ಸಹಸ್ರದಂತಾ ಮಕರಾಃ ಪಾಠೀನಾಸ್ತಾಮರೋಹಿತಾಃ |
ಇತ್ಯೇವಮಾದಿರ್ಹಿ ಗಣೋ ಮೈನೋ ವಿಸ್ತೀರ್ಣ ಉಚ್ಯತೇ || ೨೮೬ ||

ಗ್ರಾಹಾಶ್ಚತುರ್ವಿಧಾ ಜ್ಞೇಯಾಸ್ತಥಾನುಜ್ಯೇಷ್ಠಕಾ ಅಪಿ |
ನಿಷ್ಕಾಂಶ್ಚ ಶಿಶುಮಾರಾಂಶ್ಚ ಮಾತಾ ವ್ಯಜನಯತ್ಪ್ರಜಾಃ || ೨೮೭ ||

---

೨೮೩-೨೮೪. ಅನಂತರ ಭಾಮನಿಯು ಸಿಂಹ, ವ್ಯಾಘ್ರ, ಗಜ, ಮಾಂಸ ಭಕ್ಷಕಗಳಾದ ಹುಲಿ, ಚಿರತೆ, ಮೊದಲಾದ ದುಷ್ಟಮೃಗಗಳು ಇವುಗಳನ್ನು ಪಡದಳು. ಎಲೈ ಮಹರ್ಷಿಗಳೇ,ಈ ಪ್ರಜಾಸೃಷ್ಟಿಯನ್ನು ಕ್ರಮವಾಗಿಯೂ, ವಿಸ್ತಾರವಾಗಿಯೂ, ನಿರೂಪಿಸುವೆನು ಕೇಳಿರಿ. ಆ ಭಾಮಿನಿಗೆ ಐದುಜನ ಪುತ್ರಿಯರು ಹುಟ್ಟಿದರು. ಅವರ ನಾಮಗಳನ್ನು ತಿಳಿಸುವೆನು ಕೇಳಿರಂದನು

೨೮೫. ಎಲೈ ಮುನಿವರ್ಯರೇ, ಕಶ್ಯಪರ ಪತ್ನಿಯಾದ ಭಾಮಿನಿಗೆ ಮೀನಾ, ಮಾತಾ, ವೃತ್ತಾ, ಪರಿವೃತ್ತಾ, ಅನುವೃತ್ತಾ, ಎಂಬುದಾಗಿ ಐದುಜನ ಕುಮಾರಿಯರು ಉದ್ಭವಿಸಿದರು. ಅವರ ಪ್ರಜೆಗಳನ್ನು ತಿಳಿಸುವೆನು ಕೇಳಿರಂದನು

೨೮೬. ಅವರಲ್ಲಿ ಮೀನೆಯು ಸಹಸ್ರದಂತಗಳಿರುವ ಮೊಸಳೆ, ಕೆಂಪಾದ ಮೀನು, ಇವೇ ಮೊದಲಾದ ಅನೇಕ ಜಲಜಂತುಗಳ ಗಣಗಳನ್ನು ಪಡೆದಳು.

೨೮೭. ಮಾತೆಯು ನಾಲ್ಕುವಿಧ ಮೊಸಳೆಗಳನ್ನೂ ಅನುಜ್ಯೇಷ್ಠ ನಿಷ್ಕನಾಮಕ ಗಳೂ ಆದ ಜಲಜಂತುಗಳನ್ನೂ ದೊಡ್ಡ ಮೀನುಗಳನ್ನೂ ಸೃಷ್ಟಿಮಾಡಿದಳು.

**ವೃತ್ತಾ ಕೂರ್ಮವಿಕಾರಾಣಿ ನೈಕಾನಿ ಜಲಚಾರಿಣಾಂ |**
**ತಥಾ ಶಂಖವಿಕಾರಾಣಿ ಜನಯಾಮಾಸ ನೈಕಶಃ || ೨೮೮ ||**

**ಮಂಡೂಕಾನಾಂ ವಿಕಾರಾಣಿ ಅನುವೃತ್ತಾ ವ್ಯಜಾಯತ |**
**ಐಣೇಯಾನಾಂ ವಿಕಾರಾಣಿ ಶಂಬೂಕಾನಾಂ ತಥೈವ ಚ || ೨೮೯ ||**

**ತಥಾ ಶುಕ್ತಿವಿಕಾರಾಣಿ ವಿರಾಟಕಕೃತಾನಿ ಚ |**
**ತಥಾ ಶಂಖವಿಕಾರಾಣಿ ಪರಿವೃತ್ತಾ ವ್ಯಜಾಯತ || ೨೯೦ ||**

**ಕಾಲಕೂಟವಿಕಾರಾಣಿ ಜಲೌಕವಿಹಿತಾನಿ ಚ |**
**ಇತ್ಯೇಷ ಹಿ ಋಷೇರ್ವಂಶಃ ಪಂಚಶಾಖಾಃ ಪ್ರಕೀರ್ತಿತಾಃ || ೨೯೧ ||**

**ತಿರ್ಯಗ್ ಹೇತುಕಮಾದ್ಯಾಹುರ್ಬಹುಲಂ ವಂಶವಿಸ್ತರಂ |**
**ಸಂಸ್ವೇದಜವಿಕಾರಾಣಿ ಯಥಾ ಯೇಭ್ಯೋ ಭವಂತಿ ಹ || ೨೯೨ ||**

---

೨೮೮ ವೃತ್ತಾ ಎಂಬುವಳು ಆಮೆಗಳನ್ನೂ ಅದರ ಜಾತೀಯರುಗಳಾದ ಅನೇಕ ಜಲಚರ ಪ್ರಾಣಿಗಳನ್ನೂ ಅಸಂಖ್ಯಾತವಾದ ಶಂಖಗಳನ್ನು ಅದರ ಜಾತೀಯ ವಸ್ತುಗಳನ್ನು ಸೃಷ್ಟಿಮಾಡಿದಳು

೨೮೯ ಅವರಲ್ಲಿ ಅನುವೃತ್ತೆಯು ಕಪ್ಪೆಗಳನ್ನು ಅದರ ಜಾತಿಗೆ ಸೇರಿರುವ ಅನೇಕ ಪ್ರಾಣಿಗಳನ್ನು ಜಿಂಕೆಗಳನ್ನು ಅದರ ಜಾತಿಗೆ ಸೇರಿರುವ ಅನೇಕ ಮೃಗಗಳನ್ನು ಕಪ್ಪೆಚಿಪ್ಪು ಶಂಖ ಮೊದಲಾದುವನ್ನು ಸೃಷ್ಟಿಮಾಡಿದಳು

೨೯೦. ಪರಿವೃತ್ತೆಯೂ ಸಹ ಕಪ್ಪೆಚಿಪ್ಪು ಕವಡೆ ಶಂಖ ಇವುಗಳನ್ನೂ ಇವುಗಳ ಪ್ರಭೇದಗಳಾದ ಇತರ ವಸ್ತುಗಳನ್ನೂ ಸೃಷ್ಟಿಮಾಡಿದಳು

೨೯೧. ಮತ್ತು ಈ ಕಾಲಕೂಟ ವಿಕಾರಿಗಳಾದ ಜಿಗಣೇ ಮೊದಲಾದ ಪ್ರಾಣಿಗಳೂ ಕೂಡ ಈ ಕಶ್ಯಪ ಮುನಿವಂಶದಲ್ಲಿ ಉದ್ಭವಿಸಿದವು ಹೀಗೆ ಋಷಿ ವಂಶವು ಐದು ಪ್ರಕಾರದಿಂದ ಲೋಕದಲ್ಲಿ ಪ್ರಸಿದ್ಧವಾಯಿತು

೧೯೨. ಮೊದಲು ತಿರ್ಯಕ್ ಪ್ರಾಣಿಗಳ ವಿಷಯಗಳು ಬಹು ವಿಸ್ತಾರವಾಗಿ ವರ್ಣಿತವಾಗಿದೆ. ಈಗ ಸ್ವೇದಜ ಪ್ರಾಣಿಗಳನ್ನು ಅವುಗಳಿಂದ ಉದ್ಭವಿಸುವ ಇತರ ಕ್ರಿಮಿಕೀಟಾದಿಗಳನ್ನು ವರ್ಣಿಸುವೆನು ಕೇಳಿರೆಂದನು.

ಸ್ವಸ್ತಿಪಿಕಶರೀರೇಭ್ಯೋ ಜಾಯಂತ್ಯುತ್ಪಾದಕಾ ದ್ವಿಜಾಃ ।
ಮನುಷ್ಯಾಃ ಸ್ವೇದಮಲಜಾಃ ಉಶನಾ ನಾಮ ಜಂತವಃ ॥
ನಾನಾಪಿಪೀಲಿಕಗಣಾಃ ಕೀಟಿಕಾ ಬದ್ಧಪಾದಕಾಃ ॥ ೨೯೩ ॥

ಶಂಖೋಪಲವಿಕಾರಾಣಿ ಕೀಲಕಾಚಾರಕಾಣಿ ಚ ।
ಇತ್ಯೇವಮಾದಿಬಹುಲಾಃ ಸ್ವೇದಜಾಃ ಪಾರ್ಥಿವಾ ಗಣಾಃ ॥ ೨೯೪ ॥

ತಥಾ ಘರ್ಮಾದಿತಪ್ತಾಭ್ಯಸ್ತ್ವದ್ಭ್ಯೋ ವೃಷ್ಟಿಭ್ಯ ಏವ ಚ ।
ನೈಕಾ ಮೃಗಶರೀರೇಭ್ಯೋ ಜಾಯಂತೇ ಜಂತವಸ್ತ್ವಿಮೇ ॥ ೨೯೫ ॥

ಮೀನಕಾಃ ಪಿಪ್ಪಲಾ ದಂಶಾಸ್ತಥಾ ತಿತ್ತಿರಪುತ್ರಿಕಾಃ ।
ನೀಲಚಿತ್ರಾಶ್ಚ ಜಾಯಂತೇ ಹ್ಯಲಕಾ ಬಹುವಿಸ್ತರಾಃ ॥ ೨೯೬ ॥

---

೧೯೩. ಇಂಪಾಗಿ ಗಾನಮಾಡುವ ಕೋಗಿಲೆಗಳಿಂದ ಅನೇಕ ಪಕ್ಷಿಗಳು ಉದ್ಭವಿಸುತ್ತವೆ. ಮನುಷ್ಯರ ಬೆವರು ಮಲಗಳಿಂದ ಉಶನಾನಾಮಕ ಕ್ರಿಮಿಗಳೂ ನಾನಾವಿಧಗಳಾದ ಪಿಪೀಲಿಕೇ ಮೊದಲಾದ ಕ್ರಿಮಿಕೀಟಗಳ ಗಣಗಳೂ ಉತ್ಪನ್ನವಾದುವು.

೨೯೪. ಶಂಖದ ಹುಳವೇ ಮೊದಲಾದ ಕೀಲಿಕ ಚಾರಕ ವೊದಲಾದ ಅನೇಕ ಪ್ರಾಣಿಗಳು ಸ್ವೇದಜಗಳಾಗಿವೆ. ಇವುಗಳು ಪಾರ್ಥಿವ ಗಣಕ್ಕೆ ಸೇರಿರುತ್ತವೆ.

೨೯೫. ಅದರಂತೆಯೇ ಬಿಸಲಿನಿಂದ ಕಾದ ನೀರಿನಿಂದಲೂ ಮಳೆಯಿಂದಲೂ ವಿವಿದವಾದ ಮೃಗಗಳ ಶರೀರಗಳಿಂದಲೂ ನಾನಾವಿಧ ಕ್ರಿಮಿ ಕೀಟಗಳು ಉದ್ಭವಿಸುತ್ತವೆ.

೨೯೬. ಅದರಂತೆಯೇ ಮೀನುಗಳೂ, ಪಿಪ್ಪಲಹಕ್ಕಿ, ಕಾಡುನೊಣ, ವೇದ ಪಕ್ಷಿ, ಪತಂಗದಹುಳು, ನೀಲಚಿತ್ರ, ಅಲಕವೇ ಮೊದಲಾದ ಪ್ರಾಣಿಗಳು ಬಹಳವಾಗಿ ಉತ್ಪನ್ನವಾದುವು.

ಜಲಜಾಃ ಸ್ವೇದಜಾಶ್ಚೈವ ಜಾಯಂತೇ ಜಂತವಸ್ತ್ವಿಮೇ ।
ಕಾಶತೋ ಯಂಜಕಾಃ ಕೀಟನಲದಾ ಬಹುಪಾದಕಾಃ || ೨೯೭ ||

ಸಿಂಹಲಾ ರೋಮಲಾಶ್ಚೈವ ಪಿಚ್ಛಲಾಃ ಪರಿಕೀರ್ತಿತಾಃ ।
ಇತ್ಯೇವಮಾದಿರ್ಹಿ ಗಣೋ ಜಲಜಃ ಸ್ವೇದಜಃ ಸ್ಮೃತಃ || ೨೯೮ ||

ಸರ್ಪಿಭ್ಯೋ ಮಾಷಮುದ್ಗಾನಾಂ ಜಾಯಂತೇ ಕ್ರಮಶಸ್ತಥಾ ।
ಜಂಬುಬಿಲ್ವಾಮ್ರಪೂಗೇಭ್ಯಃ ಫಲೇಭ್ಯಶ್ಚೈವ ಜಂತವಃ || ೨೯೯ ||

ಮುದ್ಗೇಭ್ಯಃ ಪನಸೇಭ್ಯಶ್ಚ ತಂಡುಲೇಭ್ಯಸ್ತಥೈವ ಚ ।
ತಥಾ ಕೋಟರಶುಷ್ಕೇಭ್ಯೋ ನಿಹಿತೇಭ್ಯೋ ಭವಂತಿ ಹಿ || ೩೦೦ ||

---

೨೯೭. ಹೀಗೆ ಜಲದಿಂದಲೂ ಬೆವರಿನಿಂದಲೂ ಹುಲ್ಲಿನಿಂದಲೂ ಅನೇಕ ಜಾತಿಯ ಕ್ರಿಮಿ ಕೀಟಾದಿಗಳೂ ಅನೇಕ ಪಾದಗಳಿರುವ ಪ್ರಾಣಿಗಳೂ ಜರಿ ಶೀತಮಂಡಲಾದವುಗಳೂ ಉದ್ಭವಿಸಿದುವು.

೨೯೮ ಸಿಂಹಲ ರೋಮಲ ಪಿಚ್ಛಲ ನಾಮಕಗಳಾದ ಅನೇಕ ಪ್ರಾಣಿಗಳ ಗುಂಪುಗಳು ಜಲದಿಂದಲೂ ಸ್ವೇದಜದಿಂದಲೂ ಉದ್ಭವಿಸುತ್ತವೆ ಎಂದು ಹೇಳುವರು

೨೯೯. ತುಪ್ಪ ಉದ್ದು ಹೆಸರು ಇವೇ ಮೊದಲಾದ ಧಾನ್ಯಗಳಿಂದಲೂ ನೇರಿಳೆ ಬಿಲ್ವ ಮಾವು ಅಡಿಕೆ ಇವೇ ಮೊದಲಾದ ವೃಕ್ಷಗಳಿಂದಲೂ ಇವುಗಳ ಫಲಪುಷ್ಪಾದಿಗಳಿಂದ ಅನೇಕ ವಿಧ ಕ್ರಿಮಿಕೀಟಾದಿಗಳು ಉತ್ಪನ್ನವಾಗುತ್ತವೆ

೩೦೦. ಹೆಸರು ಅಕ್ಕಿ ಮೊದಲಾದ ಧಾನ್ಯದಿಂದಲೂ ಹಲಸು ಮೊದಲಾದ ಫಲಗಳಿಂದಲೂ ಮುರಿದುಬಿದ್ದ ಮರಗಳಿಂದಲೂ ಅನೇಕ ವಿಧಗಳಾದ ಕ್ರಿಮಿಕೀಟಾದಿಗಳು ಹುಟ್ಟುತ್ತವೆ.

**ಅನ್ಯೇಭ್ಯೋಽಪಿ ಚ ಜಾಯಂತೇ ನ ಹಿ ತೇಭ್ಯಶ್ಚಿರಂ ಸದಾ ।**
**ಜಂತವಸ್ತುರಗಾದಿಭ್ಯೋ ವಿಷಾದಿಭ್ಯಸ್ತಥೈವ ಚ ॥ ೩೦೧ ॥**

**ಬಹೂನ್ಯಹಾನಿ ನಿಃಕ್ಷಿಪ್ತೇ ಸಂಭವಂತಿ ಚ ಗೋಮಯೇ ।**
**ಜಾಯಂತೇ ಕೃಮಯೋ ವಿಪ್ರಾ ಕಾಷ್ಠೇಭ್ಯಶ್ಚ ಘುಣಾದಯಃ ॥ ೩೦೨ ॥**

**ಕ್ರಮಾದ್ದ್ರುಮಾಣಾಂ ಜಾಯಂತೇ ವಿವಿಧಾ ನೀಲಮಕ್ಷಿಕಾಃ ।**
**ತಥಾ ಶುಷ್ಕವಿಕಾರೇಭ್ಯಃ ಪುತ್ರಿಕಾಃ ಪ್ರಭವಂತಿ ಚ ॥ ೩೦೩ ॥**

**ಕಾಲಿಕಾ ಶತಿಕೇಭ್ಯಶ್ಚ ಸರ್ಪಾ ಜಾಯಂತಿ ಸರ್ವಶಃ ।**
**ಸಂಸ್ವೇದಜಾಶ್ಚ ಜಾಯಂತೇ ವೃಶ್ಚಿಕಾಃ ಶುಷ್ಕಗೋಮಯಾತ್ ॥ ೩೦೪ ॥**

---

೩೦೧. ಇದೂ ಅಲ್ಲದೆ ಇತರ ವಿಧವಾದ ಫಲಪುಷ್ಪಾದಿಗಳಿಂದಲೂ, ಕುದುರೆ, ಮೊದಲಾದ ಪ್ರಾಣಿಗಳಿಂದಲೂ, ವತ್ಸನಾಭಿ ಮೊದಲಾದುವುಗಳಿಂದಲೂ, ಅನೇಕ ಹುಳುಗಳು ಉದ್ಭವಿಸುತ್ತವೆ. ಆದರೆ ಅವು ಚಿರಕಾಲ ಬದುಕುವುದಿಲ್ಲ. ಬೇಗನೆ ಸಾಯುತ್ತವೆ.

೩೦೨. ಎಲೈ ವಿಪ್ರೋತ್ತಮರೇ, ಸಗಣಿಯನ್ನು ಬಹುದಿವಸಗಳವರೆಗೂ ಕೂಡಿಹಾಕಿದರೆ ಅದರಿಂದಲೂ ಅನೇಕ ಕ್ರಿಮಿಗಳು ಆವಿರ್ಭವಿಸುತ್ತವೆ. ಒಣಗಿದ ಮರಗಳಿಂದ ಘುಣನಾಮಕ ಮರದಹುಳುಗಳೂ ಉದ್ಭವಿಸುವುವು.

೩೦೩. ಮರಗಳಿಂದಲೂ ಕ್ರಮವಾಗಿ ದುಂಬಿಗಳೂ, ನೊಣಗಳೂ, ಉದ್ಭವಿಸುತ್ತವೆ. ಮತ್ತು ಒಣಗಿರುವ ವೃಕ್ಷಗಳಿಂದ ಪತಂಗದ ಹುಳುಗಳು ಸಂಭವಿಸುತ್ತವೆ

೩೦೪. ಹೂಗಳ ಮೊಗ್ಗುಗಳಿಂದಲೂ, ಶ್ರೀಗಂಧದ ಮರಗಳಿಂದಲೂ, ಗುಲಗಂಜಿಯ ಮರಗಳಿಂದಲೂ, ಸರ್ಪಗಳು ಉದ್ಭವಿಸುತ್ತವೆ. ಬೆವರಿನಿಂದಲೂ ಒಣಗಿದ ಬೆರಣಿಗಳಿಂದಲೂ, ಚೇಳುಗಳು ಉತ್ಪನ್ನವಾಗುತ್ತವೆ.

ಗೋಭ್ಯೋ ಹಿ ಮಹಿಷೇಭ್ಯಶ್ಚ ಜಾಯಂತೇ ಜಂತವಃ ಪ್ರಭೋ ।
ಮತ್ಸ್ಯಾದಯಶ್ಚ ವಿವಿಧಾ ಅಂಡಕುಕ್ಷ್ಯಾ ವಿಶೇಷತಃ ॥ ೩೦೫ ॥

ಚೈವೀರಿಕಾಶ್ಚ ಜಾಯಂತೇ ತಥಾ ಗೋಜಾಕುಲಾನಿ ಚ ।
ತಥಾನ್ಯಾನಿ ಚ ಸೂಕ್ಷ್ಮಾಣಿ ಜಲೌಕಾದೀನಿ ಜಾತಯಃ ॥ ೩೦೬ ॥

ಮಕ್ಷಿಕಾಣಾಂ ವಿಕಾರಾಣಿ ಜಾಯಂತೇ ಜಾತಯೋಽಪರೇ ।
ಪ್ರಾಯೇಣ ತು ವಸಂತ್ಯಸ್ಮಿನ್ನುಚ್ಛಿಷ್ಟೋಪಕಕರ್ದಮೇ ॥ ೩೦೭ ॥

ಮಶಕಾನಾಂ ವಿಕಾರಾಣಿ ಭ್ರಮರಾಣಾಂ ತಥೈವ ಚ ।
ತೃಣೇಭ್ಯಶ್ಚೈವ ಜಾಯಂತೇ ಪುತ್ರಿಕಾ ಪುತ್ರ ಭಾಸಕಾಃ ॥ ೩೦೮ ॥

---

೩೦೫. ಗೋವುಗಳಿಂದಲೂ, ಎಮ್ಮೆಗಳಿಂದಲೂ, ನಾನಾವಿಧ ಪ್ರಾಣಿಗಳು ಉತ್ಪನ್ನವಾಗುತ್ತವೆ. ಮತ್ಸ್ಯವೇ ಮೊದಲಾದ ಅನೇಕ ಜಲಜಂತುಗಳು (ಅಂಡಗಳಿಂದಲೂ) ಮೊಟ್ಟೆಗಳಿಂದಲೂ, ಉದರದಿಂದಲೂ, ಉದ್ಭವಿಸುತ್ತವೆ.

೩೦೬ ಮೇಲೆ ನಿರೂಪಿತಕ್ರಮದಿಂದಲೇ ಅಂದರೆ ಮೊಟ್ಟೆಗಳಿಂದಲೇ ಆಮೆಗಳು, ಜಿಗಣೆ, ನೀರುಡ, ಇವೇ ಮೊದಲಾದ ನಾನಾವಿಧ ಸೂಕ್ಷ್ಮ ಜಲಜಂತುಗಳು ಉದ್ಭವಿಸುತ್ತವೆ

೩೦೭ ನೊಣ, ಸೊಳ್ಳೆ, ಮೊದಲಾದ ಅನೇಕ ಜಾತಿಯ ಪ್ರಾಣಿಗಳು ಪ್ರಾಯಿಕವಾಗಿ ಎಂಜಲು, ಕೊಳೆನೀರು, ಕೆಸರು, ಕೊಚ್ಚೆ, ಮೊದಲಾದುವುಗಳಿಂದ ಉದ್ಭವಿಸಿ ಅವುಗಳಲ್ಲಿಯೇ ವಿಶೇಷವಾಗಿ ವಾಸಮಾಡುತ್ತವೆ.

೩೦೮ ಸೊಳ್ಳೆಗಳು ಆ ಜಾತಿಗೆ ಸೇರಿದ ಪ್ರಾಣಿಗಳು. ದುಂಬಿಗಳು ಅವುಗಳ ಜಾತಿಯ ಹುಳುಗಳು. ಗೆದ್ದಲು ಹುಳುಗಳೂ ಕೂಡ ಪ್ರಾಯಿಕವಾಗಿ ತೃಣಗಳಿಂದ ಉದ್ಭವಿಸುತ್ತವೆ.

ಮಣಿಚ್ಛೇದಾಸ್ತಥಾ ವ್ಯಾಲಾಃ ಪ್ರೋತಜಾಃ ಪರಿಕೀರ್ತಿತಾಃ ।
ಶತವೇರಿವಿಕಾರಾಣಿ ಕರೀಷೇಭ್ಯೋ ಭವಂತಿ ಹ ॥ ೩೦೯ ॥

ಏವಮಾದಿರಸಂಖ್ಯಾತೋ ಗಣಃ ಸಂಸ್ವೇದಜೋ ಮಯಾ ।
ಸಮಾಸಾಭಿಹಿತೋ ಹ್ಯೇಷ ಪ್ರಾಕ್ಕರ್ಮವಶಜಃ ಸ್ಮೃತಃ ॥ ೩೧೦ ॥

ತಥಾಽನ್ಯೇ ನೈಋತಾಃ ಸತ್ವಾಸ್ತೇ ಸ್ಮೃತಾ ಉಪಸರ್ಗಜಾಃ ।
ಪೂತಾಸ್ತು ಯೋನಿಜಾಃ ಕೇಚಿತ್ಕೇಚಿದೌತ್ಪತ್ತಿಕಾಃ ಸ್ಮೃತಾಃ ॥ ೩೧೧ ॥

ಪ್ರಾಯೇಣ ದೇವಾಃ ಸರ್ವೇ ವೈ ವಿಜ್ಞೇಯಾ ಹ್ಯುಪಪತ್ತಿಜಾಃ ।
ಕೇಚಿತ್ತು ಯೋನಿಜಾ ದೇವಾಃ ಕೇಚಿದೇವಾನಿಮಿತ್ತತಃ ॥ ೩೧೨ ॥

---

೩೦೯. ರತ್ನವೇ ಮೊದಲಾದುವುಗಳನ್ನು ಕೊರೆಯುವ ಹುಳುಗಳೂ ಬಚ್ಚಲು ಚರಂಡಿಗಳಲ್ಲಿರುವ ಹುಳುಗಳೂ, ಸರ್ಪಗಳೂ, ಇವೇ ಮೊದಲಾದ ಅನೇಕ ಪ್ರಾಣಿಗಳು ಬೆರಣಿಯ ಭಸ್ಮದಿಂದ ಉದ್ಭವಿಸುತ್ತವೆ

೩೧೦. ಇವೇ ಮೊದಲಾದ ಅಸಂಖ್ಯಾತ ಪ್ರಾಣಿಗಳು, ಕ್ರಿಮಿಕೀಟಾದಿಗಳು ಬೆವರಿನಿಂದ ಉಂಟಾಗುತ್ತವೆ ಈ ಪ್ರಾಣಿಗಳೆಲ್ಲವೂ ಪೂರ್ವಜನ್ಮಾರ್ಜಿತವಾದ ಕರ್ಮಾನುಸಾರವಾಗಿ ಜನಿಸುತ್ತವೆಯೆಂಬ ವಿಷಯಗಳನ್ನು ಸಂಕ್ಷೇಪವಾಗಿ ನಿರೂಪಿಸಿರುವೆನೆಂದು ಸೂತಮುನಿಯು ಹೇಳಿದನು.

೩೧೧. ಕೆಲವು ದುಷ್ಟಪ್ರಾಣಿಗಳು ಪರಸ್ಪರ ಸಂಸರ್ಗದಿಂದಲೂ, ಕೆಲವು (ಸ್ತ್ರೀಪುರುಷರ ಸಂಬಂಧದಿಂದಲೂ) ಯೋನಿಯಿಂದಲೂ, ಕೆಲವು ಉತ್ಪಾತಗಳಿಂದಲೂ ಉದ್ಭವಿಸುತ್ತವೆ ಎಂದು ಉಕ್ತವಾಗಿವೆ.

೩೧೨. ಪ್ರಾಯಿಕವಾಗಿ ದೇವತೆಗಳೆಲ್ಲರೂ ಕಾರಣಾಂತರದಿಂದ ಉತ್ಪನ್ನರಾಗುವರು (ಸಂಬಂಧದಿಂದ ಉದ್ಭವಿಸುವರು). ಆದರೆ ಕೆಲವರು ಯೋನಿಜನ್ಯರಾಗಿರುವರು. ಮತ್ತೆ ಕೆಲವು ದೇವತೆಗಳು ಅಯೋನಿಜರು. ಕೆಲವರು ನಿಷ್ಕಾರಣರಾಗಿರುವರು. ಸಂಕಲ್ಪಮಾತ್ರದಿಂದ ಜನ್ಯರಾಗಿರುವರು.

ತೂಲಾಲಾಘುಶ್ಚ ಕೋಲಶ್ಚ ಶಿವಾ ಕನ್ಯಾ ತಥೈವ ಚ ।
ಅಪತ್ಯಂ ಸರಮಾಯಾಸ್ತು ಗಣಾ ವೈ ಸರಮಾದಯಃ ॥ ೩೧೩ ॥

ಶ್ಯಾಮಶ್ಚ ಶಬಲಶ್ಚೈವ ಅರ್ಜುನೋ ಹರಿತಸ್ತಥಾ ।
ಕೃಷ್ಣೋ ಧೂಮ್ರಾರುಣಶ್ಚೈವ ತೂಲಾಲಾಘುಶ್ಚ ಕದ್ರುಕಾಃ ॥ ೩೧೪ ॥

ಸುರಸಾಽಥ ವಿಜಜ್ಞೇ ತು ಶತಮೇಕಂ ಶಿರೋಮತಂ ।
ಸರ್ಪಾಣಾಂ ತಕ್ಷಕೋ ರಾಜಾ ನಾಗಾನಾಂ ಚಾಪಿ ವಾಸುಕಿಃ ॥
ತಮೋಬಹುಲ ಇತ್ಯೇಷ ಗಣಃ ಕ್ರೋಧವಶಾತ್ಮಕಃ ॥ ೩೧೫ ॥

ಪುಲಹಸ್ಯಾತ್ಮಜಾತ್ಸರ್ಗಸ್ತಾಮ್ರಾಯಾಸ್ತನ್ನಿಬೋಧತ ।
ಬಹ್ವನ್ಯಾಸ್ತ್ವಭಿವಿಖ್ಯಾತಾಸ್ತಾಮ್ರಾಯಾಶ್ಚ ವಿಜಜ್ಞಿರೇ ॥ ೩೧೬ ॥

---

೩೧೩. ತುಲಾಲಾಘು, ಕೋಲ, ಶಿವಾ, ಕನ್ಯಾ, ಎಂಬುವರು ಸರಮೆಯ ಮಕ್ಕಳಾಗಿರುವರು ಈ ಸರಮೆಯ ಮಕ್ಕಳೇ ಒಂದು ಗಣವಾಗಿರುವರು.

೩೧೪ ಶ್ಯಾಮ, ಶಬಲ, ಅರ್ಜುನ, ಹರಿತ, ಕೃಷ್ಣ, ಧೂಮ್ರ, ಅರುಣ, ತೂಲಾಲಾಘು, ಕದ್ರುಕ, ಇವರೇ ಮೊದಲಾದ ನೂರಾರು ಪುತ್ರರು ಉತ್ಪನ್ನರಾದರು

೩೧೫. ಸರ್ಪಗಳಿಗೆ ತಕ್ಷಕನು ರಾಜನಾಗಿರುವನು. ನಾಗಗಳಿಗೆ ವಾಸುಕಿಯು ಯಜಮಾನನಾಗಿರುವನು ಕೇವಲ ಕ್ರೋಧವಿಷ್ಟವಾದ ಈ ಗಣಗಳು ಅಜ್ಞಾನ ಪ್ರಚುರಗಳಾಗಿರುವುದು ಮತ್ತು ತಮೋಗುಣ ಮಯವಾಗಿರುವುವು.

೩೧೬. ಪುಲಹ ಮಹಾಮುನಿಯ ಕುಮಾರನಿಂದ ತಾಮ್ರೆಯಲ್ಲಿ ಅಸಂಖ್ಯಾತವಾದ ಪ್ರಜಾಸೃಷ್ಟಿಯು ಉಂಟಾಯಿತು. ಆ ತಾಮ್ರೆಯ ಕುಮಾರರು ಬಹು ಸಂಖ್ಯಾಕರಾಗಿಯೂ ಲೋಕವಿಖ್ಯಾತರಾಗಿಯೂ ಇರುವರು.

ಶ್ಯೇನೀ ಭಾಸೀ ತಥಾ ಕ್ರೌಂಚೀ ಧೃತರಾಷ್ಟ್ರೀ ಶುಕೀ ತಥಾ ।
ಅರುಣಸ್ಯ ಭಾರ್ಯಾ ಶ್ಯೇನೀ ತು ವೀರ್ಯವಂತೌ ಮಹಾಬಲೌ ॥
ಸಂಪಾತಿಂ ಚ ಜಟಾಯುಂ ಚ ಪ್ರಸೂತಾ ಪಕ್ಷಿಸತ್ತಮೌ ॥ ೩೧೭ ॥

ಸಂಪಾತಿರಜನತ್ ಪುತ್ರಂ ಕನ್ಯಾಮೇಕಾಂ ತಥೈವ ಚ ।
ಜಟಾಯುಷಶ್ಚ ಯೇ ಪುತ್ರಾಃ ಕಾಕಗೃಧ್ರಾಶ್ಚ ಕರ್ಣಿನಃ ॥ ೩೧೮ ॥

ಭಾರ್ಯಾ ಗುರುತ್ಮತಶ್ಚಾಪಿ ಭಾಸೀ ಕ್ರೌಂಚೀ ತಥಾ ಶುಕೀ ।
ಧೃತರಾಷ್ಟ್ರೀ ಚ ಭದ್ರಾ ಚ ತಾಸ್ವಪತ್ಯಾನಿ ವಕ್ಷ್ಯತೇ ॥ ೩೧೯ ॥

ಶುಕೀ ಗುರುತ್ಮತಃ ಪುತ್ರಾನ್ ಸುಷುವೇ ಷಟ್ ಪರಿಶ್ರುತಾನ್ ।
ತ್ರಿಶಿರಂ ಸುಮುಖಂ ಚೈವ ಬಲಂ ಪೃಷ್ಟಂ ಮಹಾಬಲಂ ॥ ೩೨೦ ॥

---

೩೧೭. ಆ ತಾಮ್ರೆಗೆ ಶ್ಯೇನೀ, ಭಾಸೀ, ಕ್ರೌಚೀ, ಧೃತರಾಷ್ಟ್ರ, ಶುಕೀ ಎಂಬ ಕುಮಾರಿಯರು, ಜನಿಸಿದರು. ಅವರಲ್ಲಿ ಶ್ಯೇನಿಯು ಅರುಣನನ್ನು ಮದುವೆಯಾಗಿ ಮಹಾ ಬಲಿಷ್ಟರೂ ಶೂರರೂ ಆದ ಜಟಾಯು ಸಂಪಾತಿಯೆಂಬ ಪಕ್ಷೀಶ್ವರರಾದ ಇಬ್ಬರು ಮಕ್ಕಳನ್ನು ಪಡೆದಳು.

೩೧೮. ಅವರಲ್ಲಿ ಸಂಪಾತಿಗೆ ಒಬ್ಬ ಕುಮಾರನೂ, ಒಬ್ಬಳು ಪುತ್ರಿಯೂ, ಜನಿಸಿದರು. ಜಟಾಯುವಿಗೆ ಕಾಗೆ, ಹದ್ದು, ಅಶ್ವದ ಕಿವಿಯಂತೆ ಕಿವಿಯಿರುವ ಪಕ್ಷಿಗಳೂ, (ಕಪಟ ಹಕ್ಕಿಗಳೂ) ಎಂಬ ಮಕ್ಕಳು ಉತ್ಪನ್ನವಾದುವು.

೩೧೯. ಅದರಂತೆ ಗರುಡ ದೇವನಿಗೆ ಭಾಸೀ, ಕ್ರೌಂಚೀ, ಶುಕೀ, ಧೃತರಾಷ್ಟ್ರಿ, ಭದ್ರಾ ಎಂಬ ಐದು ಜನ ಹೆಂಡರಿದ್ದರು ಅವರಲ್ಲಿ ಉತ್ಪನ್ನರಾದ ಪ್ರಜೆಗಳನ್ನು ತಿಳಿಸುವೆನು ಕೇಳಿರೆಂದನು.

೩೨೦. ಗರುಡದೇವನ ಪತ್ನಿಯಾದ ಶುಕಿಯು ತ್ರಿಶಿರ ಸುಮುಖ ಮಹಾಬಲ ಶಾಲಿಯಾದ ಬಲ ಪೃಷ್ಟ ಸುಮುಖನಾದ ತ್ರಿಶಂಖುನೇತ್ರ ಸುರೂಪನೂ ಬಲಿಷ್ಠನೂ ಆದ ಸುರಸರೆಂಬ ಆರುಜನ ಮಕ್ಕಳನ್ನು ಹೆತ್ತಳು.

**ತ್ರಿಶಂಖನೇತ್ರಂ ಸುಮುಖಂ ಸುರೂಪಂ ಸುರಸಂ ಬಲಂ ।**
**ಏಷಾಂ ಪುತ್ರಾಶ್ಚ ಪೌತ್ರಾಶ್ಚ ಗರುಡಾನಾಂ ಮಹಾತ್ಮನಾಂ ॥ ೩೨೧ ॥**

**ಚತುರ್ದಶಸಹಸ್ರಾಣಿ ಕ್ರೂರಾಣಾಂ ಪನ್ನಗಾಶಿನಾಂ ।**
**ಪುತ್ರಪೌತ್ರವಿಸರ್ಗಾಚ್ಚ ತೇಷಾಂ ವೈ ವಂಶವಿಸ್ತರಃ ॥ ೩೨೨ ॥**

**ವ್ಯಾಪ್ತಾನಿ ಯಾನಿ ದೇಶಾನಿ ತಾನಿ ವಕ್ಷ್ಯೇ ಯಥಾಕ್ರಮಂ ।**
**ಶಾಲ್ಮಲೀದ್ವೀಪಮಖಿಲಂ ದೇವಕೂಟಂ ಚ ಪರ್ವತಂ ॥ ೩೨೩ ॥**

**ಮಣಿಮಂತಂ ಚ ಶೈಲೇಂದ್ರಂ ಸಹಸ್ರಶಿಖರಂ ತಥಾ ।**
**ಪರ್ಣಮಾಲಂ ಸುಕೇಶಂ ಚ ಶತಶೃಂಗಂ ತಥಾಽಚಲಂ ॥ ೩೨೪ ॥**

**ಕೌರಜಂ ಪಂಚಶಿಖರಂ ಹೇಮಕೂಟಂ ಚ ಪರ್ವತಂ ।**
**ಪ್ರಚಂಡವಾಯುಪ್ರಭವೈರ್ದೀಪಿತೈಃ ಪದ್ಮರಾಗಿಭಿಃ ॥ ೩೨೫ ॥**

---

೩೨೧. ಮಹಾತ್ಮನಾದ ಗರುಡದೇವನ ಪುತ್ರರನ್ನೂ, ಮತ್ತು ಮೊಮ್ಮಕ್ಕಳನ್ನೂ ವಿಶದವಾಗಿ ನಿರೂಪಿಸುವೆನು ಸಾವಧಾನವಾಗಿ ಕೇಳಿರೆಂದನು.

೩೨೨. ಸರ್ಪಗಳಿಗೆ ವೈರಿಗಳೂ ಕ್ರೂರರೂ ಆದ ಗರುಡದೇವನ ಪುತ್ರಪೌತ್ರರು ಹದಿನಾಲ್ಕು ಸಹಸ್ರ ಸಂಖ್ಯಾಕರಾಗಿರುವರು, ಆ ಗರುಡದೇವನ ವಂಶವು ಹೀಗೆ ಹದಿನಾಲ್ಕುಸಹಸ್ರ ಸಂಖ್ಯಾಕರಾದ ಪುತ್ರ ಪೌತ್ರಾದಿಗಳಿಂದ ಅತಿ ವಿಸ್ತಾರವಾಗಿರುವುದು.

೩೨೪–೩೨೫. ಅವರು ವ್ಯಾಪ್ತರಾಗಿರುವ ದೇಶಗಳನ್ನು ಕ್ರಮವಾಗಿ ಈಗ ಹೇಳುವೆನು ಕೇಳಿರಿ ಅವರು ಸಮಸ್ತವಾದ ಶಾಲ್ಮಲೀದ್ವೀಪದಲ್ಲಿಯೂ, ದೇವಕೂಟ ಪರ್ವತದಲ್ಲಿಯೂ, ಮಣಿಮಂತಪರ್ವತದಲ್ಲಿಯೂ, ಸಹಸ್ರಶಿಖರದಲ್ಲಿಯೂ, ಪರ್ಣಮಾಲ ಸುಕೇಶ, ಶತಶೃಂಗವೆಂಬ ಗಿರಿಗಳಲ್ಲಿಯೂ, ಕೌರಜ, ಪಂಚಶಿಖರ, ಮತ್ತು ಹೇಮಕೂಟವೆಂಬ ಗಿರಿವರಗಳಲ್ಲಿಯೂ, ಪ್ರಚಂಡ ವಾಯುವಿನಿಂದ ಪ್ರಕಾಶಕವೂ,ಸುಗಂಧಿಯೂ, ಆದ ಪದ್ಮರಾಗಮಣಿಗಳಿರುವ ಪರ್ವತಗಳಲ್ಲಿಯೂ, ವ್ಯಾಪ್ತರಾಗಿರುವರು.

ಶೈಲಜಾಲಾನಿ ವ್ಯಾಪ್ತಾನಿ ಗಾರುಡೈಸ್ತೈರ್ಮಹಾತ್ಮಭಿಃ ।
ಭಾಸೀಪುತ್ರಾಃ ಸ್ಮೃತಾ ಭಾಸಾ ಉಲೂಕಾಃ ಕಾಕಕುಕ್ಕುಟಾಃ ॥ ೩೨೬ ॥

ಮಯೂರಾಃ ಕಲವಿಂಕಾಶ್ಚ ಕಪೋತಾ ಲಾವತಿತ್ತಿರಾಃ ।
ಕ್ರೌಂಚೀ ವಾರ್ಧ್ರೀಣಸಾನ್ ಶ್ಯೇನೀ ಕುರರಾನ್ಸಾರಸಾಂಬಕಾನ್ ॥ ೩೨೭ ॥

ಇತ್ಯೇವಮಾದಯೋಽನ್ಯೇಽಪಿ ಕ್ರವ್ಯಾದಾ ಯೇ ಚ ಪಕ್ಷಿಣಃ ।
ಧೃತರಾಷ್ಟ್ರೀ ಚ ಹಂಸಾಂಶ್ಚ ಕಲಹಂಸಾಂಶ್ಚ ಭಾಮಿನೀ ॥ ೩೨೮ ॥

ಚಕ್ರವಾಕಾಂಶ್ಚ ವಿಹಗಾನ್ಸರ್ವಾಂಶ್ಚೈವಾದಕಾನ್ ದ್ವಿಜಾನ್ ।
ಏತಾನೇವ ವಿಜಜ್ಞೇಽಥ ಪುತ್ರಪೌತ್ರಮನಂತಕಂ ॥ ೩೨೯ ॥

ಗರುಡಸ್ಯಾತ್ಮಜಾಃ ಪ್ರೋಕ್ತಾ ಇರಾಯಾಃ ಶೃಣುತ ಪ್ರಜಾಃ ।
ಇರಾ ಪ್ರಜಜ್ಞೇ ಕನ್ಯಾ ವೈ ತಿಸ್ರಃ ಕಮಲಲೋಚನಾಃ ॥ ೩೩೦ ॥

---

೩೨೬ ಹೀಗೆ ಮಹಾತ್ಮನಾದ ಗರುಡದೇವನ ಪುತ್ರಪೌತ್ರಾದಿಗಳು ಅನೇಕವಾದ ಪರ್ವತೋತ್ತಮಗಳಲ್ಲಿ ವಾಸಿಸುತ್ತಿದ್ದರು ಭಾಸೀ ಎಂಬುವಳ ಮಕ್ಕಳು ಭಾಸನಾಮಕರಾಗಿರುವರು. ಗೂಬೆ ಕಾಗೆ ಕೋಳಿ ಇವುಗಳನ್ನು ಭಾಸಿಯು ಪುತ್ರರನ್ನಾಗಿ ಪಡೆದಳು

೩೨೭. ಗರುಡದೇವನ ಭಾರ್ಯೆಯಾದ ಕ್ರೌಂಚಿಯು ನವಿಲು, ಗುಬ್ಬಚ್ಚಿ, ಪಾರಿವಾಳ, ನಾಲಿಗೆಹಕ್ಕಿ ಇವುಗಳನ್ನು ಪಡೆದಳು. ಶ್ಯೇನೀ ಎಂಬುವಳು ವೇದಪಕ್ಷಿ, ಮೇಕೆ, ಕುರುವಪಕ್ಷಿ, ಸಾರಸ, ಕೊಕ್ಕರೆ ಇವೇ ಮೊದಲಾದ ಪಕ್ಷಿಗಳನ್ನು ಪಡೆದಳು.

೩೨೮–೩೨೯. ಮೇಲೆ ಹೇಳಿದ ಅನ್ಯಾನ್ಯಾಕಗಳೂ ಮಾಂಸಾಹಾರಿಗಳೂ ಆದ ಅನೇಕ ಪಕ್ಷಿಗಳು ಶ್ಯೇನಿಗೆ ಉದ್ಭವಿಸಿದುವು ಅತಿ ಸುಂದರಿಯಾದ ಧೃತರಾಷ್ಟ್ರಿಯ ಹಂಸಗಳು, ಕಲಹಂಸಗಳು, ಚಕ್ರವಾಕ, ಇತರ ಪಕ್ಷಿಗಳನ್ನು ಭಕ್ಷಿಸುವ ಶ್ಯೇನ್ಸ್(ಗಿಡಗ) ಇವೇ ಮೊದಲಾದ ಅನೇಕ ಜಾತಿಯ ಪಕ್ಷಿಗಳನ್ನು ಪಡೆದಳು. ಹೀಗೆ ಮಹಾತ್ಮನಾದ ಗರುಡದೇವನ ಪುತ್ರಪೌತ್ರಾದಿಗಳಿಂದ ಲೋಕವೆಲ್ಲವೂ ವ್ಯಾಪ್ತವಾದುವು

೩೩೦. ಇದುವರೆಗೂ ಗರುಡದೇವನ ಭಾಸೀ ಮೊದಲಾದವರ ಸಂತಾನವನ್ನು ನಿರೂಪಿಸಿರುವೆನು. ಈಗ ಇರಾದೇವಿಯ ಸಂತಾನವನ್ನು ವಿವರಿಸುವೆನು ಕೇಳಿರಿ. ಇರಾದೇವಿಯು ಕಮಲಾಕ್ಷಿಯರಾದ ಮೂವರು ಕುಮಾರಿಯರನ್ನು ಪಡೆದಳು.

ವನಸ್ಪತೀನಾಂ ವೃಕ್ಷಾಣಾಂ ವೀರುಧಾಂ ಚೈವ ಮಾತರಃ ।
ಲತಾ ಚೈವಾಥ ವಲ್ಲೀ ಚ ವೀರುಧಾ ಚೇತಿ ತಾಸ್ತು ವೈ ॥ ೩೩೧ ॥

ಲತಾ ವನಸ್ಪತೀಂ ಜಜ್ಞೇ ಹ್ಯಪುಷ್ಪಾಂಪುಲಿನಸ್ಥಿತಾನ್ ।
ಯುಕ್ತಾನ್ಪುಷ್ಪಫಲೈರ್ವೃಕ್ಷಾನ್ ಲತಾ ವೈ ಸಂಪ್ರಸೂಯತೇ ॥ ೩೩೨ ॥

ಅಥ ವಲ್ಲೀ ತು ಗುಲ್ಮಾಂಶ್ಚ ತ್ವಕ್ಸಾರಾಸ್ತೃಣಜಾತಯಃ ।
ವೀರುಧಾ ತದಪತ್ಯಾನಿ ವಂಶಶ್ಚಾತ್ರ ಸಮಾಪ್ಯತೇ ॥ ೩೩೩ ॥

ಏತೇ ಕಶ್ಯಪದಾಯಾದಾ ವ್ಯಾಖ್ಯಾತಾಃ ಸ್ಥಾಣುಜಂಗಮಾಃ ।
ತೇಷಾಂ ಪುತ್ರಾಶ್ಚ ಪೌತ್ರಾಶ್ಚ ಯೈರಿದಂ ಪೂರಿತಂ ಜಗತ್ ॥ ೩೩೪ ॥

---

೩೩೧. ಇರಾದೇವಿಯ ಕುಮಾರಿಯರಾದ ಲತಾ, ವಲ್ಲೀ, ವೀರುಧಾ ಎಂಬ ಮೂವರು ಕುಮಾರಿಯರು ಕ್ರಮವಾಗಿ ವನಸ್ಪತಿಗಳು, ವೃಕ್ಷಗಳು, ಲತೆಗಳು ಇವುಗಳನ್ನು ಸೃಷ್ಟಿಸಿದರು.

೩೩೨. ಲತೆಯು ಮರುಳುದಿಣ್ಣೆಗಳಲ್ಲಿರುವ ಪುಷ್ಪರಹಿತಗಳಾದ ವನಸ್ಪತಿಗಳನ್ನು ಸೃಷ್ಟಿಮಾಡಿದಳು. ಮತ್ತು ಲತಾದೇವಿಯು ಪುಷ್ಪಫಲಗಳಿಂದ ಪೂರ್ಣವಾದ ವೃಕ್ಷಗಳನ್ನು ಸೃಷ್ಟಿಸಿದಳು

೩೩೩. ತರುವಾಯ ವಲ್ಲೀದೇವಿಯು ತೊಗಟೆಯೇ ಪ್ರಧಾನವಾಗಿರುವ ತೃಣಜಾತಿಗಳು, ಗುಲ್ಮಗಳು ಇವುಗಳನ್ನು ಪಡೆದಳು ವೀರುಧೆಯು ಪುಷ್ಪಫಲಭರಿತವಾದ ನಾನಾವಿಧ ವೃಕ್ಷಗಳನ್ನು ಪಡೆದಳು. ಹೀಗೆ ವಂಶವು ಪೂರ್ಣವಾಯಿತು.

೩೩೪. ಸ್ಥಾಣುಜಂಗಮಾತ್ಮಕವಾದ ಕಶ್ಯಪರ ಪುತ್ರರಾದ ದಾಯಾದಿಗಳನ್ನು ಹೇಳಿದ್ದಾಗಿದೆ. ಅವರ ಮಕ್ಕಳು ಮೊಮ್ಮಕ್ಕಳು ಇವರುಗಳಿಂದ ಈ ಜಗತ್ತು ಪೂರ್ಣವಾಯಿತು.

ಇತಿಸರ್ಗೈಕದೇಶಸ್ಯ ಕೀರ್ತಿತೋಽವಯವೋ ಮಯಾ ।
ಮಾರೀಚೋಽಯಂ ಪ್ರಜಾಸರ್ಗಃ ಸಮಾಸೇನ ಪ್ರಕೀರ್ತಿತಃ ॥
ನ ಶಕ್ಯಂ ವ್ಯಾಸತೋ ವಕ್ತುಮಪಿ ವರ್ಷಶತೈರ್ದ್ವಿಜಾಃ ॥ ೩೩೫ ॥

ಅದಿತಿರ್ಧರ್ಮಶೀಲಾ ತು ಬಲಶೀಲಾ ದಿತಿಃ ಸ್ಮೃತಾ ।
ತಪಃ ಶೀಲಾ ತು ಸುರಭಿರ್ಮಾಯಾಶೀಲಾ ದನುಃ ಸ್ಮೃತಾ ॥ ೩೩೬ ॥

ಕ್ರೂರಶೀಲಾ ತಥಾ ಕದ್ರುಃ ಕ್ರೌಂಚ್ಯಥ ಶ್ರುತಿಶಾಲಿನೀ ।
ಇರಾ ಗ್ರಹಣಶೀಲಾ ತು ದನಾಯುರ್ಭಕ್ಷಣೇ ರತಾ ॥ ೩೩೭ ॥

ವಾಹಶೀಲಾ ತು ವಿನತಾ ತಾಮ್ರಾನ್ಯೈ ಪಾಶಶಾಲಿನೀ ।
ಸ್ವಭಾವಾ ಲೋಕಮಾತೄಣಾಂ ಶೀಲಾನ್ಯೇತಾನಿ ಸರ್ವಶಃ ॥ ೩೩೮ ॥

---

೩೩೫. ಬ್ರಹ್ಮದೇವನ ಸೃಷ್ಟಿಗೆ ಅಂಗವಾದ ಮರೀಚಿ ಪುತ್ರನಾದ ಕಶ್ಯಪ ಮುನಿಯ ಸೃಷ್ಟಿಕ್ರಮವನ್ನು ಹೀಗೆ ಕ್ರಮವಾಗಿಯೂ ವಿಸ್ತಾರವಾಗಿಯೂ ವರ್ಣಿಸಿರುವೆನು. ಕಶ್ಯಪನ ಸೃಷ್ಟಿಕ್ರಮವನ್ನು ವಿಸ್ತಾರವಾಗಿ ವರ್ಣಿಸಲು ಸಾವಿರಾರು ವರ್ಷಗಳಿದ್ದರೂ ಸಾಲದು.

೩೩೬. ಕಶ್ಯಪರ ಪತ್ನಿಯಾದ ಅದಿತೀದೇವಿಯು ದಾನಧರ್ಮಪರಾಯಣಳು. ದಿತೀದೇವಿಯು ಬಲಶಾಲಿನಿಯಾಗಿರುವಳು ಸುರಭೀದೇವಿಯು ತಪಃಪರಾಯಣಳು. ದನೂದೇವಿಯು ಮಾಯಾಶಾಲಿನಿಯಾಗಿಯೂ ಇರುವಳು

೩೩೭–೩೩೮. ಕದ್ರೂದೇವಿಯು ಕ್ರೂರವಾದ ಸ್ವಭಾವವುಳ್ಳವಳು, ಕ್ರೌಂಚೀದೇವಿಯು ಜ್ಞಾನ ಪರಾಯಣಳಾಗಿರುವಳು, ಇರಾದೇವಿಯು ಗ್ರಹಣ ಶೀಲಳು, ದನೂದೇವಿಯು ಭಕ್ಷಣ ಪರಾಯಣಗಳು, ವಿನತಾದೇವಿಯು ಭಾರವಹನಸಮರ್ಥಳು, ತಾಮ್ರೆಯು ಕಟ್ಟುವ ಸ್ವಭಾವವುಳ್ಳವಳು. ಹೀಗೆ ಲೋಕಮಾತೆಯರಾದ ಅದಿತಿಯೇ ಮೊದಲಾದವರ ಸ್ವಭಾವವನ್ನು ನಿಮಗಾಗಿ ನಿರೂಪಿಸಿರುವೆನು.

ಧರ್ಮತಃ ಶೀಲತೋ ಬುದ್ಧ್ಯಾ ಕ್ಷಮಯಾ ಬಲರೂಪತಃ ।
ರಜಃ ಸತ್ವತಮೋವೃತ್ತಾ ಧಾರ್ಮಿಕಾ ಧಾರ್ಮಿಕಾಸ್ತು ವೈ ॥ ೩೩೯ ॥

ಮಾತೃತುಲ್ಯಾಶ್ಚಾಭಿಜಾತಾಃ ಕಶ್ಯಪಸ್ಯಾತ್ಮಜಾಃ ಪ್ರಜಾಃ ।
ದೇವತಾಸುರಗಂಧರ್ವಾ ಯಕ್ಷರಾಕ್ಷಸಪನ್ನಗಾಃ ॥
ಪಿಶಾಚಾಃ ಪಶವಶ್ಚೈವ ಮೃಗಾಃ ಪತಂಗವೀರುಧಃ ॥ ೩೪೦ ॥

ಯಸ್ಮಾದ್ದಾಕ್ಷಾಯಣೀಷ್ವೇತೇ ಜಜ್ಞಿರೇ ಮಾನುಷೇಷ್ವಿಹ ।
ಮನ್ವಂತರೇಷು ಸರ್ವೇಷು ತಸ್ಮಾಚ್ಛ್ರೇಷ್ಠಾಸ್ತು ಮಾನುಷಾಃ ॥ ೩೪೧ ॥

ಧರ್ಮಾರ್ಥಕಾಮಮೋಕ್ಷಾಣಾಂ ಮಾನುಷಾಃ ಸಾಧಕಾಸ್ತು ವೈ ।
ತತೋಽಧಃಸ್ರೋತಸಸ್ತೇ ವೈ ಉತ್ಪದ್ಯಂತೇ ಸುರಾಸುರಾಃ ॥ ೩೪೨ ॥

---

೩೩೯. ಲೋಕಮಾತೃಗಳಾದ ದಿತಿಯೇ, ಮೊದಲಾದವರು ಧರ್ಮ, ಸ್ವಭಾವ, ಬುದ್ಧಿ, ಕ್ಷಮಾ, ಬಲ ಇವುಗಳ ಸ್ವಭಾವವುಳ್ಳವರಾಗಿರುವರು, ಅವರು ಸತ್ವರಜಸ್ತಮೋ ಗುಣಗಳಿಗೆ ಅನುಗುಣವಾಗಿ ಧರ್ಮಾಧರ್ಮಗಳಲ್ಲಿ ಆಸಕ್ತರಾಗಿರುವರು.

೩೪೦. ಕಶ್ಯಪರ ಪುತ್ರರಾದ ದೇವಾಸುರರು, ಗಂಧರ್ವ, ಯಕ್ಷ, ರಾಕ್ಷಸರು, ಪನ್ನಗ, ಪಿಶಾಚಗಳು, ಪಶುಮೃಗಗಳು, ಪಕ್ಷಿಗಳು, ವೃಕ್ಷಲತಾದಿಗಳು ಆದ ಪ್ರಜೆಗಳು ತಮ್ಮ ತಮ್ಮ ಮಾತೃಗಳಿಗನುಗುಣವಾದ ಸ್ವಭಾವಗುಣಗಳುಳ್ಳವರಾಗಿರುವರೆಂದು ಜ್ಞಾನಿಗಳು ಹೇಳುವರು.

೩೪೧. ಸಮಸ್ತವಾದ ಮನ್ವಂತರಗಳಲ್ಲಿಯೂ ಹಿಂದೆ ನಿರೂಪಿಸಿರುವ ದೇವಾದಿಗಳು ದಾಕ್ಷಾಯಣೀವಂಶದಲ್ಲಿ ಉತ್ಪನ್ನರಾಗಿರುವರು, ಸಕಲಮನ್ವಂತರಗಳಲ್ಲಿಯೂ ಪಶುಪಕ್ಷ್ಯಾದಿ ಸರ್ವ ಪ್ರಾಣಿಗಳಿಗಿಂತಲೂ ಮನುಷ್ಯ ಜನ್ಮವೇ ಸರ್ವೋತ್ತಮವಾಗಿರುತ್ತದೆ

೩೪೨. ಮನುಷ್ಯರು ಧರ್ಮಾರ್ಥಕಾಮ ಮೋಕ್ಷಗಳಿಗೆ ಸಾಧಕರಾಗಿರುವರು, ಆದುದರಿಂದ ಅವರಿಗೆ ಅಧಃ ಸ್ರೋತಸರೆಂಬ ನಾಮವು ಸಂಭವಿಸಿರುವುದು, ದೇವಾಸುರರು ಮಹತ್ಕಾರ್ಯಸಾಧನೆಗಾಗಿ ಮನುಷ್ಯರಾಗಿ ಪುನಃ ಪುನಃ ಈ ಭೂಮಂಡಲದಲ್ಲಿ ಅವತರಿಸುವರು.

ಜಾಯಂತೇ ಕಾರ್ಯಸಿದ್ಧ್ಯರ್ಥಂ ಮಾನುಷೇಷು ಪುನಃ ಪುನಃ ।
ಇತ್ಯೇವಂ ವಂಶಪ್ರಭವಃ ಪ್ರಸಂಖ್ಯಾತಸ್ತಪಸ್ವಿನಾಂ ॥ ೩೪೩ ॥

ಸುರಾಣಾಮಸುರಾಣಾಂ ಚ ಗಂಧರ್ವಾಪ್ಸರಸಾಂ ತಥಾ ।
ಯಕ್ಷರಕ್ಷಃಪಿಶಾಚಾನಾಂ ಸುಪರ್ಣೋರಗಪಕ್ಷಿಣಾಂ ॥ ೩೪೪ ॥

ವ್ಯಾಲಾನಾಂ ಶಿಖಿನಾಂ ಚೈವ ಓಷಧೀನಾಂ ಚ ಸರ್ವಶಃ ।
ಕೃಮಿಕೀಟಪತಂಗಾನಾಂ ಕ್ಷುದ್ರಾಣಾಂ ಜಲಜಾಶ್ಚ ಯೇ ॥
ಪಶೂನಾಂ ಬ್ರಾಹ್ಮಣಾನಾಂ ಚ ಶ್ರೀಮತಾಂ ಪುಣ್ಯಲಕ್ಷಣಂ ॥ ೩೪೫ ॥

ಆಯುಷ್ಯಶ್ಚೈವ ಧನ್ಯಶ್ಚ ಶ್ರೀಮಾನ್ ಹಿತಸುಖಾವಹಃ ।
ಶ್ರೋತವ್ಯಶ್ಚೈವ ಸತತಂ ಗ್ರಾಹ್ಯಶ್ಚೈವಾನುಸೂಯತಾ ॥ ೩೪೬ ॥

---

೩೪೩. ಈ ರೀತಿಯಾಗಿ ತಪಸ್ವಿಗಳಾದ ಮಹಾನುಭಾವರ ವಂಶಗಳ ಸೃಷ್ಟಿ ಕ್ರಮವು ನಿರೂಪಿತವಾಗಿದೆ.

೩೪೪–೩೪೫. ಈ ರೀತಿಯಾಗಿ ಕಶ್ಯಪ ಮಹರ್ಷಿಗಳಿಗೆ ಶ್ರೀಮಂತರೂ ಮಹಾತ್ಮರೂ ಪುಣ್ಯಲಕ್ಷಣಗಳಿಂದ ಯುಕ್ತರೂ ಆದ ದೇವತೆಗಳು, ಅಸುರರು, ಗಂಧರ್ವರು, ಅಪ್ಸರಸರು, ಯಕ್ಷರು, ರಾಕ್ಷಸರು, ಪಿಶಾಚಗಳು, ಪಕ್ಷಿಗಳು, ಸರ್ಪಗಳು, ವ್ಯಾಘ್ರ, ನವಿಲುಗಳು, ಸಮಸ್ತವಾದ ಔಷಧಿಗಳು ಅಲ್ಪವಾದ ಕ್ರಿಮಿ ಕೀಟಪತಂಗಗಳು ಕ್ಷುದ್ರವಾದ ಜಲಜಂತುಗಳು ಪಶುಪಕ್ಷ್ಯಾದಿಗಳು ಮತ್ತು ಬ್ರಾಹ್ಮಣರು ಇವರು ಮಹತ್ಕಾರ್ಯಗಳಿಗಾಗಿ ಸ್ವಕರ್ಮಾನುಸಾರವಾಗಿ ಈ ಭೂಮಿಯಲ್ಲಿ ಉದ್ಭವಿಸಿರುವರು.

೩೪೬. ಮಹಾನುಭಾವರಾದ ದೇವದಾನವರ ವಂಶವರ್ಣನವು ಆಯುಷ್ಯ ಆರೋಗ್ಯಾದಿ ಸಕಲಾಭೀಷ್ಟದಾಯಕವಾಗಿರುತ್ತದೆ ಇದನ್ನು ಪಠಿಸಿದ ಮನುಷ್ಯರು ಧನ್ಯರೂ ಶ್ರೀಮಂತರೂ ಹಿತಸುಖಜನಕರೂ ಶ್ರೋತವ್ಯರೂ ಸರ್ವರಿಂದ ಮಾನ್ಯರೂ ಅಸೂಯಾದಿ ಶೂನ್ಯರೂ ಆಗುವರು.

ಇಮಂ ತು ವಂಶಂ ನಿಯಮೇನ ಯಃ ಪಠೇತ್
ಮಹಾತ್ಮನಾಂ ಬ್ರಾಹ್ಮಣವೈದ್ಯಸಂಸದಿ ।
ಅಪತ್ಯಲಾಭಂ ಹಿ ಲಭೇತ್ಸುಪುಷ್ಕಲಂ
ಶ್ರಿಯಂ ಧನಂ ಪ್ರೇತ್ಯ ಚ ಶೋಭನಾಂ ಗತಿಂ ॥ ೩೪೭ ॥

ಇತಿ ಶ್ರೀ ಮಹಾಪುರಾಣೇ ವಾಯುಪ್ರೋಕ್ತೇ " ಕಶ್ಯಪೀಯ ಪ್ರಜಾಸರ್ಗೋ " ನಾಮಾಽಷ್ಟಮೋಽಧ್ಯಾಯಃ

---

೨೪೭. ಮಹಾತ್ಮರಾದ ಈ ಕಶ್ಯಪರ ವಂಶವನ್ನು ತಿಳಿಸುವ ಈ ವಾಯು ಮಹಾಪುರಾಣವನ್ನು ಯಾವನು ನಿಯಮಪೂರ್ವಕ ಪಠನ ಮಾಡುವನೋ ಬ್ರಾಹ್ಮಣ ವೈದ್ಯರ ಸಭೆಯಲ್ಲಿ ಶ್ರವಣ ಮಾಡುವನೋ ಅವನು ಸಂತಾನ ಮಹದೈಶ್ವರ್ಯ ಧನ ಧಾನ್ಯಾದಿ ಸಕಲಾಭೀಷ್ಟವನ್ನೂ ಅನುಭವಿಸಿ ಪರಲೋಕದಲ್ಲಿ ಶಾಶ್ವತವಾದ ಪರಮ ಪದವಿಯನ್ನು ಹೊಂದುವನೆಂದು ಸೂತರು ಮುನಿಗಳಿಗೆ ಹೇಳಿದರು.

ಇಲ್ಲಿಗೆ ವಾಯುಪ್ರೋಕ್ತವಾದ ಮಹಾಪುರಾಣದಲ್ಲಿ " ಕಶ್ಯಪಮಹರ್ಷಿಯ ವಂಶವರ್ಣನವೆಂಬ " ಎಂಟನೆಯ ಅಧ್ಯಾಯವು ಮುಗಿದುದು.



## ಎಂಟನೆಯ ಅಧ್ಯಾಯದ ಸಾರಾಂಶವು

ಈ ಅಧ್ಯಾಯದಲ್ಲಿ ಕಶ್ಯಪರ ಪುತ್ರರಾದ ಗಂಧರ್ವರು, ಅಪ್ಸರಸಿಯರು, ಯಕ್ಷ ರಾಕ್ಷಸರು, ಪಿಶಾಚಗುಹ್ಯಕಗಳು, ಸರ್ಪಗಳು, ವೃಕ್ಷವೀರುದಗಳು ಇವುಗಳ ಸೃಷ್ಟಿಕ್ರಮವು ನಿರೂಪಿತವಾಗಿದೆ. ಗಂಧರ್ವವಂಶದಲ್ಲಿ ಸುಯಶಾ, ಗಾಂಧರ್ವೀ, ವಿದ್ಯಾವತೀ ಮೊದಲಾದ ಅಪ್ಸರಸಿಯರು ಅವತರಿಸಿದರು. ಈ ವಂಶದಲ್ಲಿ ಲೌಹೇಯಿಾ, ಭರತಾ, ವಿಶಾಲಾ ಮೊದಲಾದವರು ಜನಿಸಿದರು ಆ ಗಂಧರ್ವರವಂಶದಲ್ಲಿ ಹಾಹಾ, ಹೂಹೂ ಮೊದಲಾದ ಗಂಧರ್ವಗಾಯಕರು ಜನಿಸಿದರು ಕಶ್ಯಪರ ಪತ್ನಿಯಾದ ವಿನತಾದೇವಿಗೆ ಅರುಣ, ಗರುಡ ಮೊದಲಾದ ಮಕ್ಕಳು, ಅವರಿಗೆ ಗಾಯತ್ರಿಯಾದ ಛಂದಸ್ಸುಗಳು, ಸುಪರ್ಣಗಣಗಳು ಜನಿಸಿ ಪ್ರಖ್ಯಾತವಾದವು ಹಾಗೆಯೇ ಕದ್ರೂ ದೇವಿಗೆ ವಾಸುಕಿ, ಶೇಷ ಮೊದಲಾದವರೂ, ಅವರಿಗೆ ಸಾವಿರಾರು ನಾಗಗಳು ಜನಿಸಿದರು. ಅನಂತರ ಪುಲಹಮಹರ್ಷಿಯು ಮೃಗೀ, ಮೃಗಮದಾ, ಹರಿಭದ್ರಾ ಮೊದಲಾದ ಹನ್ನೆರಡು ಪತ್ನಿಯರನ್ನು ಮದುವೆಯಾದನು. ಅವರಲ್ಲಿ ಸಿಂಹ ಶಾರ್ದೂಲವೇ ಮೊದಲಾದ ಪ್ರಾಣಿಗಳು ಜನಿಸಿ ಜಗತ್ತಿನಲ್ಲಿ ವ್ಯಾಪ್ತವಾದುವು ಈ ವಂಶದಲ್ಲಿಯೇ ಅಷ್ಟದಿಗ್ಗಜಗಳೂ, ಐರಾವತಾದಿಗಳೂ, ಅತಿಭಯಂಕರವಾದ ಪಿಶಾಚಾದಿಗಳೂ, ಅನೇಕ ಜಲಚರಪ್ರಾಣಿಗಳೂ, ಅಂಡಜ, ಸ್ವೇದಜಪ್ರಾಣಿಗಳೂ ಜನಿಸಿದವು. ತರುವಾಯ ಸಂಪಾತಿ, ಜಟಾಯು ಮೊದಲಾದ ಪಕ್ಷಿಗಳು ಜನಿಸಿದರು. ಹಾಗೆಯೇ ಗಂಗಾದ್ಯನೇಕ ನದಿಗಳೂ, ಶುಕಶಾರಿಕಾದಿ ವಿವಿಧಪಕ್ಷಿಗಳೂ, ಚಂಪಕಾ ಶೋಕಾದಿ ಅನೇಕ ವೃಕ್ಷಗಳೂ ಉದ್ಭವಿಸಿ ಜಗತ್ತನ್ನೇ ವ್ಯಾಪಿಸಿದವು. ಹೀಗೆ ಈ ಕಶ್ಯಪರ ಸೃಷ್ಟಿಕ್ರಮವು ಬ್ರಹ್ಮದೇವನ ಮಹಾಸೃಷ್ಟಿಗೆ ಅಂಗವಾಯಿತು. ಇವೇ ಮೊದಲಾದ ವಿಷಯಗಳು ಈ ಅಧ್ಯಾಯದಲ್ಲಿ ನಿರೂಪಿತವಾಗಿವೆ.



—: ಹರಿಃ ಓಂ : —

—ಶ್ರೀ ವೇದವ್ಯಾಸಾಯ ನಮಃ—

# ಶ್ರೀಮದ್ವಾಯು ಪುರಾಣಂ

## ನವಮೋಽಧ್ಯಾಯಃ

॥ ಸೂತ ಉವಾಚ ॥

ಏವಂ ಪ್ರಜಾಸು ಸೃಷ್ಟಾಸು ಕಶ್ಯಪೇನ ಮಹಾತ್ಮನಾ ।
ಪ್ರತಿಷ್ಠಿತಾಸು ಸರ್ವಾಸು ಸ್ಥಾವರಾಸು ಚರಾಸು ಚ ॥ ೧ ॥

ಅಭಿಷಿಚ್ಯಾಧಿಪತ್ಯೇಷು ತೇಷಾಂ ಮುಖ್ಯಃ ಪ್ರಜಾಪತಿಃ ।
ತತಃ ಕ್ರಮೇಣ ರಾಜ್ಯಾನಿ ವ್ಯಾದೇಷ್ಟುಮುಪಚಕ್ರಮೇ ॥ ೨ ॥

ದ್ವಿಜಾತೀನಾಂ ವೀರುಧಾಂ ಚ ನಕ್ಷತ್ರಾಣಾಂ ಗ್ರಹೈಃ ಸಹ ।
ಯಜ್ಞಾನಾಂ ತಪಸಾಂ ಚೈವ ಸೋಮಂ ರಾಜ್ಯೇಽಭ್ಯಷೇಚಯತ್ ॥ ೩ ॥

---

### ಒಂಭತ್ತನೆಯ ಅಧ್ಯಾಯವು

೧—೨ ಸೂತಪುರಾಣಿಕನು ಹೇಳಿದನು.— ಮಹಾತ್ಮರಾದ ಕಶ್ಯಪ ಮಹಾಮುನಿಯು ಚರಾಚರಾತ್ಮಕವಾದ ಸಕಲಜಗತ್ತನ್ನೂ ಹೀಗೆ ಸೃಷ್ಟಿಮಾಡಿ, ಅವನ್ನು ಸ್ಥಿರವಾಗಿ ಏರ್ಪಡಿಸಿದನು. ಅವರಲ್ಲರನ್ನೂ ಧರ್ಮದಿಂದ ಆಳುವುದಕ್ಕಾಗಿ ಯಜಮಾನನನ್ನು ಗೊತ್ತುಮಾಡಿ ಧರ್ಮದಿಂದ ರಾಜ್ಯವಾಳಲು ಏರ್ಪಡಿಸಿದನು. ಈ ಲೋಕದಲ್ಲಿ ಒಂದೊಂದು ಜಾತಿಯಲ್ಲಿ ಒಬ್ಬೊಬ್ಬರಿಗೆ ಆಧಿಪತ್ಯವನ್ನು ಕೊಟ್ಟನು.

೩. ಬ್ರಾಹ್ಮಣರು, ಲತೆಗಳು, ನಕ್ಷತ್ರಗಳು, ಗ್ರಹಗಳು, ಯಜ್ಞಯಾಗಗಳು, ತಪಸ್ಸು ಇವುಗಳಿಗೆ ಚಂದ್ರನನ್ನು ಯಜಮಾನನನ್ನಾಗಿ (ಅಧಿಪತಿಯನ್ನಾಗಿ) ರಾಜ್ಯದಲ್ಲಿ ಅಭಿಷೇಕ ಮಾಡಿದನು.

ಬೃಹಸ್ಪತಿಂ ತು ವಿಶ್ವೇಷಾಂ ದದಾವಂಗಿರಸಾಂ ಪತಿಂ ।
ಭೃಗೂಣಾಮಧಿಪಂ ಚೈವ ಕಾವ್ಯಂ ರಾಜ್ಯೇಽಭ್ಯಷೇಚಯತ್ ॥ ೪ ॥

ಆದಿತ್ಯಾನಾಂ ಪುನರ್ವಿಷ್ಣುಂ ವಸೂನಾಮಥ ಪಾವಕಂ ।
ಪ್ರಜಾಪತೀನಾಂ ದಕ್ಷಂ ಚ ಮರುತಾಮಥ ವಾಸವಂ ॥ ೫ ॥

ದೈತ್ಯಾನಾಮಥ ರಾಜಾನಂ ಪ್ರಹ್ಲಾದಂ ದಿತಿನಂದನಂ ।
ನಾರಾಯಣಂ ತು ಸಾಧ್ಯಾನಾಂ ರುದ್ರಾಣಾಂ ವೃಷಭಧ್ವಜಂ ॥ ೬ ॥

ವಿಪ್ರಚಿತ್ತಿಂ ಚ ರಾಜಾನಂ ದಾನವಾನಾಮಥಾದಿಶತ್ ।
ಅಪಾಂ ತು ವರುಣಂ ರಾಜ್ಯೇ ರಾಜ್ಞಾಂ ವೈಶ್ರವಣಂ ಪತಿಂ ॥
ಯಕ್ಷಾಣಾಂ ರಾಕ್ಷಸಾನಾಂ ಚ ಪಾರ್ಥಿವಾನಾಂ ಧನಸ್ಯ ಚ ॥ ೭ ॥

---

೪ ಕಶ್ಯಪಮುನಿಯು ಬೃಹಸ್ಪತಿಯನ್ನು ಸಮಸ್ತರಾದ ದೇವತೆಗಳಿಗೂ ಅಂಗಿರಸರಿಗೂ ಯಜಮಾನನನ್ನಾಗಿ ಮಾಡಿದನು ಶುಕ್ರಾಚಾರ್ಯನನ್ನು ಭೃಗಕುಲೋತ್ಪನ್ನರಾದ ಸರ್ವರಿಗೂ, ದೈತ್ಯರಿಗೂ ಗುರುವನ್ನಾಗಿಯೂ ಅಧಿಪನನ್ನಾಗಿಯೂ ಮಾಡಿದನು.

೫ ಆದಿತ್ಯರಿಗೂ ಸಮಸ್ತ ದೇವತೆಗಳಿಗೂ ವಿಷ್ಣುವನ್ನು ಧೊರೆಯನ್ನಾಗಿಯೂ, ಅಷ್ಟವಸುಗಳಿಗೂ ಯಜ್ಞಪುರುಷನನ್ನು ಅಧಿಪನನ್ನಾಗಿಯೂ. ಪ್ರಜಾಪತಿಗಳಿಗೆ ದಕ್ಷಪ್ರಜೇಶ್ವರನನ್ನು ಯಜಮಾನನ್ನಾಗಿಯೂ, ದೇವತೆಗಳಿಗೆ ಇಂದ್ರನನ್ನು ಅಧಿಪತಿಯನ್ನಾಗಿಯೂ ನೇಮಕಮಾಡಿದನು

೬. ಮಹಾಮುನಿಯು ದೈತ್ಯರಿಗೆ ದಿತೀದೇವಿಯ ಪುತ್ರನಾದ ಪ್ರಹ್ಲಾದನನ್ನು ರಾಜನನ್ನಾಗಿಯೂ, ಸಾಧ್ಯರಾದ ದೇವತೆಗಳಿಗೆ ನಾರಾಯಣನನ್ನು ಸ್ವಾಮಿಯನ್ನಾಗಿಯೂ, ಏಕಾದಶರುದ್ರಾದಿಗಳಿಗೂ ಭೂತಗಣಗಳಿಗೂ ಪರಮೇಶ್ವರನನ್ನು ದೊರೆಯನ್ನಾಗಿಯೂ ಏರ್ಪಡಿಸಿದನು.

೭. ವಿಪ್ರಚಿತ್ತಿಯನ್ನು ದಾನವರಿಗೆ ನಿಯಾಮಕನನ್ನಾಗಿಯೂ, ಜಲಕ್ಕೂ ಜಲಚರಗಳಿಗೂ ವರುಣದೇವನನ್ನು ರಾಜನನ್ನಾಗಿಯೂ, ಯಕ್ಷರಾಕ್ಷಸರಿಗೂ ಪಾರ್ಥಿವರಿಗೂ ದ್ರವ್ಯಕ್ಕೂ ಕುಬೇರನನ್ನು ಅಧಿಪತಿಯನ್ನಾಗಿಯೂ ಏರ್ಪಡಿಸಿದನು.

**ವೈವಸ್ವತಂ ಪಿತೄಣಾಂ ಚ ಯಮಂ ರಾಜ್ಯೇಽಭ್ಯಷೇಚಯತ್ ।**
**ಸರ್ವಭೂತಪಿಶಾಚಾನಾಂ ಗಿರಿಶಂ ಶೂಲಪಾಣಿನಂ ॥ ೮ ॥**

**ಶೈಲಾನಾಂ ಹಿಮವಂತಂ ಚ ನದೀನಾಮಥ ಸಾಗರಂ ।**
**ಗಂಧರ್ವಾಣಾಮಧಿಪತಿಂ ಚಕ್ರೇ ಚಿತ್ರರಥಂ ತದಾ ॥ ೯ ॥**

**ಉಚ್ಚೈಃಶ್ರವಸಮಶ್ವಾನಾಂ ರಾಜಾನಾಂ ಚಾಭ್ಯಷೇಚಯತ್ ।**
**ಮೃಗಾಣಾಮಥ ಶಾರ್ದೂಲಂ ಗೋವೃಷಂ ಚ ಚತುಷ್ಪದಾಂ ॥ ೧೦ ॥**

**ಪಕ್ಷಿಣಾಮಥ ಸರ್ವೇಷಾಂ ಗರುಡಂ ಪತತಾಂ ವರಂ ।**
**ಗಂಧಾನಾಂ ಮಾತುಲಂ ಚೈವ ಭೂತಾನಾಮಶರೀರಿಣಾಂ ॥ ೧೧ ॥**

**ಶಬ್ದಾಕಾಶಬಲಾನಾಂ ಚ ವಾಯುಂ ಬಲವತಾಂ ವರಂ ।**
**ಸರ್ವೇಷಾಂ ದಂಷ್ಟ್ರಿಣಾಂ ಶೇಷಂ ನಾಗಾನಾಮಥ ವಾಸುಕಿಂ ॥ ೧೨ ॥**

---

೮ ಪಿತೃದೇವತೆಗಳ ರಾಜ್ಯದಲ್ಲಿ ಸೂರ್ಯಪುತ್ರನಾದ ಯಮನಿಗೆ ರಾಜ್ಯಾಭಿಷೇಕ ಮಾಡಿದನು. ಸರ್ವಭೂತಗಳು ಮತ್ತು ಪಿಶಾಚಗಳು ಇವುಗಳಿಗೆ ಶೂಲಪಾಣಿಯಾದ ಈಶ್ವರನನ್ನು ಅಧಿಪತಿಯನ್ನಾಗಿಯೂ ನಿಯಮಿಸಿದನು.

೯ ಮುನಿವರ್ಯನು ಗಿರಿಗಳಲ್ಲಿ ಹಿಮವಂತನಿಗೂ, ನದಿಗಳಲ್ಲಿ ಸಮುದ್ರನಿಗೂ, ಗಂಧರ್ವರಲ್ಲಿ ಚಿತ್ರರಥನಿಗೂ ಆಧಿಪತ್ಯವನ್ನು ಕೊಟ್ಟನು.

೧೦. ಅಶ್ವಗಳಲ್ಲಿ ಉಚ್ಚೈಃಶ್ರವಸ್ಸಿಗೂ, ಮೃಗಗಳಲ್ಲಿ ವ್ಯಾಘ್ರನಿಗೂ, ನಾಲ್ಕು ಪಾದಗಳಿರುವ ಪಶುಗಳಲ್ಲಿ ವೃಷಭೇಂದ್ರನಿಗೂ ಆಧಿಪತ್ಯವನ್ನು ಕ್ಲಿಪ್ತಮಾಡಿದನು.

೧೧. ಅನಂತರ ಹಾರುವ ಪ್ರಾಣಿಗಳಲ್ಲಿ ಉತ್ತಮನಾದ ಗರುಡದೇವನಿಗೆ ಪಕ್ಷಿಗಳ ಸಾಮ್ರಾಜ್ಯವನ್ನೂ, ಸರ್ವ ಸುಗಂಧಗಳಿಗೂ, ಶರೀರಶೂನ್ಯಗಳಾದ ಭೂತಗಳಿಗೂ ಸೋದರಮಾವನಾದ ಪುರುಷನ್ನು ರಾಜರನ್ನಾಗಿ ನೇಮಕಮಾಡಿದನು.

೧೨. ಶಬ್ದಗುಣವಿರುವ ಅತಿಕಠಿನವಾದ ಆಕಾಶಕ್ಕೆ ಬಲವಂತರಲ್ಲಿ ಉತ್ತಮನಾದ ವಾಯುದೇವನನ್ನು ಅಧಿಪತಿಯನ್ನಾಗಿಯೂ, ವಿಷದ ದಂತವಿರುವ ಸರ್ಪಗಳಿಗೆ ಆದಿಶೇಷನನ್ನು ದೊರೆಯನ್ನಾಗಿಯೂ, ಸಾಮಾನ್ಯ ನಾಗಗಳಿಗೆ ವಾಸುಕಿಯನ್ನು ಯಜಮಾನನನ್ನಾಗಿಯೂ ನಿಯಮಿಸಿದನು.

ಸರೀಸೃಪಾಣಾಂ ಸರ್ಪಾಣಾಂ ನಾಗಾನಾಂ ಚೈವ ತಕ್ಷಕಂ ।
ಸಾಗರಾಣಾಂ ನದೀನಾಂ ಚ ಮೇಘಾನಾಂ ವರ್ಷಿತಸ್ಯ ಚ ॥
ಆದಿತ್ಯಾನಾಮನ್ಯತಮಂ ಪರ್ಜನ್ಯಮಭಿಷಿಕ್ತವಾನ್ ॥ ೧೩ ॥

ಸರ್ವಾಪ್ಸರೋಗಣಾನಾಂ ಚ ಕಾಮದೇವಂ ತಥೈವ ಚ ।
ಋತೂನಾಮಥ ಮಾಸಾನಾಮಾರ್ತವಾನಾಂ ತಥೈವ ಚ ॥ ೧೪ ॥

ಪಕ್ಷಾಣಾಂ ಚ ವಿಪಕ್ಷಾಣಾಂ ಮುಹೂರ್ತಾನಾಂ ಚ ಪರ್ವಣಾಂ ।
ಕಲಾಕಾಷ್ಠಾಪ್ರಮಾಣಾನಾಂ ಗತೇರಯನಯೋಸ್ತಥಾ ॥
ಗಣಿತಸ್ಯಾಥ ಯೋಗಸ್ಯ ಚಕ್ರೇ ಸಂವತ್ಸರಂ ಪ್ರಭುಂ ॥ ೧೫ ॥

ಪ್ರಜಾಪತಿರ್ವೈ ರಜಸಃ ಪೂರ್ವಸ್ಯಾಂ ದಿಶಿ ವಿಶ್ರುತಂ ।
ಪುತ್ರಂ ನಾಮ್ನಾ ಸುಧಾಮಾನಂ ರಾಜಾನಂ ಸೋಽಭ್ಯಷೇಚಯತ್ ॥ ೧೬ ॥

ಪಶ್ಚಿಮಾಯಾಂ ದಿಶಿ ತಥಾ ರಜಸಃ ಪುತ್ರಮಚ್ಯುತಂ ।
ಕೇತುಮಂತಂ ಮಹಾತ್ಮಾನಂ ರಾಜಾನಂ ಸೋಽಭ್ಯಷೇಚಯತ್ ॥ ೧೭ ॥

---

೧೩. ಇದರಂತೆಯೇ ಸಾಮಾನ್ಯವಾದ ಸರ್ಪಗಳಿಗೂ ಸರ್ಪದಂತೆ ತೆವಳುವ ಸಜಾತೀಯ ಪ್ರಾಣಿಗಳಿಗೂ ತಕ್ಷಕನು ಧೊರೆಯಾದನು, ಸಮಸ್ತವಾದ ಸಾಗರಗಳಿಗೂ ನದಿಗಳಿಗೂ ಮೇಘಗಳಿಗೂ ವೃಷ್ಟಿಗಳಿಗೂ ದ್ವಾದಶಾದಿತ್ಯರಲ್ಲೊಬ್ಬನಾದ ಪರ್ಜನ್ಯನನ್ನು ಅಧಿಪತಿಯನ್ನಾಗಿ ನಿಯಾಮಕ ಮಾಡಿದನು

೧೪–೧೫ ಸಮಸ್ತರಾದ ಅಪ್ಸರಸರ ಗಣಗಳಿಗೆ ಕಾಮದೇವನನ್ನು ಅಧಿಪತಿಯನ್ನಾಗಿಯೂ, ಋತುಗಳು ಋತುಘಟಕಗಳಾದ ಮಾಸಗಳು ಪಕ್ಷವಿಪಕ್ಷಗಳಿಗೂ ಪರ್ವಗಳು ಮುಹೂರ್ತಗಳು ಕಲಾಕಾಷ್ಟ ಪ್ರಮಾಣಗಳು ಗಮನಾಗಮನಗಳೂ ಗಣಿತ ಮತ್ತು ಯೋಗಾಭ್ಯಾಸ ಇವುಗಳಿಗೆ ಸಂವತ್ಸರವನ್ನು ಯಜಮಾನನನ್ನಾಗಿಯೂ ಕ್ಲಿಪ್ತಮಾಡಿದನು.

೧೬–೧೭. ಪ್ರಜಾಪತಿಯಾದ ಕಶ್ಯಪನು ರಜಸ್ಸಿನ ಕುಮಾರನೂ ಅತ್ಯಂತ ಪ್ರಖ್ಯಾತನೂ ಆದ ಸುಧಾಮನನ್ನು ಪೂರ್ವದಿಕ್ಕಿಗೆ ರಾಜನನ್ನಾಗಿ ನಿಯಮಿಸಿ ಅಭಿಷೇಕ ಮಾಡಿದನು. ಅದರಂತೆಯೇ ಪಶ್ಚಿಮ ದಿಕ್ಕಿನಲ್ಲಿಯೂ ಕೂಡ ರಜಸ್ಸಿನ ಪುತ್ರನೂ ಮಹಾತ್ಮನೂ ಆದ ಕೇತುಮಂತನೆಂಬ ಪುರುಷನನ್ನು ರಾಜನನ್ನಾಗಿ ಪಟ್ಟಾಭಿಷೇಕ ಮಾಡಿದನು.

ಮನುಷ್ಯಾಣಾಮಧಿಪತಿಂ ಚಕ್ರೇ ಚೈವ ಸುತಂ ಮನುಂ ।
ತೈರಿಯಂ ಪೃಥಿವೀ ಸರ್ವಾ ಸಪ್ತದ್ವೀಪಾಸಪತ್ತನಾ ॥
ಯಥಾಪ್ರದೇಶಮದ್ಯಾಪಿ ಧರ್ಮೇಣ ಪರಿಪಾಲ್ಯತೇ ॥ ೧೮ ॥

ಸ್ವಾಯಂಭುವೇಂತರೇ ಪೂರ್ವಂ ಬ್ರಹ್ಮಣಾ ತೇಭಿಷೇಚಿತಾಃ ।
ನೃಪಾ ಹ್ಯೇತೇಽಭಿಷಿಚ್ಯಂತೇ ಮನವೋ ಯೇ ಭವಂತಿ ವೈ ॥ ೧೯ ॥

ಮನ್ವಂತರೇಷ್ವತೀತೇಷು ಗತಾ ಹ್ಯೇತೇಷು ಪಾರ್ಥಿವಾಃ ।
ಏವಮನ್ಯೇಭಿಷಿಚ್ಯಂತೇ ಪ್ರಾಪ್ತೇ ಮನ್ವಂತರೇ ಪುನಃ ॥
ಅತೀತಾನಾಗತಾಃ ಸರ್ವೇ ಸ್ಮೃತಾ ಮನ್ವಂತರೇಶ್ವರಾಃ ॥ ೨೦ ॥

ರಾಜಸೂಯೇಽಭಿಷಿಕ್ತಶ್ಚ ಪೃಥುರೇಭಿರ್ನರೋತ್ತಮೈಃ ।
ವೇದದೃಷ್ಟೇನ ವಿಧಿನಾ ಕೃತೋ ರಾಜಾ ಪ್ರತಾಪವಾನ್ ॥ ೨೧ ॥

---

೧೮. ಅನಂತರ ಮುನಿಯು ಮನುನಾಮಕ ಪುತ್ರನನ್ನು ಮನುಷ್ಯರಿಗೆ ಅಧಿಪತಿಯನ್ನಾಗಿ ಪಟ್ಟಾಭಿಷೇಕ ಮಾಡಿದನು. ಅಂತಹ ಮನುಚಕ್ರವರ್ತಿಯು ಆಳಿದ ಪ್ರಜೆಗಳಿಂದ ಈ ಅಖಂಡ ಭೂಮಂಡಲವೆಲ್ಲ ವ್ಯಾಪ್ತವಾಗಿರುತ್ತದೆ ಸಪ್ತ ದ್ವೀಪಗಳೂ, ಸಮುದ್ರಗಳೂ, ಪಟ್ಟಣಗಳೂ ಇವೇ ಮೊದಲಾದ ಭೂಮಂಡಲವನ್ನು ಮನುಚಕ್ರವರ್ತಿಯು ಆಳುತ್ತಿದ್ದನು

೧೯. ಪೂರ್ವದ ಸ್ವಾಯಂಭುವ ಮನ್ವಂತರದಲ್ಲಿ ಬ್ರಹ್ಮದೇವನು ಯಾವ ಮನುಗಳು ರಾಜರು ಇವರಿಗೆ ರಾಜ್ಯಾಭಿಷೇಕ ಮಾಡಿದನೋ, ಅಂತಹ ಈಗಿರತಕ್ಕ ರಾಜರಿಗೂ ಮನುಗಳಿಗೂ ಪಟ್ಟಾಭಿಷೇಕ ಮಾಡಿದನು

೨೦. ಮನ್ವಂತರಗಳು ಹೀಗೆ ಕಳೆಯಲಾಗಿ ಆ ಕಾಲದ ಮನುಗಳೂ ರಾಜರೂ ಸಹ ಕಳೆದುಹೋಗುವರು ಪುನಃ ಬೇರೇ ಮನ್ವಂತರವು ಬರಲು ಬೇರೇ ರಾಜರೂ ಸಹ ಬರುವರು ಹೀಗೆಯೇ ಅತೀತಾನಾಗತ ಮನ್ವಂತರಗಳಲ್ಲಿಯೂ ಉಂಟಾಗುವುದು. ಅಂದರೆ ಹೊಸಬರಾದ ರಾಜರು ಬರುವರು.

೨೧. ಹೀಗೆ ಉತ್ತಮರಾದ ರಾಜರು ರಾಜಸೂಯ ಯಾಗದಲ್ಲಿ ಶಾಸ್ತ್ರೋಕ್ತವಾದ ವಿಧಿಯಿಂದ ಪ್ರತಾಪಶಾಲಿಯೂ ಶೂರನೂ ಆದ ಪೃಥುಮಹಾರಾಜನಿಗೆ ಪಟ್ಟಾಭಿಷೇಕವನ್ನು ಮಾಡಿದರು.

ಏತಾನುತ್ಪಾದ್ಯ ಪುತ್ರಾಂಸ್ತು ಪ್ರಜಾಸಂತಾನಕಾರಣಾತ್ ।
ಪುನರೇವ ಮಹಾಭಾಗಃ ಪ್ರಜಾನಾಂ ಪತಿರೀಶ್ವರಃ ॥ ೨೨ ॥

ಕಶ್ಯಪೋ ಗೋತ್ರಕಾಮಸ್ತು ಚಚಾರ ಪರಮಂ ತಪಃ ।
ಪುತ್ರೌ ಗೋತ್ರಕರೌ ಮಹ್ಯಂ ಭವೇತಾಮಿತ್ಯಚಿಂತಯತ್ ॥ ೨೩ ॥

ತಸ್ಯ ಪ್ರಧ್ಯಾಯಮಾನಸ್ಯ ಕಶ್ಯಪಸ್ಯ ಮಹಾತ್ಮನಃ ।
ಬ್ರಹ್ಮಣೋಂಶೌ ಸುತೌ ಪಶ್ಚಾತ್ ಪ್ರಾದುರ್ಭೂತೌ ಮಹೌಜಸೌ ॥ ೨೪ ॥

ವತ್ಸಾರಶ್ಚಾಸಿತಶ್ಚೈವ ತಾವುಭೌ ಬ್ರಹ್ಮವಾದಿನೌ ।
ವತ್ಸಾರಾನ್ನಿಧ್ರುವೋ ಜಜ್ಞೇ ರೈಭ್ಯಶ್ಚ ಸ ಮಹಾಯಶಾಃ ॥ ೨೫ ॥

---

೨೨. ಮಹಾನುಭಾವನೂ, ಪ್ರಜಾಪತಿಗಳಿಗೆ ಈಶ್ವರನೂ ಆದ ಕಶ್ಯಪ ಮುನಿಯು ಪ್ರಜೆಗಳನ್ನು ಸೃಷ್ಟಿಮಾಡುವ ಉದ್ದೇಶದಿಂದ ಪ್ರತಾಪಶಾಲಿಯಾದ ಈ ಮಕ್ಕಳನ್ನು ಪಡೆದನು.

೨೩. ಕಶ್ಯಪಮುನಿಯು ಸಂತಾನಾಪೇಕ್ಷಿತನಾಗಿ ನನಗೆ ವಂಶಕರರಾದ ಇಬ್ಬರು ಕುಮಾರರು ಜನಿಸಲೆಂದು ಭಾವಿಸಿ, ಅತ್ಯಂತ ದುಶ್ಚರವಾದ ತಪಸ್ಸನ್ನು ಪುನಃ ಮಾಡಿದನು. ವಂಶಕರರಾದ ಪುತ್ರರು ಜನಿಸಬೇಕೆಂದು ಯೋಚಿಸಿದನು.

೨೪. ಹೀಗೆ ಭಯಂಕರವಾಗಿ ತಪಸ್ಸನ್ನು ಮಾಡಿದವನೂ, ಮಹಾತ್ಮನೂ ಆದ ಕಶ್ಯಪಮುನಿಗೆ ಮಹಾತೇಜಸ್ವಿಗಳೂ, ಬ್ರಹ್ಮದೇವನ ಅಂಶವುಳ್ಳವರೂ ಆದ ಇಬ್ಬರು ಕುಮಾರರು ಜನಿಸಿದರು.

೨೫. ಧ್ಯಾನಮಾಡಿದ ಮಹಾತ್ಮನಾದ ಕಶ್ಯಪಮುನಿಗೆ ಬ್ರಹ್ಮಜ್ಞಾನಿಗಳೂ, ಮಹಾನುಭಾವರೂ ಆದ ವತ್ಸಾರ, ಅಸಿತನಾಮಕರಾದ ಇಬ್ಬರು ಮಕ್ಕಳು ಜನಿಸಿದರು. ಅವರಲ್ಲಿ ವತ್ಸಾರನಿಗೆ ಅತ್ಯಂತ ಕೀರ್ತಿವಂತರಾದ ನಿಧ್ರುವರೈಭ್ಯರೆಂಬ ಇಬ್ಬರು ಪುತ್ರರು ಉತ್ಪನ್ನರಾದರು.

ರೈಭ್ಯಶ್ಚ ರೈಭ್ಯಾ ವಿಜ್ಞೇಯಾ ನಿಧ್ರುವಸ್ಯ ನಿಬೋಧತ ।
ಚ್ಯವನಸ್ಯ ಸುಕನ್ಯಾಯಾಂ ಸುಮೇಧಾಃ ಸಮಪದ್ಯತ || ೨೬ ||

ನಿಧ್ರುವಸ್ಯ ತು ಯಾ ಪತ್ನೀ ಮಾತಾ ವೈ ಕುಂಡಪಾಯಿನಾಂ ।
ಅಸಿತಸ್ಯೈಕಪರ್ಣಾಯಾಂ ಬ್ರಹ್ಮಿಷ್ಠಃ ಸಮಪದ್ಯತ || ೨೭ ||

ಶಾಂಡಿಲ್ಯಾನಾಂ ವಚಃ ಶ್ರುತ್ವಾ ದೇವಲಃ ಸುಮಹಾಯಶಾಃ ।
ನಿಧ್ರುವಾಃ ಶಾಂಡಿಲ್ಯಾ ರೈಭ್ಯಾಸ್ತ್ರಯಃ ಪಕ್ಷಾಸ್ತು ಕಶ್ಯಪಾಃ || ೨೮ ||

ವರಪ್ರಭೃತಯೋ ದೇವಾ ದೇವಲಸ್ಯ ಪ್ರಜಾಸ್ತ್ವಿಮಾಃ ।
ಚತುರ್ಯುಗೇ ತ್ವತಿಕ್ರಾಂತೇ ಮನೋರ್ಹ್ಯೇಕಾದಶೇ ಪ್ರಜಾಃ ।
ಅಥಾವಶಿಷ್ಟೇ ತಸ್ಮಿಂಸ್ತು ದ್ವಾಪರೇ ಸಂಪ್ರವರ್ತತೇ || ೨೯ ||

---

೨೬. ರೈಭ್ಯನಿಗೆ ರೈಭ್ಯನಾಮಕರಾದ ಪುತ್ರರು ಜನಿಸಿದರು ನಿಧ್ರುವನ ವಿಚಾರಗಳನ್ನು ಹೇಳುವೆನು ಕೇಳಿರೆಂದನು. ಆ ನಿಧ್ರುವನು ಚ್ಯವನನ ಕುಮಾರಿಯಾದ ಸುಕನ್ಯೆಯನ್ನು ಮದುವೆಯಾದನು. ಆ ದಂಪತಿಗಳಿಗೆ ಸುಮೇಧಸನೆಂಬ ಕುಮಾರನು ಜನಿಸಿದನು

೨೭ ನಿಧ್ರುವನ ಪತ್ನಿಯಾದ ಸುಕನ್ಯೆಯು ಕುಂಡಪಾಯಿನಾಮಕ ಕುಮಾರರ ಜನನಿಯಾಗಿರುವಳು. ಅಸಿತನ ಪತ್ನಿಯಾದ ಏಕಪರ್ಣೆಯಲ್ಲಿ ಬ್ರಹ್ಮಜ್ಞಾನಿಯಾದ ಒಬ್ಬ ಕುಮಾರನು ಉದ್ಭವಿಸಿದನು.

೨೮ ಶಾಂಡಲ್ಯರ ಮಾತನ್ನು ಕೇಳಿದ ದೇವಲನು ಅತ್ಯಂತ ಕೀರ್ತಿವಂತನೂ ಪ್ರಖ್ಯಾತನೂ ಆದನು. ಹೀಗೆ ನಿಧ್ರುವರು, ಶಾಂಡಿಲ್ಯರು, ರೈಭ್ಯರೆಂಬ ಈ ಮೂರು ಪಂಗಡದವರೂ ಕಶ್ಯಪರ ವಂಶೀಕರಾಗಿರುವರು.

೨೯ ವರಾದಿಯಾದ ದೇವತೆಗಳು ದೇವಲನ ಪ್ರಜೆಗಳಾಗಿರುವರು. ಹೀಗೆ ಚತುರ್ಯುಗಗಳು ಅತಿಕ್ರಾಂತವಾಗಲು, ಮನುವಿನ ಹನ್ನೊಂದನೆಯ ಮನ್ವಂತರದಲ್ಲಿ ಅವಶಿಷ್ಟರಾದ ಪ್ರಜೆಗಳು ಉದ್ಭವಿಸಿದರು. ಹೀಗೆ ಹನ್ನೊಂದನೆಯ ಮನ್ವಂತರದಲ್ಲಿ ಹುಟ್ಟದೇ ಅವಶಿಷ್ಟರಾದ ಪ್ರಜೆಗಳು ಹನ್ನೆರಡನೆಯ ದ್ವಾಪರಯುಗದಲ್ಲಿ ಜನಿಸುವರು.

ಮಾನಸಸ್ಯ ಚರಿಷ್ಯಂತಸ್ತಸ್ಯ ಪುತ್ರೋ ದಮಃಕಿಲ ।
ಮಾನಸಸ್ತಸ್ಯ ದಾಯಾ ದಸ್ತೃಣಬಿಂದುರಿತಿ ಶ್ರುತಃ ॥ ೩೦ ॥

ತ್ರೇತಾಯುಗಮುಖೇ ರಾಜಾ ತೃತೀಯೇ ಸಂಬಭೂವ ಹ ।
ತಸ್ಯ ಕನ್ಯಾ ತ್ವಿಡವಿಡಾ ರೂಪೇಣಾಪ್ರತಿಮಾಭವತ್ ॥
ಪುಲಸ್ತ್ಯಾಯ ಸ ರಾಜರ್ಷಿಸ್ತಾಂ ಕನ್ಯಾಂ ಪ್ರತ್ಯಪಾದಯತ್ ॥ ೩೧ ॥

ಋಷಿರಿಡವಿಡಾಯಾಂ ತು ವಿಶ್ರವಾಃ ಸಮುಪದ್ಯತ ।
ತಸ್ಯ ಪತ್ನ್ಯಶ್ಚತಸ್ರಸ್ತು ಪೌಲಸ್ತ್ಯಕುಲವರ್ಧನಾಃ ॥ ೩೨ ॥

ಬೃಹಸ್ಪತೇರ್ಬೃಹತ್ಕೀರ್ತಿರ್ದೇವಾಚಾರ್ಯಸ್ಯ ಕೀರ್ತಿತಃ ।
ಕನ್ಯಾಂತಸ್ಯೋಪಯೇಮೇ ಸ ನಾಮ್ನಾ ವೈ ದೇವವರ್ಣಿನೀಂ ॥ ೩೩ ॥

---

೩೦ ಹನ್ನೆರಡನೆಯ ದ್ವಾಪರಯುಗದಲ್ಲಿ ಮಾನಸನಿಗೆ ಚರಿಷ್ಯಂತನೂ, ಅವನಿಗೆ ದಮನೆಂಬ ಕುಮಾರನೂ ಜನಿಸಿದರು. ಆ ಮಾನಸನಿಗೆ ಸಹೋದರನಾದ ತೃಣಬಿಂದುವೆಂಬುವನು ಉದ್ಭವಿಸಿದನು.

೩೧. ಮೂರನೆಯ ತ್ರೇತಾಯುಗದ ಪ್ರಾರಂಭದಲ್ಲಿ ಒಬ್ಬಾನೊಬ್ಬ ಪ್ರಖ್ಯಾತನಾದ ರಾಜನಿದ್ದನು ಅಂತಹ ರಾಜನಿಗೆ ಅತಿಸುಂದರಿಯಾದ, ಇಡವಿಡಾನಾಮಕಳಾದ ಒಬ್ಬ ಮಗಳು ಜನಿಸಿದಳು. ಆ ರಾಜರ್ಷಿಯು ಆ ಕನ್ನಿಕೆಯನ್ನು ಪುಲಸ್ತ್ಯಮುನಿಗೆ ಕೊಟ್ಟು ವಿವಾಹ ಮಹೋತ್ಸವವನ್ನು ನೆರವೇರಿಸಿದನು

೩೨. ಆ ಪುಲಸ್ತ್ಯಮುನಿಯು ಇಡವಿಡಾನಾಮಕ ಪತ್ನಿಯಲ್ಲಿ ವಿಶ್ರವಸನಾಮಕನಾದ ಕುಮಾರನನ್ನು ಪಡೆದನು. ಅವನಿಗೆ ನಾಲ್ವರು ಪತ್ನಿಯರಿದ್ದರು. ಅವರು ಸಂತಾನದಿಂದ ಪುಲಸ್ತ್ಯರ ವಂಶವನ್ನು ಅಭಿವೃದ್ಧಿಪಡಿಸಿದರು.

೩೩. ದೇವಗುರುವಾದ ಬೃಹಸ್ಪತ್ಯಾಚಾರ್ಯನಿಗೆ ಬೃಹತ್ಕೀರ್ತಿಯೆಂಬ ಕುಮಾರನು ಹುಟ್ಟಿದನು. ಅವನಿಗೆ ದೇವಪರ್ಣಿನಿಯೆಂಬ ಪುತ್ರಿಯು ಜನಿಸಿದಳು. ಆ ವಿಶ್ರವಸುವು ಆ ಕುಮಾರಿಯನ್ನು ಮದುವೆಯಾದನು.

ಪುಷ್ಪೋತ್ಕಟಾಂ ಚ ವಾಕಾಂ ಚ ಸುತೇ ಮಾಲ್ಯವತಃ ಸ್ಥಿತೌ ।
ಕೈಕಸೀ ಮಾಲಿನಃ ಕನ್ಯಾಂ ತಾಸಾಂ ತು ಶೃಣುತ ಪ್ರಜಾಃ ॥ ೩೪ ॥

ಜ್ಯೇಷ್ಠಂ ವೈಶ್ರವಣಂ ತಸ್ಯ ಸುಷುವೇ ದೇವವರ್ಣಿನೀ ।
ದಿವ್ಯೇನ ವಿಧಿನಾ ಯುಕ್ತಮಾರ್ಷೇಣೈವ ಶ್ರುತೇನ ಚ ॥
ರಾಕ್ಷಸೇನ ಚ ರೂಪೇಣ ಆಸುರೇಣ ಬಲೇನ ಚ ॥ ೩೫ ॥

ತ್ರಿಪಾದಂ ಸುಮಹಾಕಾಯಂ ಸ್ಥೂಲಶೀರ್ಷಂ ಮಹಾತನುಂ ।
ಅಷ್ಟದಂಷ್ಟ್ರಂ ಹರಿಚ್ಛ್ಮಶ್ರುಂ ಶಂಕುಕರ್ಣಂ ವಿಲೋಹಿತಂ ॥ ೩೬ ॥

ಹ್ರಸ್ವಬಾಹುಂ ಪ್ರಬಾಹುಂ ಚ ಪಿಂಗಲಂ ಸುವಿಭೀಷಣಂ ।
ವೈವರ್ತಜ್ಞಾನಸಂಪನ್ನಂ ಸಂಬುದ್ಧಂ ಜ್ಞಾನಸಂಪದಾ ॥ ೩೭ ॥

ಏವಂ ವಿಧಂ ಸುತಂ ದೃಷ್ಟ್ವಾ ವಿಶ್ವರೂಪಧರಂ ತಥಾ ।
ಪಿತಾ ದೃಷ್ಟ್ವಾಬ್ರವೀತ್ತತ್ರ ಕುಬೇರೋಽಯಮಿತಿ ಸ್ವಯಂ ॥ ೩೮ ॥

---

೩೪. ಮಾಲ್ಯವಂತನಿಗೆ ಪುಷ್ಪೋತ್ಕಟಾ, ವಾಕಾ ಎಂಬ ಇಬ್ಬರು ಕುಮಾರಿಯರು ಪ್ರಖ್ಯಾತರಾಗಿರುವರು. ಮಾಲಿನಿಗೆ ಕೈಕಸಿನಾಮಕಳಾದ ಪುತ್ರಿಯು ಹುಟ್ಟಿದಳು. ಮೇಲೆ ನಿರೂಪಿಸಿದ ಕುಮಾರಿಯ ಸಂತಾನವನ್ನು ವರ್ಣಿಸುವೆನು ಸಾವಧಾನವಾಗಿ ಕೇಳಿರೆಂದನು

೩೫ ವಿಶ್ರವಸನ ಪತ್ನಿಯಾದ ದೇವವರ್ಣಿನಿಯು ವೇದೋಕ್ತವಾದ ಕ್ರಿಯೆಗಳಿಂದಲೂ, ದಿವ್ಯವಾದ ಜ್ಞಾನದಿಂದಲೂ, ರಾಕ್ಷಸನಂತೆ ಭಯಂಕರವಾದ ರೂಪದಿಂದಲೂ, ಆಸುರಬಲದಿಂದಲೂ ಯುಕ್ತನಾದ ವೈಶ್ರವಣನಾಮಕನಾದ ಹಿರಿಯ ಕುಮಾರನನ್ನು ಪಡೆದಳು.

೩೬-೩೮ ವಿಶ್ರವಸನು ಮೂರುಪಾದಗಳೂ, ಸ್ಥೂಲಕಾಯವೂ, ಸ್ಥೂಲಶಿರಸ್ಸೂ, ಮಹಾಶರೀರವೂ, ಎಂಟುಹಲ್ಲುಗಳೂ, ಹಸರುಬಣ್ಣದ ದಾಡೀಮೀಸೆಗಳೂ, ಶಂಕುಕರ್ಣವೂ, ಲೋಹಿತವರ್ಣವೂ, ಮೋಟಾದ ತೋಳುಗಳೂ, ಸುಲಕ್ಷಣವಾದ ಬಾಹುಗಳೂ, ಪಿಂಗಳವರ್ಣವೂ ಇವುಗಳಿಂದ ಸಹಿತನೂ, ಅತ್ಯಂತ ಭಯಂಕರನೂ, ಸಂಸಾರಮೋಚಕ ಜ್ಞಾನಸಂಪನ್ನನೂ, ಬ್ರಹ್ಮಜ್ಞಾನಯುಕ್ತನೂ, ವಿಶ್ವರೂಪಧರನೂ ಆದ ಕುಮಾರನನ್ನು ನೋಡಿ, ಸಂತೋಷದಿಂದ ಕುಬೇರನೆಂಬ ನಾಮಕರಣವನ್ನು ಮಾಡಿದನು.

ಕುತ್ಸಾಯಾಂ ಕ್ವಿತಿಶಬ್ದೋಽಯಂ ಶರೀರಂ ಬೇರಮುಚ್ಯತೇ ।
ಕುಬೇರಃ ಕುಶರೀರತ್ವಾನ್ನಾಮ್ನಾ ತೇನ ಚ ಸೋಂಕಿತಃ ॥ ೩೯ ॥

ಯಸ್ಮಾದ್ವಿಶ್ರವಸೋಽಪತ್ಯಂ ಸಾದೃಶ್ಯಾದ್ವಿಶ್ರವಾ ಇವ ।
ತಸ್ಮಾದ್ವೈಶ್ರವಣೋ ನಾಮ ನಾಮ್ನಾ ಲೋಕೇ ಭವಿಷ್ಯತಿ ॥ ೪೦ ॥

ಋದ್ಧ್ಯಾಂ ಕುಬೇರೋಽಜನಯದ್ವಿಶ್ರುತಂ ನಲಕೂಬರಂ ।
ರಾವಣಂ ಕುಂಭಕರ್ಣಂ ಚ ಕನ್ಯಾಂ ಶೂರ್ಪಣಖಾಂ ತಥಾ ॥
ವಿಭೀಷಣಂ ಚತುರ್ಥಾಂಸ್ತಾಂಕೈಕಸ್ಯಜನಯತ್ಸುತಾನ್ ॥ ೪೧ ॥

ಶಂಕುಕರ್ಣೋ ದಶಗ್ರೀವಃ ಪಿಂಗಲೋ ರಕ್ತಮೂರ್ಧಜಃ ।
ಚತುಷ್ಪಾದ್ವಿಂಶತಿಭುಜೋ ಮಹಾಕಾಯೋ ಮಹಾಬಲಃ ॥ ೪೨ ॥

---

೩೯. ಕುಬೇರನೆಂಬ ನಾಮದಲ್ಲಿರುವ ಕು ಎಂಬ ಶಬ್ದವು ಕುತ್ಸಿತವಾಚಕವಾಗಿದೆ. ನಿಂದಾವಾಚಕವಾಗಿದೆ ಬೇರ ಶಬ್ದವು ಶರೀರವಾಚಕವಾಗಿದೆ. ಕುಬೇರನೆಂದರೆ (ಕುತ್ಸಿತವಾದ) ಅಸಹ್ಯವಾದ ಶರೀರವುಳ್ಳವನೆಂದು ಅರ್ಥವಾಗುತ್ತದೆ. ಇಂತಹ ಶರೀರವಿರುವುದರಿಂದ ಆ ಕುಮಾರನು ಕುಬೇರನಾಮಕನಾಗಿರುವನು.

೪೦. ಆ ಕುಮಾರನು ವಿಶ್ರವಸನ ಕುಮಾರನಾಗಿಯೂ, ವಿಶೇಷವಾದ ಶ್ರೀಯಸ್ಸುಗಳುಳ್ಳವನಾಗಿಯೂ ಇರುವುದರಿಂದ ಲೋಕದಲ್ಲಿ ವೈಶ್ರವಣನೆಂದು ಪ್ರಖ್ಯಾತನಾಗಿಯೂ, ಅತಿ ಕೀರ್ತಿವಂತನಾಗಿಯೂ, ಶ್ರೀಮಂತನಾಗಿಯೂ ಇರುವನು.

೪೧. ಅನಂತರ ಕುಬೇರನು ಲೋಕವಿಖ್ಯಾತರಾದ ನಲಕೂಬರ, ರಾವಣ, ಕುಂಭಕರ್ಣರೆಂಬ ಮೂವರು ಕುಮಾರರನ್ನೂ, ಶೂರ್ಪನಖಿಯೆಂಬ ಪುತ್ರಿಯನ್ನೂ ಪಡೆದನು. ನಾಲ್ಕನೆಯ ಕುಮಾರನೇ ಪರಮ ಸಾಧುವಾದ ವಿಭೀಷಣನಾಗಿರುವನು. ಅವರಲ್ಲಿ ಋದ್ಧಿಯು ನಲಕೂಬರನನ್ನೂ, ಕೈಕಸಿಯು ರಾವಣ, ಕುಂಭಕರ್ಣ, ವಿಭೀಷಣರನ್ನೂ ಪಡೆದರು.

೪೨ ಅವರಲ್ಲಿ ರಾವಣನು ಶಂಕುವಿನಂತೆ ಶ್ರೋತ್ರಗಳುಳ್ಳವನೂ, ದಶಶಿರಸ್ಕನೂ, ಪಿಂಗಳವರ್ಣವುಳ್ಳವನೂ, ರಕ್ತವರ್ಣದ ಕೇಶವುಳ್ಳವನೂ, ನಾಲ್ಕುಪಾದಗಳು, ಇಪ್ಪತ್ತುಭುಜಗಳು, ಮಹಾಶರೀರ, ಮಹಾವೀರ್ಯ ಇವುಗಳುಳ್ಳವನೂ ಆಗಿರುವನು.

ಜಾತ್ಯಾಂಜನನಿಭೋ ದಂಷ್ಟ್ರೋ ಲೋಹಿತಗ್ರೀವ ಏವ ಚ ।
ರಾಜಸೇನೋ ಜಯಯುಕ್ತೋ ರೂಪೇಣ ಚ ಬಲೇನ ಚ ॥ ೪೩ ॥

ಸತ್ಯಬುದ್ಧಿರ್ದೃಢತನೂ ರಾಕ್ಷಸೈರೇವ ರಾವಣಃ ।
ನಿಸರ್ಗದಾರುಣಃ ಕ್ರೂರೋ ರಾವಣಾದ್ರಾವಣಸ್ತು ಸಃ ॥ ೪೪ ॥

ಹಿರಣ್ಯಕಶಿಪುಸ್ತ್ವಾಸೀತ್ಸ ರಾಜಾ ಪೂರ್ವಜನ್ಮನಿ ।
ಚತುರ್ಯುಗಾನಿ ರಾಜಾತ್ರ ತ್ರಯೋದಶ ಸ ರಾಕ್ಷಸಃ ॥ ೪೫ ॥

ತಾಃ ಪಂಚಕೋಟ್ಯೋ ವರ್ಷಾಣಾಮಾಖ್ಯಾತಾಃ ಸಂಖ್ಯಯಾ ದ್ವಿಜೈಃ ।
ನಿಯುಕ್ತಾನ್ಯೇಕಷಷ್ಟಿಶ್ಚ ಸಂಖ್ಯಾವಿದ್ಭಿರುದಾಹೃತಾ ॥ ೪೬ ॥

---

೪೩. ಆ ರಾವಣನ ಶರೀರವು ಮತ್ತು ಹಲ್ಲುಗಳು ಅಂಜನಗಿರಿಯಂತೆ ಕಪ್ಪಾಗಿಯೂ, ಮಹತ್ತಾಗಿಯೂ ಇರುವುವು ಅವನ ಕತ್ತು ಭಯಂಕರವಾಗಿಯೂ, ಮತ್ತು ಕೆಂಪಾಗಿಯೂ ಇರುವುದು ಅವನ ಸೇನೆಯು ಸರ್ವದಾ ಜಯಯುಕ್ತವಾಗಿರುವುದು. ಅವನು ರೂಪದಿಂದಲೂ, ಶಕ್ತಿಯಿಂದಲೂ ಸದಾ ಜಯಶೀಲನಾಗಿರುವನು.

೪೪. ಆ ರಾವಣನು ಸತ್ಯವಾದ ಬುದ್ಧಿಯುಳ್ಳವನೂ, ದೃಢವಾದ ಶರೀರವುಳ್ಳವನೂ, ರಾಕ್ಷಸರಿಗೂ ಕೂಡ ಭಯಂಕರನೂ, ಸ್ವಾಭಾವಿಕವಾಗಿ ಕ್ರೂರನೂ, ಅತಿಕಠಿನಚಿತ್ತನೂ, ಗರ್ಜನೆಯಿಂದ ಅತಿಭಯಂಕರನೂ ಆಗಿರುವನು.

೪೫. ರಾಕ್ಷಸೇಶ್ವರನಾದ ರಾವಣನು ಪೂರ್ವಜನ್ಮದಲ್ಲಿ ಹಿರಣ್ಯಕಶಿಪುನಾಮಕನಾಗಿ ಜನಿಸಿದ್ದನು. ಅವನು ಹದಿಮೂರನೆಯ ಚತುರ್ಯುಗದಲ್ಲಿ ರಾಕ್ಷಸೇಶ್ವರನಾಗಿದ್ದನು

೪೬. ಕಾಲಸ್ವರೂಪವನ್ನು ತಿಳಿದವರೂ, ಜ್ಞಾನಿಗಳೂ ಆದ ವಿಪ್ರರು ಆ ರಾವಣೇಶ್ವರನು ಐದುಕೋಟಿಯ ಇಪ್ಪತ್ತುಲಕ್ಷದ ಅರವತ್ತೊಂದುಸಹಸ್ರ ವರ್ಷಗಳು ರಾಜ್ಯವನ್ನು ಆಳಿದನೆಂದು ಹೇಳುವರು.

ಷಷ್ಟಿಶತಸಹಸ್ರಾಣಿ ವರ್ಷಾಣಾಂ ತು ಸ ರಾವಣಃ ।
ದೇವತಾನಾಂ ಋಷೀಣಾಂ ಚ ಘೋರಂ ಕೃತ್ವಾ ಪ್ರಜಾಗರಂ ॥ ೪೭ ॥

ತ್ರೇತಾಯುಗೇ ಚತುರ್ವಿಂಶೇ ರಾವಣಸ್ತಪಸಃ ಕ್ಷಯಾತ್ ।
ರಾಮಂ ದಾಶರಥಿಂ ಪ್ರಾಪ್ಯ ಸಗಣಃ ಕ್ಷಯಮೀಯಿವಾನ್ ॥ ೪೮ ॥

ಮಹೋದಯಃ ಪ್ರಹಸ್ತಶ್ಚ ಮಹಾಪಾಂಶುಖರಸ್ತಥಾ ।
ಪುಷ್ಪೋತ್ಕಟಾಯಾಃ ಪುತ್ರಾಸ್ತೇ ಕನ್ಯಾ ಕುಂಭೀನಸೀ ತಥಾ ॥ ೪೯ ॥

ತ್ರಿಶಿರಾ ದೂಷಣಶ್ಚೈವ ವಿದ್ಯುಜ್ಜಿಹ್ವಶ್ಚ ರಾಕ್ಷಸಃ ।
ಕನ್ಯಾ ಹ್ಯಸಲಿಕಾ ಚೈವ ವಾಕಾಯಾಃ ಪ್ರಸವಾಃ ಸ್ಮೃತಾಃ ॥ ೫೦ ॥

---

೪೭. ಇಂತಹ ರಾವಣನು ಅರವತ್ತುಲಕ್ಷಸಹಸ್ರವರ್ಷಗಳವರೆಗೂ ಅತಿ ಭಯಂಕರವಾಗಿ ತಪಸ್ಸನ್ನು ಮಾಡಿದನು. ಅವನ ಘೋರವಾದ ತಪಸ್ಸಿನಿಂದ ದೇವತೆಗಳಿಗೂ ಋಷಿಗಳಿಗೂ ಅತ್ಯಂತವಾಗಿ ಭೀತಿಯುಂಟಾಯಿತು.

೪೮. ಇಪ್ಪತ್ತನಾಲ್ಕನೆಯ ತ್ರೇತಾಯುಗದಲ್ಲಿ ರಾವಣನ ತಫಸ್ಸಿನಫಲವೆಲ್ಲವೂ ಕ್ಷಯವಾದುದರಿಂದ ದಶರಥನ ಕುಮಾರನಾದ ಶ್ರೀರಾಮನ ದ್ವೇಷದಿಂದ ಪುತ್ರಮಿತ್ರ ಪುತ್ರಾದಿ ಗಣಗಳೊಂದಿಗೆ ಮೃತನಾದನು.

೪೯. ಮಹೋದಯ, ಪ್ರಹಸ್ತ, ಮಹಾಪಾಂಶು ಮತ್ತು ಖರ ಇವರು ಪುಷ್ಪೋತ್ಕಟೆ ಎಂಬ ರಾಕ್ಷಸಿಯ ಪುತ್ರರಾಗಿರುವರು ಮತ್ತು ಕುಂಭೀನಸಿಯೆಂಬ ಕುಮಾರಿಯೂ ಉತ್ಪನ್ನಳಾದಳು.

೫೦. ಅನಂತರ ವಾಕಾ ಎಂಬುವಳಿಗೆ ತ್ರಿಶಿರಸ, ದೂಷಣ, ವಿದ್ಯುಜ್ಜಿಹ್ವ ಎಂಬ ರಾಕ್ಷಸರೂ, ಅಲಸಿಕೇ ಎಂಬ ರಾಕ್ಷಸಿಯಾದ ಕುಮಾರಿಯೂ ಉದ್ಭವಿಸಿ, ಲೋಕವಿಖ್ಯಾತರೂ ಲೋಕಕಂಟಕರೂ ಆಗಿದ್ದರು.

ಇತ್ಯೇತೇ ಕ್ರೂರಕರ್ಮಾಣಃ ಪೌಲಸ್ತ್ಯಾ ರಾಕ್ಷಸಾ ದಶ ।
ದಾರುಣಾಭಿಜನಾಃ ಸರ್ವೇ ದೇವೈರಪಿ ದುರಾಸದಾಃ || ೫೧ ||

ಸರ್ವೇ ಲಬ್ಧವರಾಶ್ಚೈವ ಪುತ್ರಪೌತ್ರಸಮನ್ವಿತಾಃ ।
ಯಕ್ಷಾಣಾಂಚೈವ ಸರ್ವೇಷಾಂ ಪೌಲಸ್ತ್ಯಾ ಯೇ ಚ ರಾಕ್ಷಸಾಃ || ೫೨ ||

ಆಗಸ್ತ್ಯವೈಶ್ವಾಮಿತ್ರಾಣಾಂ ಕ್ರೂರಾಣಾು ಬ್ರಹ್ಮರಾಕ್ಷಸಾಂ ।
ವೇದಾಧ್ಯಯನಶೀಲಾನಾಂ ತಪೋವ್ರತನಿಷೇವಿಣಾಂ || ೫೩ ||

ತೇಷಾಮೈಡವಿಡೋ ರಾಜಾ ಪೌಲಸ್ತ್ಯಃ ಸವ್ಯಪಿಂಗಲಃ ।
ಇತರೇ ವೈ ಯಜ್ಞಮುಖಾಸ್ತೇನ ರಕ್ಷೋಗಣಸ್ತ್ರಯಃ || ೫೪ ||

ಯಾತುಧಾನಾ ಬ್ರಹ್ಮಧಾನಾ ವಾರ್ತಾಶ್ಚೈವ ದಿವಾಚರಾಃ ।
ನಿಶಾಚರಗಣಾಸ್ತೇಷಾಂ ಚತ್ವಾರಃ ಕವಿಭಿಃ ಸ್ಮೃತಾಃ || ೫೫ ||

---

೫೧-೫೨. ಮೇಲೆ ಹೇಳಿದ ರಾವಣಾದಿ ರಾಕ್ಷಸರು ಕ್ರೂರಕರ್ಮಿಗಳೂ, ಪುಲಸ್ತ್ಯ ಕುಲಸಂಭೂತರೂ, ದಶಸಂಖ್ಯಾಕರೂ, ಭಯಂಕರ ಕುಲೋತ್ಪನ್ನರೂ, ದೇವತೆಗಳಿಂದಲೂ ಜಯಿಸಲಸಾಧ್ಯರೂ, ಲೋಕಪ್ರಸಿದ್ಧರೂ ಆಗಿರುವರು. ಅವರೆಲ್ಲರೂ ಘೋರ ತಪಸ್ಸಿನಿಂದ ಬ್ರಹ್ಮಾದಿ ದೇವತೆಗಳಿಂದ ವರಗಳನ್ನು ಪಡೆದವರೂ, ಪುತ್ರಪೌತ್ರಾದಿಗಳಿಂದ ಯುಕ್ತರೂ ಆಗಿರುವರು. ಪುಲಸ್ತ್ಯವಂಶೋತ್ಪನ್ನರಾದ ರಾಕ್ಷಸರೆಲ್ಲರೂ ಯಕ್ಷರಗಿಂತಲೂ ಬಲಿಷ್ಠರೂ ಸುಪ್ರಸಿದ್ಧರೂ ಆಗಿರುವರು.

೫೩–೫೪ ಕ್ರೂರಕರ್ಮಿಗಳೂ, ಬ್ರಹ್ಮರಾಕ್ಷಸರೂ, ವೇದಾಧ್ಯಯನಸಂಪನ್ನರೂ, ತಪೋನಿಯಮಯುಕ್ತರೂ, ಅಗಸ್ತ್ಯ ವಿಶ್ವಾಮಿತ್ರನಾಮಕರೂ ಆದ ರಾಕ್ಷಸರಿಗೆ ಇಡಾವಿಡೆಯ ಪುತ್ರನೂ, ಪುಲಸ್ತ್ಯಕುಲಸಂಭೂತನೂ ಆದ ಸವ್ಯಪಿಂಗಳನೆಂಬ ರಾಕ್ಷಸನು ರಾಜನಾಗಿರುವನು ಇತರರಾದ ಕೆಲವು ರಾಕ್ಷಸರು ಯಜ್ಞಪರಾಯಣರಾಗಿರುವರು ಅವರವರ ಕರ್ಮಾನುಗುಣವಾಗಿ ರಾಕ್ಷಸರನ್ನು ಮೂರುಗಣಗಳನ್ನಾಗಿ ಮಾಡಬಹುದು.

೫೫. ಕೆಲವು ಮಹಾಪುರುಷರು ರಾಕ್ಷಸರು, ಯಾತುಧಾನರು, ಬ್ರಹ್ಮಧಾನರು, ವಾರ್ತಾನಾಮಕರು, ದಿವಾಚರರು ಎಂದು ನಾಲ್ಕುವಿಧರಾಗಿರುವರೆಂದು ಹೇಳುವರು. ಹೀಗೆ ರಾಕ್ಷಸರನ್ನು ನಾಲ್ಕುಗಣಗಳನ್ನಾಗಿ ಮಾಡುವರು.

**ಪೌಲಸ್ತ್ಯಾ ನೈಋತಾಶ್ಚೈವ ಆಗಸ್ತ್ಯಾಃ ಕೌಶಿಕಾಸ್ತಥಾ ।**
**ಇತ್ಯೇತಾಃ ಸಪ್ತ ತೇಷಾಂ ವೈ ಜಾತಯೋ ರಾಕ್ಷಸಾಃ ಸ್ಮೃತಾಃ ॥ ೫೬ ॥**

**ತೇಷಾಂ ರೂಪಂ ಪ್ರವಕ್ಷ್ಯಾಮಿ ಸ್ವಭಾವೇನ ವ್ಯವಸ್ಥಿತಂ ।**
**ವೃತ್ತಾಕ್ಷಾಃ ಪಿಂಗಲಾಶ್ಚೈವ ಮಹಾಕಾಯಾ ಮಹೋದರಾಃ ॥ ೫೭ ॥**

**ಅಷ್ಟದಂಷ್ಟ್ರಾಃ ಶಂಕುಕರ್ಣಾ ಊರ್ಧ್ವರೋಮಾಣ ಏವ ಚ ।**
**ಆಕರ್ಣದಾರಿತಾಸ್ಯಾಶ್ಚ ಮುಂಜುಧೂಮ್ರೋರ್ಧ್ವಮೂರ್ಧಜಾಃ ॥ ೫೮ ॥**

**ಸ್ಥೂಲಶೀರ್ಷಾಃ ಸಿತಾಭ್ರಾಶ್ಚ ಹ್ರಸ್ವಕಾಶ್ಚ ಪ್ರವಾಹುಕಾಃ ।**
**ತಾಮ್ರಾಸ್ಯಾ ಲಂಬಜಿಹ್ವೌಷ್ಠಾ ಲಂಬಭ್ರೂ ಸ್ಥೂಲನಾಸಿಕಾಃ ॥ ೫೯ ॥**

**ನೀಲಾಂಗಾ ಲೋಹಿತಗ್ರೀವಾ ಗಂಭೀರಾಕ್ಷಾ ವಿಭೀಷಣಾಃ ।**
**ಮಹಾಘೋರಸ್ವರಾಶ್ಚೈವ ವಿಕಟಾ ಬದ್ಧಪಿಂಡಿಕಾಃ ॥ ೬೦ ॥**

---

೫೬ ಪುಲಸ್ತ್ಯಕುಲಸಭೂತರಾದ ರಾಕ್ಷಸರು, ಪುನಃ ನೈರ್ಋತರು, ಅಗಸ್ತ್ಯರು, ಕೌಶಿಕರೆಂದು ಮೂರುವಿಧಗಳಾಗಿರುವರು ಹೀಗೆ ರಾಕ್ಷಸರು (ಮೇಲೆ) ಹಿಂದೆ ಹೇಳಿದ ಗುಂಪುಗಳನ್ನು ಯೋಚಿಸಿದರೆ ಒಟ್ಟು ರಾಕ್ಷಸರ ಸಂಗಡಗಳು (ಗುಂಪುಗಳು) ಏಳುವಿಧವಾಗಿವೆಯೆಂದು ಮಹಾತ್ಮರಾದ ಜ್ಞಾನಿಗಳು ಹೇಳುವರು.

೫೭–೬೦ ಎಲೈ ಮುನಿವರ್ಯರೇ, ಮೇಲೆ ನಿರೂಪಿಸಿರುವ ರಾಕ್ಷಸರ ರೂಪ, ಆಕಾರ, ಅವರ ಸ್ವಭಾವ ಇವುಗಳನ್ನು ನಿರೂಪಿಸುವೆನು ಕೇಳಿರೆಂದನು ಅವರು ದುಂಡಾದ ಕಣ್ಣುಗಳುಳ್ಳವರೂ, ಹೊಂಬಣ್ಣವುಳ್ಳವರೂ, ಮಹಾಕಾಯರೂ, ಮಹೋದರರೂ, ಎಂಟುಹಲ್ಲುಳ್ಳವರೂ, ಶಂಕುವಿನಂತೆ ಕರ್ಣಗಳುಳ್ಳವರೂ, ಉನ್ನತವಾದ ಕೇಶಗಳುಳ್ಳವರೂ, ಕಿವಿಗಳವರೆಗೂ ವ್ಯಾಪ್ತವಾದ ಮುಖವುಳ್ಳವರೂ ಅಂದರೆ ವಿಶಾಲವದನಗಳೂ, ಧೂಮ್ರವರ್ಣಗಳೂ, ಊರ್ಧ್ವವಾದ ಕೇಶಗಳುಳ್ಳವರೂ, ಊರ್ಧ್ವರೇತಸ್ವಿಗಳೂ, ಸ್ಥೂಲಶಿರಸ್ಕರೂ, ಶುಭ್ರಾಕಾರಿಗಳೂ, ಹ್ರಸ್ವವಾದ ಶರೀರವುಳ್ಳವರೂ, ಅತಿವೇಗಿಗಳೂ, ತಾಮ್ರಮುಖಿಗಳೂ, ನೇತಾಡುವ ನಾಲಗೆ, ತುಟಿ, ಹುಬ್ಬು ಇವುಗಳುಳ್ಳವರೂ, ದಪ್ಪವಾದ ಮೂಗುಳ್ಳವರೂ, ನೀಲಾಂಗಿಗಳೂ, ರಕ್ತಕಂಠಿಗಳೂ, ಗಂಭೀರನೇತ್ರಗಳುಳ್ಳವರೂ, ಭಯಂಕರಾಕಾರಿಗಳೂ, ಗಂಭೀರಧ್ವನಿಯುಳ್ಳವರೂ ವಕ್ರರೂಪಿಗಳೂ. ಪಿಂಡಾಕಾರಿಗಳೂ ಆಗಿರುವರು.

**ಸ್ಥೂಲಾಶ್ಚ ತುಂಗನಾಸಾಶ್ಚ ಶಿಲಾಸಂಹನನಾ ದೃಢಾಃ |**
**ದಾರುಣಾಭಿಜನಾಃ ಕ್ರೂರಾಃ ಪ್ರಾಯಶಃ ಕೃಷ್ಣಕರ್ಮಿಣಃ || ೬೧ ||**

**ಸಕುಂಡಲಾಂಗದಾಪೀಡಾ ಮುಕುಟೋಷ್ಣೀಷಧಾರಿಣಃ |**
**ವಿಚಿತ್ರವಸ್ತ್ರಾಭರಣಾಶ್ಚಿತ್ರಸ್ರಗನುಲೇಪನಾಃ || ೬೨ ||**

**ಅನ್ನಾದಾಃ ಪಿಶಿತಾದಾಶ್ಚ ಪುರುಷಾದಾಶ್ಚ ತೇ ಸ್ಮೃತಾಃ |**
**ಇತ್ಯೇತದ್ರೂಪಸಾಧರ್ಮ್ಯಂ ರಾಕ್ಷಸಾನಾಂ ಬುಧೈಃ ಸ್ಮೃತಂ |**
**ನ ಸಮಸ್ತಬಲಂ ಬುದ್ಧಂ ಯತೋ ಮಾಯಾ ಕೃತಂ ಹಿ ತತ್ || ೬೩ ||**

**ಪುಲಹಸ್ಯ ಮೃಗಾಃ ಪುತ್ರಾಃ ಸರ್ವೇ ವ್ಯಾಲಾಶ್ಚ ದಂಷ್ಟ್ರಿಣಃ |**
**ಭೂತಾಃ ಪಿಶಾಚಾಃ ಸರ್ಪಾಶ್ಚ ಭ್ರಮರಾ ಹಸ್ತಿನಸ್ತಥಾ || ೬೪ ||**

---

೬೧–೬೨. ಮತ್ತು ಆ ರಾಕ್ಷಸರ ಶರೀರವು ಉನ್ನತವಾಗಿಯೂ ಮೂಗು ಎತ್ತರವಾಗಿಯೂ, ಶರೀರವು ಶಿಲೆಯಂತೆ ಕಠಿನವಾಗಿಯೂ, ದೃಢವಾಗಿಯೂ ಇರುವುವು. ಪ್ರಾಯಕವಾಗಿ ಅವರು ಕ್ರೂರವಂಶಜರೂ, ಕ್ರೂರರೂ, ಕ್ರೂರಕರ್ಮಿಗಳೂ, ಕುಂಡಲಧಾರಿಗಳೂ, ಕೇಯೂರಮಂಡಿತರೂ, ಮುಕುಟಾಲಂಕೃತರೂ, ಉಷ್ಣೀಷಭೂಷಿತರೂ, ವಿಚಿತ್ರವಾದ ವಸ್ತ್ರಾಲಂಕಾರಗಳಿಂದ ಶೋಭಿತರೂ, ಚಿತ್ರವಾದ ಮಾಲೆಧಾರಿಗಳೂ, ಸುಗಂಧಲೇಪಿಗಳೂ ಆಗಿ (ಪ್ರಕಾಶಿಸುವರು) ಶೋಭಿಸುವರು

೬೩. ಮತ್ತು ಆ ರಾಕ್ಷಸರು ಅನ್ನಭಕ್ಷಕರೂ, ಮಾಂಸಭೋಜಿಗಳೂ, ಪುರುಷಭಕ್ಷಕರೂ ಆಗಿರುವರು. ಮೇಲೆ ನಿರೂಪಿಸಿರುವ ಧರ್ಮಗಳು ರಾಕ್ಷಸರೆಲ್ಲರಲ್ಲೂ ಸಾಮಾನ್ಯವಾಗಿರುತ್ತವೆ ಎಂದು ಜ್ಞಾನಿಗಳು ಹೇಳುವರು. ರಾಕ್ಷಸರ ಶಕ್ತಿಯನ್ನು ಇಷ್ಟೇ ಇದೆಯೆಂದು ತಿಳಿಯಲು ಸಾಧ್ಯವಿಲ್ಲ ಏಕೆಂದರೆ ಅವರು ಮಾಯಾವಿಗಳಾಗಿರುವರು.

೬೪–೬೫. ಪುಲಸ್ತ್ಯನವಂಶವನ್ನು ಇದುವರಿಗೂ ವರ್ಣಿಸಿರುವೆನು ಈಗ ಪುಲಹನ ವಂಶವನ್ನು ತಿಳಿಸುವೆನು, ಮೃಗಗಳು ಸರ್ಪಗಳು ವ್ಯಾಘ್ರಗಳು ಭೂತಗಳು

ವಾನರಾಃ ಕಿನ್ನರಾಶ್ಚೈವ ಯಮಕಿಂಪುರುಷಾಸ್ತಥಾ ।
ಯೇನ್ಯೇ ಚೈವ ಪರಿಕ್ರಾಂತಾ ಮಾಯಾಕ್ರೋಧವಶಾನುಗಾಃ ॥ ೬೫ ॥

ಅನಪತ್ಯಃ ಕ್ರತುಸ್ತಸ್ಮಿನ್ ಸ್ಮೃತೋ ವೈವಸ್ವತೇಂತರೇ ।
ನ ತಸ್ಯ ಪುತ್ರಃ ಪೌತ್ರೋ ವಾ ತೇಜಃ ಸಂಕ್ಷಿಪ್ಯ ವಾ ಸ್ಥಿತಃ ॥ ೬೬ ॥

ಅತ್ರೇರ್ವಂಶಂ ಪ್ರವಕ್ಷ್ಯಾಮಿ ತೃತೀಯಸ್ಯ ಪ್ರಜಾಪತೇಃ ।
ತಸ್ಯ ಪತ್ನ್ಯಶ್ಚ ಸುಂದರ್ಯೋ ದಶೈವಾಸಂ ಪತಿವ್ರತಾಃ ॥ ೬೭ ॥

ಭದ್ರಾಶ್ವಸ್ಯ ಘೃತಾಚ್ಯಾಂ ವೈ ದಶಾಪ್ಸರಸಿ ಸೂನವಃ ।
ಭದ್ರಾ ಶೂದ್ರಾ ಚ ಮದ್ರಾ ಚ ಶಲದಾ ಮಲದಾ ತಥಾ ॥ ೬೮ ॥

ವೇಲಾ ಖಲಾ ಚ ಸಪ್ತೈತಾ ಯಾ ಚ ಗೋಚಪಲಾ ಸ್ಮೃತಾ ।
ತಥಾ ಮಾನರಸಾ ಚೈವ ರತ್ನಕೂಟಾ ಚ ತಾ ದಶ ॥ ೬೯ ॥

---

ಪಿಶಾಚಿಗಳು, ಸರ್ಪಗಳು, ಭ್ರಮರಗಳು, ಆನೆಗಳು, ಕಪಿಗಳು, ಕಿನ್ನರರು, ಯಮರು, ಕಿಂಪುರುಷರು ಇವರು ಪುಲಹನ ಪುತ್ರರಾಗಿರುವರು. ಅಲ್ಲದೇ ಯಾರು ಅತ್ಯಂತ ಶೂರರೂ ಮಾಯಾವಾದಿಗಳೂ ಕ್ರೋಧಪರಾಯಣರೂ ಆಗಿರುವರೋ ಅವರೆಲ್ಲರೂ ಪುಲಹನ ಪುತ್ರರೇ ಆಗಿರುವರೆಂದು ತಿಳಿಯಬೇಕು.

೬೬. ವೈವಸ್ವತಮನ್ವಂತರದಲ್ಲಿ ಅವರಲ್ಲಿ ಕ್ರತುವಿಗೆ ಮಕ್ಕಳಿರಲಿಲ್ಲ ಮತ್ತು ಅವನಿಗೆ ಮಕ್ಕಳೂ ಮೊಮ್ಮಕ್ಕಳೂ ಯಾರೂ ಇರುವುದಿಲ್ಲ. ಅವನಿಗೆ ಸಂತಾನವಿಲ್ಲದಿರುವುದರಿಂದ ಅವನ ಕೀರ್ತಿಯು ಹರಡುವ ಅವಕಾಶವೇ ಇಲ್ಲ.

೬೭. ಎಲೈ ವಿಪ್ರೋತ್ತಮರೇ, ಈಗ ಮೂರನೆಯವನಾದ ಅತ್ರಿಮುನಿಯ ವಂಶವನ್ನು ವರ್ಣಿಸುವೆನು ಕೇಳಿರೆಂದನು. ಅತ್ರಿಮುನಿಗೆ ಅತಿಸುಂದರಿಯರೂ, ಪತಿವ್ರತೆಯರೂ ಆದ ಹತ್ತು ಜನ ಪತ್ನಿಯರು ಇದ್ದರು ಅವರೆಲ್ಲರೂ ಲೋಕವಿಖ್ಯಾತರಾಗಿರುವರು.

೬೮–೬೯. ಭದ್ರಾಶ್ವನಿಗೆ ಘೃತಾಚಿಯೆಂಬ ಅಪ್ಸರಸಿಯಲ್ಲಿ ಭದ್ರಾ, ಶೂದ್ರಾ, ಮದ್ರಾ, ಶಲದಾ, ಮಲದಾ, ವೇಲಾ, ಖಲಾ ಎಂಬ ಪುತ್ರಿಯರು ಜನಿಸಿದರು. ತರುವಾಯ ಗೋಚಪಲಾ, ಮಾನರಸಾ, ರತ್ನಕೂಟಾ ಎಂಬ ಮೂವರು ಕುಮಾರಿಯರೂ ಜನಿಸಿದರು. ಹೀಗೆ ಒಟ್ಟು ಹತ್ತು ಜನ ಪುತ್ರಿಯರು ಜನಿಸಿದರು.

ಆತ್ರೇಯವಂಶಕೃತ್ತಾಸಾಂ ಭರ್ತಾ ನಾಮ್ನಾ ಪ್ರಭಾಕರಃ ।
ಭದ್ರಾಯಾಂ ಜನಯಾಮಾಸ ಸೋಮಂ ಪುತ್ರಂ ಯಶಸ್ವಿನಂ ॥ ೭೦ ॥

ಸ್ವರ್ಭಾನುನಾ ಹತೇ ಸೂರ್ಯೇ ಪತಮಾನೋ ದಿವೋ ಮಹೀಂ ।
ತಮೋಽಭಿಭೂತೇ ಲೋಕೇಽಸ್ಮಿ ಪ್ರಭಾ ಯೇನ ಪ್ರವರ್ತಿತಾ ॥ ೭೧ ॥

ಸ್ವಸ್ತಿ ತೇಽಸ್ತ್ವಿತಿ ಚೋಕ್ತಃ ಸ ಪತನ್ನಿಹ ದಿವಾಕರಃ ।
ಬ್ರಹ್ಮರ್ಷೇರ್ವಚನಾತ್ತಸ್ಯ ನ ಪಪಾತ ದಿವೋ ಮಹೀಂ ॥ ೭೨ ॥

ಅತ್ರಿಶ್ರೇಷ್ಠಾನಿ ಗೋತ್ರಾಣಿ ಯಶ್ಚಕಾರ ಮಹಾತಪಾಃ ।
ಯಜ್ಞೇಷ್ವತ್ರಿಧನಶ್ಚೈವ ಸುರೈರ್ಯಸ್ಯ ಪ್ರವರ್ತಿತಃ ॥ ೭೩ ॥

---

೭೦ ಅತ್ರಿವಂಶೋದ್ಭೂತನೂ, ಅತ್ರಿವಂಶವಿಸ್ತಾರಕನೂ ಆದ ಪ್ರಭಾಕರನು ಆ ಹತ್ತುಕುಮಾರಿಯರನ್ನೂ ಮದುವೆಯಾದನು ಅವರಲ್ಲಿ ಭದ್ರಾ ಎಂಬುವಳಿಗೆ ಕೀರ್ತಿವಂತನಾದ ಸೋಮನೆಂಬ ಸುಪ್ರಸಿದ್ಧನಾದ ಕುಮಾರನು ಜನಿಸಿದನು

೭೧. ರಾಹುವು ಸೂರ್ಯನನ್ನು ಹಿಂಸಿಸಲಾಗಿ ಸೂರ್ಯನು ಆಕಾಶದಿಂದ ಭೂಮಿಗೆ ಬೀಳುತ್ತಿದ್ದನು. ಯಾರಿಂದ ಲೋಕಕ್ಕೆ ಬೆಳಕು ಉಂಟಾಯಿತೋ, ಅಂತಹ ಸೂರ್ಯನು ಇಲ್ಲದಿರುವುದರಿಂದ ಲೋಕವೆಲ್ಲವೂ ಅಂಧಕಾರದಿಂದ ವ್ಯಾಪ್ತವಾಯಿತು

೭೨ ಹೀಗೆ ರಾಹುವಿನಿಂದ ಪೀಡಿತನಾದ ಸೂರ್ಯನು ಆಕಾಶದಿಂದ ಬೀಳುತ್ತಿರುವುದನ್ನು ನೋಡಿದ ಪ್ರಭಾಕರನು, ಎಲೈ ದಿವಾಕರನೇ, ನಿನಗೆ ಮಂಗಳವಾಗಲಿ. ನೀನು ಬೀಳದಿರು. ತಂದೆಯಾದ ಅತ್ರಿಮುನಿಯು ನೀನಾಗಿರುವುದರಿಂದ ಲೋಕಕ್ಕೆ ಕಲ್ಯಾಣವಾಗುವುದು ಎಂದು ಹೇಳಿ ಬೀಳದಹಾಗೆ ವರವನ್ನು ಕೊಟ್ಟನು. ಹೀಗೆ ಬ್ರಹ್ಮರ್ಷಿಯ ವರವನ್ನು ಕೇಳಿ ಸೂರ್ಯನು ಅಂತರಿಕ್ಷದಿಂದ ಭೂಮಿಯಲ್ಲಿ ಬೀಳಲಿಲ್ಲ. ಇದರಿಂದ ಲೋಕಕ್ಕೆ ಕಲ್ಯಾಣವಾಗುವುದು.

೭೩. ಮಹಾತಪಸ್ವಿಗಳಾದ ಅತ್ರಿಮುನೀಶ್ವರರು ಗೋತ್ರಪ್ರವರ್ತಕರಾಗಿರುವುದರಿಂದ ಆ ಗೋತ್ರವು ಲೋಕೋತ್ತಮವಾಗಿದೆಯೆಂದು ತಿಳಿಯಬೇಕು. ಆ ಮುನಿಯು ಯಜ್ಞದಲ್ಲಿ ಅಮೃತವೃಷ್ಟಿಯನ್ನು ಕರೆದದ್ದರಿಂದ ದೇವತೆಗಳು ತೃಪ್ತರಾದರು.

ಸತಾಸ್ವಜನಯುತ್ ಪುತ್ರಾನಾತ್ಮತುಲ್ಯಾನನಾಮಕಾನ್ ।
ದಶ ತಾಸ್ವೇವ ಮಹತಾ ತಪಸಾ ಭಾವಿತಪ್ರಭಾಃ ॥ ೭೪ ॥

ಸ್ವಸ್ತ್ಯಾತ್ರೇಯಾ ಇತಿ ಖ್ಯಾತಾ ಋಷಯೋ ವೇದಪಾರಗಾಃ ।
ತೇಷಾಂ ವಿಖ್ಯಾತಯಶಸೌ ಬ್ರಹ್ಮಿಷ್ಠೌ ಸುಮಹೌಜಸೌ ॥ ೭೫ ॥

ದತ್ತಾತ್ರೇಯಸ್ತಸ್ಯ ಜ್ಯೇಷ್ಠೋ ದುರ್ವಾಸಾಸ್ತಸ್ಯ ಚಾನುಜಃ ।
ಯವೀಯಸೀ ಸುತಾ ತಸ್ಯಾಮಬಲಾ ಬ್ರಹ್ಮವಾದಿನೀ ॥
ಅತ್ರಾಪ್ಯುದಾಹರಂತೀಮಂ ಶ್ಲೋಕಂ ಪೌರಾಣಿಕಾಃ ಪುರಾ ॥ ೭೬ ॥

ಅತ್ರೇಃ ಪುತ್ರಂ ಮಹಾತ್ಮಾನಂ ಶಾಂತಾತ್ಮಾನಮಕಲ್ಮಷಂ ।
ದತ್ತಾತ್ರೇಯಂ ತನುಂ ವಿಷ್ಣೋಃ ಪುರಾಣಜ್ಞಾಃ ಪ್ರಚಕ್ಷತೇ ॥ ೭೭ ॥

---

೭೪. ಮಹಾತಪಸ್ವಿಯಾದ ಪ್ರಭಾಕರನು ಆ ಹತ್ತು ಜನ ಪತ್ನಿಯರಲ್ಲಿಯೂ ತನಗೆ ಸಮರೂ, ಮಹಾಶೂರರೂ, ಲೋಕವಿಖ್ಯಾತರೂ, ಮಹಾನುಭಾವರೂ ಆದ ಹತ್ತು ಜನ ಮಕ್ಕಳನ್ನು ಪಡೆದನು

೭೫. ವೇದಪಾರಂಗತರೂ, ಮಹಾನುಭಾವರೂ ಆದ ಮುನಿಗಳು ಸಸ್ತ್ಯಾತ್ರಯರೆಂದು ಪ್ರಖ್ಯಾತರಾದರು ಅಂತಹ ಮಹಾತ್ಮರಲ್ಲಿ ವಿಖ್ಯಾತಯಶಸ್ಕರೂ, ಬ್ರಹ್ಮಜ್ಞಾನಿಗಳೂ, ಮಹಾತೇಜಸ್ವಿಗಳೂ ಆದ ಇಬ್ಬರು ಪುತ್ರರು ಜನಿಸಿದರು

೭೬. ಆ ಮಕ್ಕಳಲ್ಲಿ ದತ್ತಾತ್ರೇಯನು ಜ್ಯೇಷ್ಠಕುಮಾರನಾಗಿಯೂ, ದುರ್ವಾಸ ಮುನಿಯು ಕನಿಷ್ಠಪುತ್ರನಾಗಿಯೂ ಇರುವರು. ಅವರಿಬ್ಬರಿಗೂ ಕಿರಿಯವಳೂ, ಬ್ರಹ್ಮಜ್ಞಾನಿಯೂ, ಅಬಲಾನಾಮಕಳೂ ಆದ ಪುತ್ರಿಯು ಜನಿಸಿದಳು. ಇವರ ವಿಷಯದಲ್ಲಿ ಪೂರ್ವದಲ್ಲಿ ಪೌರಾಣೀಕರು ಈ ಶ್ಲೋಕವನ್ನು ಉದಾಹರಿಸಿದರು.

೭೭. ಅತ್ರಿಯ ಕುಮಾರನೂ, ಮಹಾತ್ಮನೂ, ಶಾಂತರೂಪಿಯೂ, ನಿರ್ದೋಷಿಯೂ ಆದ ದತ್ತಾತ್ರೇಯನು ವಿಷ್ಣುವಿನ ಅಂಶಸಂಭೂತನೆಂದು ಪುರಾಣವನ್ನು ತಿಳಿದವರು ಹೇಳುವರು.

ತಸ್ಯ ಗೋತ್ರಾನ್ವಯೇ ಜಾತಾಶ್ಚತ್ವಾರಃ ಪ್ರಥಿತಾ ಭುವಿ ।
ಶ್ಯಾಮಾಶ್ಚ ಮುದ್ಗಲಾಶ್ಚೈವ ಬಲಾರಕಗವಿಷ್ಠಿರಾಃ ॥
ಏತೇ ನೃಣಾಂ ತು ಚತ್ವಾರಃ ಸ್ಮೃತಾಃ ಪಕ್ಷಾ ಮಹೌಜಸಾಂ ॥ ೭೮ ॥

ಕಶ್ಯಪಾನ್ನಾರದಶ್ಚೈವ ಪರ್ವತೋಽರುಂಧತೀ ತಥಾ ।
ಜಜ್ಞಿರೇ ಚ ತ್ವರುಂಧತ್ಯಾಸ್ತಾನ್ನಿಬೋಧತ ಸತ್ತಮಾಃ ॥ ೭೯ ॥

ನಾರದಸ್ತು ವಸಿಷ್ಠಾಯಾರುಂಧತೀಂ ಪ್ರತ್ಯಪಾದಯತ್ ।
ಊರ್ಧ್ವರೇತಾ ಮಹಾತೇಜಾ ವೃಕ್ಷಶಾಪಾತ್ತು ನಾರದಃ ॥ ೮೦ ॥

ಪುರಾ ದೇವಾಸುರೇ ತಸ್ಮಿಂಸಂಗ್ರಾಮೇ ತಾರಕಾಮಯೇ ।
ಅನಾವೃಷ್ಟ್ಯಾಹತೇ ಲೋಕೇ ವ್ಯಗ್ರೇ ಶಕ್ರೇ ಸುರೈಃ ಸಹ ॥
ವಸಿಷ್ಠಸ್ತಪಸಾ ಧೀಮಾಂಧಾರಯಾಮಾಸ ವೈ ಪ್ರಜಾಃ ॥ ೮೧ ॥

---

೭೮. ಇವನ ವಂಶದಲ್ಲಿ ನಾಲ್ಕುಜನ ಪ್ರಖ್ಯಾತಪುರುಷರು ಜನಿಸಿದರು ಆ ದತ್ತಾತ್ರೇಯನ ವಂಶದಲ್ಲಿ ಶ್ಯಾಮ, ಮುದ್ಗಲ, ಬಲಾರಕ, ಗವಿಷ್ಠಿರರೆಂಬ ನಾಲ್ವರು ಕುಮಾರರು ಮನುಷ್ಯರಲ್ಲಿ ಪ್ರಖ್ಯಾತರೂ, ಮಹಾತೇಜಸ್ವಿಗಳೂ, ಪ್ರತ್ಯೇಕ ವಂಶ ವರ್ಧಕರೂ ಆಗಿರುವರು.

೭೯. ಮಹಾನುಭಾವರಾದ ಕಶ್ಯಪರಿಗೆ ನಾರದ, ಪರ್ವತ, ಅರುಂಧತೀಯ ರೆಂಬ ಪ್ರಸಿದ್ಧರಾದ ಮಕ್ಕಳು ಹುಟ್ಟಿದರು ಅರುಂಧತೀ ಪುತ್ರರ ವಿಷಯಗಳನ್ನು ವಿವರಣೆ ಮಾಡುವೆನು ಸಾವಧಾನವಾಗಿ ಕೇಳಿರೆಂದನು

೮೦. ನಾರದಮುನಿಯು ಆ ಪತಿವ್ರತೆಯಾದ ಅರುಂಧತೀದೇವಿಯನ್ನು ವಸಿಷ್ಠಮುನಿಗೆ ಕೊಟ್ಟು ವಿವಾಹಮಾಡಿಸಿದನು ಆ ವಸಿಷ್ಠನು ಊರ್ಧ್ವರೇತಸ್ಕನೂ ಮಹಾತೇಜಸ್ವಿಯೂ ಆಗಿದ್ದನು ಮಹಾಮುನಿಯು ವೃಕ್ಷಶಾಪದಿಂದ ನಾರದ ನಾಮಕನಾದನು

೮೧. ಪೂರ್ವದಲ್ಲಿ ದೇವಾಸುರರಿಗೆ ಯುದ್ಧವು ಪ್ರಾರಂಭವಾಗಲು ತಾರಕಾ ಸುರನ ಹಾವಳಿಯು ಅಧಿಕವಾಗಿತ್ತು. ಆಗ ಲೋಕಗಳೆಲ್ಲವೂ ಅನಾವೃಷ್ಟಿಯಿಂದ ಪೀಡಿತವಾಗಿತ್ತು. ಆಗ ಶುಕ್ರಾಚಾರ್ಯನು ದೇವಾಸುರರ ಸಂಗಡ ಯುದ್ಧದಲ್ಲಿ ಆಸಕ್ತನಾಗಿದ್ದನು. ಆಗ ಅತ್ಯಂತ ಪೀಡಿತರಾದ ಪ್ರಜೆಗಳನ್ನು ಜ್ಞಾನಿಯಾದ ವಸಿಷ್ಠಮುನಿಯು ತನ್ನ ತಪೋಮಹಿಮೆಯಿಂದ ಉದ್ಧರಿಸಿದನು

ಅತ್ರೌಷಧಂ ಮೂಲಫಲಮೋಷಧೀಶ್ಚ ಪ್ರವರ್ತರ್ಯಥಾ |
ತಾಸ್ತೇನ ಜೀವಯಾಮಾಸ ಕಾರುಣ್ಯಾದೋಷದೇನ ತು || ೮೨ ||

ಅರುಂಧತ್ಯಾಂ ವಸಿಷ್ಠಸ್ತು ಶಕ್ತಿಮುತ್ಪಾದಯದ್ದ್ವಿಜಾಃ |
ಸಾಗರಂ ಜನಯಚ್ಚ ಶಕ್ತೇರದೃಶ್ಯಂತೀ ಪರಾಶರಂ || ೮೩ ||

ಕಾಲೀ ಪರಾಶರಾಜ್ಜಜ್ಞೇ ಕೃಷ್ಣದ್ವೈಪಾಯನಂ ಪ್ರಭುಂ |
ದ್ವೈಪಾಯನಾದರಣ್ಯಾಂ ವೈ ಶುಕೋ ಜಜ್ಞೇ ಗುಣಾನ್ವಿತಃ || ೮೪ ||

ಉತ್ಪದ್ಯಂತೇ ಚ ಪೀವರ್ಯಾಂ ಷಡಿಮೇ ಶುಕಸೂನವಃ |
ಭೂರಿಶ್ರವಾಃ ಪ್ರಭುಃ ಶಂಭುಃ ಕೃಷ್ಣೋ ಗೌರಶ್ಚ ಪಂಚಮಃ || ೮೫ ||

ಕನ್ಯಾ ಕೀರ್ತಿಮತೀ ಚೈವ ಯೋಗಮಾತಾ ದೃಢವ್ರತಾ |
ಜನನೀ ಬ್ರಹ್ಮದತ್ತಸ್ಯ ಪತ್ನೀ ಸಾತ್ವಗುಹಸ್ಯ ಚ || ೮೬ ||

---

೮೨. ಅನಂತರ ಆ ಮಹಾಮುನಿಯು ತನ್ನ ತಪಃಶಕ್ತಿಯಿಂದ ಓಷಧಿಗಳನ್ನೂ, ಫಲಮೂಲೌಷಧಗಳನ್ನೂ ವೃದ್ಧಿಗೊಳಿಸಿ ಪ್ರಜೆಗಳಲ್ಲಿರುವ ದಯೆಯಿಂದ ಅವರನ್ನು ರಕ್ಷಿಸಿದನು.

೮೩. ಎಲೈ ಮುನಿವರ್ಯರೇ, ವಸಿಷ್ಠಮಹರ್ಷಿಯು ತನ್ನ ಪತ್ನಿಯಾದ ಅರುಂಧತಿಯಲ್ಲಿ ಶಕ್ತಿಯನ್ನು ಸೃಷ್ಟಿಸಿದನು · ಆ ಶಕ್ತಿಯಿಂದ ನಾಗರವನ್ನು ಉತ್ಪಾದಿಸಿದನು ತರುವಾಯ ಮಹಾತ್ಮನಾದ ಪರಾಶರಮುನಿಯು ಉದ್ಭವಿಸಿದನು

೮೪. ಅಂತಹ ಪರಾಶರರು ಕಾಲೀನಾಮಕಪತ್ನಿಯಲ್ಲಿ ಸ್ವಾಮಿಯಾದ ಕೃಷ್ಣದ್ವೈಪಾಯನನನ್ನು ಅಂದರೆ ವೇದವ್ಯಾಸಮಹಾಮುನಿಯನ್ನು ಪಡೆದನು. ಆ ವೇದವ್ಯಾಸದೇವನಿಂದ ಅರಣಿಯಲ್ಲಿ ಬಹು ಗುಣಾನ್ವಿತನಾದ ಶುಕಮುಹಾ ಮುನಿಯು ಆವಿರ್ಭವಿಸಿದನು.

೮೫-೮೬. ಅನಂತರ ಶುಕಮುನಿಗೆ ಪೀವರೆಯಲ್ಲಿ ಭೂರಿಶ್ರವಸು, ಪ್ರಭು, ಶಂಭು, ಕೃಷ್ಣ, ಗೌರರೆಂಬ ಐದುಜನ ಕುಮಾರರೂ, ಕೀರ್ತಿಮತೀ ಎಂಬ ಕುಮಾರಿಯೂ ಉದ್ಭವಿಸಿದರು. ಆಕೆಯು ಯೋಗಮಾತೆಯೂ, ದೃಢವ್ರತಳೂ, ಬ್ರಹ್ಮದತ್ತನ ಜನನಿಯೂ, ಗುಹನ ಪತ್ನಿಯೂ, ಸತ್ವಗುಣಸಂಪನ್ನಳೂ ಆಗಿರುವಳು.

**ಶ್ವೇತಾಃ ಕೃಷ್ಣಾಶ್ಚ ಗೌರಶ್ಚ ಶ್ಯಾಮಾ ಧೂಮ್ರಾಃ ಸಮೂಲಿಕಾಃ ।**
**ಊಷ್ಮಪಾ ದಾರಕಾಶ್ಚೈವ ನೀಲಾಶ್ಚೈವ ಪರಾಶರಾಃ ॥**
**ಪರಾಶರಾಣಾಮಷ್ಟೌ ತೇ ಪಕ್ಷಾಃ ಪ್ರೋಕ್ತಾ ಮಹಾತ್ಮನಾಂ ॥ ೮೭ ॥**

**ಅತ ಊರ್ಧ್ವಂ ನಿಬೋಧಧ್ವಮಿಂದ್ರಪ್ರತಿಮಸಂಭವಂ ।**
**ವಸಿಷ್ಠಸ್ಯ ಕಪಿಂಜಲ್ಯಾಂ ಘೃತಾಚ್ಯಾಂ ಸಮಪದ್ಯತ ॥**
**ಕುಶೀತಿಯಃ ಸಮಾಖ್ಯಾತ ಇಂದ್ರಪ್ರತಿಮ ಉಚ್ಯತೇ ॥ ೮೮ ॥**

**ಪೃಥೋಃ ಸುತಾಯಾಃ ಸಂಭೂತಃ ಪುತ್ರಸ್ತಸ್ಯಾಭವದ್ವಸುಃ ।**
**ಉಪಮನ್ಯುಃ ಸುತಸ್ತಸ್ಯ ಯಸ್ಯೇಮೇ ಉಪಮನ್ಯವಃ ॥ ೮೯ ॥**

**ಮಿತ್ರಾವರುಣಯೋಶ್ಚೈವ ಕುಂಡಿನೋ ಯೇ ಪರಿಶ್ರುತಾಃ ।**
**ಏಕಾರ್ಷೇಯಾಸ್ತಥೈವಾನ್ಯೇ ವಸಿಷ್ಠಾ ನಾಮ ವಿಶ್ರುತಾಃ ।**
**ಏತೇ ಪಕ್ಷಾ ವಸಿಷ್ಠಾನಾಂ ಸ್ಮೃತಾ ಏಕಾದಶೈವ ತು ॥ ೯೦ ॥**

---

೮೭ ಮಹಾತ್ಮರಾದ ಪರಾಶರರಿಗೆ ಶ್ವೇತ, ಕೃಷ್ಣ, ಗೌರ, ಶ್ಯಾಮಾ, ಧೂಮ್ರಾ, ಸಮಾಲಿಕಾ, ಊಷ್ಮಪಾ, ದಾರಿಕಾ ಮತ್ತು ನೀಲಾ ಎಂಬ ಎಂಟುಜನ ಪ್ರಖ್ಯಾತಪುರುಷರು ಜನಿಸಿದರು. ಅವರದೇ ಒಂದೊಂದು ಗಣವಾಯಿತು. ಮಹಾತ್ಮರಾದ ಪರಾಶರರ ಎಂಟು ಗಣಗಳು ಲೋಕವಿಖ್ಯಾತವಾದುವು.

೮೮ ಎಲೈ ಮುನಿವರ್ಯರೇ, ಇಂದ್ರಪ್ರತಿಮಸಂಭವರನ್ನು ಹೇಳುವೆನು ಕೇಳಿರಿ. ವಸಿಷ್ಠನಿಗೆ ಕಪಿಂಜಲೀನಾಮಕ ಘೃತಾಚಿಯಲ್ಲಿ ಕುಶೀತನಾಮಕ, ಇಂದ್ರಪ್ರತಿಮರೆಂಬ ಕುಮಾರರು ಉದ್ಭವಿಸಿದರು

೮೯. ವೃಧುರಾಯನ ಪುತ್ರಿಗೆ ವಸುನಾಮಕ ಪುತ್ರನು ಜನಿಸಿದನು. ಅವನಿಗೆ ಉಪಮನ್ಯುವೆಂಬ ಕುಮಾರನು ಜನಿಸಿದನು ಅವನ ಕುಮಾರರೆಲ್ಲರೂ ಉಪಮನ್ಯು ನಾಮದಿಂದಲೇ ಪ್ರಖ್ಯಾತರಾಗಿರುವರು

೯೦. ಮಿತ್ರಾವರುಣರು ಕುಂಡಿನರೂಪರೆಂದು ಪ್ರಖ್ಯಾತರಾದ ಯಾವ ಪುರುಷರಿರುವರೋ ಅವರೂ ಮತ್ತು ಏಕಾರ್ಷೇಯರೂ ಸಹ ವಸಿಷ್ಠವಂಶೀಕರೆಂದು ಪ್ರಖ್ಯಾತರಾಗಿರುವರು, ಹೀಗೆ ವಸಿಷ್ಠ ಮುನಿಗಳ ಪಂಗಡದವರು ಏಕಾದಶ ಸಂಖ್ಯಾಕರಾಗಿರುವರು.

**ಇತ್ಯೇತೇ ಬ್ರಹ್ಮಣಃ ಪುತ್ರಾ ಮಾನಸಾ ಹ್ಯಷ್ಟ ವಿಶ್ರುತಾಃ ।**
**ಭ್ರಾತರಃ ಸು ಮಹಾಭಾಗಾ ಯೇಷಾಂ ವಂಶಾಃ ಪ್ರತಿಷ್ಠಿತಾಃ ॥ ೯೧ ॥**

**ತ್ರೀಂಲ್ಲೋಕಾಂಧಾರಯಂತೀಮಾಂದೇವರ್ಷಿಗಣಸಂಕುಲಾನ್ ।**
**ತೇಷಾಂ ಪುತ್ರಾಶ್ಚ ಪೌತ್ರಾಶ್ಚ ಶತಶೋಽಥ ಸಹಸ್ರಶಃ ॥**
**ಯೈರ್ವ್ಯಾಪ್ತಾ ಪೃಥಿವೀ ಸರ್ವಾ ಸೂರ್ಯಸ್ಯೇವ ಗಭಸ್ತಿಭಿಃ ॥ ೯೨ ॥**

**ಇತಿ ಶ್ರೀ ಮಹಾಪುರಾಣೇ ವಾಯುಪ್ರೋಕ್ತೇ " ಋಷಿವಂಶಾನು ಕೀರ್ತನಂ " ನಾಮ ನವಮೋಽಧ್ಯಾಯಃ**

---

೯೧. ಹೀಗೆ ಮೇಲೆ ನಿರೂಪಿಸಿದ ಎಂಟುಜನರೂ ಅಷ್ಟಮುನಿಗಳೂ, ಬ್ರಹ್ಮದೇವನ ಮಾನಸ ಪುತ್ರರಾಗಿರುವರು. ಆ ಎಂಟು ಜನ ಸಹೋದರರೂ ಮಹಾನುಭಾವರೂ ವಂಶಸ್ಥಾಪಕರೂ ಆಗಿರುವರು.

೯೨. ಹೀಗೆ ವಸಿಷ್ಠವಂಶೀಕರೂ ಬ್ರಹ್ಮದೇವನ ಮಾನಸ ಪುತ್ರರೂ ಕೂಡ ಮೂರು ಲೋಕಗಳನ್ನು ವ್ಯಾಪಿಸಿಕೊಂಡಿರುವರು ಅವರು ದೇವತೆಗಳೂ ಮುನಿಗಳೂ ಇವರ ಪಂಗಡಕ್ಕೆ ಸೇರಿರುವರು, ಇವರ ಪುತ್ರ ಪೌತ್ರಾದಿ ಸಹಸ್ರಾರು ಜನಗಳು ಈ ಜಗತ್ತನ್ನೇ ಸೂರ್ಯನಕಿರಣಗಳು ಪ್ರಪಂಚವನ್ನು ಆವರಿಸುವಂತೆ ಆವರಿಸಿಕೊಂಡಿರುವರು. ಅವರಿಂದ ಜಗತ್ತೇ ವ್ಯಾಪ್ತವಾಗಿರುತ್ತದೆ

ಇಲ್ಲಿಗೆ ವಾಯುಪ್ರೋಕ್ತವಾದ ಮಹಾಪುರಾಣದಲ್ಲಿ " ಋಷಿವಂಶವರ್ಣನವೆಂಬ " ಒಂಭತ್ತನೆಯ ಅಧ್ಯಾಯವು ಮುಗಿದುದು.



## ಒಂಭತ್ತನೆಯ ಅಧ್ಯಾಯದ ಸಾರಾಂಶವು



ಈ ಅಧ್ಯಾಯದಲ್ಲಿ ಕಶ್ಯಪರ ವಂಶವು ವರ್ಣಿತವಾಗಿದೆ. ಬ್ರಹ್ಮದೇವನ ಆಜ್ಞೆ ಯಂತೆ ಕಶ್ಯಪ ಮುನಿಯು ಪ್ರಜೆಗಳನ್ನು ಸೃಷ್ಟಿಮಾಡಿ ನಕ್ಷತ್ರಗ್ರಹಾದಿಗಳಿಗೆ ಸೋಮ ವನ್ನು ಆದಿತ್ಯಾದಿ ದೇವತೆಗಳಿಗೆ ವಿಷ್ಣ್ವಾದಿಗಳನ್ನು ಅಧಿಪತಿಗಳನ್ನಾಗಿಯೂ ಮಾಡಿ ದನು ಪೂರ್ವದಿಕ್ಕಿಗೆ ಸುಧಾಮನನ್ನೂ ಪಶ್ಚಿಮಕ್ಕೆ ಕೇತುಮಂತನನ್ನೂ ಯಜಮಾನ ರನ್ನಾಗಿ ಅಭಿಷೇಕಮಾಡಿದನು ಅವರ ವಂಶಗಳು ಜಗತ್ತೆಲ್ಲವನ್ನೂ ವ್ಯಾಪಿಸಿಕೊಂಡಿವೆ. ಪೃಥುಮಹಾರಾಜನೂ ಕೂಡ ಈ ವಂಶದಲ್ಲೇ ಜನಿಸಿರುವನು

ಪುನಃ ಕಶ್ಯಪನು ವಂಶಾಭಿವೃದ್ಧಿಗಾಗಿ ವತ್ಸಾರ ಅಸಿಕರೆಂಬ ಪುತ್ರರನ್ನು ಪಡೆ ದನು. ಅವರಿಗೆ ರೈಭ್ಯಸೋಮಧನರೆಂಬ ಮಕ್ಕಳು ಜನಿಸಿ ಪ್ರಖ್ಯಾತರಾದರು ಅವರ ಪುತ್ರಪೌತ್ರಾದಿಗಳಿಂದ ಈ ಜಗತ್ತು ವ್ಯಾಪ್ತವಾಯಿತು

ಈ ವಂಶದಲ್ಲಿಯೇ ವೈಶ್ರವಣ, ರಾವಣ, ಕುಂಭಕರ್ಣ, ಮಹೋದರ ಪ್ರಹಸ್ತಾ ದಿಗಳೂ ನೈಋತರೂ ಅಗಸ್ತ್ಯರೂ ಕೌಶಿಕರೂ ಭದ್ರಾದಿ ಸಪ್ತಮಾತೃಗಳೂ ಸ್ವಸ್ತ್ಯಾ ತ್ರೇಯರೂ ದತ್ತಾತ್ರೇಯ ದೂರ್ವಾಸರೂ ವಸಿಷ್ಠಾದಿಗಳೂ ಉಪಮನ್ಯು ಮಿತ್ರಾ ವರುಣರೂ ಜನಿಸಿ ಪ್ರಖ್ಯಾತರಾದರು ಅವರ ಪುತ್ರಪೌತ್ರಾದಿಗಳಿಂದ ಇಡೀ ಜಗತ್ತೇ ವ್ಯಾಪ್ತವಾಯಿತು. ಹೀಗೆ ಕಶ್ಯಪರ ಸೃಷ್ಟಿಕ್ರಮವು ಲೋಕದಲ್ಲಿ ವಿಸ್ತೃತವಾಯಿತೆಂಬ ವಿಷಯವು ನಿರೂಪಿತವಾಗಿವೆ



—: ಹರಿಃ ಓಂ :—

—ಶ್ರೀ ವೇದವ್ಯಾಸಾಯ ನಮಃ—

# ಶ್ರೀಮದ್ವಾಯು ಪುರಾಣಂ

## ದಶಮೋಽಧ್ಯಾಯಃ

**ಏತಚ್ಛ್ರುತ್ವಾ ವಚಸ್ತಸ್ಯ ಸೂತಸ್ಯ ವಿದಿತಾತ್ಮನಃ ।**
**ಉತ್ತರಂ ಪರಿಪಪ್ರಚ್ಛುಃ ಸೂತಪುತ್ರಂ ದ್ವಿಜಾತಯಃ ॥ ೧ ॥**

**॥ ಶಾಂಶಪಾಯನ ಉವಾಚ ॥**

**ಕಥಂ ದ್ವಿತೀಯಮುತ್ಪನ್ನಾ ಭವಾನೀ ಪ್ರಾಕ್ಸತೀತು ಯಾ ।**
**ಆಸೀದ್ದಾಕ್ಷಾಯಣೀ ಪೂರ್ವಮುಮಾ ಕಥಮಜಾಯುತ ॥ ೨ ॥**

**ಮೇನಾಯಾಂ ಪಿತೃಕನ್ಯಾಯಾಂ ಜನಯಾಮಾಸ ಶೈಲರಾಟ್ ।**
**ಕೇ ಚೈತೇ ಪಿತರಶ್ಚೈವ ಯೇಷಾಂ ಮೇನಾ ತು ಮಾನಸೀ ॥ ೩ ॥**

---

## ಹತ್ತನೆಯ ಅಧ್ಯಾಯವು

೧. ನೈಮಿಷಾರಣ್ಯವಾಸಿಗಳಾದ ಮುನಿವರ್ಯರು ಮಹಾತ್ಮನೂ ಜ್ಞಾನಿಯೂ ಆದ ಸೂತಪುರಾಣೀಕನ ವಚನಗಳನ್ನು ಕೇಳಿ ಸಂತುಷ್ಟನಾಗಿ ಪುನಃ ಸೂತಮುನಿಯನ್ನು ಕುರಿತು ಇಂತೆಂದರು.

೨. ಶಾಂಶಪಾಯನ ಮುನಿಯು ಹೇಳಿದನು.— ಎಲೈ ಮುನಿವರ್ಯನೇ, ಪೂರ್ವದಲ್ಲಿ ಭವಾನಿಯಾಗಿದ್ದ ಸತೀದೇವಿಯು ಎರಡನೆಯ ಜನ್ಮದಲ್ಲಿ ಉಮಾದೇವಿಯಾಗಲು ಕಾರಣವೇನು? ಮೊದಲು ದಕ್ಷಕುಮಾರಿಯಾಗಿದ್ದ ಸತೀದೇವಿಯು ತರುವಾಯ ಪರ್ವತರಾಜ ಕುಮಾರಿಯಾಗಲು ಕಾರಣವೇನೆಂದು ಕೇಳಿದರು.

೩–೪. ಎಲೈ ಮುನಿವರ್ಯನೇ, ಪಿತೃದೇವತೆಗಳ ಪುತ್ರಿಯಾದ ಮೇನಕಾದೇವಿಯಲ್ಲಿ ಪರ್ವತರಾಜನು ಉಮಾದೇವಿಯನ್ನು ಪಡೆದನೆಂದು ಹೇಳಿರುತ್ತೀಯೆ. ಆ ಪಿತೃದೇವತೆಗಳು ಯಾರು? ಮೇನಕೆಯು ಅವರಿಗೆ ಪುತ್ರಿಯಾಗಿ ಹುಟ್ಟಲು ಕಾರಣ

ಮೈನಾಕಶ್ಚೈವ ದೌಹಿತ್ರೋ ದೌಹಿತ್ರೀ ಚ ತಥಾ ಹ್ಯುಮಾ ।
ಏಕಪರ್ಣಾ ತಥಾ ಚೈವ ತಥಾ ಯಾ ಚೈಕಪಾಟಲಾ ॥ ೪ ॥

ಗಂಗಾ ಚೈವ ಸರಿಚ್ಛ್ರೇಷ್ಠಾ ಸರ್ವಾಸಾಂ ಪೂರ್ವಜಾ ತಥಾ ।
ಪೂರ್ವಮೇವ ಮಯೋದ್ದಿಷ್ಟಂ ಶೃಣುಧ್ವಂ ಮಮ ಸರ್ವಶಃ ॥ ೫ ॥

ಅನೇಕೇ ಪಿತರಶ್ಚೈವ ವರ್ತಂತೇ ಕ್ವ ಚ ವಾ ಪುನಃ ।
ಶ್ರೋತುಮಿಚ್ಛಾಮಿ ಭದ್ರಂ ತೇ ಶ್ರಾದ್ಧಸ್ಯ ಚ ಪರಂ ವಿಧಿಂ ॥ ೬ ॥

ಪುತ್ರಾಶ್ಚ ತೇ ಸ್ಮೃತಾ ಕೇಷಾಂ ಕಥಂ ಚ ಪಿತರಸ್ತು ತೇ ।
ಪಿತರಃ ಕಥಮುತ್ಪನ್ನಾಃ ಕಸ್ಯ ಪುತ್ರಾಃ ಕಿಮಾತ್ಮಕಾಃ ॥ ೭ ॥

---

ವೇನು ? ಪಿತೃಗಳಿಗೆ ಮೈನಾಕನು ಪೌತ್ರನಾಗಿಯೂ, ಉಮಾದೇವಿಯು ಪೌತ್ರಿಯಾಗಿಯೂ ಹೇಗೆ ಆದರು ? ಮತ್ತು ಆ ಉಮಾದೇವಿಯು ಏಕವರ್ಣೆಯೂ, ಪಾಟಲವರ್ಣಿನಿಯೂ ಆಗಲು ಕಾರಣವೇನು ?

೫. ನದಿಗಳಲ್ಲಿ ಶ್ರೇಷ್ಠಳಾದ ಗಂಗಾದೇವಿಯು ಹೇಗೆ ಹಿರಿಯ ಮಗಳಾದಳು? ಇವೆಲ್ಲವನ್ನೂ ಮೊದಲೇ ನಾನು ನಿಮಗೆ ಸಂಕ್ಷೇಪವಾಗಿ ತಿಳಿಸಿರುವೆನು. ಆದರೂ ಈಗ ವಿಸ್ತಾರವಾಗಿಯೂ ಕ್ರಮವಾಗಿಯೂ ತಿಳಿಸುವೆನು ಕೇಳಿರೆಂದನು

೬ ಎಲೈ ಪುರಾಣೀಕರೇ, ಅಸಂಖ್ಯಾಕರಾದ ಪಿತೃದೇವತೆಗಳು ಎಲ್ಲಿರುವರು? ಅವರಿಗೆ ಏತರಿಂದ ಪ್ರೀತಿಯುಂಟಾಗುತ್ತದೆ? ಶ್ರಾದ್ಧಕ್ರಮವು ಯಾವುದು? ಇವನ್ನು ವಿವರಿಸಬೇಕೆಂದು ಕೇಳಿದನು. ಇದರಿಂದ ಉಭಯರಿಗೂ ಮಂಗಳವಾಗುವುದು.

೭. ಆ ಪಿತೃದೇವತೆಗಳು ಯಾರ ಪುತ್ರರು ? ಅವರು ಹೇಗೆ ಪಿತೃಗಳಾದರು? ಲಪಿತೃಗಳು ಹೇಗೆ ಉತ್ಪನ್ನರಾದರು ? ಅವರು ಯಾರ ಮಕ್ಕಳು ? ಅವರ ತಂದೆಗಳ ಕ್ಷಣಗಳಾವುವು ? ಇವೆಲ್ಲವನ್ನೂ ನಮಗಾಗಿ ದಯವಿಟ್ಟು ತಿಳಿಸಬೇಕೆಂದರು

**ಸ್ವರ್ಗೇ ತು ಪಿತರೋಽನ್ಯೇ ಯೇ ದೇವಾನಾಮಪಿ ದೇವತಾಃ ।**
**ಏವಂ ವೈ ಶ್ರೋತುಮಿಚ್ಛಾಮಿ ಪಿತೄಣಾಂ ಸರ್ಗಮುತ್ತಮಂ ॥**
**ಯಥಾವದ್ವೃತ್ತಮಸ್ಮಾಭಿ ಶ್ರಾದ್ಧಂ ಪ್ರೀಣಾತಿ ವೈ ಪಿತೄನ್ ॥ ೮ ॥**

**ಯದರ್ಥಂ ತೇನ ದೃಶ್ಯಂತೇ ತತ್ರ ಕಿಂ ಕಾರಣಂ ಸ್ಮೃತಂ ।**
**ಸ್ವರ್ಗೇ ಹಿ ಕೇ ತು ವರ್ತಂತೇ ಪಿತರೋ ನರಕೇ ತು ಕೇ ॥ ೯ ॥**

**ಅಭಿಸಂಧಾಯ ಪಿತರಂ ಪಿತುಶ್ಚ ಪಿತರಂ ತಥಾ ।**
**ಪಿತುಃ ಪಿತಾಮಹಂಚೈವ ತ್ರಿಷು ಪಿಂಡೇಷು ನಾಮತಃ ॥ ೧೦ ॥**

**ಕಾನಿ ಶ್ರಾದ್ಧಾನಿ ದೇಯಾನಿ ಕಥಂ ಗಚ್ಛಂತಿ ವೈ ಪಿತೄನ್ ।**
**ಕಥಂ ಚ ಶಕ್ತಾಸ್ತೇ ದಾತುಂ ನರಕಸ್ಥಾಃ ಫಲಂ ಪುನಃ ॥ ೧೧ ॥**

---

೮. ಸ್ವರ್ಗಲೋಕದಲ್ಲಿರುವ ಪಿತೃದೇವತೆಗಳು ಯಾರು? ಅವರು ದೇವತೆಗಳಿಗೂ ಉತ್ತಮರು ಹೇಗೆ ಆದರು? ಪಿತೃಗಳಿಗೆ ಸ್ವರ್ಗಪ್ರಾಪ್ತಿಯು ಹೇಗೆ ಉಂಟಾಗುವುದು? ನಾವು ಮಾಡಿದ ಶ್ರಾದ್ಧಕರ್ಮದಿಂದ ಆ ಪಿತೃಗಳು ಹೇಗೆ ತೃಪ್ತರಾಗುವರು? ನಾವು ದತ್ತವಾದ ಅನ್ನೋದಕಗಳು ಅವರಿಗೆ ಹೇಗೆ ಸೇರುತ್ತವೆ? ಇವುದಳನ್ನು ತಿಳಿಸಬೇಕೆಂದು ಬೇಡಿದರು.

೯. ಪಿತೃದೇವತೆಗಳು ನಮಗೆ ಏಕೆ ಕಾಣಿಸುವುದಿಲ್ಲ? ದೃಗ್ಗೋಚರವಾಗದಿರಲು ಕಾರಣವೇನು? ಸ್ವರ್ಗಲೋಕದಲ್ಲಿ ವಾಸಿಸುವ ಪಿತೃದೇವತಗಳು ಯಾರು? ನರಕದಲ್ಲಿ ವಾಸಿಸುವವರು ಯಾರು? ಹೀಗಾಗಲು ಕಾರಣವೇನು ಎಂದರು?

೧೦. ಪಿತೃದೇವತೆಗಳನ್ನು ಹೇಗೆ ಆವಾಹನೆ ಮಾಡಬೇಕು? ಅವರಲ್ಲಿ ಪಿತೃಗಳು ಯಾರು? ಪಿತಾಮಹಂದರು ಯಾರು? ಅವರ ತಂದೆಯಾದ ಪ್ರಪಿತಾಮಹಂದಿರು ಯಾರು? ಈ ಪಿತೃ ಪಿತಾಮಹ ಪ್ರಪಿತಾಮಹಂದಿರನ್ನು ಯಾವ ಯಾವ ಪಿಂಡಗಳಲ್ಲಿ ಹೇಗೆ ಆವಾಹನೆ ಮಾಡಬೇಕು? ಅದರ ಕ್ರಮವು ಆವುದು? ವಿಧಾನವು ಎಂತಹುದು? ಇವುಗಳನ್ನು ತಿಳಿಸಬೇಕೆಂದು ಕೇಳಿದರು

೧೧. ಶ್ರಾದ್ಧಕಾಲದಲ್ಲಿ ಯಾವ ಪದಾರ್ಥಗಳನ್ನು ಕೊಡಬೇಕು? ಆ ವಸ್ತುಗಳು ಅವರಿಗೆ ಹೇಗೆ ಹೋಗಿ ಸೇರುತ್ತವೆ? ನರಕದಲ್ಲಿರುವ ಆ ಪಿತೃದೇವತೆಗಳು ಅಶಕ್ತರಾದುದರಿಂದ ಅವರು ಫಲವನ್ನು ಕೊಡಲು ಹೇಗೆ ಶಕ್ತರಾಗುವರು? ಅಂತಹವರಿಗೆ ದಾನವನ್ನು ಕೊಟ್ಟು ಪ್ರಯೋಜನವೇನೆಂದು ಕೇಳಿದನು.

**ಕೇ ಚೇಹ ಪಿತರೋ ನಾಮ ಕಾನ್ ಯಜಾಮೋ ವಯಂ ಪುನಃ ।**
**ದೇವಾ ಅಪಿ ಪಿತೄನ್ ಸ್ವರ್ಗೇ ಯಜಂತೀತಿ ಹಿ ನಃ ಶ್ರುತಂ ॥ ೧೨ ॥**

**ಏತದಿಚ್ಛಾಮಿ ವೈ ಶ್ರೋತುಂ ವಿಸ್ತರೇಣ ಬಹುಶ್ರುತ ।**
**ಸ್ಪಷ್ಟಾಭಿಧಾನಮರ್ಥಂ ವೈ ತದ್ಭವಾನ್ವಕ್ತುಮರ್ಹತಿ ॥ ೧೩ ॥**

**ಋಷೀಣಾಂ ತು ವಚಃ ಶ್ರುತ್ವಾ ಸೂತಸ್ತತ್ತ್ವಾರ್ಥದರ್ಶಿವಾನ್ ।**
**ಆಚಚಕ್ಷೇ ಯಥಾಪ್ರಶ್ನಂ ಋಷೀಣಾಂ ಮಾನಸಂ ತತಃ ॥ ೧೪ ॥**

**॥ ಸೂತ ಉವಾಚ ॥**

**ಅತ್ರ ವೋ ವರ್ಣಯಿಷ್ಯಾಮಿ ಯಥಾಪ್ರಜ್ಞಂ ಯಥಾ ಶ್ರುತಂ ।**
**ಮನ್ವಂತರೇಷು ಜಾಯಂತೇ ಪಿತರೋ ದೇವಸೂನವಃ ॥ ೧೫ ॥**

---

೧೨ ಪಿತೃದೇವತೆಗಳೆಂದರೆ ಯಾರು ? ಅವರ ಲಕ್ಷಣಗಳಾವುವು ? ನಾವು ಯಾರನ್ನು ಪೂಜಿಸಬೇಕು ? ಸ್ವರ್ಗಲೋಕದಲ್ಲಿ ದೇವತೆಗಳೂ ಕೂಡ ಪಿತೃಗಳನ್ನು ಪೂಜಿಸುವರೆಂದು ನಾವು ಕೇಳಿರುತ್ತೇವೆ ಅದು ಹೇಗೆ ಸಂಭವಿಸುತ್ತದೆ ?

೧೩ ಎಲೈ ಜ್ಞಾನಿಯಾದ ಸೂತಪುರಾಣೀಕನೇ, ಇವುಗಳನ್ನು ಕ್ರಮವಾಗಿಯೂ ವಿಸ್ತಾರವಾಗಿಯೂ ಕೇಳಲು ಬಯಸುತ್ತೇವೆ ಮೇಲೆ ಹೇಳಿದ ವಿಷಯಗಳನ್ನು ಸ್ಪಷ್ಟವಾಗಿ ನಿರೂಪಿಸಲು ನೀನು ಅತಿಸಮರ್ಥನಾಗಿರುತ್ತೀಯೆ. ಆದುದರಿಂದ ಇವುಗಳನ್ನು ವಿವರಿಸಬೇಕೆಂದು ಕೇಳಿದರು.

೧೪. ತತ್ವಜ್ಞಾನಿಯಾದ ಸೂತಮುನಿಯು ಮಹಾತ್ಮರಾದ ಮುನಿಗಳ ವಾಕ್ಯಗಳನ್ನು ಕೇಳಿ ಸಂತುಷ್ಟನಾಗಿ, ಮಹರ್ಷಿಗಳ ಮನೋಭಿಪ್ರಾಯವನ್ನು ತಿಳಿದು, ಪ್ರಶ್ನಾನುಗುಣವಾಗಿ ಉತ್ತರವನ್ನು ಹೇಳಲುಪಕ್ರಮಿಸಿದನು

೧೫. ಸೂತಮುನಿಯು ಹೇಳಿದನು .— ಎಲೈ ಮುನಿವರ್ಯರೇ, ನೀವು ಕೇಳಿದ ವಿಷಯಗಳನ್ನು ನಾನು ಕೇಳಿ ಕ್ರಮವಾಗಿ ತಿಳಿದಿರುವಂತೆ ವಿಷಯಗಳನ್ನು ನಿಮಗಾಗಿ ತಿಳಿಸುವೆನು ಕೇಳಿರಿ. ಆ ಪಿತೃದೇವತೆಗಳು ಮನ್ವಂತರಗಳಲ್ಲಿ ದೇವತೆಗಳಿಗೆ ಕುಮಾರರಾಗಿ ಹುಟ್ಟುವರು ದೇವಪುತ್ರರಾಗುವರು. ಅವರಿಗೆ ಮಕ್ಕಳಾಗಿ ಜನಿಸುವರು.

ಅತೀತಾನಾಗತೇ ಜ್ಯೇಷ್ಠಾಃ ಕನಿಷ್ಠಾಃ ಕ್ರಮಶಸ್ತು ತೇ ।
ದೇವೈಃ ಸಾರ್ಧ್ಧಂ ಪುರಾತೀತಾಃ ಪಿತರೋ ಯೇಽಂತರೇಷು ವೈ ॥
ವರ್ತಂತೇ ಸಾಂಪ್ರತಂ ಯೇ ತು ತಾನ್ವೈ ವಕ್ಷ್ಯಾಮಿ ನಿಶ್ಚಯಾತ್ ॥ ೧೬ ॥

ಶ್ರಾದ್ಧಂ ಚೈಷಾಂ ಮನುಷ್ಯಾಣಾಂ ಶ್ರಾದ್ಧಮೇವ ಪ್ರವರ್ತತೇ ।
ದೇವಾನಸೃಜತ ಬ್ರಹ್ಮಾ ನಾಯಕ್ಷನ್ನಿತಿ ವೈ ಪುನಃ ॥
ತಮುತ್ಸೃಜ್ಯ ತದಾತ್ಮಾನಮಸೃಜಂಸ್ತೇ ಫಲಾರ್ಥಿನಃ ॥ ೧೭ ॥

ತೇ ಶಪ್ತಾ ಬ್ರಹ್ಮಣಾ ಮೂಢಾ ನಷ್ಟಸಂಜ್ಞಾ ಭವಿಷ್ಯಥ ।
ನ ಸ್ಮ ಕಿಂಚಿದ್ವಿಜಾನಂತಿ ತತೋ ಲೋಕೋ ಹ್ಯಮುಹ್ಯತ ॥ ೧೮ ॥

---

೧೬. ಅತೀತವಾದ ಸ್ವಾಯಂಭುವಾದಿ ಮನ್ವಂತರಗಳಲ್ಲಿದ್ದು ಕಳೆದುಹೋದ ಪಿತೃದೇವತೆಗಳು ಅನಾಗತವಾದ ಮುಂದೆ ಬರುವ ಮನ್ವಂತರಗಳಲ್ಲಿ ಬರುವ ಪಿತೃದೇವತೆಗಳಿಗಿಂತಲೂ ಜ್ಯೇಷ್ಠರೂ ಹಿರಿಯರೂ ಆಗಿರುವರು ಮುಂದಿನ ಮನ್ವಂತರಗಳಲ್ಲಿ ಜನಿಸುವ ಪಿತೃಗಳು ಕನಿಷ್ಠರಾಗಿರುವರು. ಇತರ ಮನ್ವಂತರಗಳಲ್ಲಿ ಜನಿಸಿ ದೇವತೆಗಳ ಸಂಗಡ ಕಳೆದುಹೋದವರೇ ಜ್ಯೇಷ್ಠರಾಗಿರುವರು ಈ ವೈವಸ್ವತಮನ್ವಂತರದಲ್ಲಿ ಯಾವ ದೇವತೆಗಳಿರುವರೋ ಅವರನ್ನು ಕ್ರಮವಾಗಿ ನಿರೂಪಿಸುವೆನು ಕೇಳಿರೆಂದನು

೧೭. ಅಂತಹ ಪಿತೃಗಳಿಗೋಸ್ಕರ ಮನುಷ್ಯರು ಶ್ರಾದ್ಧವನ್ನು ಮಾಡಬೇಕು. ಶ್ರದ್ಧೆಯಿಂದ ಪಿತೃಗಳಿಗೆ ಕೊಡತಕ್ಕುದ್ದೇ ಶ್ರಾದ್ಧವಾಗಿದೆ. ಬ್ರಹ್ಮದೇವನು ಮೊದಲು ದೇವತೆಗಳನ್ನು ಸೃಷ್ಟಿಮಾಡಿದನು ಅವರು ನಿಷ್ಕಾಮಿಗಳಾಗಿ ಫಲಾಪೇಕ್ಷಯಿಲ್ಲದೇ ಯಜ್ಞಯಾಗಾದಿ ಕರ್ಮವನ್ನು ಮಾಡಲಿಲ್ಲ. ತರುವಾಯ ಬ್ರಹ್ಮನು ಅವರನ್ನು ತ್ಯಜಿಸಿ, ಯೋಗಾರೂಢನಾಗಿ ಫಲಾಕಾಂಕ್ಷಿಗಳಾದ ಬೇರೆ ದೇವತೆಗಳನ್ನು ಸೃಷ್ಟಿ ಮಾಡಿದನು.

೧೮. ತರುವಾಯ ಬ್ರಹ್ಮನು ಮೊದಲು ಹುಟ್ಟಿದ ನಿಸ್ಪೃಹರಾದ ದೇವತಗಳಿಗೆ ಶಾಪವನ್ನು ಕೊಟ್ಟನು. ನೀವು ನನ್ನಮಾತಿಗೆ ವಿರೋಧಿಗಳಾಗಿರುವುದರಿಂದ ಮುಹಾತ್ಮರಾಗಿರಿ. ನಿಮ್ಮ ಜ್ಞಾನವು ನಷ್ಟವಾಗಲಿ ಎಂದು ಶಾಪವನ್ನು ಕೊಟ್ಟನು. ಅನಂತರ ಅವರಿಗೆ ಏನೂ ತಿಳಿಯದೇಹೋಯಿತು ತರುವಾಯ ಲೋಕವೆಲ್ಲ ಅಜ್ಞಾನದಿಂದ ಆವೃತವಾಯಿತು.

**ತೇ ಭೂಯಃ ಪ್ರಣತಾಃ ಸರ್ವೇ ಯಾಚಂತಿ ಸ್ಮ ಪಿತಾಮಹಂ ।**
**ಅನುಗ್ರಹಾಯ ಲೋಕಾನಾಂ ಪುನಸ್ತಾನಬ್ರವೀತ್ಪ್ರಭುಃ ॥ ೧೯ ॥**

**ಪ್ರಾಯಶ್ಚಿತ್ತಂ ಚರಧ್ವಂ ವೈ ವ್ಯಭಿಚಾರೋ ಹಿ ಯಃ ಕೃತಃ ।**
**ಪುತ್ರಾನ್ಸ್ವಾನ್ಪರಿಪೃಚ್ಛಧ್ವಂ ತತೋ ಜ್ಞಾನಮವಾಪ್ಸ್ಯಥ ॥ ೨೦ ॥**

**ತತಸ್ತೇ ಸ್ವಾನ್ಸುತಾಂಶ್ಚೈವ ಪ್ರಾಯಶ್ಚಿತ್ತಜಿಘೃಕ್ಷವಃ ।**
**ಅಪೃಚ್ಛನ್ ಸಂಯತಾತ್ಮಾನೋ ವಿಧಿವಚ್ಚ ಮಿಥೋ ಮಿಥಃ ॥ ೨೧ ॥**

**ತೇಭ್ಯಸ್ತೇ ನಿಯತಾತ್ಮಾನಃ ಪುತ್ರಾಃ ಶಂಸುರನೇಕಧಾ ।**
**ಪ್ರಾಯಶ್ಚಿತ್ತಾನಿ ಧರ್ಮಜ್ಞಾ ವಾಙ್ಮನಃ ಕರ್ಮಜಾನಿ ತು ॥ ೨೨ ॥**

---

೧೯. ತರುವಾಯ ಆ ದೇವತೆಗಳೆಲ್ಲರೂ ಬ್ರಹ್ಮದೇವನಿಗೆ ನಮಸ್ಕರಿಸಿ ಬೇಡಿಕೊಂಡರು ಎಲೈ ಪಿತಾಮಹನೇ, ಅನುಗ್ರಹವಮಾಡಬೇಕು ನಾವು ಜ್ಞಾನಶೂನ್ಯರಾಗಿರುವೆವು ಎಂದು ಪ್ರಾರ್ಥಿಸಿದರು. ಆಗ ಬ್ರಹ್ಮನು ಅವರಿಗೆ ಇಂತೆಂದನು.

೨೦. ಎಲೈ ದೇವತೆಗಳಿರಾ, ನೀವು ಮಾಡಿದ ಅಪರಾಧಕ್ಕೆ ಪ್ರಾಯಶ್ಚಿತ್ತವನ್ನು ಮಾಡಿಕೊಳ್ಳಿರಿ. ಪ್ರಾಯಶ್ಚಿತ್ತದಿಂದ ಅಪರಾಧವು ಪರಿಹಾರವಾಗುವುದು. ಆ ಪ್ರಾಯಶ್ಚಿತ್ತವು ಯಾವುದೆಂದರೆ ನೀವು ಜ್ಞಾನಿಗಳಾದ ನಿಮ್ಮ ಪುತ್ರರನ್ನು ಕೇಳಿರಿ. ಅವರು ನಿಮಗೆ ಜ್ಞಾನೋಪದೇಶವನ್ನು ಮಾಡುವರು ಅದರಿಂದ ನೀವು ದಿವ್ಯಜ್ಞಾನಿಗಳಾಗುವರೆಂದು ಬ್ರಹ್ಮನು ಅವರಿಗೆ ವರವನ್ನು ಕೊಟ್ಟನು

೨೧. ಅನಂತರ ಆ ದೇವತೆಗಳು ಬ್ರಹ್ಮದೇವನ ಆಜ್ಞೆಯಂತೆ ಪ್ರಾಯಶ್ಚಿತ್ತಗ್ರಹಣಕ್ಕಾಗಿ ಸಮಾಧಾನಮನಸ್ಕರೂ, ಜಿತೇಂದ್ರಿಯರೂ ಆಗಿ ವಿಧ್ಯುಕ್ತಪ್ರಕಾರವಾಗಿ ತಮ್ಮ ತಮ್ಮ ಪುತ್ರರನ್ನು ಪರಮತತ್ವಾರ್ಥಗಳನ್ನು ಕೇಳಿದರು

೨೨. ಮಹಾಜ್ಞಾನಿಗಳೂ, ನಿಯತಾತ್ಮರೂ, ಧರ್ಮಜ್ಞರೂ ಆದ ಆ ಪುತ್ರರಾದ ದೇವತೆಗಳು ತಮ್ಮ ತಂದೆಯವರಿಗೆ ವಾಕ್ಕು ಮನಸ್ಸು ಮತ್ತು ಕಾಯಕಗಳು ಈ ವಿಷಯಕವಾದ ಪ್ರಾಯಶ್ಚಿತ್ತಗಳನ್ನು ವಿಸ್ತಾರವಾಗಿಯೂ ಸಾಂಗವಾಗಿಯೂ ಹೇಳಿದರು.

**ತೇ ಪುತ್ರಾನಬ್ರುವನ್ಪ್ರೀತಾ ಲಬ್ಧಸಂಜ್ಞಾ ದಿವೌಕಸಃ ।**
**ಯೂಯಂ ವೈ ಪಿತರೋಽಸ್ಮಾಕಂ ಯೇ ವಯಂ ಪ್ರತಿಬೋಧಿತಾಃ ॥**
**ಧರ್ಮಜ್ಞಾನಂ ಚ ಕಾಮಶ್ಚ ಕೋ ವರೋ ವಃ ಪ್ರದೀಯತಾಂ ॥ ೨೩ ॥**

**ಪುನಸ್ತಾನಬ್ರವೀದ್ಬ್ರಹ್ಮಾ ಯೂಯಂ ವೈ ಸತ್ಯವಾದಿನಃ ।**
**ತಸ್ಮಾದ್ಯದುಕ್ತಂ ಯುಷ್ಮಾಭಿಸ್ತತ್ತಥಾ ನ ತದನ್ಯಥಾ ॥ ೨೪ ॥**

**ಉಕ್ತಂ ಚ ಪಿತರೋಽಸ್ಮಾಕಮಿತಿ ವೈ ತನಯಾಃ ಸ್ವಕಾಃ ।**
**ಪಿತರಸ್ತೇ ಭವಿಷ್ಯಂತಿ ತೇಭ್ಯೋಽಯಂ ದೀಯತಾಂ ವರಃ ॥ ೨೫ ॥**

**ತೇನೈವ ವಚಸಾ ಪುತ್ರಾ ಬ್ರಹ್ಮಣಃ ಪರಮೇಷ್ಠಿನಃ ।**
**ಪುತ್ರಾಃ ಪಿತೃತ್ವಮಾಜಗ್ಮುಃ ಪುತ್ರತ್ವಂ ಪಿತರಂ ಪುನಃ ॥ ೨೬ ॥**

---

೨೩. ತರುವಾಯ ಜ್ಞಾನೋದಯವಾದಂಥಹ ದೇವತೆಗಳು ಅತ್ಯಂತ ಪ್ರೀತರಾಗಿ, ತಮ್ಮ ಪುತ್ರರನ್ನು ಕುರಿತು ನೀವೇ ನಮಗೆ ಜ್ಞಾನೋಪದೇಶವನ್ನು ಮಾಡಿರುವುದರಿಂದ ಗುರುಗಳಾಗಿರುವಿರಿ ನಿಮಗೆ ನಾವು ಪುತ್ರರಾಗಿರುವೆವು. ಧರ್ಮ, ಜ್ಞಾನ, ಕಾಮ ಇವುಗಳಲ್ಲಿ ಯಾವ ವರಗಳು ನಿಮಗೆ ಬೇಕಾಗಿರುವುದು ಎಂದು ಕೇಳಿದರು.

೨೪. ಅನಂತರ ಬ್ರಹ್ಮದೇವನು ಆ ದೇವತೆಗಳನ್ನು ಕುರಿತು—ನೀವು ಸತ್ಯವಾದಿಗಳು. ನೀವು ಯಾವ ಮಾತುಗಳನ್ನು ನಿಮ್ಮ ಪುತ್ರರ ವಿಷಯದಲ್ಲಿ ಹೇಳಿದರೋ ಅದು ಹಾಗೆಯೇ ಆಗಲಿ. ಅನ್ಯಥಾ ಆಗದಿರಲಿ. ನಿಜವಾಗಲೆಂದು ಹೇಳಿದನು.

೨೫. ಎಲೈ ದೇವತೆಗಳಿರಾ, ನೀವು ನಿಮ್ಮ ಕುಮಾರರನ್ನು ಪಿತೃಗಳಂತೆ ಜ್ಞಾನವೃದ್ಧರಾಗಿರುವುದರಿಂದ ಪಿತೃಗಳೆಂದು ಹೇಳಿದ ಮಾತು ಸತ್ಯವಾಗಲಿ. ಅವರೇ ಪಿತೃದೇವತೆಗಳಾಗುವಂತೆ ವರವನ್ನು ಕೊಡಿರೆಂದು ಬ್ರಹ್ಮನು ಹೇಳಿದನು.

೨೬. ಪರಮೋತ್ತಮನಾದ ಆ ಬ್ರಹ್ಮದೇವನ ವರಗಳಿಂದಲೇ ಪುತ್ರರಾದ ದೇವತೆಗಳು ಪಿತೃದೇವತೆಗಳಾದರು ಆಗ ಪುತ್ರರು ಪಿತೃಗಳಾದರು , ಉಪದೇಶಕರಾದರು ; ಪಿತೃಗಳು ಉಪದೇಶ್ಯರಾದರು. ಅಂದರೆ ಶಿಷ್ಯರಾದರು.

ತಸ್ಮಾತ್ತೇ ಪಿತರಃ ಪುತ್ರಾಃ ಪಿತೃತ್ವೇ ತೇಷು ತತ್ಸ್ಮೃತಂ ।
ಏವಂ ಸ್ಮೃತ್ವಾ ಪಿತೄರ್ನ್ ಪಿತ್ರಾನ್ಸ್ವಪುತ್ರಾಶ್ಚ ಪಿತರಸ್ತಥಾ ॥
ವ್ಯಾಜಹಾರ ಪುನರ್ಬ್ರಹ್ಮಾ ಪಿತೄನಾತ್ಮವಿವೃದ್ಧಯೇ ॥ ೨೭ ॥

ಯೋ ಹ್ಯನಿಷ್ಟ್ವಾ ಪಿತೄಂಚ್ಛ್ರಾದ್ಧೇ ಕ್ರಿಯಾಂ ಕಾಂಚಿತ್ಕರಿಷ್ಯತಿ ।
ರಾಕ್ಷಸಾ ದಾನವಾಶ್ಚೈವ ಫಲಂ ಪ್ರಾಪ್ಸ್ಯಂತಿ ತಸ್ಯ ತತ್ ॥ ೨೮ ॥

ಶ್ರಾದ್ಧೈರಾಪ್ಯಾಯಿತಾಶ್ಚೈವ ಪಿತರಃ ಸೋಮಮವ್ಯಯಂ ।
ಆಪ್ಯಾಯ್ಯಮಾನಾ ಯುಷ್ಮಾಭಿರ್ವರ್ಧಯಿಷ್ಯಂತಿ ನಿತ್ಯಶಃ ॥ ೨೯ ॥

ಶ್ರಾದ್ಧೈರಾಪ್ಯಾಯಿತಃ ಸೋಮೋ ಲೋಕಾನಾಪ್ಯಾಯಯಿಷ್ಯತಿ ।
ಕೃತ್ಸ್ನಂ ಸಪರ್ವತವನಂ ಜಂಗಮಾಜಂಗಮೈರ್ವೃತಂ ॥ ೩೦ ॥

---

೨೭. ಆದುದರಿಂದ ಆ ಪಿತೃಗಳು ಪುತ್ರರಾಗಿಯೂ, ಪುತ್ರರು ಪಿತೃಗಳಾಗಿಯೂ ಪ್ರಖ್ಯಾತರಾದರು ಮತ್ತು ಬ್ರಹ್ಮದೇವನು ಮಕ್ಕಳನ್ನು ತಂದೆಯನ್ನಾಗಿಯೂ, ತಂದೆಯವರನ್ನು ಮಕ್ಕಳನ್ನಾಗಿಯೂ ವ್ಯವಹಾರಮಾಡಿದನು. ಇದರಿಂದ ಉಭಯರಿಗೂ ಕ್ಷೇಮವಾಯಿತು

೨೮ ಯಾವ ಪುರುಷನು ಈ ಪಿತೃದೇವತೆಗಳಿಗೆ ಪೂಜೆಯನ್ನು ಮಾಡದೆ ಶ್ರಾದ್ಧದಲ್ಲಿ ಯಾವ ಕೆಲಸವನ್ನು ಮಾಡುವನೋ, ಅವನು ಮಾಡಿದ ಆ ಶ್ರಾದ್ಧ ಕರ್ಮಗಳ ಫಲಗಳೆಲ್ಲವೂ ರಾಕ್ಷಸರಿಗೂ ದಾನವರಿಗೂ ಹೋಗುವುವು. ತಮ್ಮ ಪಿತೃಗಳಿಗೆ ಹೋಗಿ ಸೇರುವುದಿಲ್ಲ. ವ್ಯರ್ಥವಾಗುವುದು

೨೯. ಎಲೈ ಮುನಿವರ್ಯರೇ, ನೀವು ಶ್ರಾದ್ಧಕರ್ಮದಲ್ಲಿ ಪಿತೃದೇವತೆಗಳಿಗೆ ತೃಪ್ತಿಯನ್ನುಂಟುಮಾಡಿದರೆ, ತೃಪ್ತರಾದ ಆ ದೇವತೆಗಳು ತಾವು ಪೂರ್ಣರಾಗಿ, ನಾಶರಹಿತನಾದ ಸೋಮದೇವನನ್ನು (ಕ್ಷೀಣನಾದ ಚಂದ್ರನನ್ನು) ನಿತ್ಯವೂ ವೃದ್ಧಿಗೊಳಿಸುವರು

೩೦. ಹೀಗೆ ಶ್ರಾದ್ಧಗಳಿಂದ ಪ್ರೀತರಾದ ದೇವತೆಗಳು ಸೋಮದೇವನನ್ನು ಪ್ರೀತಿಸುವರು. ಹೀಗೆ ಪ್ರೀತನಾದ ಸೋಮನು (ಚಂದ್ರನು) ಚರಾಚರಾತ್ಮಕವೂ, ಪರ್ವತವನಗಳಿಂದ ಸಹಿತವೂ ಆದ ಸಮಸ್ತ ಲೋಕಗಳನ್ನು ತೃಪ್ತಿಗೊಳಿಸುವನು. ಆನಂದಗೊಳಿಸುವನು

**ಶ್ರಾದ್ಧಾನಿ ಪುಷ್ಟಿ ಕಾಮಾಶ್ಚ ಯೇ ಕರಿಷ್ಯಂತಿ ಮಾನವಾಃ ।**
**ತೇಭ್ಯಃ ಪುಷ್ಟಿಂ ಪ್ರಜಾಶ್ಚೈವ ದಾಸ್ಯಂತಿ ಪಿತರಃ ಸದಾ ॥ ೩೧ ॥**

**ಶ್ರಾದ್ಧೇ ಯೇಭ್ಯಃ ಪ್ರದಾಸ್ಯಂತಿ ತ್ರೀನ್ ಪಿಂಡಾನ್ನಾಮಗೋತ್ರತಃ ।**
**ಸರ್ವತ್ರ ವರ್ತಮಾನಾಸ್ತೇ ಪಿತರಃ ಪ್ರಪಿತಾಮಹಂ ॥**
**ತೇಷಾಮಾಪ್ಯಾಯಯಿಷ್ಯಂತಿ ಶ್ರಾದ್ಧದಾನೇನ ವೈ ಪ್ರಜಾಃ ॥ ೩೨ ॥**

**ಏವಮಾಜ್ಞಾ ಕೃತಾ ಪೂರ್ವಂ ಬ್ರಹ್ಮಣಾ ಪರಮೇಷ್ಠಿನಾ ।**
**ತೇನೈತತ್ಸರ್ವಥಾ ಸಿದ್ಧಂ ದಾನಮಧ್ಯಯನಂ ತಪಃ ॥ ೩೩ ॥**

---

೩೧. ಐಶ್ವರ್ಯಾಕಾಂಕ್ಷಿಗಳಾದ ಯಾವ ಪುರುಷರು ಶ್ರಾದ್ಧಕರ್ಮಗಳಲ್ಲಿ ಪಿತೃಗಳಿಗೆ ತೃಪ್ತಿಯನ್ನುಂಟುಮಾಡುತ್ತಾರೋ, ಪ್ರೀತರಾದ ಪಿತೃಗಳು ಅಂತಹ ಪುರುಷರಿಗೆ ಸರ್ವಕಾಲದಲ್ಲಿಯೂ ಧನಧಾನ್ಯ ಪುತ್ರಸಂತಾನಾದಿ ಸಕಲೈಶ್ವರ್ಯಗಳನ್ನೂ ಕೊಡುವರೆಂದು ಹೇಳಿದನು.

೩೨. ಮನುಷ್ಯರು ಶ್ರಾದ್ಧಕರ್ಮಗಳಲ್ಲಿ ನಾಮಗೋತ್ರಗಳನ್ನು ಉಚ್ಚರಿಸಿ, ಪಿತೃ ಪಿತಾಮಹ ಪ್ರಪಿತಾಮಹಂದರಿಗೆ ಭಕ್ತಿಯಿಂದ ಕ್ರಮವಾಗಿ ಒಬ್ಬೊಬ್ಬರಿಗೆ ಒಂದೊಂದು ಪಿಂಡದಂತೆ ಮೂರು ಪಿಂಡಗಳನ್ನು ದಾನಮಾಡುತ್ತಾರೆಯೋ, ಅಂತಹ ಮನುಷ್ಯರ ತಂದೆ ತಾತ ಮುತ್ತಾತಂದಿರು ಇವರು ಯಾವ ಲೋಕದಲ್ಲಿ ಯಾವ ಜಾತಿಯಲ್ಲಿ ಹುಟ್ಟಿದ್ದರೂ ಅವರಿಗೆ ಸರ್ವತ್ರ ವ್ಯಾಪ್ತರಾದ ಪಿತೃದೇವತೆಗಳು ಬೇಕಾಗುವ ತೃಪ್ತಿಕರವಾದ ಪದಾರ್ಥಗಳನ್ನು ಒದಗಿಸಿಕೊಟ್ಟು ಸಂತೋಷವನ್ನುಂಟುಮಾಡುವರು. ಇದರಲ್ಲಿ ಸಂದೇಹಪಡಬೇಕಾಗಿಲ್ಲ.

೩೩. ಪರಮಪದವಿಯಲ್ಲಿರತಕ್ಕ ಬ್ರಹ್ಮದೇವನು ಪೂರ್ವದಲ್ಲಿ ಹೀಗೆ ಅಜ್ಞೆಯನ್ನು ಮಾಡಿರುವನು. ಮತ್ತು ಶ್ರಾದ್ಧಕರ್ಮಗಳನ್ನು ಭಕ್ತಿಯಿಂದ ನಡೆಸಿದ ಪುರುಷರಿಗೆ ದಾನಮಾಡುವ ಐಶ್ವರ್ಯ, ಅಧ್ಯಯನ, ತಪಸ್ಸು ಇವೇ ಮೊದಲಾದ ಸಕಲೇಷ್ಟಾರ್ಥಗಳೂ ಸಿದ್ಧವಾಗುವುವು ಎಂದು ಹೇಳಿದನು.

ತೇ ತು ಜ್ಞಾನಪ್ರದಾತಾರಃ ಪಿತರೋ ವೋ ನ ಸಂಶಯಃ ।
ಇತ್ಯೇತೇ ಪಿತರೋ ದೇವಾ ದೇವಾಶ್ಚ ಪಿತರಃ ಪುನಃ ॥
ಅನ್ಯೋನ್ಯಂ ಪಿತರೋ ಹ್ಯೇತೇ ದೇವಾಶ್ಚ ಪಿತರಶ್ಚ ಹ ॥ ೩೪ ॥

ಏತದ್ಬ್ರಹ್ಮವಚಃ ಶ್ರುತ್ವಾ ಸೂತಸ್ಯ ವಿಹಿತಾತ್ಮನಃ ।
ಪಪ್ರಚ್ಛುರ್ಮುನಯೋ ಭೂಯಃ ಸೂತಂ ತಸ್ಮಾದ್ಯದುತ್ತರಂ ॥ ೩೫ ॥

॥ ಋಷಯ ಊಚುಃ ॥

ಕಿಯಂತೋ ವೈ ಪಿತೃಗಣಾಃ ಕಸ್ಮಿಂಕಾಲೇ ಚ ತೇ ಗಣಾಃ ।
ವರ್ತಂತೇ ದೇವಪ್ರವರಾ ದೇವಾನಾಂ ಸೋಮವರ್ಧನಾಃ ॥ ೩೬ ॥

॥ ಸೂತ ಉವಾಚ ॥

ಏತದ್ವೋಽಹಂ ಪ್ರವಕ್ಷ್ಯಾಮಿ ಪಿತೃಸರ್ಗಮನುತ್ತಮಂ ।
ಶಂಯುಃ ಪಪ್ರಚ್ಛ ಯತ್ಪೂರ್ವಂ ಪಿತರಂ ವೈ ಬೃಹಸ್ಪತಿಂ ॥ ೩೭ ॥

---

೩೪ ಅಂತಹ ಪಿತೃದೇವತೆಗಳು ನಮಗೆ ನಿಜವಾಗಿಯೂ ಜ್ಞಾನಧಾತೃಗಳಾಗಿರುವರು ಈ ವಿಷಯದಲ್ಲಿ ಸಂದೇಹವೇ ಇಲ್ಲ ಹೀಗೆ ಮೇಲೆ ನಿರೂಪಿಸಿದ ಪಿತೃಗಳೇ ದೇವತೆಗಳಾಗಿಯೂ, ದೇವತೆಗಳೇ ಪಿತೃಗಳಾಗಿಯೂ ,ಇರುವರು ಆದುದರಿಂದ ಅವರಿಬ್ಬರಿಗೂ ಅನ್ಯೋನ್ಯವಾಗಿ ಏಕರೂಪತೆಯಿರುವುದು. ಒಬ್ಬರಿಗೆ ಪೂಜೆಮಾಡಿದರೆ ಮತ್ತೊಬ್ಬರು ತೃಪ್ತರಾಗುವರು

೩೫. ಹೀಗೆ ಬ್ರಹ್ಮದೇವನು ಪಿತೃಗಳಿಗೆ ವರಗಳನ್ನು ಕೊಟ್ಟನೆಂಬ ಬ್ರಹ್ಮ ವಚನವನ್ನು ಸೂತರು ಕೇಳಿ ಹೇಳಲು, ಅದನ್ನು ಕೇಳಿದ ಮಹರ್ಷಿಗಳು ಸಂತೋಷಗೊಂಡು ಪುನಃ ಸೂತರನ್ನು ಕೇಳಿದರು

೩೬. ಮುನಿಗಳು ಹೇಳಿದರು :—ಎಲೈ ಸೂತಮುನಿಯೇ, ಆ ಪಿತೃಗಣಗಳು ಎಷ್ಟು ಇವೆ? ಮತ್ತು ದೇವೋತ್ತಮರೂ ಸೋಮವರ್ಧಕರೂ ಆದ ಆ ಪಿತೃದೇವತೆಗಳು ಯಾವಕಾಲದಲ್ಲಿ ಇರುವರು ? ಇವುಗಳನ್ನು ತಿಳಿಸಬೇಕೆಂದು ಕೇಳಿದರು.

೩೭ ಸೂತಮುನಿಯು ಹೇಳಿದನು .—ಎಲೈ ಮುನಿವರ್ಯರೇ, ಪೂರ್ವಕಾಲದಲ್ಲಿ ಶಂಯುಮುನಿಯು ತಮ್ಮ ತಂದೆಯಾದ ಬೃಹಸ್ಪತಿಗಳನ್ನು ಯಾವ ಪ್ರಶ್ನೆಯನ್ನು ಕೇಳಿದರೋ ಆ ವಿಷಯಗಳನ್ನೇ ನೀವು ಕೇಳಿರುತ್ತೀರಿ. ಅಂತಹ ಅತ್ಯುತ್ತಮವಾದ ಪಿತೃಗಳ ಸೃಷ್ಟಿಕ್ರಮವನ್ನು ನಿಮಗಾಗಿ ನಿರೂಪಿಸಿರುವೆನು ಕೇಳಿರೆಂದನು.

ಬೃಹಸ್ಪತಿಮುಪಾಸೀನಂ ಸರ್ವಜ್ಞಾನಾರ್ಥಕೋವಿದಂ ।
ಪುತ್ರಃ ಶಂಯುರಿಮಂ ಪ್ರಶ್ನಂ ಪಪ್ರಚ್ಛ ವಿನಯಾನ್ವಿತಃ ॥ ೩೮ ॥

ಕ ಏತೇ ಪಿತರೋ ನಾಮ ಕಿಯಂತಃ ಕೇ ಚ ನಾಮತಃ ।
ಸಮುದ್ಭೂತಾಃ ಕಥಂ ಚೈತೇ ಪಿತೃತ್ವಂ ಸಮುಪಾಗತಾಃ ॥ ೩೯ ॥

ಕಸ್ಮಾಚ್ಚ ಪಿತರಂ ಪೂರ್ವಂ ಯಜ್ಞೇ ಯುಜ್ಯಂತಿ ನಿತ್ಯಶಃ ।
ಕ್ರಿಯಾಶ್ಚ ಸರ್ವಾ ವರ್ತಂತೇ ಶ್ರಾದ್ಧಪೂರ್ವಾ ಮಹಾತ್ಮನಾಂ ॥ ೪೦ ॥

ಸ್ಮೈ ಕ್ಯ ಶ್ರಾದ್ಧಾನಿ ದೇಯಾನಿ ಕಿಂಚ ದತ್ತಂ ಮಹಾಫಲಂ ।
ಕೇಷು ವಾಪ್ಯಕ್ಷಯಂ ಶ್ರಾದ್ಧಂ ತೀರ್ಥೇಷು ಚ ನದೀಷು ಚ ॥ ೪೧ ॥

ಕೇಷು ವೈ ಸರ್ವಮಾಪ್ನೋತಿ ಶ್ರಾದ್ಧಂ ಕೃತ್ವಾ ದ್ವಿಜೋತ್ತಮಃ ।
ಕಶ್ಚ ಕಾಲೋ ಭವೇಚ್ಛ್ರಾದ್ಧೇ ವಿಧಿಃ ಕಶ್ಚಾನುವರ್ತತೇ ॥ ೪೨ ॥

---

೩೮. ಕುಮಾರನಾದ ಶಂಯುಮುನಿಯು ವಿನಯೋಪೇತನಾಗಿ, ಸಮಸ್ತ ಶಾಸ್ತ್ರಾರ್ಥತತ್ವಜ್ಞನೂ, ಅರ್ಥಶಾಸ್ತ್ರವಿಶಾರದನೂ ಆದ ಬೃಹಸ್ಪತಿಯನ್ನು ಪ್ರಶ್ನೆ ಮಾಡಿದನು.

೩೯. ಎಲೈ ತಂದೆಯೇ, ಪಿತೃಗಳೆಂಬುವರು ಯಾರು ? ಅವರು ಎಷ್ಟು ಜನಗಳಿರುವರು ? ಅವರ ನಾಮಗಳಾವುವು ? ಅವರು ಹೇಗೆ ಉತ್ಪನ್ನರಾದರು ? ಮತ್ತು ಹೇಗೆ ಪಿತೃಗಳಾದರು ? ಯಜ್ಞಯಾಗಾದಿಗಳಲ್ಲಿ ಅವರಿಗೆ ಅಗ್ರಪೂಜೆಯನ್ನು ಮಾಡಲು ಕಾರಣವೇನು ? ಮಹಾತ್ಮರಾದ ಅವರ ನಿಮಿತ್ತವಾಗಿ ಶ್ರಾದ್ಧಾದಿ ಕರ್ಮಗಳು ಹೇಗೆ ಉಂಟಾಗುತ್ತವೆ ? ಅಂದರೆ ಶ್ರಾದ್ಧಾದಿ ಕ್ರಿಯೆಗಳಲ್ಲಿ ಅವರಿಗೆ ಮರ್ಯಾದೆಯು ಹೇಗೆ ಉಂಟಾಗುವುದು ?

೪೧–೪೨. ಶ್ರಾದ್ಧಕರ್ಮಗಳನ್ನು ಯಾರಿಗಾಗಿ ಮಾಡಬೇಕು ? ಯಾವ ವಸ್ತುಗಳನ್ನು ಶ್ರಾದ್ಧಕಾಲದಲ್ಲಿ ದಾನಕೊಡಿಸಿದರೆ ಮಹಾಫಲಪ್ರಾಪ್ತಿಯಾಗುವುದು ? ಯಾವ ತೀರ್ಥಕ್ಷೇತ್ರಗಳಲ್ಲಿ ಶ್ರಾದ್ಧವನ್ನು ಮಾಡಿದರೆ ಅಕ್ಷಯಫಲಪ್ರಾಪ್ತಿಯಾಗುವುದು ? ಬ್ರಾಹ್ಮಣರು ಯಾವ ಸ್ಥಳದಲ್ಲಿ ಈ ಶ್ರಾದ್ಧಕರ್ಮವನ್ನು ಮಾಡಿದರೆ ಸಂಪೂರ್ಣಫಲ ಪ್ರಾಪ್ತಿಯಾಗುವುದು ? ಶ್ರಾದ್ಧವನ್ನು ಮಾಡುವುದಕ್ಕೆ ಮುಖ್ಯಕಾಲವು ಆವುದು ? ಅದನ್ನು ಯಾವವಿಧದಲ್ಲಿ ಮಾಡಿದರ ಉತ್ತಮ ಫಲವು ದೊರಕ

ಏತದಿಚ್ಛಾಮಿ ಭಗವನ್ ವಿಸ್ತರೇಣ ಯಥಾತಥಂ ।
ವ್ಯಾಖ್ಯಾತುಮಾನುಪೂರ್ವ್ಯೇಣ ಯತ್ರ ಚೋದಾಹೃತಂ ಮಯಾ ॥ ೪೩ ॥

ಬೃಹಸ್ಪತಿರಿದಂ ಸಮ್ಯಗೇವಂ ಪೃಷ್ಟೋ ಮಹಾಮತಿಃ ।
ವ್ಯಾಜಹಾರಾನುಪೂರ್ವ್ಯೇಣ ಪ್ರಶ್ನಂ ಪ್ರಶ್ನವಿದಾಂ ವರಃ ॥ ೪೪ ॥

॥ ಬೃಹಸ್ಪತಿರುವಾಚ ॥

ಕಥಯಿಷ್ಯಾಮಿ ತೇ ತಾತ ಯನ್ಮಾಂ ತ್ವಂ ಪರಿಪೃಚ್ಛಸಿ ।
ವಿನಯೇನ ಯಥಾನ್ಯಾಯಂ ಗಂಭೀರಂ ಪ್ರಶ್ನಮುತ್ತಮಂ ॥ ೪೫ ॥

ದ್ಯೌರಂತರಿಕ್ಷಂ ಪೃಥಿವೀ ನಕ್ಷತ್ರಾಣಿ ದಿಶಸ್ತಥಾ ।
ಸೂರ್ಯಾಚಂದ್ರಮಸೌ ಚೈವ ತಥಾಹೋರಾತ್ರಮೇವ ಚ ॥ ೪೬ ॥

---

ವುದು ? ಇವೇ ಮೊದಲಾದ ವಿಷಯಗಳನ್ನು ಕ್ರಮವಾಗಿಯೂ, ಯಥಾಸ್ಥಿತವಾಗಿಯೂ, ಸಂಪೂರ್ಣವಾಗಿಯೂ ತಿಳಿಸಬೇಕೆಂದು ಪ್ರಾರ್ಥಿಸುತ್ತೇನೆ ಈ ವಿಷಯಗಳು ಎಲ್ಲಿ ಕ್ರಮವಾಗಿ ವರ್ಣಿತವಾಗಿರುತ್ತವೆ ? ಇವುಗಳನ್ನು ತಿಳಿಸಬೇಕೆಂದು ತಂದೆಯನ್ನು ಬೇಡಿದನು.

೪೪. ಪುತ್ರನಾದ ಶಂಯುಮುನಿಯು ಮಹಾಜ್ಞಾನಿಗಳೂ, ಉತ್ತರವನ್ನು ತಿಳಿದವರಲ್ಲಿ ಉತ್ತಮರೂ, ಮಹಾಮತಿಗಳೂ, ತಂದೆಯವರೂ ಆದ ಬೃಹಸ್ಪತಿಗಳನ್ನು ಹೀಗೆ ಕೇಳಲಾಗಿ, ಅವರು ಕ್ರಮವಾಗಿಯೂ, ಯಥಾಸ್ಥಿತವಾಗಿಯೂ, ಹೇಳಲುಪಕ್ರಮಿಸಿದರು

೪೫. ಬೃಹಸ್ಪತಿಗಳು ಹೇಳಿದರು :— ಎಲೈ ಪ್ರಿಯಕುಮಾರನೇ, ನೀನು ವಿನಯದೊಡನೆ ಗಂಭೀರವಾಗಿಯೂ, ನ್ಯಾಯವಾಗಿಯೂ, ಉತ್ತಮವಾಗಿಯೂ, ಇರುವ ಯಾವ ಪ್ರಶ್ನೆಯನ್ನು ಕೇಳಿದೆಯೋ ಅವು ಉತ್ತಮಪ್ರಶ್ನೆಗಳಾಗಿವೆ. ಆ ನಿನ್ನ ಪ್ರಶ್ನೆಗಳಿಗೆ ಉತ್ತರಗಳನ್ನು ಹೇಳುವೆನು. ಸಾವಧಾನದಿಂದ ಕೇಳು ಎಂದು ಬೃಹಸ್ಪತಿಯು ಮಗನಿಗೆ ಹೇಳಿದನು.

೪೬–೪೭ ಎಲೈ ಪುತ್ರನೇ, ಸ್ವರ್ಗಲೋಕ, ಅಂತರಿಕ್ಷ, ಭೂಮಿ, ನಕ್ಷತ್ರ, ಸೂರ್ಯ, ಚಂದ್ರ, ಅಹೋರಾತ್ರಗಳು ಇವೇ ಮೊದಲಾದವು ಜಗತ್ತು ಇಲ್ಲದೇ

ನ ಬಭೂವುಸ್ತದಾ ತಾತ ತಮೋಭೂತಮಿದಂ ಜಗತ್ ।
ಬ್ರಹ್ಮೈಕೋ ದುಶ್ಚರಂ ತತ್ರ ಚಚಾರ ಪರಮಂ ತಪಃ ॥ ೪೭ ॥

ಶಂಯುಸ್ತಮಬ್ರವೀದ್ಭೂಯಃ ಪಿತರಂ ಬ್ರಹ್ಮವಿತ್ತಮಂ ।
ಸರ್ವದೈವ ವ್ರತಸ್ನಾತಂ ಸರ್ವಜ್ಞಾನವಿದಾಂವರಂ ॥ ೪೮ ॥

ಕೀದೃಶಂ ಸರ್ವಭೂತೇಶಸ್ತಪಸ್ತೇಪೇ ಪ್ರಜಾಪತಿಃ ।
ಏವಮುಕ್ತೋ ಬೃಹತ್ತೇಜಾ ಬೃಹಸ್ಪತಿರುವಾಚ ತಂ ॥ ೪೯ ॥

ಸರ್ವೇಷಾಂ ತಪಸಾಂ ಯುಕ್ತಿಸ್ತಪೋಯೋಗಮನುತ್ತಮಂ ।
ಧ್ಯಾಯಂಸ್ತದಾತದ್ಭಗವಾಂಸ್ತೇನ ಲೋಕಾನವಾಸೃಜತ್ ॥ ೫೦ ॥

ಭೂತಭವ್ಯಾನಿ ಜ್ಞಾನಾನಿ ಲೋಕಾನ್ವೇದಾಂಶ್ಚ ಕೃತ್ಸ್ನಶಃ ।
ಯೋಗಮಾವಿಶ್ಯ ತತ್ಸೃಷ್ಟಂ ಬ್ರಹ್ಮಣಾ ಯೋಗಚಕ್ಷುಷಾ ॥ ೫೧ ॥

---

ಯಾವಾಗ ಅಂಧಕಾರಮಯವಾಗಿತ್ತೋ ಆಗ ಬ್ರಹ್ಮದೇವನೊಬ್ಬನೇ ಅತಿ ಭಯಂಕರ ವಾದ ತಪಸ್ಸನ್ನು ಮಾಡಿದನು.

೪೮. ತಂದೆಯು ಹೀಗೆ ಹೇಳಲು ಪುತ್ರನಾದ ಶಂಯುಮುನಿಯು ಬ್ರಹ್ಮ ಜ್ಞಾನಿಗಳಲ್ಲಿ ಉತ್ತಮರೂ, ವ್ರತಗಳಲ್ಲಿ ನಿರತರೂ, ಬ್ರಹ್ಮತತ್ವಜ್ಞರೂ ಆದ ತಂದೆ ಯನ್ನು ಕುರಿತು ಮುಂದೆ ಹೇಳುವಂತೆ ಪ್ರಶ್ನೆಮಾಡಿದನು

೪೯. ಸರ್ವಭೂತಪತಿಯೂ ಪ್ರಜಾಪತಿಯೂ ಆದ ಬ್ರಹ್ಮದೇವನು ಎಂತಹ ತಪಸ್ಸನ್ನು ಮಾಡಿದರು ? ಎಂದು ಕೇಳಲಾಗಿ, ಮಹಾತೇಜಸ್ವಿಗಳೂ ಮಹಾಜ್ಞಾನಿ ಗಳೂ ಆದ ಬೃಹಸ್ಪತಿಗಳು ಕುಮಾರನಿಗೆ ಇಂತೆಂದರು

೫೦. ಸಮಸ್ತವಾದ ತಪಸ್ಸುಗಳಿಗೆ ಸಿಧಿಯೂ ಜ್ಞಾನಿಯೂ ಆದ ಬ್ರಹ್ಮ ದೇವನು ಸರ್ವೋತ್ತಮವಾದ ಯೋಗಾಭ್ಯಾಸದಲ್ಲಿ ನಿರತನಾಗಿ, ಆ ಯೋಗಮಹಿಮೆ ಯಿಂದ ಲೋಕಗಳನ್ನು ಸೃಷ್ಟಿಮಾಡಲುಪಕ್ರಮಿಸಿದನು.

೫೧. ಬ್ರಹ್ಮದೇವನು ಯೋಗನಿರತನಾಗಿ ಯೋಗಜನ್ಯವಾದ ದಿವ್ಯಜ್ಞಾನ ದಿಂದ ಭೂತಭವಿಷ್ಯತ್ಕಾಲಿಕವಾದ ಲೋಕ, ವೇದ, ಜ್ಞಾನ ಇವೇ ಮೊದಲಾದುವುಗ ಳನ್ನು ತಿಳಿದು, ಎಲ್ಲವನ್ನೂ ಸಂಪೂರ್ಣವಾಗಿ ಸೃಷ್ಟಿಮಾಡಿದನು.

**ಲೋಕಾಃ ಸಾಂತನಿಕಾ ನಾಮ ಯತ್ರ ತಿಷ್ಠಂತಿ ಭಾಸ್ವರಾಃ ।**
**ತೇ ವೈ ರಾಜಾ ಇತಿಖ್ಯಾತಾ ದೇವಾನಾಂ ದಿವಿ ದೇವತಾಃ ॥ ೫೨ ॥**

**ಯೋಗೇನ ತಪಸಾ ಯುಕ್ತಃ ಪೂರ್ವಮೇವ ತದಾ ಪ್ರಭುಃ ।**
**ದೇವಾನಸೃಜತ ಬ್ರಹ್ಮಾ ಯೋಗಂ ಯುಕ್ತ್ವಾ ಸನಾತನಂ ॥ ೫೩ ॥**

**ಆದಿದೇವಾ ಇತಿ ಖ್ಯಾತಾ ಮಹಾಸತ್ವಾ ಮಹೌಜಸಃ ।**
**ಸರ್ವಕಾಮಪ್ರದಾಃ ಪೂಜ್ಯಾ ದೇವದಾನವಮಾನವೈಃ ॥ ೫೪ ॥**

**ತೇಷಾಂ ಸಪ್ತ ಸಮಾಖ್ಯಾತಾ ಗಣಾಸ್ತ್ರೈಲೋಕ್ಯಪೂಜಿತಾಃ ।**
**ಅಮೂರ್ತಯಸ್ತ್ರಯಸ್ತೇಷಾಂ ಚತ್ವಾರಸ್ತು ಸಮೂರ್ತಯಃ ॥ ೫೫ ॥**

---

೫೨. ಬ್ರಹ್ಮದೇವನು ಯಾವ ಲೋಕದಲ್ಲಿ ತೇಜೋರೂಪಿಗಳೂ, ದೇವತೆಗಳಿಂದ ಪೂಜ್ಯರೂ, ಸಾಂತಾನಿಕನಾಮಕರೂ ಆದ ದೇವತೆಗಳು ವಾಸಿಸುವರೋ, ಅಂತಹ ದೇವಲೋಕಗಳನ್ನು ಸೃಷ್ಟಿಮಾಡಿದನು. ಆ ಸಾಂತಾನಿಕದೇವತೆಗಳೇ ಅಲ್ಲಿ ರಾಜರೆಂದು ವಿಖ್ಯಾತರಾಗಿರುವರು.

೫೩. ಸ್ವಾಮಿಯಾದ ಬ್ರಹ್ಮದೇವನು ಆದಿಯಲ್ಲಿ ಯೋಗ ಮತ್ತು ತಪಸ್ಸು ಇವುಗಳಲ್ಲಿ ನಿರತನಾಗಿ, ಸನಾತನವಾದ ಆ ಯೋಗಮಹಿಮೆಯಿಂದ ದೇವತೆಗಳನ್ನು ಸೃಷ್ಟಿಮಾಡಲುಪಕ್ರಮಿಸಿದನು.

೫೪ ಬ್ರಹ್ಮದೇವನಿಂದ ಆದಿಯಲ್ಲಿ ಸೃಷ್ಟರೂ, ಮಹಾಸತ್ವಯುಕ್ತರೂ, ಮಹಾತೇಜಸ್ವಿಗಳೂ ಆದ ಆದಿದೇವರು ದೇವದಾನವಮಾನವರಿಂದ ಪೂಜ್ಯರೂ, ಸರ್ವೇಷ್ಟಾರ್ಥದಾಯಕರೂ ಆದರು.

೫೫ ಆದಿ ದೇವರ ಗಣಗಳು ಸಪ್ತಸಂಖ್ಯಾಕಗಳೂ ತ್ರೈಲೋಕ್ಯಪೂಜಿತಗಳೂ ಮೂರುಲೋಕ ವಿಖ್ಯಾತಗಳೂ ಆಗಿದ್ದುವು. ಆ ಸಪ್ತಗಣಗಳಲ್ಲಿ ನಾಲ್ಕುಗಣದವರು ಮೂರ್ತಿವಂತರಾಗಿರುವರು. ಅಂದರೆ ಆಕಾರವಂತರಾಗಿರುವರು. (ಉಳಿದ) ಅವಿಶಿಷ್ಟವಾದ ಮೂರು ಗಣದವರು ಮೂರ್ತಿರಹಿತರಾಗಿರುವರು. ಅಂದರೆ ಆಕಾರರಹಿತರಾಗಿರುವರು

ಉಪರಿಷ್ಟಾತ್ತ್ರಯಸ್ತೇಷಾಂ ವರ್ತಂತೇ ಭಾವಮೂರ್ತಯಃ ।
ಶೇಷಾಮಧಸ್ತಾದ್ವರ್ತಂತೇ ಚತ್ವಾರಃ ಸೂಕ್ಷ್ಮಮೂರ್ತಯಃ ॥ ೩೬ ॥

ತತೋ ದೇವಾಸ್ತತೋ ಭೂಮಿರೇಷಾ ಲೋಕಪರಂಪರಾ ।
ಲೋಕೇ ವರ್ತಂತಿ ತೇ ಹ್ಯಸ್ಮಿಂಸ್ತೇಭ್ಯಃ ಪರ್ಜನ್ಯಸಂಭವಃ ॥
ವೃಷ್ಟಿರ್ಭವತಿ ತೈರ್ವೃಷ್ಟ್ಯಾ ಲೋಕಾನಾಂ ಸಂಭವಃ ಪುನಃ ॥ ೩೭ ॥

ಆಪ್ಯಾಯಯಂತಿ ತೇ ಯಸ್ಮಾತ್ಸೋಮಂ ಚಾನ್ನಂ ಚ ಯೋಗತಃ ।
ಊಚುಸ್ತಾನ್ವೈ ಪಿತೄಂಸ್ತಸ್ಮಾಲ್ಲೋಕಾನಾಂ ಲೋಕಸತ್ತಮಾಃ ॥ ೩೮ ॥

ಮನೋಜವಾಃ ಸ್ವದಾಭಕ್ಷಾಃ ಸರ್ವಕಾಮಪರಿಚ್ಛದಾಃ ।
ಲೋಭಮೋಹಭಯಾಪೇತಾ ನಿಶ್ಚಿತಾಃ ಶೋಕವರ್ಜಿತಾಃ ॥ ೩೯ ॥

---

೩೬. ಅವುಗಳಲ್ಲಿ ಮೂರು ಗಣದವರು ಭಾವ ಶರೀರಿಗಳಾಗಿ ಊರ್ಧ್ವಲೋಕವಾಸಿಗಳಾಗುವರು. ಅವಶಿಷ್ಟಗಳಾದ ನಾಲ್ಕು ಗಣದವರಾದರೋ ಸೂಕ್ಷ್ಮಶರೀರಗಳಾಗಿ ಅಧೋಲೋಕಗಳಲ್ಲಿ ವಾಸಮಾಡುವರು.

೩೭. ಮೊದಲು ಲೋಕಗಳು ನಂತರ ಅದರ ಊರ್ಧ್ವಭಾಗದಲ್ಲಿ ದೇವತೆಗಳು ಇರುವರು. ಅವರ ನಂತರ ಲೋಕಗಳು ಅದರ ಮೇಲೆ ದೇವತೆಗಳು ಈ ರೀತಿಯಾಗಿ ಲೋಕಗಳೂ ದೇವತೆಗಳೂ ಇರುವರು. ಹೀಗೆ ಲೋಕಪರಂಪರೆಗಳಿದ್ದುವು. ದೇವತೆಗಳು ಲೋಕಗಳಲ್ಲಿ ವಾಸಿಸುವರು. ಅವರಿಂದ ವೃಷ್ಟಿಗಳು ಸಂಭವಿಸುತ್ತವೆ. ಆ ವೃಷ್ಟಿಯಿಂದ ಪುನಃ ಲೋಕಗಳು ಸಂಭವಿಸುತ್ತವೆ.

೩೮. ಯಾವ ದೇವತೆಗಳು ತಮ್ಮ ಯೋಗಮಹಿಮೆಯಿಂದ ಲೋಕಗಳನ್ನೂ ಸೋಮದೇವನನ್ನೂ ತೃಪ್ತಿಪಡಿಸಿ ಅನ್ನವನ್ನು ಪೋಷಿಸುತ್ತಾರೆಯೋ ಅಂತಹ ಲೋಕೋತ್ತಮರೂ ಮಾನ್ಯರೂ ಆದ ದೇವತೆಗಳನ್ನು ಪಿತೃದೇವತೆಗಳೆಂದು ಜ್ಞಾನಿಗಳು ಹೇಳುವರು. ಆ ದೇವತೆಗಳೇ ಪಿತೃದೇವತೆಗಳೆಂದು ಪ್ರಖ್ಯಾತರಾಗಿರುವರು.

೩೯. ಆ ಪಿತೃದೇವತೆಗಳು ಮನೋವೇಗಿಗಳೂ, ಸದಾಭಕ್ಷಕರೂ, ಸರ್ವಕಾಮಪರಿಪೂರ್ಣರೂ, ಲೋಭ ಮೋಹ ಭಯ ಇವುಗಳಿಂದ ರಹಿತರೂ, ನಿಶ್ಚಿಯ ಜ್ಞಾನಿಗಳೂ, ಶೋಕವರ್ಜಿತರೂ ಆಗಿರುವರು.

**ಏತೇ ಯೋಗಂ ಪರಿತ್ಯಜ್ಯ ಪ್ರಾಪ್ತಾ ಲೋಕಾನ್ಸುದರ್ಶನಾನ್ ।**
**ದಿವ್ಯಾಃ ಪುಣ್ಯಾ ಮಹಾತ್ಮಾನೋ ವಿಪಾಪ್ಮಾನೋ ಭವಂತ್ಯುತ ॥ ೬೦ ॥**

**ತತೋ ಯುಗಸಹಸ್ರಾಂತೇ ಜಾಯಂತೇ ಬ್ರಹ್ಮವಾದಿನಃ ।**
**ಪ್ರತಿಲಭ್ಯ ಪುನರ್ಯೋಗಂ ಮೋಕ್ಷಂ ಗಚ್ಛಂತ್ಯಮೂರ್ತಯಃ ॥ ೬೧ ॥**

**ವ್ಯಕ್ತಾವ್ಯಕ್ತಂ ಪರಿತ್ಯಜ್ಯ ಮಹಾಯೋಗಬಲೇನ ವಾ ।**
**ನಶ್ಯಂತ್ಯುಲ್ಕೇವ ಗಗನೇ ಕ್ಷೀಣ ವಿದ್ಯುತ್ಪ್ರಭವೇ ಚ ॥ ೬೨ ॥**

**ಉತ್ಸೃಜ್ಯ ದೇಹಜಾತಾನಿ ಮಹಾಯೋಗಬಲೇನ ಚ ।**
**ನಿರಾಖ್ಯೋಪಾಖ್ಯತಾಂ ಯಾಂತಿ ಸರಿತಃ ಸಾಗರೇ ಯಥಾ ॥ ೬೩ ॥**

---

೬೦. ಈ ಮಹಾತ್ಮರು, ತರುವಾಯ ಯೋಗಾಭ್ಯಾಸವನ್ನು ಬಿಟ್ಟು ಸುದರ್ಶನ ನಾಮಕಗಳಾದ ದಿವ್ಯಲೋಕಗಳನ್ನು ಹೊಂದಿ ದಿವ್ಯಪುರುಷರೂ, ಪುಣ್ಯಾತ್ಮರೂ, ಮಹಾತ್ಮರೂ, ಪಾಪರಹಿತರೂ ಆಗಿರುವರು

೬೧. ಅನಂತರ ಆ ದೇವತೆಗಳು ಒಂದು ಸಹಸ್ರಯುಗಗಳು ಕಳೆಯಲು ಬ್ರಹ್ಮವಾದಿಗಳಾಗುವರು. ಪುನಃ ಅವರು ಯೋಗವನ್ನು ಮಾಡಿ ಅದರ ಮಹಿಮೆ ಯಿಂದ ಅಪ್ರಾಕೃತ ಸೂಕ್ಷ್ಮಶರೀರವನ್ನು ಹೊಂದಿ ಮೋಕ್ಷವನ್ನು ಪಡೆಯುವರು.

೬೨. ಅವರು ಮಹಾಯೋಗದ ಮಹಿಮೆಯಿಂದ ಆಕಾಶದಲ್ಲಿ ನಷ್ಟವಾದ ಕೊಳ್ಳಿಯಂತೆಯೂ, ಕ್ಷೀಣವಾದ ವಿದ್ಯುತ್ಪ್ರಭೆಯಂತೆಯೂ, ಅನಿತ್ಯವೂ ವ್ಯಕ್ತಾ ವ್ಯಕ್ತವೂ ಆದ ಶರೀರಗಳನ್ನು ತ್ಯಾಗಮಾಡಿ ಮುಕ್ತಿಯನ್ನು ಪಡೆಯುವರು.

೬೩. ಆ ದೇವತೆಗಳು ಮಹಾಯೋಗ ಶಕ್ತಿಯಿಂದ ದೇಹಜನ್ಯವಾದ ದೋಷ ಗಳನ್ನು ಬಿಟ್ಟು, ನದಿಗಳು ಸಮುದ್ರದಲ್ಲಿ ನಾಮಾವಶೇಷವಾಗುವಂತೆ ಪ್ರಾಕೃತವಾದ ನಾಮರೂಪರಹಿತರಾಗುವರು.

**ಕ್ರಿಯಯಾ ಗುರುಪೂಜಾಭಿರ್ಯೇ ಚ ಕುರ್ವಂತಿ ನಿತ್ಯಶಃ ।**
**ತಾಭಿರಾಪ್ಯಾಯಯಂತ್ಯೇತೇಪಿತರೋ ಯೋಗವರ್ಧನಾಃ ॥ ೬೪ ॥**

**ಶ್ರಾದ್ಧೇ ಪ್ರೀತಾಃ ಪುನಃ ಸೋಮಂ ಪಿತರೋ ಯೋಗಮಾಸ್ಥಿತಾಃ ।**
**ಆಪ್ಯಾಯಯಂತಿ ಯೋಗೇನ ತ್ರೈಲೋಕ್ಯಂ ಯೆನ ಜೀವತಿ ॥ ೬೫ ॥**

**ತಸ್ಮಾಚ್ಛ್ರಾದ್ಧಾನಿ ದೇಯಾನಿ ಯೋಗಿಭ್ಯೋ ಯತ್ನತಃ ಸದಾ ।**
**ಪಿತೄಣಾಂ ಹಿ ಬಲಂ ಯೋಗೋ ಯೋಗಾತ್ಸೋಮಃ ಪ್ರವರ್ತತೇ ॥ ೬೬ ॥**

**ಸಹಸ್ರಶಸ್ತು ವಿಪ್ರಾನ್ವೈ ಭೋಜಯೇದ್ಯಾವದಾ ಗತಾನ್ ।**
**ಏಕಸ್ತು ಯೋಗವಿತ್ಪ್ರೀತಃ ಸರ್ವಾನರ್ಹತಿ ತಚ್ಛೃಣು ॥ ೬೭ ॥**

---

೬೪. ಯಾವ ಪುರುಷರು ಸತ್ಕರ್ಮಾನುಷ್ಠಾನಾದಿ ಕ್ರಿಯಾಯೋಗಗಳಿಂದಲೂ ಗುರುಪೂಜೆಯಿಂದಲೂ ಆ ಪಿತೃಗಳಿಗೆ ಸಂತೋಷವನ್ನು ಪಡಿಸುತ್ತಾರೋ, ಅಂತಹ ಯೋಗನಿರತರಾದ ಪಿತೃದೇವತೆಗಳು ಆ ಮನುಜನಿಗೆ ಸತ್ಕರ್ಮಗಳಮೂಲಕ ಆನಂದ ವನ್ನುಂಟುಮಾಡುವರು.

೬೫. ಯೋಗನಿರತರಾದ ಪಿತೃದೇವತೆಗಳು, ಪುರುಷರು ಭಕ್ತಿಯಿಂದ ಮಾಡುವ ಶ್ರಾದ್ಧಕರ್ಮದಲ್ಲಿ ಪ್ರೀತರಾದ ಸೋಮದೇವನನ್ನು ಪ್ರೀತಿಗೊಳಿಸುವರು ಪ್ರೀತನಾದ ಸೋಮದೇವನಿಂದಲೂ ಪಿತೃದೇವತೆಗಳ ಯೋಗಮಹಿಮೆಯಿಂದಲೂ, ಮೂರು ಲೋಕಗಳಿಗೂ ಆನಂದವು ಪ್ರಾಪ್ತವಾಗುವುದು. ಇದರಿಂದಲೇ ಪ್ರಜೆಗಳು ನಿತ್ಯವೂ ಸುಖವಾಗಿ ಜೀವಿಸುವರು.

೬೬. ಆದುದರಿಂದ ಜ್ಞಾನಿಯಾದ ಪುರುಷನು, ಪ್ರಯತ್ನಪೂರ್ವಕವಾಗಿ ಯೋಗಿಗಳಿಗೆ ಶ್ರಾದ್ಧಕರ್ಮದಲ್ಲಿ ಪ್ರೀತಿಯನ್ನುಂಟುಮಾಡಬೇಕು ಪಿತೃಗಳಿಗೆ ಯೋಗಾಭ್ಯಾಸದಿಂದಲೇ ಸಕಲೇಷ್ಟಾರ್ಥಗಳೂ ಸಿದ್ಧಿಸುವುವು. ಯೋಗಮಹಿಮೆಯಿಂದಲೇ ಸೋಮನು ವೃದ್ಧಿಯಾಗುವನು ಮತ್ತು ಸೋಮಲತಾದಿಗಳು ಇದರಿಂದಲೇ ಅಭಿವೃದ್ಧಿಯಾಗುವುದು.

೬೭. ಪುರುಷರು ಶ್ರಾದ್ಧಕರ್ಮದಲ್ಲಿ ಸಾವಿರಾರು ಜನರಿಗೆ ಭೋಜನವನ್ನು ಮಾಡಿಸಬೇಕು. ಇದರಿಂದ ಪಿತೃಗಳು ತೃಪ್ತರಾಗುವರು. ಶ್ರಾದ್ಧಕರ್ಮದಿಂದ ಒಬ್ಬ ಯೋಗಿಯು ಪ್ರೀತನಾದರೂ ಸಂಪೂರ್ಣಫಲವನ್ನು ಲಭಿಸುವುದು. ಈ ವಿಷಯಗಳನ್ನು ಹೇಳುವೆನು ಕೇಳು ಎಂದನು.

**ಕಲ್ಪಿತಾನಾಂ ಸಹಸ್ರೇಣ ಸ್ನಾತಕಾನಾಂ ಶತೇನ ಚ ।**
**ಯೋಗಾಚಾರ್ಯೇಣ ಯದ್ಭುಕ್ತಂ ತ್ರಾಯತೇ ಮಹತೋ ಭಯಾತ್॥೬೮॥**

**ಗೃಹಸ್ಥಾನಾಂ ಸಹಸ್ರೇಣ ವಾನಪ್ರಸ್ಥಶತೇನ ಚ ।**
**ಬ್ರಹ್ಮಚಾರಿ ಸಹಸ್ರೇಣ ಸ್ನಾತಕಾನಾಂ ಶತೇನ ಚ ॥ ೬೯ ॥**

**ನಾಸ್ತಿಕೋ ವಾ ವಿಕರ್ಮಾ ವಾ ಸಂಕೀರ್ಣಸ್ತಸ್ಕರೋಽಪಿ ವಾ ।**
**ನಾನ್ಯತ್ರ ಕಾರಣಂ ದಾನಂ ಯೋಗೇಷ್ವಾಹ ಪ್ರಜಾಪತಿಃ ॥ ೭೦ ॥**

---

೬೮ ಶಾದ್ಧ ಕರ್ಮವಲ್ಲಿ ಸಾವಿರಾರು ಜನರ ಭೋಜನದಿಂದ ಯಾವ ಮಹತ್ಫಲವು ಸಂಭವಿಸುವುದೋ ಆ ಮಹತ್ಫಲವು ನೂರಾರು ಬ್ರಹ್ಮಚಾರಿಗಳ ಭೋಜನದಿಂದ ಉಂಟಾಗುವುದು. ಇದಕ್ಕಿಂತಲೂ ಯೋಗಿಯು ಭೋಜನದಿಂದ ತೃಪ್ತನಾದರೆ ಅತ್ಯಧಿಕವಾದ ಮಹತ್ಫಲವು ಲಭಿಸುವುದು. ಇದರಿಂದ ಸಕಲಭೀತಿಯೂ ಪರಿಹೃತವಾಗಿ ಉತ್ತಮ ಫಲವು ಬರುವುದು

೬೯ ಸಾವಿರಾರುಜನ ಗೃಹಸ್ಥರು, ನೂರಾರುಜನ ವಾನಪ್ರಸ್ಥರು, ಸಾವಿರಾರು ಬ್ರಹ್ಮಚಾರಿಗಳು ಇವರಲ್ಲರಿಗಿಂತಲೂ ಒಬ್ಬ ಯೋಗಿಯು (ಜ್ಞಾನಿಯು) ಉತ್ತಮನಾಗಿರುವರು. ಅಂದರೆ, ಸಾವಿರಾರು ಬ್ರಾಹ್ಮಣರು, ನೂರಾರು ವಾನಪ್ರಸ್ಥ ಮತ್ತು ಬ್ರಹ್ಮಚಾರಿಗಳು ಇವರ ಭೋಜನದಿಂದ ಯಾವ ಫಲಪ್ರಾಪ್ತಿಯಾಗುವುದೋ, ಆ ಮಹಾಫಲವು ಒಬ್ಬ ಯೋಗಿಯ ಪೂಜೆಯಿಂದ ಸಂಭವಿಸುವುದು

೭೦ ನಾಸ್ತಿಕರು, ಕರ್ಮಭ್ರಷ್ಟರು, ಸಂಕರಜಾತೀಯರು ಮತ್ತು ಚೋರರು ಇವರು ಶ್ರಾದ್ಧವನ್ನು ಮಾಡಿ ಬ್ರಾಹ್ಮಣರಿಗೆ ಭೋಜನಾದಿಗಳನ್ನು ಕೊಡಬಾರದು. ಅದರಿಂದ ಅವರಿಗೆ ಯಾವ ಫಲವೂ ಉಂಟಾಗುವುದಿಲ್ಲ. ಅಂತಹ ನಾಸ್ತಿಕಾದಿಗಳೂ ಸಹ ಯೋಗಿಗಳಿಗೆ ದಾನವನ್ನು ಕೊಡಬಹುದು ಅದರಿಂದ ಅವರಿಗೆ ಫಲವು ಬರುವುದೆಂದು ಯೋಗಶಾಸ್ತ್ರದಲ್ಲಿ ಬ್ರಹ್ಮದೇವನು ನಿರೂಪಿಸಿರುವನು

ಪಿತರಸ್ತಸ್ಯ ತುಷ್ಯಂತಿ ಸುವೃಷ್ಟ್ಯೇನೇವ ಕರ್ಷಕಾಃ ।
ಪುತ್ರೋ ವಾಪ್ಯಥ ವಾ ಪೌತ್ರೋ ಧ್ಯಾನಿನಂ ಭೋಜಯಿಷ್ಯತಿ ॥ ೭೧ ॥

ಅಲಾಭೇಧ್ಯಾನಿಭಿಕ್ಷೂಣಾಂ ಭೋಜಯೇದ್ಬ್ರಹ್ಮಚಾರಿಣೌ ।
ತದಲಾಭೇಪ್ಯುದಾಸೀನಂ ಗೃಹಸ್ಥಮಪಿ ಭೋಜಯೇತ್ ॥ ೭೨ ॥

ಯಸ್ತಿಷ್ಠೇದೇಕಪಾದೇನ ವಾಯುಭಕ್ಷಃ ಶತಂ ಸಮಾಃ ।
ಧ್ಯಾನಯೋಗೀ ಪರಸ್ತಸ್ಮಾದಿತಿ ಬ್ರಹ್ಮಾನುಶಾಸನಂ ॥ ೭೩ ॥

ಸಿದ್ಧಾ ಹಿ ವಿಪ್ರರೂಪೇಣ ಚರಂತಿ ಪೃಥಿವೀಮಿಮಾಂ ।
ತಸ್ಮಾದತಿಥಿಮಾಯಾಂತಮಭಿಗಚ್ಛೇತ್ಕೃತಾಂಜಲಿಃ ॥ ೭೪ ॥

---

೭೧. ಪೈರುಸಚ್ಚೆಗಳು ಒಣಗುತ್ತಿರುವಾಗ ಮಹಾವೃಷ್ಟಿಯಾದರೆ ರೈತರು ಹೇಗೆ ಆನಂದಪಡುವರೋ, ಅದರಂತೆಯೇ ಪುತ್ರಪೌತ್ರಾದಿಗಳು ಶ್ರಾದ್ಧಕಾಲದಲ್ಲಿ ಪಿತೃಗಳ ಉದ್ದೇಶ್ಯಕವಾಗಿ ಸದ್ಬ್ರಾಹ್ಮಣರಿಗೆ ಭಕ್ತಿಯಿಂದ ಕೊಟ್ಟ ಅನ್ನೋದಕಾದಿಗಳಿಂದ ಪಿತೃಗಳು ಸಂತುಷ್ಟರಾಗುವರು.

೭೨. ಶ್ರಾದ್ಧಾದಿ ದಿವಸದಲ್ಲಿ ಯೋಗಿಗಳು ಸನ್ಯಾಸಿಗಳು ಇವರು ಸಿಕ್ಕದಿದ್ದರೆ ಇಬ್ಬರು ಬ್ರಹ್ಮಚಾರಿಗಳಿಗಾದರೂ ಭೋಜನ ಮಾಡಿಸಬೇಕು. ಅವರೂ ಸಿಕ್ಕದಿದ್ದರೆ ಸಾಮಾನ್ಯನಾದ ಗೃಹಸ್ಥನಿಗಾದರೂ ಭೋಜನವನ್ನು ಮಾಡಿಸಬೇಕು ಇದರಿಂದಲೂ ಪಿತೃಗಳು ತೃಪ್ತರಾಗುವರು.

೭೩. ಯಾವನು ವಾಯುಭಕ್ಷಣೆಮಾಡುತ್ತಾ ಒಂದೇ ಪಾದದಿಂದ ನಿಂತುಕೊಂಡು ಸಹಸ್ರವರ್ಷಗಳು ಯೋಗನಿರತನಾಗಿರುವನೋ, ಅಂತಹ ಯೋಗಿಯು ಸರ್ವರಿಗಿಂತಲೂ ಅನ್ನದಾನಕ್ಕೆ ಮುಖ್ಯಪಾತ್ರನು ಎಂದು ದಾನಕಾಂಡದಲ್ಲಿ ಜ್ಞಾನಿಗಳು ಹೇಳಿರುವರು.

೭೪. ಅಂತಹ ಮಹಾಯೋಗಿಗಳು ಸಜ್ಜನರ ಉದ್ಧಾರಕ್ಕಾಗಿ ಈ ಭೂಮಿಯಲ್ಲಿ ಬ್ರಾಹ್ಮಣರ ರೂಪದಿಂದ ಸಂಚರಿಸುವರು. ಆದುದರಿಂದ ಬ್ರಾಹ್ಮಣರಾದ ಅತಿಥಿಗಳು ಯಾರಾದರೂ ಮನೆಗೆ ಬಂದರೆ ಪಿತೃದೇವತೆಗಳೇ ಬಂದಿರುತ್ತಾರೆಯೆಂದು ಭಾವಿಸಿ, ನಮಸ್ಕಾರಪೂರ್ವಕವಾಗಿ ಮರ್ಯಾದೆಯೊಡನೆ ಎದುರುಗೊಂಡು ಅವರನ್ನು ಪೂಜಿಸಬೇಕು.

ಪೂಜಯೇಚಾರ್ಘ್ಯಪಾತ್ರೇಣ ವೇಶ್ಮನಾ ಭೋಜನೇನ ಚ ।
ಊರ್ವ್ಯಾಂಃ ಸಾಗರಪರ್ಯಂತಾಂ ದೇವಾ ಯೋಗೇಶ್ವರಾಃ ಸದಾ ॥
ನಾನಾರೂಪೈಶ್ಚರಂತ್ಯೇತೇ ಪ್ರಜಾ ಧರ್ಮೇಣ ಪಾಲಯರ್ನ್ ॥ ೭೫ ॥

ತಸ್ಮಾದ್ದದ್ಯಾಚ್ಚ ವೈ ದಾನಂ ವಿಪ್ರಾಯಾತಿಥಯೇ ನರಃ ।
ಪ್ರದಾನಾನಿ ಪ್ರವಕ್ಷ್ಯಾಮಿ ಫಲಂ ಚ್ಯೈಷಾಂ ತಥೈವ ಚ ॥ ೭೬ ॥

ಅಶ್ವಮೇಧಸಹಸ್ರೇಣ ರಾಜಸೂಯ ಶತೇನ ಚ ।
ಪುಂಡರೀಕಸಹಸ್ರೇಣ ಯೋಗಿಷ್ವಾವಸಥೋ ವರಂ ॥ ೭೭ ॥

ಆದ್ಯ ಏಷ ಗಣಃ ಪ್ರೋಕ್ತಃ ಪಿತ್ರ್ಯಾಣಾಮಮಿತೌಜಸಾಂ ।
ಭಾವಯನ್ಸಪ್ತಕಾಲಾನ್ವೈ ಸ್ಥಿತ ಏಷ ಗಣಸ್ತದಾ ॥ ೭೮ ॥

---

೭೫. ಮತ್ತು ಗೃಹಸ್ಥರು ಆ ಅತಿಥಿಗಳಿಗೆ ಅರ್ಘ್ಯಪಾದ್ಯಾಚಮನಾದಿಗಳಿಂದಲೂ, ಭೋಜನದಿಂದಲೂ, ಗೃಹಾದಿ ಸ್ಥಾನಮರ್ಯಾದೆಗಳಿಂದಲೂ ಪೂಜಿಸಬೇಕು. ಏಕೆಂದರೆ, ದೇವತೆಗಳೂ ಯೋಗೀಶ್ವರರೂ ಕೂಡ ನಾನಾ ರೂಪಗಳನ್ನು ಧರಿಸಿಕೊಂಡು ಪ್ರಜೆಗಳನ್ನು ಧರ್ಮದಿಂದ ಪಾಲಿಸುವುದಕ್ಕೋಸ್ಕರ ಸಾಗರಾಂತವಾದ ಭೂಮಧ್ಯದಲ್ಲಿ ಸಂಚಾರಮಾಡುವರು.

೭೬. ಆದುದರಿಂದ ಗೃಹಸ್ಥರಾದ ಪುರುಷರು ಅತಿಥಿಗಳು ಯಾರಾದರೂ ಮನೆಗೆ ಬಂದರೆ ಮರ್ಯಾದೆಯಿಂದ ಸತ್ಕರಿಸಿ ದಾನಧರ್ಮಗಳನ್ನು ಮಾಡಬೇಕು. ಹೀಗೆ ಯೋಗ್ಯರಾದ ಅತಿಥಿಗಳಿಗೆ ಮಾಡಿದ ದಾನಧರ್ಮಾದಿಗಳ ಫಲವನ್ನು ಮುಂದೆ ಕ್ರಮವಾಗಿ ನಿರೂಪಿಸುವೆನು ಕೇಳಿರೆಂದು ಸೂತಮುನಿಯು ಹೇಳಿದನು.

೭೭. ಸಾವಿರಾರು ಅಶ್ವಮೇಧಯಾಗಗಳು, ಸಾವಿರಾರು ಪುಂಡರೀಕಕ್ರಿಯೆಗಳು ಇವುಗಳನ್ನು ಮಾಡುವುದರಿಂದುಂಟಾಗುವ ಫಲಗಳಿಗಿಂತಲೂ ಯೋಗಿಗಳ ಸಹವಾಸದಿಂದಾಗುವ ಫಲವು ಅತಿಶಯವಾಗಿರುವುದು ಯೋಗಿಗಳ ಪೂಜೆಗಳಿಂದ ಅಧಿಕವಾದ ಫಲವು ಸಂಭವಿಸುವುದು.

೭೮. ಅತಿಪರಾಕ್ರಮಿಗಳಾದ ಪಿತೃಗಳ ಗಣಗಳನ್ನು ನಿಮಗೋಸ್ಕರವಾಗಿ ಈಗ ನಿರೂಪಿಸಿರುತ್ತೇನೆ. ಆ ಪಿತೃಗಣಗಳಲ್ಲಿ ಈ ಗಣವು ಮೊದಲನೆಯದಾಗಿದೆ. ಹೀಗೆ ಅತೀತಾನಾಗತಕಾಲಗಳಲ್ಲಿ ಪಿತೃದೇವತೆಗಳ ಸಪ್ತಗಣಗಳು ಪ್ರಖ್ಯಾತವಾಗಿವೆ.

**ಅತ ಊರ್ಧ್ವಂ ಪ್ರವಕ್ಷ್ಯಾಮಿ ಸರ್ವಾನ್ ಪಿತೃಗಣಾನ್ಪುನಃ ।**
**ಸಂತತಿಂ ಸಂಸ್ಥಿತಿಂ ಚೈವ ಭಾವನಾಂ ಚ ಯಥಾಕ್ರಮಂ ॥ ೭೯ ॥**

**ಇತಿ ಶ್ರೀಮಹಾಪುರಾಣೇ ವಾಯುಪ್ರೋಕ್ತೇ "ಶ್ರಾದ್ಧಪ್ರಕ್ರಿಯಾರಂಭೋ" ನಾಮ ದಶಮೋಽಧ್ಯಾಯಃ.**

---

೭೯. ಇನ್ನುಮುಂದೆ ಪುನಃ ಸಮಸ್ತರಾದ ಪಿತೃದೇವತೆಗಳ ಸರ್ವಗಣಗಳು, ಅವರ ಸಂತತಿ, ಸ್ಥಿತಿಗತಿಗಳು, ಭಾವನೆ, ಕಾರ್ಯ ಇವೇ ಮೊದಲಾದ ಸಕಲವನ್ನೂ ಕ್ರಮವಾಗಿ ತಿಳಿಸುವೆನು ಕೇಳಿರೆಂದು ಸೂತಮುನಿಯು ಮುನಿಗಳಿಗೆ ಹೇಳಿದನು.

ಇಲ್ಲಿಗೆ ವಾಯುಪ್ರೋಕ್ತವಾದ ಮಹಾಪುರಾಣದಲ್ಲಿ "ಶ್ರಾದ್ಧಪ್ರಕ್ರಿಯಾನಿರೂಪಣವೆಂಬ" ಹತ್ತನೆಯ ಅಧ್ಯಾಯವು ಸಮಾಪ್ತವಾದುದು.

## ಹತ್ತನೆಯ ಅಧ್ಯಾಯದ ಸಾರಾಂಶವು

ಈ ಅಧ್ಯಾಯದಲ್ಲಿ ಪಿತೃಗಳು ಯಾರು ? ಅವರು ಎಲ್ಲಿ ಇರುವರು ? ಅವರು ಹೇಗೆ ಜನಿಸಿದರು ? ಹೇಗೆ ಪಿತೃಗಳಾದರು ? ನಾವು ಮಾಡಿದ ಶ್ರಾದ್ಧಗಳು ಅವರಿಗೆ ಹೇಗೆ ಹೋಗಿ ಸೇರುತ್ತವೆ ? ಇವೇ ಮೊದಲಾದ ವಿಷಯಗಳು ನಿರೂಪಿತವಾಗಿವೆ.

ಬ್ರಹ್ಮದೇವನು ಮೊದಲು ಸರ್ಜನೇಚ್ಛೆಯಿಂದ ದೇವತೆಗಳನ್ನು ಸೃಷ್ಟಿಮಾಡಿದನು. ಅವರು ನಿರುದ್ಯೋಗಿಗಳಾಗಿ ನಿಷ್ಕಾಮಕರ್ಮಿಗಳಾದರು. ಆಗ ಬ್ರಹ್ಮನು ಕೋಪಗೊಂಡು ನಿಮ್ಮ ಜ್ಞಾನಕರ್ಮಗಳೆಲ್ಲವೂ ನಷ್ಟವಾಗಲೆಂದು ಶಾಪಕೊಟ್ಟನು. ಆಗ ಆ ದೇವತೆಗಳು ಬ್ರಹ್ಮದೇವನನ್ನು ಪ್ರಾರ್ಥಿಸಿದರು. ತರುವಾಯ ಬ್ರಹ್ಮನು ಪ್ರಾಯಶ್ಚಿತ್ತವನ್ನು ಆಚರಿಸಿ ಪರಿಹಾರವಾಗುವುದು ಎಂದನು ಈ ವಿಷಯದಲ್ಲಿ ನಿಮ್ಮ ಪುತ್ರರನ್ನೇ ಕೇಳಿ ಎಂದನು. ತರುವಾಯ ಆ ದೇವತೆಗಳು ತಮ್ಮ ಪುತ್ರರನ್ನು ಪ್ರಶ್ನೆಮಾಡಿ, ಜ್ಞಾನವನ್ನು ಪಡೆದು, ನೀವೇ ನಮಗೆ ಪಿತೃಗಳಾಗಿರುವಿರಿ ಎಂದರು.

ಅದರಂತೆಯೇ ಅವರು ಬ್ರಹ್ಮದೇವನ ವರದಿಂದ ಪಿತೃದೇವತೆಗಳಾಗಿ ಸರ್ವರಿಂದಲೂ ಪೂಜ್ಯರಾಗಿರುವರು. ಅವರೇ ಈಗ ಪಿತೃದೇವತೆಗಳೆಂದು ಪ್ರಸಿದ್ಧರಾಗಿರುವರು. ಶ್ರಾದ್ಧಕಾಲದಲ್ಲಿ ಪುರುಷರು ಭಕ್ತಿಯಿಂದ ತಮ್ಮ ಪಿತೃ, ಪಿತಾಮಹ, ಪ್ರಪಿತಾಮಹಂದಿರವರ ನಾಮಗೋತ್ರಗಳನ್ನು ಉಚ್ಚರಿಸಿ, ಪಿಂಡದಾನಾದಿಗಳನ್ನು ಮಾಡಿದರೆ ಅದು ಅವರವರ ಪಿತೃಗಳಿಗೆ ಹೋಗಿ ಸೇರುತ್ತದೆ. ಶ್ರಾದ್ಧಕಾಲದಲ್ಲಿ ಮೇಲೆ ಹೇಳಿದ ಪಿತೃದೇವತೆಗಳು ತೃಪ್ತರಾಗಿ, ಶ್ರಾದ್ಧಮಾಡಿದ ಪುರುಷರ ಪಿತೃಗಳು ಯಾವ ದೇಶದಲ್ಲಿ ಯಾವರೂಪದಲ್ಲಿದ್ದರೂ ಅವರವರಿಗೆ ತೃಪ್ತಿಯಾಗುವ ಪದಾರ್ಥಗಳನ್ನು ಒದಗಿಸಿ ಅವರಿಗೆ ಆನಂದವನ್ನು ಉಂಟುಮಾಡುವರು. ಇದರಿಂದ ಲೋಕಗಳಿಗೆ ಕ್ಷೇಮವಾಗುವುದು. ಶ್ರಾದ್ಧಕಾಲದಲ್ಲಿ ಯೋಗಿಗಳಿಗೆ ಅನ್ನಾದಿ ದಾನಗಳನ್ನು ಮಾಡಿದರೆ ಸಾವಿರಾರು ಜನಗಳಿಗೆ ಅನ್ನದಾನ ಮಾಡಿದ ಫಲವು ಲಭಿಸುವುದು. ಅಶ್ವಮೇಧ, ರಾಜಸೂಯಾದಿ ಯಾಗಗಳ ಫಲಗಳು ಲಭಿಸುತ್ತವೆ ಪಿತೃಗಣಗಳು ಅಸಂಖ್ಯಾತವಾಗಿವೆ. ಅವರು ಲೋಕಕಲ್ಯಾಣಕ್ಕಾಗಿ ನಾನಾವಿಧ ವಿಪ್ರರೂಪಗಳನ್ನು ಧರಿಸಿ, ಅತಿಥಿಗಳಾಗಿ ಭೂಮಿಯಲ್ಲಿ ಸಂಚರಿಸುವರು. ಇಂಥ ಅತಿಥಿಗಳಿಗೆ ಪೂಜೆಮಾಡುವುದರಿಂದ ಸಕಲ ಪುರುಷಾರ್ಥಗಳೂ ದೊರೆಯುತ್ತವೆ ಎಂಬ ವಿಷಯಗಳು ಈ ಅಧ್ಯಾಯದಲ್ಲಿ ವರ್ಣಿತವಾಗಿವೆ.

—: ಹರಿಃ ಓಂ :—

—ಶ್ರೀ ವೇದವ್ಯಾಸಾಯ ನಮಃ—

# ಶ್ರೀಮದ್ವಾಯು ಪುರಾಣಂ

## ಏಕಾದಶೋಽಧ್ಯಾಯಃ

**|| ಸೂತ ಉವಾಚ ||**

**ಸಪ್ತ ಮೇಧಾವತಾಂ ಶ್ರೇಷ್ಠಾಃ ಸ್ವರ್ಗೇ ಪಿತೃಗಣಾಃ ಸ್ಮೃತಾಃ |**
**ಚತ್ವಾರೋ ಮೂರ್ತಿಮಂತಶ್ಚ ತ್ರಯಸ್ತೇಷಾಮಮೂರ್ತಯಃ ||**
**ತೇಷಾಂ ಲೋಕವಿಸರ್ಗಂ ತು ಕೀರ್ತಯಿಷ್ಯೇ ನಿಬೋಧತ || ೧ ||**

**ಯಾ ವೈ ದುಹಿತರಸ್ತೇಷಾಂ ದೌಹಿತ್ರಾಶ್ಚೈವ ಯೇ ಸ್ಮೃತಾಃ |**
**ಧರ್ಮಮೂರ್ತಿಧರಾಸ್ತೇಷಾಂ ಯೇ ತ್ರಯಃ ಪರಮಾ ಗಣಾಃ || ೨ ||**

---

## ಹನ್ನೊಂದನೆಯ ಅಧ್ಯಾಯವು

೧. ಸೂತಪುರಾಣಿಕನು ಹೇಳಿದನು:—ಸ್ವರ್ಗಲೋಕದ ಜ್ಞಾನಿಗಳಲ್ಲಿ ಶ್ರೇಷ್ಠರಾದ ಪಿತೃದೇವತೆಗಳ ಸಪ್ತಗಣಗಳು ಪ್ರಖ್ಯಾತವಾಗಿವೆ ಆ ಸಪ್ತಗಣಗಳಲ್ಲಿ ನಾಲ್ಕು ಗಣಗಳು ಮೂರ್ತಿಮತ್ತಾಗಿವೆ. ಉಳಿದ ಮೂರು ಗಣಗಳು ಆಕಾರ ಶೂನ್ಯವಾಗಿವೆ. ಅವರಿಗೆ ಈ ಲೋಕದಲ್ಲಿ ಉಂಟಾಗುವ ಸೃಷ್ಟಿಕ್ರಮವನ್ನು ನಿಮಗಾಗಿ ಹೇಳುವೆನು ಕೇಳಿರೆಂದನು.

೨. ಆ ದೇವತೆಗಳ ವಂಶಗಳಲ್ಲಿ ಯಾವ ಯಾವ ಹೆಣ್ಣುಮಕ್ಕಳು ಹುಟ್ಟಿದರು. ಮೊಮ್ಮಕ್ಕಳು ಯಾರಾಗಿರುವರು. ಧರ್ಮಮೂರ್ತಿಗಳಾದ ಅವರ ಗಣತ್ರಯಗಳು ಉತ್ತಮವಾಗಿಯೂ ಪ್ರಖ್ಯಾತವಾಗಿಯೂ ಇರುತ್ತವೆ.

ನಾಮಾನಿ ಲೋಕಸರ್ಗಂ ಚ ತೇಷಾಂ ವಕ್ಷ್ಯೇ ಸಮಾಸತಃ ।
ಲೋಕಾ ವಿರಜಸೋ ನಾಮ್ನಾ ಯತ್ರ ತಿಷ್ಠಂತಿ ಭಾಸ್ವರಾಃ ॥ ೩ ॥

ಅಮೂರ್ತಯಃ ಪಿತೃಗಣಾಃ ಪುತ್ರಾಸ್ತೇ ವೈ ಪ್ರಜಾಪತೇಃ ।
ವಿರಜಸ್ಯ ದ್ವಿಜಾಃ ಶ್ರೇಷ್ಠಾ ವೈರಾಜಾ ಇತಿ ವಿಶ್ರುತಾಃ ॥
ಏಷ ವೈ ಪ್ರಥಮಃ ಕಲ್ಪೋ ವೈರಾಜಾನಾಂ ಪ್ರಕೀರ್ತಿತಃ ॥ ೪ ॥

ತೇಷಾಂ ತು ಮಾನಸೀ ಕನ್ಯಾ ಮೇನಾ ನಾಮ ಮಹಾಗಿರೇಃ ।
ಪತ್ನೀ ಹಿಮವತಃ ಶುಭ್ರಾ ಯಸ್ಯಾಂ ಮೈನಾಕ ಉಚ್ಯತೇ ॥ ೫ ॥

ಜಾತಃ ಸರ್ವೌಷಧಿಧರಃ ಸರ್ವರತ್ನಾಕರಾತ್ಮವಾನ್ ।
ಪರ್ವತಃ ಪ್ರವರಃ ಪುಣ್ಯಃ ಕ್ರೌಂಚಸ್ತಸ್ಯಾತ್ಮಜೋಽಭವತ್ ॥ ೬ ॥

---

೩. ಅವರ ನಾಮಗಳನ್ನೂ ಸೃಷ್ಟಿಕ್ರಮವನ್ನೂ ಸಂಕ್ಷೇಪವಾಗಿ ನಿರೂಪಿಸುವೆನು ಕೇಳಿರೆಂದನು. ತೇಜೋಮಯರಾದ ಆ ದೇವತೆಗಳು ವಿರಜಸವೆಂಬ ರಜೋಗುಣಶೂನ್ಯವಾದ ಕೇವಲ ತೇಜಃಸ್ವರೂಪವಾದ ಲೋಕದಲ್ಲಿ ವಾಸಮಾಡುವರು.

೪ ಎಲೈ ವಿಪ್ರವರ್ಯರೇ, ಅಮೂರ್ತಗಳಾದ ಪಿತೃಗಣಗಳು ಬ್ರಹ್ಮದೇವನ ಮಾನಸಪುತ್ರಗಳಾಗಿರುವುವು. ಅವು ವಿರಜನಾಮಕ ದೇಶದಲ್ಲಿ ವಾಸಮಾಡುವುದರಿಂದ ವೈರಾಜನಾಮಕ ಪಿತೃದೇವತೆಗಳೆಂದು ಪ್ರಖ್ಯಾತರಾಗಿರುವರು. ವೈರಾಜನಾಮಕ ದೇವತೆಗಳು ದೇವತೆಗಳಲ್ಲಿ ಪ್ರಥಮವರ್ಗದವರೂ ಸುಪ್ರಸಿದ್ಧರೂ ಆಗಿರುವರು.

೫. ಆ ದೇವತೆಗಳ ಮಾನಸಪುತ್ರಿಯಾದ ಮೇನಕಾದೇವಿಯು ಪರ್ವತೋತ್ತಮನಾದ ಹಿಮವಂತನನ್ನು ಮದುವೆಯಾಗಿ ಮೈನಾಕನಾಮಕ ಕುಮಾರನನ್ನು ಪಡೆದಳು. ಮೇನಕೆಯ ಪುತ್ರನಾದುದರಿಂದ ಆ ಕುಮಾರನಿಗೆ ಮೈನಾಕವೆಂಬ ನಾಮವು ಸಂಭವಿಸಿರುತ್ತದೆ.

೬. ಅವನಿಗೆ ಸರ್ವೌಷಧಿಗಳಿಗೆ ಆಶ್ರಯನೂ, ಸರ್ವರತ್ನಗಳಿಗೆ ಆಕರನೂ, ಪರ್ವತೋತ್ತಮನೂ, ಪುಣ್ಯರೂಪಿಯೂ, ಕ್ರೌಂಚನಾಮಕನೂ ಆದ ಕುಮಾರನು ಜನಿಸಿದನು.

ತಿಸ್ರಃ ಕನ್ಯಾಸ್ತು ಮೇನಾಯಾಂ ಜನಯಾಮಾಸ ಶೈಲರಾಟ್ ।
ಅಪರ್ಣಾಮೇಕಪರ್ಣಾಂ ಚ ತೃತೀಯಾಮೇಕಪಾಟಲಾಂ || ೭ ||

ಆಶ್ರಿತೇ ದ್ವೇ ಹ್ಯಪರ್ಣಾ ತು ಅನಿಕೇತಾ ತಪೋ ಚರತ್ ।
ನ್ಯಗ್ರೋಧಮೇಕಪರ್ಣೀ ತು ಪಾಟಲಾಮೇಕಪಾಟಲಾ ॥
ಶತಂ ವರ್ಷಸಹಸ್ರಾಣಿ ದುಶ್ಚರಂ ದೇವದಾನವೈಃ || ೮ ||

ಆಹಾರಮೇಕಪರ್ಣೇನ ಏಕಪರ್ಣೀ ಸಮಾಚರತ್ ।
ಪಾಟಲೇನೈವ ಚೈಕೇನ ವಿದಧ್ಯಾದೇಕಪಾಟಲಾ || ೯ ||

ಪೂರ್ಣೇ ಪೂರ್ಣೇ ಸಹಸ್ರೇ ದ್ವೇ ಆಹಾರಂ ವೈ ಪ್ರಚಕ್ರತುಃ ।
ಏಕಾ ತತ್ರ ನಿರಾಹಾರಾ ತಾಂ ಮಾತಾ ಪ್ರತ್ಯಭಾಷತ || ೧೦ ||

---

೭. ಆ ಪರ್ವತರಾಜನಿಗೆ ಮೇನಕಾದೇವಿಯಲ್ಲಿ ಮೂವರು ಹೆಣ್ಣುಮಕ್ಕಳು ಉದ್ಭವಿಸಿದರು ಅವರಲ್ಲಿ ಮೊದಲನೆಯವಳು ಅಪರ್ಣೆಯು ಎರಡನೆಯವಳು ಏಕಪರ್ಣೆಯೆಂಬುವಳು. ಮೂರನೆಯವಳು ಏಕಪಾಟಲೆಯು.

೮. ಆ ಮೂವರು ಮಕ್ಕಳಲ್ಲಿ ಇಬ್ಬರು ತಂದೆಯ ಮನೆಯಲ್ಲಿಯೇ ಇದ್ದು ತಂದೆಯನ್ನು ಆಶ್ರಯಿಸಿಕೊಂಡಿದ್ದರು ಏಕಪರ್ಣೆಯಾದರೋ ಮನೆಯಲ್ಲಿರದೆ, ದುಶ್ಚರವಾದ ತಪಸ್ಸನ್ನು ಮಾಡಲು ವನಕ್ಕೆ ಹೋದಳು. ಆ ಅರಣ್ಯದಲ್ಲಿ ಆಲದಮರವನ್ನಾಶ್ರಯಿಸಿ ತಪಸ್ಸನ್ನು ಮಾಡಿದಳು. ಏಕಪಾಟಲೆಯು ಪಾಟಲವೃಕ್ಷವನ್ನು ಆಶ್ರಯಿಸಿ ತಪಸ್ಸುಮಾಡಿದಳು. ದೇವದಾನವರು ಮಾಡಲಶಕ್ಯವಾದ ದುಶ್ಚರವಾದ ತಪಸ್ಸನ್ನು ಸಹಸ್ರವರ್ಷಗಳವರೆಗೂ ಮಾಡಿದಳು.

೯. ಏಕಪರ್ಣೆಯು ಹೀಗೆ ಸಹಸ್ರವರ್ಷಗಳವರೆಗೂ ನಿರಾಹಾರಿಯಾಗಿದ್ದು, ಅನಂತರ ಒಂದು ಎಲೆಯನ್ನು ತಿಂದು ಭಯಂಕರವಾದ ತಪಸ್ಸನ್ನು ಮಾಡಿದಳು. ಏಕಪಾಟಲೆಯೂ ಸಹ ಹೀಗೆಯೇ ಪಾಟಲಪರ್ಣವನ್ನು ತಿಂದು ಜೀವಿಸುತ್ತಿದ್ದಳು.

೧೦. ಮೂವರು ಕುಮಾರಿಯರಲ್ಲಿ ಒಬ್ಬಳು ವರ್ಷಕ್ಕೊಂದು ಎಲೆಯನ್ನು ತಿಂದು ತಪಸ್ಸುಮಾಡಿದಳು. ಎರಡನೆಯವಳು ಎರಡುವರ್ಷಗಳು ಪೂರ್ಣವಾಗಲು, ಎರಡುವರ್ಷಕ್ಕೊಮ್ಮೆ ಆಹಾರವನ್ನು ಸ್ವೀಕರಿಸುತ್ತಿದ್ದಳು. ಅಪರ್ಣೆಯಾದರೋ ಎರಡುವರ್ಷಕ್ಕೆ ಒಂದುಸಲವೂ ಸಹ ಆಹಾರವನ್ನು ಸ್ವೀಕರಿಸದೆ ಘೋರ ತಪಸ್ಸನ್ನು ಮಾಡುತ್ತಿದ್ದಳು ಆ ತಾಯಿಯು ಹೀಗೆ ಭಯಂಕರವಾದ ತಪಸ್ಸನ್ನು ಮಾಡಬೇಡವೆಂದು ಮಗಳಿಗೆ ಹೇಳಿದಳು.

ನಿಷೇಧಯಂತೀ ಹ್ಯುಮೇತಿ ಮಾತಾ ಸ್ನೇಹೇನ ದುಃಖಿತಾ ।
ಸಾ ತಥೋಕ್ತ್ತತಯಾ ದೇವೀ ಮಾತ್ರಾ ದುಶ್ಚರಚಾರಿಣೀ ॥ ೧೧ ॥

ಉಮೇತಿ ಸಾ ಮಹಾಭಾಗಾ ತ್ರಿಷು ಲೋಕೇಷು ವಿಶ್ರುತಾ ।
ತಥೇತಿ ನಾಮ್ನಾ ತೇನಾಸೌ ನಿರುಕ್ತಾ ಕರ್ಮಣಾ ಶುಭಾ ॥ ೧೨ ॥

ಏತತ್ತು ತ್ರಿಕುಮಾರೀಕಂ ಜಗತ್ ಸ್ಥಾಸ್ಯತಿ ಶಾಶ್ವತಂ ।
ಏತಾಸಾನ್ತಪಸಾ ದೃಷ್ಟಂ ಯಾವದ್ಭೂಮಿರ್ಧರಿಷ್ಯತಿ ॥ ೧೩ ॥

ತಪಃ ಶರೀರಾಸ್ತಾಃ ಸರ್ವಾಸ್ತಿಸ್ರೋ ಯೋಗಬಲಾನ್ವಿತಾಃ ।
ದೇವ್ಯಸ್ತಾಃ ಸುಮಹಾಭಾಗಾಃ ಸರ್ವಾಶ್ಚ ಸ್ಥಿರಯೌವನಾಃ ॥ ೧೪ ॥

---

೧೧ ಪುತ್ರಿಯು ಹೀಗೆ ಭಯಂಕರವಾದ ತಪಸ್ಸನ್ನು ಮಾಡುತ್ತಿರುವುದನ್ನು ನೋಡಿ ಅತಿಪ್ರೀತಿಯಿಂದ ಖಿನ್ನಳಾಗಿ, ಎಲೈ ಕುಮಾರಿಯೇ, ನೀನು ಹೀಗೆ ನಿರಾಹಾರದಿಂದ ಘೋರ ತಪಸ್ಸನ್ನು ಮಾಡಬೇಡ ಇದು ನಿನ್ನಂಥವರಿಗೆ ಸರಿಯಲ್ಲವೆಂದು ನಿಷೇಧಿಸಿದಳು

೧೨. ಹೀಗೆ ತಾಯಿಯು (ಉ) ಎಲೌ ಕುಮಾರಿಯೇ, (ಮಾ) ತಪಸ್ಸನ್ನು ಮಾಡಬೇಡವೆಂದು ಹೇಳಿದ್ದರಿಂದ ಮಹಾನುಭಾವಳಾದ ಆ ಕುಮಾರಿಯು ಉಮಾನಾಮಕಳಾದಳು. ಮೂರುಲೋಕದಲ್ಲಿಯೂ ಪ್ರಖ್ಯಾತಳಾದಳು. ತಾಯಿಯು ಹೀಗೆ ನಿಷೇಧಮಾಡಿದ್ದರಿಂದ ಪುತ್ರಿಯು ಉಮೆಯೆಂದು ಲೋಕವಿಖ್ಯಾತಳಾದಳು.

೧೩. ಹೀಗೆ ಈ ಏಕಪರ್ಣೆ, ಏಕಪಾಟಲೆ, ಅಪರ್ಣೆಯರೆಂಬ ಮೂವರು ಕುಮಾರಿಯರಿಂದ ಚರಾಚರಾತ್ಮಕವಾದ ಈ ಇಡೀ ಜಗತ್ತೇ ವ್ಯಾಪ್ತವಾಯಿತು. ಈ ಮಹಾನುಭಾವರಾದ ಕುಮಾರಿಯರ ತಪಸ್ಸು ಸಮಸ್ತ ಲೋಕದಲ್ಲಿಯೂ ಹೆಮ್ಮೆಯನ್ನು ಪಡೆಯಿತು

೧೪. ಆ ಮೂವರು ಕುಮಾರಿಯರು ತಪೋಮಯವಾದ ಶರೀರವುಳ್ಳವರೂ, ಯೋಗಬಲಾನ್ವಿತರೂ, ಮಹಾನುಭಾವರೂ, ಸ್ಥಿರಯೌವನವಂತರೂ, ದೇವರೂಪಿಯರೂ, ಲೋಕಮಾನ್ಯರೂ, ಸುಪ್ರಸಿದ್ಧರೂ ಆಗಿರುವರು.

ಸರ್ವಾಶ್ಚ ಬ್ರಹ್ಮವಾದಿನ್ಯಃ ಸರ್ವಾಶ್ಚೈವೋರ್ಧ್ವರೇತಸಃ ।
ಉಮಾ ತಾಸಾಂ ವರಿಷ್ಠಾ ಚ ಶ್ರೇಷ್ಠಾ ಚ ವರವರ್ಣಿನೀ ॥ ೧೫ ॥

ಮಹಾಯೋಗಬಲೋಪೇತಾ ಮಹಾದೇವಮುಪಾಸ್ಥಿತಾ ।
ದಂತಕಾಣ್ವೋಶನಾ ತಸ್ಯಾಃ ಪುತ್ರೋ ವೈ ಭೃಗುನಂದನಃ ॥ ೧೬ ॥

ಅಸೀತ್ತಸ್ಯೈಕಪರ್ಣೀ ತು ಪತ್ನೀ ಸಾಧ್ವೀ ದೃಢವ್ರತಾ ।
ದತ್ತಾ ಹಿಮವತಾ ತಸ್ಮೈ ಯೋಗಾಚಾರ್ಯಾಯ ಧೀಮತೇ ॥
ದೇವಲಂ ಸುಷುವೇ ಸಾ ತು ಬ್ರಹ್ಮಿಷ್ಠಂ ಮಾನಸಂ ಸುತಂ ॥ ೧೭ ॥

ಯಾ ಚೈತಾಸಾಂ ಕುಮಾರೀಣಾಂ ತೃತೀಯಾ ತ್ವೇಕಪಾಟಲಾ ।
ಪುತ್ರಂ ಶತಶಿಲಾಕಸ್ಯ ಜೈಗೀಷವ್ಯಮುಪಾಸ್ಥಿತಾ ॥ ೧೮ ॥

---

೧೫. ಅವರೆಲ್ಲರೂ ಬ್ರಹ್ಮಜ್ಞಾನಿಗಳೂ ಊರ್ಧ್ವರೇತಸ್ಕರೂ, ಜಿತೇಂದ್ರಿಯರೂ ಆಗಿರುವರು. ಆ ಮೂವರಲ್ಲಿ ಉಮಾದೇವಿಯು ಹಿರಿಯವಳೂ, ಉತ್ತಮಳೂ, ಅತಿಸುಂದರಿಯೂ, ಪೂಜ್ಯಳೂ ಆಗಿರುವಳು

೧೬. ಅಂತಹ ಮಹಾಯೋಗಬಲಯುಕ್ತಳಾದ ಪಾರ್ವತಿಯು ಮಹಾದೇವನನ್ನು ವರಿಸಿದಳು. ಅತ್ಯಂತ ಸುಂದರಿಯಾದ ಆ ಉಮಾದೇವಿಗೆ ಭೃಗುವಂಶೋತ್ಪನ್ನನಾದ ಶುಕ್ರನು ಪುತ್ರನಾಗಿ ಜನಿಸಿದನು.

೧೭ ಪರ್ವತರಾಜನಾದ ಹಿಮವಂತನು, ದೃಢವ್ರತಳೂ, ಪತಿವ್ರತಾಶಿರೋಮಣಿಯೂ ಆದ ಏಕಪರ್ಣೆಯನ್ನು ಯೋಗಾಚಾರ್ಯನೂ, ಬ್ರಹ್ಮಜ್ಞಾನಿಯೂ, ಮಹಾನುಭಾವನೂ ಆದ ಅಸಿತನೆಂಬ ಮುನಿಗೆ ಕನ್ಯಾದಾನ ಮಾಡಿದನು. ಆ ಏಕಪರ್ಣೆಯು ಬ್ರಹ್ಮಜ್ಞಾನಿಯೂ, ದೇವಲನಾಮಕನೂ, ಮಾನಸಕುಮಾರನೂ ಆದ ಪುತ್ರನನ್ನು ಪಡೆದಳು.

೧೮. ಆ ಹಿಮವಂತನ ಕುಮಾರಿಯರಲ್ಲಿ ಮೂರನೆಯವಳಿಂದ ಏಕಪರ್ಣೆಯು ಶತಶಿಲಾಕಮುನಿಯ ಕುಮಾರನಾದ ಜೈಗೀಷವ್ಯನನ್ನು ಮದುವೆಯಾದಳು.

ತಸ್ಯಾಪಿ ಶಂಖಲಿಖಿತೌ ಸ್ಮೃತೌ ಪುತ್ರಾವಯೋನಿಜೌ ।
ಇತ್ಯೇತಾ ವೈ ಮಹಾಭಾಗಾಃ ಕನ್ಯಾ ಹಿಮವತಃ ಶುಭಾಃ ॥ ೧೯ ॥

ರುದ್ರಾಣೀ ಸಾ ತು ಪ್ರವರಾ ಸ್ವಗುಣೈರತಿರಿಚ್ಯತೇ ।
ಅನ್ಯೋನ್ಯಪ್ರೀತಿರನಯೋರುಮಾಶಂಕರಯೋರ್ಯಥಾ ॥ ೨೦ ॥

ಶ್ಲೇಷಂ ಸಂಸಕ್ತಯೋರ್ಜ್ಞಾತ್ವಾ ಶಂಕಿತಃ ಕಿಲ ವೃತ್ರಹಾ ।
ತಾಭ್ಯಾಂ ಮೈಥುನಸಕ್ತಾಭ್ಯಾಮುಪತ್ಯೋದ್ಭವಭೀರುಣಾ ॥
ತಯೋಃ ಸಕಾಶಮಿಂದ್ರೇಣ ಪ್ರೇಷಿತೋ ಹವ್ಯವಾಹನಃ ॥ ೨೧ ॥

ಅನಯೋಃ ರತಿವಿಘ್ನಂ ಚ ತ್ವಮಾಚರ ಹುತಾಶನ ।
ಸರ್ವತ್ರ ಗತ ಏವ ತ್ವಂ ನ ದೋಷೋ ವಿದ್ಯತೇ ತದಾ ॥ ೨೨ ॥

---

೧೯. ಆ ಜೈಗೀಷವ್ಯನಿಗೆ ಅಯೋನಿಜ ಶಂಖಲಿಖಿತನಾಮಕರೂ ಲೋಕಮಾನ್ಯರೂ ಆದ ಇಬ್ಬರು ಕುಮಾರರು ಜನಿಸಿದರು. ಹೀಗೆ ಮಂಗಳಾಂಗಿಯರೂ ಮಹಾನುಭಾವರೂ ಅದ ಆ ಮೂವರು ಕುಮಾರಿಯರು ಹಿಮವಂತನ ಕುಮಾರಿಯರಾಗಿರುವರು.

೨೦. ಆ ಹಿಮವಂತನ ಕುಮಾರಿಯರಲ್ಲಿ ಪಾರ್ವತೀದೇವಿಯು ಸರ್ವಗುಣಗಳಿಂದ ಉತ್ತಮಳೂ ಸರ್ವಮಾನ್ಯಳೂ ಆಗಿರುವಳು ಆ ಉಮಾಮಹೇಶ್ವರರಿಗಿರುವ ನಿತ್ಯಸಂಬಂಧವಾದ ಪ್ರೀತಿಯನ್ನು ತಿಳಿದು ದೈತ್ಯರು ಅತ್ಯಂತ ಖಿನ್ನರಾದರು.

೨೧. ಹೀಗೆ ಉಮಾಮಹೇಶ್ವರರಿಬ್ಬರೂ ಪರಸ್ಪರ ಪ್ರೀತಿಯಿಂದ ನಿತ್ಯಸಂಬಂಧರಾಗಿರುವರೆಂದು ತಿಳಿದು ವೃತ್ರಾಸುರನ ಶತ್ರುವಾದ ಇಂದ್ರನಿಗೆ ಬಹಳವಾಗಿ ಆಲೋಚನೆಯು ಉಂಟಾಯಿತು ಪಾರ್ವತೀಪರಮೇಶ್ವರರ ಪ್ರೇಮದಿಂದ ಪುತ್ರೋತ್ಪತ್ತಿಯಾದರೆ ಜಗತ್ತೇ ಲಯವಾಗುವುದೆಂದು ತಿಳಿದು ದೇವೇಂದ್ರನು ಅವರ ಬಳಿಗೆ ಯಜ್ಞಪುರುಷನನ್ನು ಕಳುಹಿಸಿಕೊಟ್ಟನು

೨೨. ಎಲೈ ಅಗ್ನಿಯೇ ನಿನಗೆ ಸರ್ವತ್ರ ಸಂಚಾರವು ಪ್ರತಿಬಂಧಕವಿಲ್ಲದೇ ಇರುವುದರಿಂದ ನೀನು ಉಮಾಮಹೇಶ್ವರರ ಬಳಿಗೆ ಹೋಗಿ ಅವರ ರತಿಗೆ ವಿಘ್ನವನ್ನು ಉಂಟುಮಾಡು ಇದರಿಂದ ನಿನಗೆ ಯಾವ ವಿಧವಾದ ದೋಷವೂ ಉಂಟಾಗದೆಂದು ಹೇಳಿದನು.

ಇತ್ಯೇವಮುಕ್ತೇ ತು ತಥಾ ವಹ್ನಿನಾ ಚ ತಥಾ ಕೃತಂ ।
ಉಮಾದೇಹಂ ಸಮುತ್ಸೃಜ್ಯ ಶುಕ್ರಂ ಭೂಮೌ ವಿಸರ್ಜಿತಂ ॥ ೨೩ ॥

ತತೋ ರುಷಿತಯಾ ದೇವ್ಯಾ ಶಪ್ತೋಽಗ್ನಿಃ ಶಾಂಶಪಾಯನ ।
ಇದಂ ಚೋಕ್ತವತೀ ವಹ್ನಿಂ ರೋಷಗದ್ಗದಯಾ ಗಿರಾ ॥ ೨೪ ॥

ಯಸ್ಮಾನ್ಮಯ್ಯವಿತೃಪ್ತಾಯಾಂ ರತಿವಿಘ್ನಂ ಹುತಾಶನ ।
ಕೃತವಾನಸ್ಯಕರ್ತವ್ಯಂ ತಸ್ಮಾತ್ತ್ವಮುಸಿ ದುರ್ಮತೇ ॥ ೨೫ ॥

ಯದೇವಂ ವಿಭೃತಂ ಗರ್ಭಂ ರೌದ್ರಂ ಶುಕ್ರಂ ಮಹಾಪ್ರಭಂ ।
ಗರ್ಭಂ ತ್ವಂ ಧಾರಯಸ್ವೈವಮೇಷಾ ತೇ ದಂಡಧಾರಣಾ ॥ ೨೬ ॥

---

೨೩. ದೇವೇಂದ್ರನು ಹೀಗೆ ಹೇಳಲು ಯಜ್ಞಪುರುಷನು ಅದರಂತೆ ಮಾಡಿದನು. ಆಗ ಪರಮೇಶ್ವರನು ಸಂಕೋಚವನ್ನು ಹೊಂದಲು ಆ ರೇತಸ್ಸು ಪಾರ್ವತಿಯು ಶರೀರದಲ್ಲಿ ಬೀಳದೇ ಭೂಮಿಯಲ್ಲಿಯೇ ಪತಿತವಾಯಿತು.

೨೪. ಎಲೈ ಶಾಂಶಪಾಯಿನ ಮುನಿಯೇ, ತರುವಾಯ ಮಹಾದೇವಿಯು ಅಗ್ನಿಯ ಮೇಲೆ ಬಹಳವಾಗಿ ಕೋಪಗೊಂಡು ಗದ್ಗದ ಧ್ವನಿಯಿಂದ ವಕ್ಷ್ಯಮಾಣ ರೀತಿಯಿಂದ ಯಜ್ಞಪುರುಷನಿಗೆ ಇಂತೆಂದಳು

೨೫. ಎಲೈ ಯಜ್ಞಪುರುಷನೇ, ನಾನು ಸಂಪೂರ್ಣತೃಪ್ತಿಯನ್ನು ಪಡೆಯುವುದಕ್ಕಿಂತ ಮುಂಚೆಯೇ ನೀನು ರತಿಗೆ(ವಿಹಾರಕ್ಕೆ) ವಿಘ್ನವನ್ನು ಉಂಟುಮಾಡಿರುತ್ತೀಯೆ ನೀನು ಇಂತಹ ಅಯೋಗ್ಯಕಾರ್ಯವನ್ನು ಮಾಡಬಹುದೇ ? ಇದರಿಂದ ನೀನು ಅಯೋಗ್ಯನಾಗಿರುತ್ತೀಯೇ ಎಂದು ಶಾಪವನ್ನು ಕೊಟ್ಟಳು

೨೬. ಎಲೈ ಅಗ್ನಿದೇವನೇ, ಮಹಾಕಾಂತಿಯುಕ್ತವೂ ಅತಿಭಯಂಕರವೂ ಈಶ್ವರನ ಸಂಬಂಧಿಯೂ ಆದ ಶುಕ್ರವು ನಿನ್ನಿಂದ ಸರಿಯಾದ ಸ್ಥಾನದಲ್ಲಿ ಬೀಳದೇ ಭೂಗತವಾಯಿತು. ಇದು ವ್ಯರ್ಥವಾಗುತ್ತದೆಯಾದುದರಿಂದ ಈ ಗರ್ಭವನ್ನು ನೀನೇ ಧರಿಸುವವನಾಗು. ಇದೇ ನಿನಗೆ ಉಚಿತವಾದ ಶಿಕ್ಷೆಯೆಂದು ಶಾಪ ಕೊಟ್ಟಳು.

ನ ಶಾಪರೋಷಾದ್ರುದ್ರಾಣ್ಯಾ ಅಂತರ್ಗರ್ಭೋ ಹುತಾಶನಃ ।
ಬಹೂನ್ವರ್ಷಗಣಾನ್ ಗರ್ಭಂ ಧಾರಯಾಮಾಸ ವೈ ದ್ವಿಜಾಃ ॥ ೨೭ ॥

ಸ ಗಂಗಾಮುಪಗಮ್ಯಾಹ ಶ್ರೂಯತಾಂ ಸರಿದುತ್ತಮೇ ।
ಸುಮಹಾನ್ ಪರಿಖೇದೋ ಮೇ ಗರ್ಭಧಾರಣಕಾರಣಾತ್ ॥ ೨೮ ॥

ಮದ್ಧಿತಾರ್ಥಮಿಮಂ ಗರ್ಭಮತೋ ಧಾರಯ ನಿಮ್ನಗೇ ।
ಮತ್ಪ್ರಸಾದಾಚ್ಚ ಖೇದೋ ವೈ ಮಂದಸ್ತವ ಭವಿಷ್ಯತಿ ॥ ೨೯ ॥

ತಥೇತ್ಯುಕ್ತ್ವಾ ತದಾ ಸಾ ತು ಸಂಪ್ರಹೃಷ್ಟಾ ಮಹಾನದೀ ।
ತಂ ಗರ್ಭಂ ಧಾರಯಾಮಾಸ ದಹ್ಯಮಾನೇನ ಚೇತಸಾ ॥ ೩೦ ॥

ಸಾಪಿ ಕೃಚ್ಛ್ರೇಣ ಮಹತಾ ಖಿದ್ಯಮಾನಾ ಮಹಾನದೀ ।
ಕಾಲಂ ಪ್ರಕೃಷ್ಟಂ ಸುಮಹದ್ಗರ್ಭಧಾರಣತತ್ಪರಾ ॥ ೩೧ ॥

---

೨೭. ಎಲೈ ವಿಪ್ರವರ್ಯರೇ, ಹೀಗೆ ಪಾರ್ವತೀದೇವಿಯು ಕೋಪಗೊಂಡು ಭಯಂಕರವಾದ ಶಾಪವನ್ನು ಕೊಟ್ಟಳು ಅದರಿಂದ ಅಗ್ನಿದೇವನು ಆ ಗರ್ಭವನ್ನು ಬಹುವರ್ಷಗಳವರೆಗೂ ಬಹಳ ಪ್ರಯಾಸದಿಂದ ಧರಿಸಿದ್ದನು.

೨೮–೨೯. ಅನಂತರ ಯಜ್ಞಪುರುಷನು ಗಂಗಾದೇವಿಯ ಬಳಿಗೆ ಹೋಗಿ ಎಲೈ ಗಂಗಾದೇವಿಯೇ, ನೀನು ನದಿಗಳಲ್ಲೆಲ್ಲಾ ಉತ್ತಮಳು ಈ ಗರ್ಭಧಾರಣೆಯಿಂದ ಬಹುಕಾಲದಿಂದಲೂ ಅತ್ಯಂತ ಕಷ್ಟವು ಪ್ರಾಪ್ತವಾಗಿದೆ. ಆದುದರಿಂದ ನನಗೆ ಹಿತಕ್ಕಾಗಿ ನೀನು ಈ ಗರ್ಭವನ್ನು ಧರಿಸಿ ಹಿತವನ್ನುಂಟುಮಾಡು. ಇದರಿಂದ ನನ್ನ ದೇಹವೆಲ್ಲವೂ ದಗ್ಧವಾಗಿದೆ. ನೀನು ಇದನ್ನು ಧರಿಸಲು ಸಮರ್ಥಳಿರುವಿಯೆಂದು ಬೇಡಿಕೊಂಡನು. ಮತ್ತು ನನ್ನ ಅನುಗ್ರಹದಿಂದ ನಿನಗೆ ಹೆಚ್ಚು ಆಯಾಸವಾಗುವುದಿಲ್ಲವೆಂದು ಹೇಳಿದನು

೩೦. ಆಗ ಮಹಾನುಭಾವಳಾದ ಗಂಗಾದೇವಿಯು ಆ ಮಾತುಗಳನ್ನು ಕೇಳಿ ಸಂತೋಷಗೊಂಡವಳಾಗಿ, ತನ್ನ ಮನಸ್ಸಿಗೆ ಅತ್ಯಂತ ದುಃಖಕರವಾದರೂ ಆ ಗರ್ಭವನ್ನು ಮನಃಪೂರ್ವಕವಾಗಿಯೇ ಧರಿಸಿದಳು

೩೧. ಹೀಗೆ ಗಂಗಾದೇವಿಯೂ ಕೂಡ ಅತ್ಯಂತ ಆಯಾಸದಿಂದ ಅನೇಕ ವರ್ಷಗಳು ಆ ಗರ್ಭವನ್ನು ಧರಿಸಿದ್ದಳು. ಹೀಗೆ ಬಹುವರ್ಷಗಳು ಕಳೆದುಹೋದುವು.

**ತಯಾ ಪರಿಗತಂ ಗರ್ಭಂ ಕುಕ್ಷ್ಯಾ ಹಿಮವತಃ ಶುಭೇ ।**
**ಶುಭಂ ಶರವಣಂ ನಾಮ ಚಿತ್ರಂ ಪುಷ್ಪಿತಪಾದಪಂ ।**
**ತತ್ರ ತಂ ವ್ಯಸೃಜದ್ಗರ್ಭಂ ದೀಪ್ಯಮಾನಮಿವಾನಲಂ ॥ ೩೨ ॥**

**ರುದ್ರಾಗ್ನಿಗಂಗಾತನಯಸ್ತತ್ರ ಜಾತೋಽರುಣಪ್ರಭಃ ।**
**ಆದಿತ್ಯಶತಸಂಕಾಶೋ ಮಹಾತೇಜಾಃ ಪ್ರತಾಪವಾನ್ ॥ ೩೩ ॥**

**ತಸ್ಮಿಂಜಾತೇ ಮಹಾಭಾಗೇ ಕುಮಾರೇ ಜಾಹ್ನವೀಸುತೇ ।**
**ವಿಮಾನಯಾನೈರಾಕಾಶಂ ಪತತ್ರಿಭಿರಿವಾವೃತಂ ॥ ೩೪ ॥**

**ದೇವದುಂದುಭಯೋ ನೇದುರಾಕಾಶೇ ಮಧುರಸ್ವರಾಃ ।**
**ಮುಮುಚುಃ ಪುಷ್ಪವರ್ಷಂ ಚ ಖಚರಾಃ ಸಿದ್ಧಚಾರಣಾಃ ॥ ೩೫ ॥**

---

೩೨. ಗಂಗಾದೇವಿಯು ಬಹುವರ್ಷಗಳವರೆಗೂ ಅತಿಪ್ರಯಾಸದಿಂದ ಆ ಮಹಾಗರ್ಭವನ್ನು ಧರಿಸಿದ್ದು ಕೊನೆಗೆ ಸಾಧ್ಯವಾಗದೇ ಹಿಮಾಲಯದ ನಾಭಿಯಂತಿರುವುದೂ, ಅತಿಪವಿತ್ರವೂ, ವಿಚಿತ್ರವೂ, ಪುಷ್ಪಿತವೃಕ್ಷಗಳಿಂದಲಂಕೃತವೂ ಆದ ಶರವಣವೆಂಬ ಪ್ರದೇಶದಲ್ಲಿ ಅಗ್ನಿಯಂತೆ ಅತಿತೇಜಸ್ವಿಯೂ ಭಯಂಕರವೂ ಆದ ಆ ಗರ್ಭವನ್ನು ಬಿಟ್ಟಳು.

೩೩. ಹೀಗೆ ಮೊದಲು ರುದ್ರದೇವ, ಯಜ್ಞಪುರುಷ, ಗಂಗಾದೇವಿ ಇವರಿಂದ ಧರಿಸಲ್ಪಟ್ಟು, ತರುವಾಯ ಶರವಣದಲ್ಲಿ ಬಿಡಲ್ಪಟ್ಟ ಆ ಗರ್ಭವು ತರುವಾಯ ಅರುಣನಂತೆ ಕಾಂತಿಯುತವೂ, ಸೂರ್ಯನಂತೆ ಅತಿತೇಜಸ್ವಿಯೂ, ಮಹಾಪ್ರತಾಪಶಾಲಿಯೂ, ಅತಿಪರಾಕ್ರಮಿಯೂ ಆದ ಕುಮಾರನಾಗಿ ಅವತರಿಸಿತು

೩೪. ಮಹಾನುಭಾವನೂ, ಗಂಗಾಪುತ್ರನೂ ಆದ ಆ ಕುಮಾರಸ್ವಾಮಿಯು ಅವತರಿಸಲಾಗಿ ಅಂತರಿಕ್ಷವು ಪಕ್ಷಿಗಳಂತೆ ಸಾವಿರಾರು ವಿಮಾನಗಳಿಂದ ಅಲಂಕರಿಸಲ್ಪಟ್ಟಿತು.

೩೫–೩೬. ಆಗ ಆಕಾಶದಲ್ಲಿ ದೇವತೆಗಳು ಮಧುರವಾಗಿ ಗಾನಮಾಡಿದರು ನಗಾರಿಗಳು ಬಾರಿಸಲ್ಪಟ್ಟವು. ಆಕಾಶಚಾರಿಗಳಾದ ಸಿದ್ಧಚಾರಣರೇ ಮೊದಲಾದ

**ಜಗುರ್ಗಂಧರ್ವಮುಖ್ಯಾಶ್ಚ ಸರ್ವಶಸ್ತತ್ರ ತತ್ರ ಹ ।**
**ಯಕ್ಷಾ ವಿದ್ಯಾಧರಾಃ ಸಿದ್ಧಾಃ ಕಿನ್ನರಾಶ್ಚೈವ ಸರ್ವಶಃ || ೩೬ ||**

**ಮಹಾನಾಗ ಸಹಸ್ರಾಣಿ ಪ್ರವರಾಶ್ಚ ಪತತ್ರಿಣಃ ।**
**ಉಪತಸ್ಥುರ್ಮಹಾಭಾಗಮಾಗ್ನೇಯಂ ಶಂಕರಾತ್ಮಜಂ ||**
**ಪ್ರಭಾವೇಣ ತದಾ ತೇನ ದೈತ್ಯದಾನವರಾಕ್ಷಸಾಃ || ೩೭ ||**

**ಸಹ ಸಪ್ತರ್ಷಿಭಾರ್ಯಾಭಿರಾದಾವೇವಾಗ್ನಿಸಂಭವಃ ।**
**ಅಭಿಷೇಕಪ್ರಯಾತಾಭಿರ್ದೃಷ್ಟೋ ವರ್ಜ್ಯ ತ್ವರುಂಧತೀಂ || ೩೮ ||**

**ತಾಭಿಃ ಸ ಬಾಲಾರ್ಕನಿಭೋ ರೌದ್ರಃ ಪರಿವೃತಃ ಪ್ರಭುಃ ।**
**ಸ್ನಿಹ್ಯಮಾನಾಭಿರತ್ಯರ್ಥಂ ಸ್ವಕಾಭಿರಿವ ಮಾತೃಭಿಃ || ೩೯ ||**

---

ದೇವತೆಗಳು ಪುಷ್ಪವೃಷ್ಟಿಯನ್ನು ಸಂತೋಷದಿಂದ ಕರೆಸಿದರು ಗಂಧರ್ವಪತಿಗಳು ಇಂಪಾಗಿ ಅಲ್ಲಲ್ಲಿ ಗಾನಮಾಡಿದರು. ಯಕ್ಷರು, ವಿದ್ಯಾಧರರು, ಸಿದ್ಧರು, ಕಿನ್ನರರು, ಕಿಂಪುರುಷರು ಇವರೇ ಮೊದಲಾದವರು ಆ ಸಂತೋಷದಲ್ಲಿ ಭಾಗಿಗಳಾಗಿದ್ದರು .

೩೭. ಹೀಗೆ ಪರಮೇಶ್ವರನ ಕುವರನಾದ ಷಣ್ಮುಖನು ಜನಿಸಲಾಗಿ ಅವನ ದರ್ಶನಕ್ಕಾಗಿ ಸಹಸ್ರಾರು ಮಹಾಸರ್ಪಗಳೂ, ಪಕ್ಷೀಂದ್ರರರೂ, ದೇವತೆಗಳೂ, ದೈತ್ಯ ದಾನವ ರಾಕ್ಷಸರೂ ಬಂದು, ಮಹಾನುಭಾವನೂ, ಅತಿಪ್ರಭಾವವಂತನೂ ಆದ ಆ ಕುಮಾರಸ್ವಾಮಿಯನ್ನು ಹೊಗಳಿದರು.

೩೮. ಆಗ ಸಪ್ತರ್ಷಿಗಳೂ ತಮ್ಮ ಕುಟುಂಬಸಮೇತರಾಗಿ ಮೊದಲೇ ಆ ಕುಮಾರಸ್ವಾಮಿಯ ದರ್ಶನಕ್ಕಾಗಿ ಬಂದಿದ್ದರು. ಅರುಂಧತೀದೇವಿಯು ಮಾತ್ರ ಬಂದಿರಲಿಲ್ಲ. ಆ ಮಹರ್ಷಿಗಳು ಬರುವಾಗಲೇ ಅಭಿಷೇಕ ಸಾಮಗ್ರಿಗಳಿಂದೊಡಗೂಡಿ ಬಂದಿದ್ದರು.

೩೯. ಆಗ ಬಾಲಸೂರ್ಯನಂತೆ ಹೊಳೆಯುತ್ತಿರುವ ಈಶ್ವರನ ಪುತ್ರನಾದ ಆ ಕುಮಾರಸ್ವಾಮಿಯು ಅತ್ಯಂತ ಪ್ರೀತಿಯುಕ್ತರಾದ ಆ ಋಷಿಪತ್ನಿಯರಿಂದ ಪರಿವೃತನಾದನು. ಆಗ ತಮ್ಮ ತಾಯಿಯರೇ ಬಂದು ಹೀಗೆ ಪ್ರೀತಿಯಿಂದ ನೋಡುತ್ತಿದ್ದಾರೋ ಏನೋ ಎಂಬಂತೆ ಇತ್ತು.

ಯುಗಪತ್ಸರ್ವದೇವೀರ್ಹಿ ದಿದೃಕ್ಷುರ್ಜಾಹ್ನವೀಸುತಃ ।
ಷಣ್ಮುಖೋ ವ್ಯಸೃಜಚ್ಛ್ರೀಮಾಂಸ್ತಾಸಾಂ ಪ್ರೀತ್ಯಾ ಮಹಾದ್ಯುತಿಃ ॥ ೪೦ ॥

ಶ್ರೀಮಾನ್ ಕಮಲಪತ್ರಾಕ್ಷಸ್ತರುಣಾದಿತ್ಯಸನ್ನಿಭಃ ।
ಯೇನ ಜಾತೇನ ಲೋಕಾನಾಮಾಕ್ಷೇಪಸ್ತೇಜಸಾ ಕೃತಃ ॥ ೪೧ ॥

ತೇನ ಜಾತೇನ ಮಹತಾ ದೇವಾನಾಮಸಿಹಿಷ್ಣವಃ ।
ಸ್ಕಂದಿತಾ ದಾನವಗಣಾಸ್ತಸ್ಮಾತ್ಸ್ಕಂದಃ ಪ್ರತಾಪವಾನ್ ॥ ೪೨ ॥

ಕೃತ್ತಿಕಾಭಿಸ್ತು ಯಸ್ಮಾತ್ ಸಂವರ್ಧಿತಃ ಸ ಪುರಾತನಃ ।
ಕಾರ್ತಿಕೇಯ ಇತಿ ಖ್ಯಾತಸ್ತಸ್ಮಾದಸುರಸೂದನಃ ॥ ೪೩ ॥

---

೪೦. ಮಹಾತೇಜಸ್ವಿಯೂ, ಕಾಂತಿಯುಕ್ತನೂ, ಗಂಗಾಪುತ್ರನೂ ಆದ ಆ ಷಣ್ಮುಖನು ಅತಿಪ್ರೀತಿಯಿಂದ ಆ ಋಷಿಪತ್ನಿಯರನ್ನು ಏಕಕಾಲದಲ್ಲಿ ದರ್ಶನವನ್ನು ಕೊಟ್ಟು ಆನಂದಗೊಳಿಸಿದನು.

೪೧. ಅತ್ಯಂತ ಕಾಂತಿಯುಕ್ತನೂ, ಕಮಲದಂತೆ ವಿಶಾಲಾಕ್ಷನೂ, ಬಾಲ ಸೂರ್ಯನಂತೆ ತೇಜಸ್ವಿಯೂ ಆದ ಕುಮಾರಸ್ವಾಮಿಯು, ತನ್ನ ಶರೀರ ಕಾಂತಿಯಿಂದ ಲೋಕವನ್ನೇ ತಿರಸ್ಕರಿಸುವಂತಿದ್ದನು.

೪೨. ಹೀಗೆ ಮಹಾನುಭಾವನೂ, ಅತಿಪರಾಕ್ರಮಿಯೂ ಆದ ಕುಮಾರನು ಜನಿಸಿದಕೂಡಲೇ ದಾನವಗಣವು ಆಕ್ರಮಿಸಲ್ಪಟ್ಟಿತು (ತಿರಸ್ಕರಿಸಲ್ಪಟ್ಟಿತು). ಅವರ ತೇಜಸ್ಸುಗಳೆಲ್ಲವೂ ಕುಂದಿಹೋದುವು ಅವರ ಬಲ ಪರಾಕ್ರಮಗಳು ಕುಗ್ಗಿದುವು. ಆದುದರಿಂದ ಈ ಕುಮಾರನು ಸ್ಕಂದನೆಂದು ಸುಪ್ರಸಿದ್ಧನಾದನು.

೪೩. ಪುರಾಣಪುರುಷನೂ, ಅಸುರಘಾತುಕನೂ ಆದ ಆ ಕುಮಾರನು ಕೃತ್ತಿಕಾದಿ ದಾದಿಯರಿಂದ ಸಂವರ್ಧಿತನಾದಕಾರಣ ಕಾರ್ತಿಕೇಯನೆಂದು ಮೂರುಲೋಕದಲ್ಲಿಯೂ ಪ್ರಖ್ಯಾತನಾದನು.

ಜೃಂಬತಸ್ತಸ್ಯ ದೈತ್ಯಾರೇರ್ಜ್ವಾಲಾಮಾಲಾಕುಲಾತ್ತದಾ ।
ಮುಖಾದ್ವಿನಿರ್ಗತಾ ತಸ್ಯ ಸ್ವಶಕ್ತಿರಪರಾಜಿತಾ || ೪೪ ||

ಕ್ರೀಡಾರ್ಥಂಚೈವ ಸ್ಕಂಧಸ್ಯ ವಿಷ್ಣುನಾ ಪ್ರಭವಿಷ್ಣುನಾ ।
ಗರುಡಾದಿತಿ ಸೃಷ್ಟೌ ಹಿ ಪಕ್ಷಿಣೌ ಹಿ ಪ್ರಭದ್ರಕೌ || ೪೫ ||

ಮಯೂರಃ ಕುಕ್ಕುಟಶ್ಚೈವ ಪತಾಕಾ ಚೈವ ವಾಯುನಾ ।
ಯಸ್ಯ ದತ್ತಾ ಸರಸ್ವತ್ಯಾ ಮಹಾವೀಣಾ ಮಹಾಸ್ವನಾ ॥
ಅಜಃ ಸ್ವಯಂಭುವಾ ದತ್ತೋ ಮೇಷೋ ದತ್ತಶ್ಚ ಶಂಭುನಾ || ೪೬ ||

ಮಾಯಾ ವಿಹರಣೇ ವಿಪ್ರಾ ಗಿರೌ ಕ್ರೌಂಚೇ ನಿಪಾತಿತೇ ।
ತಾರಕೇ ಚಾಸುರವರೇ ಸಮುದೀರ್ಣೇ ನಿಪಾತಿತೇ || ೪೭ ||

---

೪೪. ದೈತ್ಯಾಂತಕನಾದ ಕುಮಾರನು ಆಕಳಿಸಲಾಗಿ ಅವನ ಮುಖದಿಂದ ಜ್ವಾಲಾಮಾಲೆಗಳಿಂದ ವ್ಯಾಪ್ತವೂ ಅಪರಾಜಿತವೂ ಅಂದರೆ ಪರಾಜಯರಹಿತವೂ ಆದ ಶಕ್ತ್ಯಾಯುಧವು ಆವಿರ್ಭವಿಸಿತು

೪೫. ಮಹಾಸ್ವಾಮಿಯಾದ ಮಹಾವಿಷ್ಣುವು ಕುಮಾರಸ್ವಾಮಿಯ ವಿನೋದಕ್ಕಾಗಿ ಗರುಡದೇವನಿಂದ ಸೃಷ್ಟವಾದ ಪ್ರಭದ್ರನಾಮಕಗಳಾದ ಎರಡುಪಕ್ಷಿಗಳನ್ನು ಕೊಟ್ಟಿದ್ದನು.

೪೬. ಆಗ ವಾಯುದೇವನು, ಕುಮಾರನ ವಿಹಾರಕ್ಕಾಗಿ ನವಿಲು ಮತ್ತು ಕೋಳಿಗಳನ್ನೂ ಧ್ವಜಪತಾಕೆಗಳನ್ನೂ ಕೊಟ್ಟನು. ಸರಸ್ವತೀದೇವಿಯು ಮಹಾನಾದವಿರುವ ಮಹಾವೀಣೆಯನ್ನು ಕೊಟ್ಟಳು. ಆಗ ಬ್ರಹ್ಮದೇವನು ಆಡನ್ನೂ, ಈಶ್ವರನು ಕುರಿಯನ್ನೂ ಕೊಟ್ಟರು.

೪೭. ಎಲೈ ವಿಪ್ರವರ್ಯರೇ, ಹೀಗಿರಲಾಗಿ ಒಂದಾನೊಂದುದಿವಸ ಅತ್ಯಂತ ಮಾಯಾವಿಯೂ, ಅಸುರೋತ್ತಮನೂ, ಮಹಾಶೂರನೂ ಆದ ತಾರಕಾಸುರನು ಕ್ರೌಂಚನಾಮಕಗಿರಿಗೆ ಬಂದು ದೇವರ್ಷಿಗಳಿಗೆ ಹಿಂಸೆಯನ್ನು ಮಾಡಿದನು.

ಸೇಂದ್ರೋಪೇಂದ್ರೈರ್ಮಹಾಭಾಗೈರ್ದೇವೈರಗ್ನಿಸುತಃ ಪ್ರಭುಃ ।
ಸೇನಾಪತ್ಯೇನ ದೈತ್ಯಾರಿರಭಿಷಿಕ್ತಃ ಪ್ರತಾಪವಾನ್ ॥ ೪೮ ॥

ದೇವಸೇನಾಪತಿಸ್ತ್ವೇವಂ ಪಠ್ಯತೇ ನರನಾಯಕಃ ।
ದೇವಾರಿಸ್ಕಂದನಃ ಸ್ಕಂದಃ ಸರ್ವಲೋಕೇಶ್ವರಃ ಪ್ರಭುಃ ॥ ೪೯ ॥

ಪ್ರಮಥೈರ್ವಿವಿಧೈರ್ದೇವೈಸ್ತಥಾ ಭೂತಗಣೈರಪಿ ।
ಮಾತೃಭಿರ್ವಿವಿಧಾಭಿಶ್ಚ ವಿನಾಯಕಗಣೈಸ್ತಥಾ ॥ ೫೦ ॥

ಸಾ ತ್ವಪಶ್ಯದ್ವಿಮಾನಾನಿ ಪತಂತೀ ಸಾ ದಿವಶ್ಚ್ಯುತಾ ।
ತ್ರಸರೇಣುಪ್ರಮಾಣಾನಿ ತೇಷ್ವಪಶ್ಯಚ್ಚ್ಯುತಾನ್ ಪಿತೄನ್ ॥ ೫೧ ॥

---

೪೮. ಆಗ ತಾರಕಾಸುರನ ಸಂಗಡ ಹೋರಾಡಲು ಶಕ್ತಿಯಿಲ್ಲದ ಮಹಾನುಭಾವರೂ ಇಂದ್ರೋಪೇಂದ್ರಾದಿಗಳಿಂದ ಸಹಿತರೂ ಆದ ಸಮಸ್ತ ದೇವತೆಗಳು ಮಹಾನುಭಾವನೂ ಅಸುರಾಂತಕನೂ ಆದ ಷಣ್ಮುಖನನ್ನು ಸೇನಾಪತಿಯನ್ನಾಗಿ ಪಟ್ಟಾಭಿಷೇಕಮಾಡಿದರು.

೪೯. ಆಗ ಮಹಾತ್ಮರು ಆ ಕುಮಾರನನ್ನು ದೇವಸೇನಾಪತಿಯೆಂದೂ ದೇವತೆಗಳಿಗೆ ಶತ್ರುವಾದ ದೈತ್ಯರನ್ನು ಸಂಹಾರಮಾಡಿದ್ದುರಿಂದ ಸ್ಕಂದನೆಂದೂ ಕರೆದರು. ಅವನು ಸರ್ವಲೋಕಕ್ಕೆ ಪ್ರಭುವೆಂದೂ ಈಶ್ವರವೆಂದೂ ಪ್ರಖ್ಯಾತನಾದನು.

೫೦. ಹೀಗೆ ದೈತ್ಯಾಂತಕನೂ ಮಹಾಶೂರನೂ ಆದ ಕುಮಾರಸ್ವಾಮಿಯು ಪ್ರಮಥಗಣಗಳಿಂದಲೂ ನಾನಾ ವಿಧರಾದ ದೇವತೆಗಳಿಂದಲೂ ಭೂತಗಣಗಳಿಂದಲೂ ಷಣ್ಮಾತೃಗಳಿಂದಲೂ ವಿನಾಯಕಗಣಗಳಿಂದಲೂ ಕೂಡಿ ನಕ್ಷತ್ರ ಮಧ್ಯದಲ್ಲಿರುವ ಚಂದ್ರನಂತೆ ದೇದೀಪ್ಯಮಾನನಾಗಿದ್ದನು.

೫೧–೫೨. ಪಿತೃದೇವತೆಗಳ ಮಾನಸಪುತ್ರಿಯು ತನ್ನ ಯೋಗ ಭ್ರಷ್ಟತೆಯಿಂದ ಸ್ವರ್ಗದಿಂದ ಚ್ಯುತಳಾದಳು. ಅವಳು ಸ್ವರ್ಗದಿಂದ ಬೀಳುವಾಗ ಅಗ್ನಿ ಅಗ್ನಿಹೋತ್ರ ವಿಮಾನ ಇವುಗಳಿಂದ ಸಹಿತರಾಗಿ ಆಕಾಶದಿಂದ ಪತನವಾಗುವ ಪಿತೃಗಳನ್ನು ನೋಡಿ

ಶುಶ್ರೂಕ್ಷ್ವಾ ನಪರಿತ್ಯಕ್ತಾನಗ್ನೀನಗ್ನಿಷ್ವಿವಾಹಿತಾನ್ ।
ತ್ರಾಯಧ್ವಮಿತ್ಯುವಾಚಾಥ ಪತಂತೀ ತಾನವಾಕ್‌ಶಿರಾಃ ॥ ೫೨ ॥

ತೈರುಕ್ತಾ ಸಾ ತು ಮಾಭೈಷೀರಿತ್ಯುಕ್ತ್ವಾ ಥಿಷ್ಠತಾಭವತ್ ।
ತತಃ ಪ್ರಾಸಾದಯತ್ಸಾ ವೈ ಪಿತೄಂಸ್ತಾನ್ ದೀನಯಾ ಗಿರಾ ॥ ೫೩ ॥

ಊಚುಸ್ತೇ ಪಿತರಃ ಕನ್ಯಾಂ ಭ್ರಷ್ಟೈಶ್ವರ್ಯಾಂ ವ್ಯತಿಕ್ರಮಾತ್ ।
ಭ್ರಷ್ಟೈಶ್ವರ್ಯಾ ಸ್ವದೋಷೇಣ ತಪಸ್ವಿ ತ್ವಂ ಶುಚಿಸ್ಮಿತೇ ॥ ೫೪ ॥

ಯೈಃ ಕ್ರಿಯಂತೇ ಚ ಕರ್ಮಾಣಿ ಶರೀರೈರಿಹ ದೇವತೈಃ ।
ತೈರೇವ ತತ್ಕರ್ಮಫಲಂ ಪ್ರಾಪ್ನುವಂತೀಹ ದೇವತಾಃ ॥ ೫೫ ॥

---

ದಳು ಅವರೆಲ್ಲರೂ ಮೂರು ಅಣು ರೂಪಿಗಳಾಗಿದ್ದರು. ಹೀಗೆ ಇವರೆಲ್ಲರನ್ನೂ ನೋಡಿ ಪತನವಾಗುವಾಗ ಆ ಮಾನಸಕುಮಾರಿಯು ಎಲೈ ಪಿತೃಗಳೇ ನನ್ನನ್ನು ಕಾಪಾಡಿರಿ ರಕ್ಷಿಸಿರಿ ಎಂದು ಅರಚಿದಳು.

೫೩. ಅದನ್ನು ಕೇಳಿದ ಪಿತೃದೇವತೆಗಳು ಆ ಕುಮಾರಿಯನ್ನು ನೋಡಿ ಹೆದರಬೇಡ ಅಲ್ಲಿಯೇ ನಿಲ್ಲು ಎಂದರು. ಆಗ ಅವಳು ಪಿತೃದೇವತೆಗಳನ್ನು ನೋಡಿ ಅತಿ ದೀನಭಾಷಣದಿಂದ ಸಂತೋಷಪಡಿಸಿದಳು.

೫೪. ಅನಂತರ ಪಿತೃದೇವತೆಗಳು, ಎಲೌ ಸುಂದರಿ, ನೀನು ಮಾಡಿದ ತಪಸ್ಸು ವ್ಯತ್ಯಾಸವಾಗಿ ಅತ್ಯಾಚಾರದಿಂದ ಭ್ರಷ್ಟವಾಗಿದೆ. ಈ ಅನಾಚಾರದಿಂದ ಐಶ್ವರ್ಯವೆಲ್ಲವನ್ನೂ ಕಳೆದುಕೊಂಡು ನಿನ್ನ ಸ್ವಂತ ದ್ವೇಷದಿಂದಲೇ ಬೀಳುತ್ತಿರುವಿಯೆಂದು ಹೇಳಿದರು.

೫೫. ಯಾವ ದೇವತೆಗಳಾದರೂ ಯಾವ ಶರೀರದಿಂದ ಯಾವ ಕರ್ಮಗಳನ್ನು ಮಾಡುತ್ತಾರೋ, ಆ ದೇವತೆಗಳು ಆ ಕರ್ಮಗಳ ಫಲಗಳನ್ನು ಆ ಶರೀರದಿಂದಲೇ ಅನುಭವಿಸಬೇಕು. ಇದು ಲೋಕದ ವಾಡಿಕೆಯಾಗಿದೆ ಎಂದು ಪಿತೃಗಳು ಹೇಳಿದರು.

**ಸದ್ಯಃ ಫಲಂತಿ ಕರ್ಮಾಣಿ ದೇವತ್ವೇ ಪ್ರೇತ್ಯ ಮಾನುಷೇ ।**
**ತಸ್ಮಾದಮಾವಸ್ಸಪತ್ಯತ್ವಂ ಪ್ರೇತ್ಯ ಪ್ರಾಪ್ಸ್ಯಸೇ ಫಲಂ ॥ ೫೬ ॥**

**ಇತ್ಯುಕ್ತಯಾ ವೈ ಪಿತರಃ ಪುನಸ್ತೇ ತು ಪ್ರಸಾದಿತಾಃ ।**
**ಧ್ಯಾತ್ವಾ ಪ್ರಸಾದಂ ಸಂಚಕ್ರುಸ್ತಸ್ಯಾಸ್ತೇತ್ವನುಕಂಪಯಾ ॥ ೫೭ ॥**

**ಅವಶ್ಯಂ ಭಾವಿನಂ ದೃಷ್ಟ್ವಾ ಹ್ಯರ್ಥಮೂಚುಸ್ತತಃ ಸುರಾಃ ।**
**ಸೋಮಪಾಃ ಪಿತರಃ ಕನ್ಯಾಂ ರಾಜ್ಞಶ್ಚೈವ ಹ್ಯಮಾವಸೋಃ ॥ ೫೮ ॥**

**ಉತ್ಪನ್ನಸ್ಯ ಪೃಥಿವ್ಯಾಂ ತು ಮಾನುಷತ್ವೇ ಮಹಾತ್ಮನಃ ।**
**ಕನ್ಯಾ ಭೂತ್ವಾ ತ್ವಿಮಾಂಲ್ಲೋಕಾನ್ಪುನಃ ಪ್ರಾಪ್ಸ್ಯಸಿ ಸ್ವಾನಿತಿ ॥ ೫೯ ॥**

---

೫೬. ದೇವತೆಗಳು, ನಾವು ಮಾಡುವ ಕರ್ಮಗಳಲ್ಲಿ ಏನಾದರೂ ನ್ಯೂನತೆಗಳುಂಟಾದರೆ ಅವರು ಕೂಡಲೇ ತಮ್ಮ ದೇವತ್ವವನ್ನು ಕಳೆದುಕೊಂಡು ಭೂಮಿಯಲ್ಲಿ ಮನುಷ್ಯರಾಗಿ ಹುಟ್ಟಿ ಆ ಕರ್ಮಫಲವನ್ನು ಅನುಭವಿಸಬೇಕು. ಆದುದರಿಂದ ನೀನು ಅಮಾವಸುವಿಗೆ ಪುತ್ರಿಯಾಗಿ ಜನಿಸಿ, ಆ ಕರ್ಮಫಲವನ್ನು ಹೊಂದುವವಳಾಗು ಎಂದು ಹೇಳಿದರು.

೫೭. ಹೀಗೆ ಪಿತೃಗಳು ಹೇಳಲು, ಆ ಮಾನಸಪುತ್ರಿಯು ಪುನಃ ದೀನವಾಕ್ಯಗಳಿಂದ ಅನುಗ್ರಹಿಸಬೇಕೆಂದು ಪ್ರಾರ್ಥಿಸಿದಳು. ತರುವಾಯ ಆ ಪಿತೃಗಳು ಧ್ಯಾನಿಸಿ ಕರುಣೆಯಿಂದ ಅವಳಿಗೆ ಅನುಗ್ರಹವನ್ನು ಮಾಡಿದರು.

೫೮. ತರುವಾಯ ಸೋಮಪಾನಮಾಡುವ ಆ ಪಿತೃದೇವತೆಗಳು ತಮ್ಮ ಧ್ಯಾನದೃಷ್ಟಿಯಿಂದ ಮುಂದೆ ನಡೆಯಬೇಕಾದ ಕಾರ್ಯವನ್ನು ಊಹಿಸಿ ಆ ಕನ್ಯೆಯನ್ನು ಕುರಿತು ಇಂತೆಂದರು. ಎಲೌ ಕುಮಾರಿ, ನೀನು ಅಮಾವಸು ಎಂಬ ರಾಜನಿಗೆ ಪುತ್ರಿಯಾಗಿ ಅವತರಿಸು. ನಿನ್ನಿಂದ ಮಹತ್ಕಾರ್ಯಗಳು ಆಗಬೇಕಾಗಿವೆ ಎಂದರು.

೫೯. ಎಲೌ ಕುಮಾರಿಯೇ, ಭೂಮಿಯಲ್ಲಿ ಮನುಷ್ಯನಾಗಿ ಜನಿಸಿರುವ ಮಹಾತ್ಮನಾದ ಅಮಾವಸು ರಾಜನಿಗೆ ಕುಮಾರಿಯಾಗಿ ಜನಿಸಿ ಮಹತ್ಕಾರ್ಯವನ್ನು ಮಾಡಿ ತರುವಾಯ ನಿನ್ನ ಸ್ವಂತ ಲೋಕವನ್ನು ಪಡೆ ಎಂದು ವರವನ್ನು ಕೊಟ್ಟರು.

ಅಷ್ಟಾವಿಂಶೇ ಭವಿತ್ರೀ ತ್ವಂ ದ್ವಾಪರೇ ಮತ್ಸ್ಯಯೋನಿಜಾ ।
ಅಸ್ಯೈವ ರಾಜ್ಞೋ ದುಹಿತಾ ಅದ್ರಿಕಾಯಾಂ ಹ್ಯಮಾವಸೋಃ ॥ ೬೦ ॥

ಪರಾಶರಸ್ಯ ದಾಯಾದಂ ಋಷೇಸ್ತ್ವಂ ಜನಯಿಷ್ಯಸಿ ।
ಸ ವೇದಮೇಕಂ ವಿಪ್ರರ್ಷಿಶ್ಚತುರ್ಧಾ ವೈ ಕರಿಷ್ಯತಿ ॥ ೬೧ ॥

ಮಹಾಭಿಷಸ್ಯ ಪುತ್ರೌ ದ್ವೌ ಶಂತನೋಃ ಕೀರ್ತಿವರ್ಧನೌ ।
ವಿಚಿತ್ರವೀರ್ಯಂ ಧರ್ಮಜ್ಞಂ ತ್ವಮೇವೋತ್ಪಾದಯಿಷ್ಯಸಿ ॥ ೬೨ ॥

ಚಿತ್ರಾಂಗದಂ ಚ ರಾಜಾನಂ ತೇಜೋಬಲಗುಣಾನ್ವಿತಂ ।
ಏತಾನುತ್ಪಾದ್ಯ ಪುತ್ರಂ ಸ್ವಂ ಪುನರ್ಲೋಕಾನವಾಪ್ಸ್ಯಸಿ ॥ ೬೩ ॥

ವ್ಯತಿಕ್ರಮಾತ್ಪಿತೃಣಾಂ ತ್ವಂ ಪ್ರಾಪ್ಸ್ಯಸೇ ಜನ್ಮ ಕುತ್ಸಿತಂ ।
ತಸ್ಯೈವ ರಾಜ್ಞಸ್ತ್ವಂ ಕನ್ಯಾ ಅದ್ರಿಕಾಯಾಂ ಭವಿಷ್ಯಸಿ ॥ ೬೪ ॥

---

೬೦ ಎಲೌ ಸುಂದರಿ, ನೀನು ಇಪ್ಪತ್ತೆಂಟನೆಯ ದ್ವಾಪರಯುಗದಲ್ಲಿ, ಮತ್ಸ್ಯಯೋನಿಯಲ್ಲಿ ಜನಿಸಿ ತರುವಾಯ ಅಮಾವಸುವೆಂಬ ರಾಜನ ಪತ್ನಿಯಾದ ಅದ್ರಿಕೆ ಎಂಬುವಳಲ್ಲಿ ಪುತ್ರಿಯಾಗಿ ಅವತರಿಸು ಎಂದು ಹೇಳಿದರು.

೬೧. ಆಗ ನೀನು ಪರಾಶರಮಹರ್ಷಿಯನ್ನು ವರಿಸಿ ಅವರಿಂದ ಉತ್ತಮನಾದ ಕುಮಾರನನ್ನು ಪಡೆಯುವೆ. ಮಹಾತ್ಮನಾದ ಆ ಕುಮಾರನು ಅಂಖಂಡವಾದ ವೇದವನ್ನು ಲೋಕಕಲ್ಯಾಣಕ್ಕಾಗಿ ನಾಲ್ಕು ಭಾಗಗಳನ್ನಾಗಿ ಮಾಡುವನು ಎಂದರು.

೬೨–೬೩ ಅನಂತರ ಮಹಾನುಭಾವನಾದ ಶಂತನುಚಕ್ರವರ್ತಿಗೆ ಕೀರ್ತಿವರ್ಧಕರೂ, ಧರ್ಮಜ್ಞರೂ, ತೇಜೋವಂತರೂ, ಬಲಶಾಲಿಗಳೂ, ಗುಣಜ್ಞರೂ ಆದ ವಿಚಿತ್ರವೀರ್ಯ, ಚಿತ್ರಾಂಗದರೆಂಬ ಇಬ್ಬರು ಕುಮಾರರು ಜನಿಸುವರು. ಈಗ ನೀನು ಲೋಕಮಾನ್ಯರಾದ ಈ ಕುಮಾರರನ್ನು ಪಡೆದು ಮಹತ್ಕಾರ್ಯವನ್ನು ಸಾಧಿಸಿ, ಪುನಃ ಶಾಶ್ವತವಾದ ಲೋಕಗಳನ್ನು ಹೊಂದು, ಎಂದು ಹೇಳಿದರು.

೬೪ ಎಲೌ ಕುಮಾರಿ, ನೀನು ಪಿತೃಗಳ ಆಜ್ಞೋಲ್ಲಂಘನೆಯನ್ನು ಮಾಡಿದ್ದರಿಂದ ಈ ನೀಚಜನ್ಮವನ್ನು ಹೊಂದಬೇಕಾಗಿದೆ ಆದ್ದರಿಂದ ಅಮಾವಸು ರಾಜನ ಪತ್ನಿಯಾದ ಅದ್ರಿಕೆಯಲ್ಲಿ ಕುಮಾರಿಯಾಗಿ ಅವತರಿಸು ಎಂದು ಹೇಳಿದರು.

ಕನ್ಯಾ ಭೂತ್ವಾತತಶ್ಚ ತ್ವಮಿಮಾರ್ ಲೋಕಾನವಾಪ್ಸ್ಯಸಿ ।
ಏವಮುಕ್ತ್ವಾ ತು ದಾಶೇಯೀ ಜಾತಾ ಸತ್ಯವತೀ ತು ಸಾ || ೬೫ ||

ಅದ್ರಿಕಾಯಾಂ ಸುತಾ ಮತ್ಸ್ಯಾಂ ಸುತಾ ಜಾತಾ ಹ್ಯಮಾವಸೋಃ ।
ಅದ್ರಿಕಾಮತ್ಸ್ಯಸಂಭೂತಾ ಗಂಗಾಯಾಮುನಸಂಗಮೇ || ೬೬ ||

ತಸ್ಯ ರಾಜ್ಞೋ ಹಿ ಸಾ ಕನ್ಯಾ ರಾಜ್ಞೋ ವೀರ್ಯೇ ಸದೈವ ಹಿ ।
ವಿರಜಾ ನಾಮ ತೇ ಲೋಕಾ ದಿವಿ ರೋಚಂತಿ ತೇ ಗಣಾಃ || ೬೭ ||

ಅಗ್ನಿಷ್ವಾತ್ತಾಃ ಸ್ಮೃತಾಸ್ತತ್ರ ಪಿತರೋ ಭಾಸ್ವರಪ್ರಭಾಃ ।
ತಾರ್ ದಾನವಗಣಾ ಯಕ್ಷಾ ರಕ್ಷೋಗಂಧರ್ವಕಿನ್ನರಾಃ ॥
ಭೂತಸರ್ಪಪಿಶಾಚಾಶ್ಚ ಭಾವಯಂತಿ ಫಲಾರ್ಥಿನಃ || ೬೮ ||

---

೬೫. ಹೀಗೆ ಪಿತೃಗಳು ಹೇಳಲಾಗಿ ಆ ಕುಮಾರಿಯು ಬೆಸ್ತರ ರಾಜನಾದ ದಾಶರಾಜನಿಗೆ ಕುಮಾರಿಯಾಗಿ ಜನಿಸಿ ಸತ್ಯವತೀನಾಮದಿಂದ ಪ್ರಖ್ಯಾತಳಾದಳು.

೬೬. ತರುವಾಯ ಆ ಕುಮಾರಿಯು ಅಮಾವಸು ರಾಜನ ಪತ್ನಿಯೂ, ಮತ್ಸ್ಯ ಜಾತೀಯಳೂ ಆದ ಅದ್ರಿಕೆಯಲ್ಲಿ ಪುತ್ರಿಯಾಗಿ ಜನಿಸಿದಳು. ಆ ಅದ್ರಿಕೆಯಾದರೋ ಗಂಗಾಯಮುನಾಸಂಗಮದಲ್ಲಿ ಮತ್ಸ್ಯದಿಂದ ಜನಿಸಿದ ಕುಮಾರಿಯಾಗಿದ್ದಳು.

೬೭. ಆ ಕುಮಾರಿಯು ದಾಶರಾಜನ ಪುತ್ರಿಯಾಗಿ ಜನಿಸಿದ್ದರಿಂದ ಶೂರಳಾಗಿಯೂ, ಕೀರ್ತಿವಂತಳಾಗಿಯೂ, ಪ್ರಖ್ಯಾತಳಾಗಿಯೂ ಇದ್ದಳು. ಆ ಪಿತೃದೇವತೆಗಳ ಗಣಗಳು ವಿರಜಾನಾಮಕ ಸ್ವರ್ಗದಲ್ಲಿ ಸದಾ ತೃಪ್ತರಾಗಿರುವರು.

೬೮. ಆ ವಿರಜಾನಾಮಕ ಲೋಕದಲ್ಲಿ ಅಗ್ನಿಷ್ವಾತ್ತನಾಮಕರೂ, ತೇಜೋರೂಪಿಗಳೂ ಆದ ಪಿತೃದೇವತೆಗಳು ವಾಸಿಸುವರು. ಅಂತಹ ಪಿತೃದೇವತೆಗಳನ್ನು ಫಲಾಪೇಕ್ಷಿಗಳಾದ ದಾನವರು, ಯಕ್ಷರು, ಗಂಧರ್ವರು, ಕಿನ್ನರರು, ಭೂತಗಳು, ಸರ್ಪಗಳು, ಪಿಶಾಚಗಳು ಇವೇ ಮೊದಲಾದವರು ಸರ್ವಕಾಲದಲ್ಲಿಯೂ ಪೂಜಿಸುತ್ತಾರೆ.

**ಏತೇ ಪುತ್ರಾಃ ಸಮಾಖ್ಯಾತಾಃ ಪುಲಹಸ್ಯ ಪ್ರಜಾಪತೇಃ ।**
**ತ್ರಯ ಏತೇ ಗಣಾಃ ಪ್ರೋಕ್ತಾ ಧರ್ಮಮೂರ್ತಿಧರಾಃ ಶುಭಾಃ ॥ ೬೯ ॥**

**ಏತೇಷಾಂ ಮಾನಸೀ ಕನ್ಯಾ ಪೀವರೀ ನಾಮ ವಿಶ್ರುತಾ ।**
**ಯೋಗಿನೀ ಯೋಗಪತ್ನೀ ಚ ಯೋಗಮಾತಾ ತಥೈವ ಚ ॥ ೭೦ ॥**

**ಭವಿತಾ ದ್ವಾಪರಂ ಪ್ರಾಪ್ಯ ಅಷ್ಟಾವಿಂಶಂ ತು ದೈವತಂ ।**
**ಪರಾಶರಕುಲೋದ್ಭೂತಃ ಶುಕೋ ನಾಮ ಮಹಾತಪಾಃ ॥ ೭೧ ॥**

**ಶ್ರೀಮಾನ್ಯೋಗೀ ಮಹಾಯೋಗೀ ಯೋಗಸ್ತಸ್ಮಾದ್ದ್ವಿಜೋತ್ತಮಃ ।**
**ವ್ಯಾಸಾದರಣ್ಯಾಂ ಸಂಭೂತೋ ವಿಧೂಮ ಇವ ಪಾವಕಃ ॥ ೭೨ ॥**

---

೬೯. ಎಲೈ ಮುನಿವರ್ಯರೇ, ಮೇಲೆ ನಿರೂಪಿಸಿದವರೆಲ್ಲರೂ ಪುಲಹ ಪ್ರಜಾಪತಿಯ ವಂಶದವರು. ಇವರಲ್ಲಿ ಮೂರು ಗಣಗಳಿವೆ. ಆ ಗಣಗಳು ಧರ್ಮ ಸ್ವರೂಪಿಗಳೂ, ಮಂಗಳಕಾರಿಗಳೂ ಆಗಿವೆ

೭೦. ಆ ಪಿತೃದೇವತೆಗಳಿಗೆ ಪೀವರೀ, ಯೋಗಿನೀ, ಯೋಗಪತ್ನೀ ಮತ್ತು ಯೋಗಮಾತೆಯರೆಂಬ ಮಾನಸಪುತ್ರಿಯರು ಲೋಕವಿಖ್ಯಾತರೂ, ಧರ್ಮರೂಪಿಗಳೂ ಪೂಜ್ಯರೂ ಆಗಿದ್ದರು.

೭೧. ಇಪ್ಪತ್ತೆಂಟನೆಯ ದ್ವಾಪರಯುಗದಲ್ಲಿ ದೇವತೆಗಳು ಈ ಭೂಮಿಯಲ್ಲಿ ಅವತರಿಸುವರು. ಆಗ ಮಹಾ ತಪಸ್ವಿಯಾದ ಶುಕಮುನಿಯು ಪರಾಶರ ಕುಲದಲ್ಲಿ ವ್ಯಾಸಮುನಿಗೆ ಪುತ್ರನಾಗಿ ಜನಿಸುವನು.

೭೨. ಕಾಂತಿಯುಕ್ತನೂ, ಮಹಾಯೋಗಿಯೂ, ಯೋಗಾಸಕ್ತನೂ ಬ್ರಾಹ್ಮಣೋತ್ತಮನೂ ಆದ ಶುಕಮುನಿಯು ವ್ಯಾಸಮಹರ್ಷಿಯಿಂದ ಅರಣಿಯಲ್ಲಿ ಧೂಮ ರಹಿತವಾದ ಅಗ್ನಿಯಂತೆ ಅವತರಿಸಿದನು

ಸ ತಸ್ಯಾಂ ಪಿತೃಕನ್ಯಾಯಾಂ ಯೋಗಾಚಾರ್ಯಾನ್ಪರಿಶ್ರುತಾನ್ ।
ಕೃಷ್ಣಂ ಗೌರಂ ಪ್ರಭುಂ ಶಂಭುಂ ತಥಾ ಭೂರಿಶ್ರುತಂ ವಪೌ ॥ ೭೩ ॥

ಕನ್ಯಾಂ ಕೀರ್ತಿಮತೀಂ ಚೈವ ಯೋಗಿನೀಂ ಯೋಗಮಾತರಂ ।
ಬ್ರಹ್ಮದತ್ತಸ್ಯ ಜನನೀ ಮಹಿಷೀ ತ್ವಣುಹಸ್ಯ ತು ॥ ೭೪ ॥

ಏತಾನುತ್ಪಾದ್ಯ ಧರ್ಮಾತ್ಮಾ ಪುತ್ರಾನ್ಯೋಗಮವಾಪ್ಯ ಚ ।
ಮಹಾಯೋಗತಪಾಶ್ಚೈವ ಅಪರಾವರ್ತಿನೀಂ ಗತಿಂ ॥ ೭೫ ॥

ಆದಿತ್ಯಕಿರಣೋಪೇತಂ ತ್ವಪುನರ್ಭಾವಮಾಸ್ಥಿತಃ ।
ಸರ್ವವ್ಯಾಪೀ ವಿನಿರ್ಮುಕ್ತೋ ಭವಿಷ್ಯತಿ ಮಹಾಮುನಿಃ ॥ ೭೬ ॥

---

೭೩. ಅವನು ಆ ಪಿತೃಕನ್ಯೆಯಲ್ಲಿ ಮಹಾಜ್ಞಾನಿಗಳಾದ ಯೋಗಾಚಾರ್ಯರನ್ನೂ, ಕೃಷ್ಣ, ಗೌರ, ಪ್ರಭು, ಶಂಭು ಮತ್ತು ಭೂರಿಶ್ರುತರೆಂಬ ಪುತ್ರರನ್ನೂ ಪಡೆದು ಪ್ರಕಾಶಿಸಿದನು.

೭೪. ಆ ಶುಕಮುನಿಯು ಯೋಗಾಭ್ಯಾಸನಿರತಳೂ, ಯೋಗೋಪದೇಶಕಳೂ, ಬ್ರಹ್ಮದತ್ತನ ಜನನಿಯೂ ಅಣುಹನ ಪತ್ನಿಯೂ ಆದ ಕೀರ್ತಿಮತಿಯೆಂಬ ಕುಮಾರಿಯನ್ನು ಪಡೆದನು.

೭೫. ಧರ್ಮಾತ್ಮನೂ, ಮಹಾಯೋಗಿಯೂ ಆದ ಶುಕಮುನಿಯು ಮೇಲೆ ನಿರೂಪಿಸಿದ ಮಕ್ಕಳನ್ನು ಪಡೆದು ಯೋಗಾಸಕ್ತನೂ, ಮಹಾತಪೋನಿರತನೂ ಆಗಿ ಪುನರಾವೃತ್ತಿರಹಿತವಾದ ಶಾಶ್ವತವಾದ ಪರಮಪದವಿಯನ್ನು ಹೊಂದಿದನು.

೭೬. ಮಹಾತಪಸ್ವಿಯಾದ ಶುಕಮುನಿಯು ಸೂರ್ಯರಶ್ಮಿದ್ವಾರಾ ಪುನರಾವೃತ್ತಿಶೂನ್ಯವಾದ ಪರಮಪದವಿಯನ್ನು ಹೊಂದಿ ನಿತ್ಯನೂ, ಮುಕ್ತನೂ ಆಗುವನು.

ಅಮೂರ್ತಿಮಂತಃ ಪಿತರೋ ಧರ್ಮಮೂರ್ತಿಧರಾಸ್ತು ಯೇ ।
ತ್ರಯ ಏತೇ ಗಣಾಸ್ತೇಷಾಂ ಚತ್ವಾರೋಽನ್ಯೇ ನಿಬೋಧತ ॥ ೭೭ ॥

ಯಾನ್ವಕ್ಷ್ಯಾಮಿ ದ್ವಿಜಶ್ರೇಷ್ಠಾ ಮೂರ್ತಿಮಂತೋ ಮಹಾಪ್ರಭಾಃ ।
ಉತ್ಪನ್ನಾಸ್ತೇ ಸ್ವಧಾಯಾಸ್ತು ಕನ್ಯಾ ಹ್ಯಗ್ನೇಃ ಕವೇಃ ಸುತಾಃ ॥ ೭೮ ॥

ಪಿತರೋ ದೇವಲೋಕೇಷು ಜ್ಯೋತಿರ್ಭಾಸಿಷು ಭಾಸ್ವರಾಃ ।
ಸರ್ವಕಾಮಸಮೃದ್ಧೇಷು ದ್ವಿಜಾ ಸ್ತಾರ್ಭಾವಯಂತ್ಯುತ ॥ ೭೯ ॥

ಏತೇಷಾಂ ಮಾನಸೀ ಕನ್ಯಾ ಗೌರ್ನಾಮ ದಿವಿ ವಿಶ್ರುತಾ ।
ದತ್ತಸೇನಾ ಕುಮಾರೇಣ ಶುಕ್ರಸ್ಯ ಮಹಿಷೀ ಪ್ರಿಯಾ ॥ ೮೦ ॥

---

೭೭. ಧರ್ಮಮೂರ್ತಿಗಳೂ, ಪ್ರಾಕೃತಮೂರ್ತಿರಹಿತರೂ ಆದ ಪಿತೃದೇವತೆಗಳು ಮೂರು ಪಂಗಡಗಳಾಗಿರುವರು. ಮೂರ್ತಿವಂತರಾದ ಆ ದೇವತೆಗಳು ನಾಲ್ಕು ವಿಧವಾಗಿ ವಿಭಾಗಿಸಲ್ಪಟ್ಟಿರುತ್ತಾರೆ. ಹೀಗೆ ಒಟ್ಟು ಆ ಪಿತೃಗಣಗಳು ಏಳು ವಿಧಗಳಾಗಿವೆ ಎಂದು ತಿಳಿಯಬೇಕೆಂದನು.

೭೮. ಎಲೈ ಮುನಿವರ್ಯರೇ ಮಹಾನುಭಾವರೂ ಮೂರ್ತಿಮಂತರೂ ಆದ ಯಾವ ಪಿತೃಗಣಗಳಿವೆಯೋ, ಅವರು ಅಗ್ನಿಯ ಪತ್ನಿಯಾದ ಸ್ವಧಾದೇವಿಯಲ್ಲಿ ಮಕ್ಕಳಾಗಿ ಜನಿಸಿದರು. ಅವಳು ಕವಿಯ ಪುತ್ರಿಯಾಗಿದ್ದಳು.

೭೯. ತೇಜೋರೂಪಿಗಳಾದ ಆ ಪಿತೃದೇವತೆಗಳು ಕಾಂತಿಯಿಂದ ಹೊಳೆಯುತ್ತಿರುವ ಸರ್ವಕಾಮಗಳಿಂದ ಪೂರ್ಣವಾದ ದೇವಲೋಕಗಳಲ್ಲಿ ನಿತ್ಯತೃಪ್ತರಾಗಿರುವರು, ಮತ್ತು ಮುಕ್ತರಾಗಿರುವರು.

೮೦. ಇವರಲ್ಲಿ ಗೌರ್ನಾಮಕಳಾದ ಮಾನಸಕುಮಾರಿಯು ಸ್ವರ್ಗಲೋಕದಲ್ಲಿ ಪ್ರಸಿದ್ಧಳಾಗಿರುವಳು. ಆಕೆಯು ಸೇನಾಪತಿಯಾದ ಕುಮಾರನ ಜನನಿಯೂ ಶುಕ್ರಾಚಾರ್ಯನ ಪ್ರಿಯಮಹಿಷಿಯೂ ಆಗಿರುವಳು.

ಏಕತ್ರಿಂಶಚ್ಚ ವಿಖ್ಯಾತಾ ಭೃಗೂಣಾಂ ಕೀರ್ತಿವರ್ಧನಾಃ ।
ಮರೀಚಿಗರ್ಭಾಸ್ತೇ ಲೋಕಾಃ ಸಮಾವೃತ್ಯ ದಿವಿ ಸ್ಥಿತಾಃ ॥ ೮೧ ॥

ಏತೇ ಹ್ಯಂಗಿರಸಃ ಪುತ್ರಾಃ ಸಾಧ್ಯೈಃ ಸಹ ವಿವರ್ಧಿತಾಃ ।
ಉಪಹೂತಾಃ ಸ್ಮೃತಾಸ್ತೇ ತು ಪಿತರೋ ಭಾಸ್ವರಾ ದಿವಿ ॥
ತಾನ್ ಕ್ಷತ್ರಿಯಗಣಾನ್ ದೃಷ್ಟ್ವಾ ಭಾವಯಂತಿ ಫಲಾರ್ಥಿನಃ ॥ ೮೨ ॥

ಏತೇಷಾಂ ಮಾನಸೀ ಕನ್ಯಾ ಯಶೋದಾ ನಾಮ ವಿಶ್ರುತಾ ।
ಪತ್ನೀ ಸಾ ವಿಶ್ವಮಹತಃ ಸ್ನುಷಾ ವೈ ವಿಶ್ವಶರ್ಮಿಣಃ ॥ ೮೩ ॥

ರಾಜರ್ಷೇರ್ಜನನೀ ದೇವೀ ಖಟ್ವಾಂಗಸ್ಯ ಮಹಾತ್ಮನಃ ।
ಯಸ್ಯ ಯಜ್ಞೇ ಪುರಾ ಗೀತಾ ಗಾಥಾ ಗೀತೈರ್ಮಹರ್ಷಿಭಿಃ ॥ ೮೪ ॥

---

೮೧. ಭೃಗುವಂಶಕ್ಕೆ ಕೀರ್ತಿದಾಯಕರೂ, ಮೂವತ್ತೊಂದು ಸಂಖ್ಯಾಕರೂ, ಮರೀಚಮಹರ್ಷಿಯ ಕುಮಾರರೂ ಆದ ಆ ದೇವಗಣದವರು ಸ್ವರ್ಗಲೋಕದಲ್ಲಿ ಸರ್ವತ್ರ ವ್ಯಾಪ್ತರಾಗಿದ್ದರು, ಮತ್ತು ಲೋಕಮಾನ್ಯರೂ ಸುಪ್ರಸಿದ್ಧರೂ ಆಗಿರುವರು.

೮೨. ಇವರು ಅಂಗಿರಸಮುನಿಯ ಪುತ್ರರು ಸಾಧ್ಯರ ಸಂಗಡ ವೃದ್ಧಿಯನ್ನು ಪಡೆದರು. ಮಹಾತೇಜಸ್ವಿಗಳಾದ ಅವರು ಪಿತೃದೇವತೆಗಳಿಂದ ಆಹೂತರಾಗಿ ಸ್ವರ್ಗಲೋಕದಲ್ಲಿ ಮಾನ್ಯರಾಗಿರುವರು ಅವರು ಕ್ಷತ್ರಿಯರಾಗಿರುವರು. ಫಲಾಕಾಂಕ್ಷಿಗಳಾದ ಪ್ರಜೆಗಳು ಅವರನ್ನು ಪೂಜಿಸುವರು.

೮೩. ಇವರಿಗೆ ಯಶೋದಾನಾಮಕಳಾದ ಮಾನಸಕುಮಾರಿಯು ಸುಪ್ರಸಿದ್ಧ ಸಾಧ್ವೀಮಣಿಯಾಗಿರುವಳು. ಆಕೆಯು ವಿಶ್ವಮಹಾತ್ಮನ ಕುಟುಂಬಿಯೂ ವಿಶ್ವಕವಿಯ ಸೊಸೆಯೂ ಆಗಿರುವಳು.

೮೪. ಆ ನಾರೀಮಣಿಯು ರಾಜರ್ಷಿಯೂ ಮಹಾತ್ಮನೂ ಆದ ಖಟ್ವಾಂಗ ಮಹಾರಾಜನ ಜನನಿಯೂ ಮಾನ್ಯಳೂ ಆಗಿರುವಳು. ಅಂತಹ ರಾಜರ್ಷಿಯಾದ ಖಟ್ವಾಂಗ ಮಹಾರಾಜನ ಯಾಗಶಾಲೆಯಲ್ಲಿ ಮಹರ್ಷಿಗಳು ಬಹಳ ಇಂಪಾಗಿ ಪದ್ಯಗಳನ್ನು ಗಾನಮಾಡಿದರು.

ಅಗ್ನೇರ್ಜನ್ಮ ತಥಾ ದೃಷ್ಟ್ವಾ ಶಾಂಡಿಲ್ಯಸ್ಯ ಮಹಾತ್ಮನಃ ।
ಯಜಮಾನಂ ದಿಲೀಪಂ ಯೇ ಪಶ್ಯಂತಿ ಸುಸಮಾಹಿತಾಃ ॥
ಸತ್ಯವ್ರತಂ ಮಹಾತ್ಮಾನಂ ತೇ ಸ್ವರ್ಗಜಯಿನೋಽಮರಾಃ ॥ ೮೫ ॥

ಆಜ್ಯಪಾ ನಾಮ ಪಿತರಃ ಕರ್ದಮಸ್ಯ ಪ್ರಜಾಪತೇಃ ।
ಸಮುತ್ಪನ್ನಸ್ಯ ಪುಲಹಾದುತ್ಪನ್ನಾಸ್ತಸ್ಯ ವೈ ಪುನಃ ॥ ೮೬ ॥

ಲೋಕೇಷ್ವೇತೇಷು ವರ್ತಂತೇ ಕಾಮಗೇಷು ವಿಹಂಗಮಾಃ ।
ಏತಾನ್ವೈಶ್ಯಗಣಾಃ ಶ್ರಾದ್ಧೇ ಭಾವಯಂತಿ ಫಲಾರ್ಥಿನಃ ॥ ೮೭ ॥

ಏತೇಷಾಂ ಮಾನಸೀ ಕನ್ಯಾ ವಿರಜಾ ನಾಮ ವಿಶ್ರುತಾ ।
ಯಯಾತೇರ್ಜನನೀ ಸಾಧ್ವೀ ಪತ್ನೀ ಸಾ ನಹುಷಸ್ಯ ತು ॥ ೮೮ ॥

---

೮೫. ಮಹಾತ್ಮನಾದ ಶಾಂಡಿಲ್ಯಮುನಿಯು ಅಗ್ನಿದೇವನಿಂದ ಉತ್ಪನ್ನನಾದನು. ಅವರ ವಂಶದಲ್ಲಿಯೇ ದಿಲೀಪ ಮಹಾರಾಜನು ಜನಿಸಿ ಮಹಾಯಾಗಗಳನ್ನು ಮಾಡಿದನು. ಸ್ವರ್ಗವಾಸಿಗಳಾದ ದೇವತೆಗಳು ಮಹಾತ್ಮನೂ ಸತ್ಯವ್ರತನೂ ಆದ ಆ ರಾಜನನ್ನು ಪ್ರಶಂಸಿಸಿದರು.

೮೬. ಆಜ್ಯಪಾನಾಮಕ ಪಿತೃದೇವತೆಗಳು ಪೂರ್ವದಲ್ಲಿ ಕರ್ದಮ ಪ್ರಜಾಪತಿಯ ವಂಶದಲ್ಲಿ ಉತ್ಪನ್ನರಾಗಿದ್ದರು. ತರುವಾಯ ಆ ಪಿತೃದೇವತೆಗಳು ಪುಲಹ ಮಹರ್ಷಿಯ ವಂಶದಲ್ಲಿ ಪುನಃ ಉತ್ಪನ್ನರಾದರು.

೮೭. ಈ ದೇವತೆಗಳು ಈ ಮೂರು ಲೋಕಗಳಲ್ಲಿಯೂ ಪಕ್ಷಿಗಳಂತೆ ಸ್ವೇಚ್ಛಾಚಾರಿಗಳಾಗಿರುವರು. ಇವರು ವೈಶ್ಯಗಣಕ್ಕೆ ಸೇರಿದ ದೇವತೆಗಳಾಗಿರುವರು. ಫಲಾಕಾಂಕ್ಷಿಗಳಾದ ಪುರುಷರು ಈ ದೇವತೆಗಳನ್ನು ಶ್ರಾದ್ಧಕಾಲದಲ್ಲಿ ಪೂಜೆಯನ್ನು ಮಾಡುವರು.

೮೮. ಈ ಪಿತೃಗಳಿಗೆ ವಿರಜಾನಾಮಕಳಾದ ಮಾನಸಪುತ್ರಿಯು ಜನಿಸಿ ಪ್ರಖ್ಯಾತಳಾಗಿರುವಳು. ಆ ಸಾಧ್ವೀಮಣಿಯು ನಹುಷಮಹಾರಾಜನ ಜನನಿ ಯಾಗಿಯೂ ಇರುವಳು.

**ಸುಕಾಲಾ ನಾಮ ಪಿತರೋ ವಸಿಷ್ಠಸ್ಯ ಪ್ರಜಾಪತೇಃ ।**
**ಹಿರಣ್ಯಗರ್ಭಸ್ಯ ಸುತಾಃ ಶೂದ್ರಾಸ್ತಾಂ ಭಾವಯಂತ್ಯುತ ॥ ೮೯ ॥**

**ಮಾನಸಾ ನಾಮ ತೇ ಲೋಕಾ ವಹಂತೇ ಯತ್ರ ತೇ ದಿವಿ ।**
**ಏತೇಷಾಂ ಮಾನಸೀ ಕನ್ಯಾ ನರ್ಮದಾ ಸರಿತಾಂ ವರಾ ॥ ೯೦ ॥**

**ಸಾ ಭಾವಯಂತಿ ಭೂತಾನಿ ದಕ್ಷಿಣಾಪಥಗಾಮಿನೀ ।**
**ಜನನೀ ತ್ರಸದ್ದಸ್ಯೋರ್ಹಿ ಪುರುಕುತ್ಸಪರಿಗ್ರಹಃ ॥ ೯೧ ॥**

**ಏತೇಷಾಮಭ್ಯುಪಗಮಾನ್ಮಾತುರ್ಮನ್ವಂತರೇಶ್ವರಃ ।**
**ಮನ್ವಂತರಾದೌ ಶ್ರಾದ್ಧಾನಿ ಪ್ರವರ್ತಯತಿ ಸರ್ವಶಃ ॥ ೯೨ ॥**

---

೮೯. ವಸಿಷ್ಠ ಪ್ರಜಾಪತಿಗೆ ಸುಕಲಾನಾಮಕರಾದ ಪಿತೃಗಳು ಉತ್ಪನ್ನ ರಾದರು. ಅವರು ಬ್ರಹ್ಮದೇವನ ಮಾನಸಪುತ್ರರಾಗಿಯೂ, ಸುಪ್ರಸಿದ್ಧರಾಗಿಯೂ ಇರುವರು. ಅವರನ್ನು ಶೂದ್ರದೇವತೆಗಳೆಂದು ಭಾವಿಸುವರು.

೯೦. ಆ ದೇವತೆಗಳು ಸ್ವರ್ಗಲೋಕದಲ್ಲಿರುವ ಮಾನಸಲೋಕದಲ್ಲಿ ವಾಸಿಸು ವರು. ಈ ಪಿತೃದೇವತೆಗಳಿಗೆ ನದಿಗಳಲ್ಲಿ ಶ್ರೇಷ್ಠಳಾದ ನರ್ಮದಾನಾಮಕ ಕುಮಾರಿಯು ಮಾನಸಪುತ್ರಿಯಾಗಿರುವಳು.

೯೧. ಆ ನಾರೀಮಣಿಯು ದಕ್ಷಿಣಮಾರ್ಗವಾಗಿ ಸಂಚಾರಮಾಡಿ ಪ್ರಜೆಗಳನ್ನು ಸಂತೋಷಗೊಳಿಸುವಳು. ಆ ನಾರಿಯು ತ್ರಸದಸ್ಯುವಿನ ಜನನಿಯಾಗಿಯೂ, ಪುರುಕುತ್ಸನ ಭಾರ್ಯಳಾಗಿಯೂ ಇರುವಳು.

೯೨. ಮೇಲೆ ಹೇಳಿದ ಮಾನಸಕುಮಾರಿಯರನ್ನು ಅಂಗೀಕರಿಸಿರುವುದರಿಂದ ಸರ್ವವೂ ಸಮಂಜಸವಾಗಿರುವುದು. ಆ ಮಾನಸಕುಮಾರಿಯರೇ ಸಮಸ್ತರಾದ ಪಿತೃದೇವತೆಗಳಿಗೂ ಜನನಿಯರಾಗಿರುವರು. ಆದುದರಿಂದ ಆಯಾ ಮನ್ವಂತ ರೇಶ್ವರರು ತಮ್ಮ ತಮ್ಮ ಮನ್ವಂತರಗಳ ಆದಿಯಲ್ಲಿ ಶ್ರಾದ್ಧಗಳನ್ನು ಲೋಕದಲ್ಲಿ ಹರಡಿದರು.

ಪಿತೄಣಾಮಾನುಪೂರ್ವ್ಯೇಣ ಸರ್ವೇಷಾಂ ದ್ವಿಜಸತ್ತಮಾಃ ।
ತಸ್ಮಾದಿಹ ಸ್ವಧರ್ಮೇಣ ಶ್ರಾದ್ಧಂ ದೇಯಂ ತ ಶ್ರದ್ಧಯಾ ॥ ೯೩ ॥

ಸರ್ವೇಷಾಂ ರಾಜತೈಃ ಪಾತ್ರೈರಪಿ ವಾ ರಜತಾನ್ವಿತೈಃ ।
ದತ್ತಂ ಸ್ವಧಾಂ ಪುರೋಧಾಯ ತಥಾ ಪ್ರೀಣಾತಿ ವೈ ಪಿತೄನ್ ॥ ೯೪ ॥

ಸೋಮಸ್ಯಾಪ್ಯಾಯನಂ ಕೃತ್ವಾ ಹ್ಯಗ್ನೇರ್ವೈವಸ್ವತಸ್ಯ ಚ ।
ಉದಗಾಯನಂ ಚಾಗ್ನೌ ಚ ಅಶ್ವಮೇಧಾಂತದಾಪ್ನುಯಾತ್ ॥ ೯೫ ॥

ಪಿತೄನ್ ಪ್ರೀಣಾತಿ ವೈ ಭಕ್ತ್ಯಾ ಪಿತರಃ ಪ್ರೀಣಯಂತಿ ತಂ ।
ಪಿತರಃ ಪುಷ್ಟಿಕಾಮಸ್ಯ ಪ್ರಜಾಕಾಮಸ್ಯ ವಾ ಪುನಃ ॥
ಪುಷ್ಟಿಂ ಪ್ರಜಾಂ ಚ ಸ್ವರ್ಗಂ ಚ ಪ್ರಯಚ್ಛಂತಿ ನ ಸಂಶಯಃ ॥ ೯೬ ॥

---

೯೩. ಎಲೈ ವಿಪ್ರವರ್ಯರೇ, ಸಮಸ್ತರಾದ ಪಿತೃದೇವತೆಗಳನ್ನು ಕ್ರಮವಾಗಿಯೂ, ಯಥಾಸ್ಥಿತವಾಗಿಯೂ ನಿರೂಪಿಸಿರುವೆನು. ಆದುದರಿಂದ ಪ್ರಜೆಗಳು, ಶ್ರದ್ಧೆಯಿಂದ ಶ್ರಾದ್ಧಕರ್ಮಗಳನ್ನು ಮಾಡಿ, ಪಿತೃಗಳಿಗೆ ಪಿಂಡದಾನಾದಿಗಳನ್ನು ಮಾಡಬೇಕು.

೯೪. ಶ್ರಾದ್ಧದಲ್ಲಿ ಉಪಯೋಗಿಸುವ ಪಾತ್ರೆಗಳೆಲ್ಲವೂ ರಜತಮಯವಾಗಿರಬೇಕು. ಅಥವಾ ರಜತಮಿಶ್ರವಾಗಿಯಾದರೂ ಇರಬೇಕು. ಹೀಗೆ ರಜತಪಾತ್ರೆಯಲ್ಲಿ ತರ್ಪಣಾದಿಗಳನ್ನು ಕೊಟ್ಟರೆ ಅದರಿಂದ ಪಿತೃಗಳು ಸಂಪೂರ್ಣವಾಗಿ ತೃಪ್ತರಾಗುವರು.

೯೫. ಆದುದರಿಂದ ಸೋಮದೇವನಿಗೂ, ಅಗ್ನಿಪುರುಷನಿಗೂ, ವೈವಸ್ವತ ಮನುವಿಗೂ, ಉತ್ತರಾಯಣದಲ್ಲಿ ಯಾಗದ ಮೂಲಕ ದೇವತೆಗಳಿಗೂ ಯಾವನು ಸಂತೋಷಪಡಿಸುವನೋ ಅವನು ಅಶ್ವಮೇಧ ಯಾಗದ ಫಲವನ್ನು ಹೊಂದುವನು.

೯೬. ಯಾವ ಪುರುಷನು ಭಕ್ತಿಯಿಂದ ಪಿತೃಗಳನ್ನು ಸಂತೋಷಪಡಿಸುವನೋ ಆ ಪಿತೃಗಳು ಆ ಪುರುಷನಿಗೆ ಸಕಲಾಭೀಷ್ಟಗಳನ್ನು ಕೊಟ್ಟು ಸಂತೋಷಪಡಿಸುವರು. ಸಂತುಷ್ಟರಾದ ಪಿತೃದೇವತೆಗಳು ಪುಷ್ಟಿಕಾಮನಿಗೆ ಪುಷ್ಟಿಯನ್ನೂ ಪ್ರಜಾಕಾಮನಿಗೆ ಸಂತಾನವನ್ನೂ ಮತ್ತು ಐಶ್ವರ್ಯ, ಸಂತತಿ, ಸ್ವರ್ಗ ಮೊದಲಾದ ಸರ್ವಾಭೀಷ್ಟಗಳನ್ನೂ ಕೊಡುವರು.

ದೇವಾಕಾರ್ಯಾದಪಿ ಸದಾ ಪಿತೃಕಾರ್ಯಂ ವಿಶಿಷ್ಯತೇ ।
ದೇವತಾಭ್ಯಃ ಪಿತೄಣಾಂ ಹಿ ಪೂರ್ವಮಾಪ್ಯಾಯನಂ ಸ್ಮೃತಂ ॥ ೯೭ ॥

ನ ಹಿ ಯೋಗಗತಿಃ ಸೂಕ್ಷ್ಮಾ ಪಿತೄಣಾಮಪಿ ತೃಪ್ತಯಃ ।
ತಪಸಾ ಹಿ ಪ್ರಸಿದ್ಧೇನ ದೃಶ್ಯಂತೇ ಮಾಂಸಚಕ್ಷುಷಾ ॥ ೯೮ ॥

ಇತ್ಯೇತೇ ಪಿತರಶ್ಚೈವ ಲೋಕಾ ದುಹಿತರಶ್ಚ ವೈ ।
ದೌಹಿತ್ರಾ ಯಜಮಾನಾಶ್ಚ ಪ್ರೋಕ್ತಾ ಯೇ ಭಾವಯಂತಿ ತಾನ್ ॥ ೯೯ ॥

ಚತ್ವಾರೋ ಮೂರ್ತಿಮಂತಶ್ಚ ತ್ರಯಸ್ತೇಷಾಮಮೂರ್ತಯಃ ।
ತೇಭ್ಯಃ ಶ್ರಾದ್ಧಾನಿ ಸತ್ಕೃತ್ಯ ದೇವಾಃ ಕುರ್ವಂತಿ ಯತ್ನತಃ ॥ ೧೦೦ ॥

---

೯೭. ದೇವಕಾರ್ಯಗಳಿಗಿಂತಲೂ ಪಿತೃಕಾರ್ಯಗಳು ಉತ್ತಮವಾದುವು. ದೇವತೆಗಳಿಗಿಂತಲೂ ಪಿತೃಸಂತೋಷವೇ ಮೊದಲು ಮಾಡಬೇಕಾಗಿದೆ. ಇದರಿಂದ ಸಕಲೇಷ್ಟಾರ್ಥಗಳೂ ಉಂಟಾಗುವುವು.

೯೮. ಶ್ರಾದ್ಧದಂತೆ ಯೋಗಮಾರ್ಗದಿಂದಲೂ ಪಿತೃಗಳಿಗೆ ತೃಪ್ತಿಯನ್ನುಂಟಾಗುವುದಿಲ್ಲ. ಆ ಸೂಕ್ಷ್ಮಮಾರ್ಗಗಳು ತಪಶ್ಶಕ್ತಿಯಿಂದ ಮಾತ್ರವೇ ನೋಡಲು ಸಾಧ್ಯವು. ಈ ಚರ್ಮ ಚಕ್ಷುಸ್ಸಿನಿಂದ ತಿಳಿಯಲು ಸುತರಾಂ ಸಾಧ್ಯವಿಲ್ಲ.

೯೯. ಈ ರೀತಿಯಾಗಿ ಮೇಲೆ ನಿರೂಪಿಸಿರುವ ಪಿತೃಗಳು, ಲೋಕಗಳು, ಮಾನಸಕುಮಾರಿಯರು, ಪೌತ್ರರು, ಯಜಮಾನರು ಇವರ ವಿಷಯಗಳನ್ನು ವಿಶದವಾಗಿ ತಿಳಿಯಪಡಿಸಿರುವೆನು. ಯಾವನು ಇವರನ್ನು ಪೂಜಿಸುವನೋ ಅವನು ಅನಂತ ಫಲಗಳನ್ನು ಹೊಂದುವನು.

೧೦೦. ಮೇಲೆ ಹೇಳಿದ ದೇವತೆಗಳಲ್ಲಿ ನಾಲ್ಕು ಗಣಗಳವರು ಅಮೂರ್ತಿವಂತರಾಗಿರುವರು. ಆಕಾರರಹಿತರಾಗಿರುವರು. ಇಂತಹ ಪಿತೃದೇವತೆಗಳಿಗೆ ದೇವತೆಗಳು ಶ್ರಾದ್ಧದಲ್ಲಿ ತೃಪ್ತಿಯನ್ನುಂಟುಮಾಡುವರು. ದೇವತೆಗಳೂ ಸಹ ಶ್ರಾದ್ಧವನ್ನು ಮಾಡಿ ಪಿತೃದೇವತೆಗಳಿಗೆ ಸಂತೋಷವನ್ನುಂಟುಮಾಡುವರು.

ಭಕ್ತಾಃ ಪ್ರಾಂಜಲಯಃ ಸರ್ವೇ ಸೇಂದ್ರಾಸ್ತದ್ಗತಮಾನಸಾಃ ।
ವಿಶ್ವೇ ಚ ಸಿಕತಾಶ್ಚೈವ ಪೃಶ್ನಿಜಾಃ ಶೃಂಗಿಣಸ್ತಥಾ ॥ ೧೦೧ ॥

ಕೃಷ್ಣಾಃ ಶ್ವೇತಾಸ್ತ್ವಜಾಶ್ಚೈವ ವಿಧಿವತ್ಪೂಜಯಂತ್ಯುತ ।
ಪ್ರಜಾಸ್ತಾ ವಾತರಶನಾ ದಿವಾಕೀರ್ತ್ಯಾಸ್ತಥೈವ ಚ ॥ ೧೦೨ ॥

ಲೇಖಾಶ್ಚ ಮರುತಶ್ಚೈವ ಬ್ರಹ್ಮಾದ್ಯಾಶ್ಚ ದಿವೌಕಸಃ ।
ಅತ್ರಿಭೃಗ್ವಂಗಿರಾದ್ಯಾಶ್ಚ ಋಷಯಃ ಸರ್ವ ಏವ ಚ ॥ ೧೦೩ ॥

ಯಕ್ಷಾ ನಾಗಾಃ ಸುಪರ್ಣಾಶ್ಚ ಕಿನ್ನರಾ ರಾಕ್ಷಸೈಃ ಸಹ ।
ಪಿತೄಂಸ್ತ್ವಪೂಜಯರ್ನ್ ಸರ್ವೇ ನಿತ್ಯಮೇವ ಫಲಾರ್ಥಿನಃ ॥ ೧೦೪ ॥

ಏವಮೇತೇ ಮಹಾತ್ಮಾನಃ ಶ್ರಾದ್ಧೇ ಸತ್ಕೃತ್ಯ ಪೂಜಿತಾಃ ।
ಸರ್ವಾನ್ಕಾಮಾನ್ಪ್ರಯಚ್ಛಂತಿ ಶತಶೋಽಥ ಸಹಸ್ರಶಃ ॥ ೧೦೫ ॥

---

೧೦೧-೧೦೨. ಭಕ್ತರೂ ಅಂಜಲಿಬದ್ಧರೂ ಆದ ಸಮಸ್ತರಾದ ಇಂದ್ರಾದಿ ದೇವತೆಗಳೂ, ವಿಶ್ವೇದೇವತೆಗಳೂ, ಸಿಕತರೂ, ಪ್ರಶ್ನಿಜರೂ, ಶೃಂಗಿಣರೂ ಇವರೇ ಮೊದಲಾದವರು ಪಿತೃಗಳನ್ನೇ ಧ್ಯಾನಿಸುತ್ತಾ ತದ್ಗತಮನಸ್ಕರಾಗಿ ಪಿತೃದೇವತೆಗಳನ್ನು ಪೂಜಿಸುವರು. ಇವರಂತೆಯೇ ಕೃಷ್ಣರು, ಶ್ವೇತರು, ಅಜರು, ವಾತಾಶನರು, ದಿವಾಕೀರ್ತಿಗಳು ಇವರೇ ಮೊದಲಾದ ಪ್ರಜೆಗಳೂ ಕೂಡ ಸದಾ ಕಾಲದಲ್ಲಿಯೂ ಭಕ್ತಿಯಿಂದ ಆ ಪಿತೃಗಳನ್ನು ಪೂಜಿಸುತ್ತಾರೆ.

೧೦೩-೧೦೪. ಮತ್ತು ಲೇಖರು, ಮರುತರು, ಬ್ರಹ್ಮಾದ್ಯರು, ದೇವತೆಗಳು, ಅತ್ರಿ, ಅಂಗಿರಸು, ಭೃಗುಗಳು ಇವರೇ ಮೊದಲಾದ ಸಮಸ್ತ ಮಹರ್ಷಿಗಳು ಮತ್ತು ಯಕ್ಷರು, ನಾಗಗಳು, ಸುವರ್ಣರು, ಕಿನ್ನರರು, ರಾಕ್ಷಸರು ಇವರು ಫಲಾಪೇಕ್ಷಿಗಳಾಗಿ ನಿರಂತರವೂ ಆ ಪಿತೃದೇವತೆಗಳನ್ನು ಪೂಜಿಸುತ್ತಾರೆ.

೧೦೫. ಪೂರ್ವೋಕ್ತಕ್ರಮದಲ್ಲಿ ಶ್ರಾದ್ಧಕಾಲದಲ್ಲಿ ಭಕ್ತಿಯಿಂದ ಪೂಜಿತರೂ, ಮಹಾತ್ಮರೂ ಆದ ಈ ಪಿತೃದೇವತೆಗಳು ನೂರರಷ್ಟು ಅಥವಾ ಸಾವಿರಪಾಲಷ್ಟು ಅಧಿಕವಾಗಿ ಇಷ್ಟಾರ್ಥಗಳನ್ನೂ ಫಲಗಳನ್ನೂ ಕೊಡುತ್ತಾರೆ.

**ಹಿತ್ವಾ ತ್ರೈಲೋಕ್ಯಸಂಸಾರಂ ಜರಾಮೃತ್ಯುಭಯಂ ತಥಾ ।**
**ಮೋಕ್ಷಂ ಯೋಗಮಯೈಶ್ವರ್ಯಂ ಪ್ರಯಚ್ಛಂತಿ ಪಿತಾಮಹಾಃ ॥ ೧೦೬ ॥**

**ಮೋಕ್ಷೋಪಾಯಮಥೈಶ್ವರ್ಯಂ ಸೂಕ್ಷ್ಮದೇಹಾಶ್ಚ ದೇವತಾಃ ।**
**ಕೃತ್ಸ್ನಂ ವೈರಾಗ್ಯಮಾನಂತ್ಯಂ ಪ್ರಯಚ್ಛಂತಿ ಪಿತಾಮಹಾಃ ॥ ೧೦೭ ॥**

**ಐಶ್ವರ್ಯಂ ವಿಹಿತಂ ಯೋಗಮೈಶ್ವರ್ಯಂವಿತ್ತಮುತ್ತಮಂ ।**
**ಯೋಗೈಶ್ವರ್ಯಾದೃತೇ ಮೋಕ್ಷಃ ಕಥಂಚಿನ್ನೋಪಪದ್ಯತೇ ॥ ೧೦೮ ॥**

**ಅಪಕ್ಷಸ್ಯೈವ ಗಮನಂ ಗಗನೇ ಪಕ್ಷಿಣೋ ಯಥಾ ।**
**ವರಿಷ್ಠಃ ಸರ್ವಧರ್ಮಾಣಾಂ ಮೋಕ್ಷೋ ಧರ್ಮಃ ಸನಾತನಃ ॥ ೧೦೯ ॥**

**ವಿಮಾನಾನಾಂ ಸಹಸ್ರಾಣಿ ಯುಕ್ತಾನ್ಯಪ್ಸರಸಾಂಗಣೈಃ ।**
**ಸರ್ವಕಾಮಪ್ರಸಿದ್ಧಾನಿ ಪ್ರಯಚ್ಛಂತಿ ಪಿತಾಮಹಾಃ ॥ ೧೧೦ ॥**

---

೧೦೬. ಹೀಗೆ ಶ್ರಾದ್ಧದಲ್ಲಿ ಪೂಜಿತರಾದ ಪಿತಾಮಹಂದಿರಾದ ದೇವತೆಗಳು ಜರಾಮೃತ್ಯುಭಯದಾಯಕವಾದ ಈ ಸಂಸಾರದಿಂದ ಬಿಡುಗಡೆಮಾಡಿ ಯೋಗೈಶ್ವರ್ಯ ಯುಕ್ತವಾದ ಮೋಕ್ಷವನ್ನು ಕೊಡುತ್ತಾರೆ.

೧೦೭. ಭಕ್ತಿಯಿಂದ ಪೂಜಿತರಾದ ದೇವತೆಗಳು ಮೋಕ್ಷೋಪಾಯಗಳನ್ನೂ ಮಹದೈಶ್ವರ್ಯವನ್ನೂ, ಸೂಕ್ಷ್ಮದೇಹಗಳನ್ನೂ, ಸಂಪೂರ್ಣ ವೈರಾಗ್ಯವನ್ನೂ, ಅನಂತವಾದ ಮೋಕ್ಷವನ್ನೂ ಕೊಡುತ್ತಾರೆ.

೧೦೮. ಯೋಗಮಹಿಮೆಗಳಿಂದ ಜನ್ಯವಾದ ಐಶ್ವರ್ಯವು ಉತ್ತಮವಾದುದು. ಈ ಯೋಗೈಶ್ವರ್ಯವೇ ಪ್ರಾಕೃತೈಶ್ವರ್ಯಕ್ಕಿಂತಲೂ ಶ್ರೇಷ್ಠವಾಗಿದೆ. ಈ ಯೋಗೈಶ್ವರ್ಯವೇ ಪ್ರಾಕೃತೈಶ್ವರ್ಯವಿಲ್ಲದಿದ್ದರೆ ನಿಜವಾದ ಮೋಕ್ಷವು ಖಂಡಿತವಾಗಿಯೂ ದೊರೆಯುವುದಿಲ್ಲ.

೧೦೯. ಯೋಗಿಯು ಯೋಗಮಹಿಮೆಯಿಂದ ರೆಕ್ಕೆಗಳಿಲ್ಲದ ಪಕ್ಷಿಗಳು ಆಕಾಶದಲ್ಲಿ ಸಂಚರಿಸುವಂತೆ ಸ್ವೇಚ್ಛೆಯಾಗಿ ಸಂಚಾರಮಾಡಬಲ್ಲನು. ಅತಿ ಪುರಾತನವಾದ ಮೋಕ್ಷಧರ್ಮವು ಸರ್ವಧರ್ಮಗಳಿಗಿಂತಲೂ ಅತ್ಯಂತ ಶ್ರೇಷ್ಠವಾದುದೆಂದು ಮಹಾತ್ಮರು ಹೇಳುವರು.

೧೧೦. ಪಿತಾಮಹಂದಿರು ಸಂತುಷ್ಟರಾದರೆ ಸಾವಿರಾರು ವಿಮಾನಗಳಿಂದ ಸಹಿತರಾದ ಅಪ್ಸರಸರ ಪದವಿಗಳನ್ನು ಕೊಡುವರು. ಸರ್ವಕಾಮಗಳಿಂದ ಪೂರ್ಣವಾದ ಸಕಲ ಪದವಿಗಳನ್ನೂ ಕೊಡುವರು.

ಪ್ರಜ್ಞಾ ಪುಷ್ಟಿಃ ಸ್ಮೃತಿರ್ಮೇಧಾ ರಾಜ್ಯಮಾರೋಗ್ಯ ಮೇವ ಚ ।
ಪಿತೄಣಾಂ ಹಿ ಪ್ರಸಾದೇನ ಪ್ರಾಪ್ಯತೇ ಸುಮಹಾತ್ಮನಾ ॥ ೧೧೧ ॥

ಮುಕ್ತಾವೈಡೂರ್ಯವಾಸಾಂಸಿ ವಾಜಿನಾಗಾಯುತಾನಿ ಚ ।
ಕೋಟಿಶಶ್ಚಾಪಿ ರತ್ನಾನಿ ಪ್ರಯಚ್ಛಂತಿ ಪಿತಾಮಹಾಃ ॥ ೧೧೨ ॥

ಹಂಸಬರ್ಹಿಣಯುಕ್ತಾನಿ ಮುಕ್ತಾವೈಡೂರ್ಯವಂತಿ ಚ ।
ಕಿಂಕಿಣೀಜಾಲನದ್ಧಾನಿ ಸದಾ ಪುಷ್ಪಫಲಾನಿ ಚ ॥
ಪ್ರೀತ್ಯಾ ನಿತ್ಯಂ ಪ್ರಯಚ್ಛಂತಿ ಮನುಷ್ಯಾಣಾಂ ಪಿತಾ... ॥ ೧೧೩ ॥

ಇತಿ ಶ್ರೀ ಮಹಾಪುರಾಣೇ ವಾಯುಪ್ರೋಕ್ತೇ " ಶ್ರಾದ್ಧಕಲ್ಪೇ "
ನಾಮೈಕಾದಶೋಽಧ್ಯಾಯಃ

---

೧೧೧. ಮಹಾತ್ಮರು ಪಿತೃದೇವತೆಗಳ ಅನುಗ್ರಹದಿಂದ ಮತ್ತು ಅವರ ಪ್ರಸಾದದಿಂದ ಜ್ಞಾನ, ಪುಷ್ಟಿ, ಸ್ಮೃತಿ, ಬುದ್ಧಿ, ರಾಜ್ಯ, ಆರೋಗ್ಯ ಇವೇ ಮೊದಲಾದ ಸಕಲಾಭೀಷ್ಟಗಳೂ ಸಿದ್ಧಿಸುತ್ತವೆ.

೧೧೨. ಮಹಾತ್ಮರಾದ ಪಿತಾಮಹಂದಿರು ಸಂತುಷ್ಟರಾದರೆ ಮುತ್ತುಗಳು ವಜ್ರವೈಡೂರ್ಯಗಳು ವಸ್ತ್ರಗಳು ಸಹಸ್ರಾರು ಗಜಾಶ್ವಗಳು ಕೋಟಿಸಂಖ್ಯಾಕಗಳಾದ ಮಹಾರತ್ನಗಳು ಇವುಗಳನ್ನು ಕೊಡುವರು.

೧೧೩. ಪಿತಾಮಹಂದಿರಾದ ಪಿತೃದೇವತೆಗಳು ಶ್ರಾದ್ಧದಲ್ಲಿ ಸಂತುಷ್ಟರಾಗಿ ಸುವರ್ಣಮಯವಾದ ಹಂಸಗಳು ನವಿಲುಗಳು ಇವುಗಳಿಂದಲಂಕೃತವೂ ಮುಕ್ತಾ ವೈಡೂರ್ಯಮಯವೂ. ಗೆಜ್ಜೆಗಳ ಗೊಂಚಲುಗಳಿಂದ ದೂಷಿತವೂ ಪುಷ್ಪಮಾಲಾ ಲಂಕೃತವೂ ಆದ ಸಿಂಹಾಸನವೇ ಮೊದಲಾದ ಸಕಲಾಭೀಷ್ಟಗಳನ್ನೂ ಪ್ರೀತಿಯಿಂದ ನಿತ್ಯವೂ ಪುರುಷರಿಗೆ ಕೊಡುತ್ತಾರೆಯೆಂದು ಮುನಿಯು ಹೇಳಿದನು.

ಇಲ್ಲಿಗೆ ವಾಯುಪ್ರೋಕ್ತವಾದ ಮಹಾಪುರಾಣದಲ್ಲಿ " ಶ್ರಾದ್ಧಕಲ್ಪವರ್ಣನ "ವೆಂಬ ಹನ್ನೊಂದನೆಯ ಅಧ್ಯಾಯವು ಮುಗಿದುದು.



## ಹನ್ನೊಂದನೆಯ ಅಧ್ಯಾಯದ ಸಾರಾಂಶವು

ಈ ಅಧ್ಯಾಯದಲ್ಲಿ ಶ್ರಾದ್ಧದ ವಿಚಾರಗಳು ವರ್ಣಿತವಾಗಿವೆ. ಪಿತೃದೇವತೆಗಳಲ್ಲಿ ಮೂರ್ತಿಮತ್ತಾದ ಗಣಗಳು ನಾಲ್ಕು. ಮೂರ್ತಿರಹಿತವಾದ ಗಣಗಳು ಮೂರು ಒಟ್ಟು ಏಳು ಗಣಗಳಿವೆ. ಅವರು ವಿರಜಾನಾಮಕ ಲೋಕದಲ್ಲಿ ವೈರಾಜಕ ನಾಮದಿಂದ ಪ್ರಖ್ಯಾತರಾಗಿರುವರು. ಆ ದೇವತೆಗಳಿಗೆ ಮೇನಕೆ ಎಂಬ ಮಾನಸಪುತ್ರಿಯೂ ಅವಳಿಗೆ ಅಪರ್ಣೆ, ಏಕಪರ್ಣೆ, ಏಕಪಾಟಲೆ ಎಂಬ ಮೂವರು ಕುಮಾರಿಯರೂ ಇರುವರು. ಅವರಲ್ಲಿ ಅಪರ್ಣೆಯು ಈಶ್ವರನನ್ನೂ, ಏಕಪರ್ಣೆಯು ಅಸಿತನನ್ನೂ, ಏಕಪಾಟಲೆಯು ಯೋಗಾಚಾರ್ಯನನ್ನೂ ಮದುವೆಯಾದರು. ತರುವಾಯ ಈಶ್ವರ, ಅಗ್ನಿ, ಗಂಗಾ, ಇವರಿಂದ ಶರವಣದಲ್ಲಿ ಕುಮಾರಸ್ವಾಮಿಯು ಜನಿಸಿದನು. ಪರಾಶರರಿಂದ ವ್ಯಾಸರು ಜನಿಸಿ, ವೇದಗಳನ್ನು ವಿಭಾಗಮಾಡಿದರು. ಅಗ್ನಿಷ್ವಾತ್ತಾದಿಗಳೂ, ಆಜ್ಯಪನಾಮಕ ದೇವತೆಗಳೂ ಜನಿಸಿದರು. ಆ ದೇವತೆಗಳಲ್ಲಿಯೂ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರರೆಂಬ ನಾಲ್ಕು ಜಾತಿಗಳು ಇರುತ್ತವೆ. ಅವರಲ್ಲಿ ವಿಶ್ವೇದೇವತೆಗಳೂ, ಸಿತಕರೂ, ಪ್ರಶ್ನಿಜರೂ, ಶೃಂಗಿಣರು, ಕೃಷ್ಣ, ಶ್ವೇತ, ಅಜರೆಂಬುವರು ಪ್ರಖ್ಯಾತರಾಗಿರುವರು. ಪಿತಾಮಹಂದಿರಾದ ಈ ಪಿತೃದೇವತೆಗಳು ಶ್ರಾದ್ಧದಲ್ಲಿ ಸಂತುಷ್ಟರಾದರೆ ಪ್ರಜೆಗಳಿಗೆ ಪುತ್ರಸಂತಾನಾದಿ ಸಕಲೈಶ್ವರ್ಯಗಳನ್ನೂ ಜ್ಞಾನ, ಭಕ್ತಿ, ವೈರಾಗ್ಯಾದಿಗಳನ್ನೂ ಶಾಶ್ವತವಾದ ಮೋಕ್ಷಾದಿ ಸುಖಗಳನ್ನೂ ದಯಪಾಲಿಸುವರು. ಎಂಬಿವೇ ಮೊದಲಾದ ವಿಷಯಗಳು ಈ ಅಧ್ಯಾಯದಲ್ಲಿ ವರ್ಣಿತವಾಗಿವೆ.



—: ಹರಿಃ ಓಂ :—

—ಶ್ರೀ ವೇದವ್ಯಾಸಾಯ ನಮಃ—

# ಶ್ರೀಮದ್ವಾಯುಪುರಾಣಂ

## ದ್ವಾದಶೋಽಧ್ಯಾಯಃ

॥ ಬೃಹಸ್ಪತಿರುವಾಚ ॥

ಸೌವರ್ಣಂ ರಾಜತಂ ತಾಮ್ರಂ ಪಿತೄಣಾಂ ಪಾತ್ರಮುಚ್ಯತೇ ।
ರಜತಂ ರಜತಾಕ್ತಂ ವಾ ಪಿತೄಣಾಂ ಪಾತ್ರಮುಚ್ಯತೇ ॥ ೧ ॥

ರಜತಸ್ಯ ತಥಾ ಚಾಪಿ ದರ್ಶನಂ ದಾನಮೇವ ಚ ।
ಅನಂತಮಕ್ಷಯಂ ಸ್ವರ್ಗ್ಯಂ ಪಿತೄಣಾಂ ದಾನಮುಚ್ಯತೇ ॥
ಪಿತೄನೇತೇನ ದಾನೇನ ಸತ್ಪುತ್ರಾಸ್ತಾರಯಂತ್ಯುತ ॥ ೨ ॥

---

## ಹನ್ನೆರಡನೆಯ ಅಧ್ಯಾಯವು

೧–೨. ಬೃಹಸ್ಪತಿಯು ಹೇಳಿದನು :—ಸುವರ್ಣ, ಬೆಳ್ಳಿ, ತಾಮ್ರ, ಈ ಪಾತ್ರೆಗಳು ಪಿತೃದೇವತೆಗಳಿಗೆ ಬಹಳ ಪ್ರಿಯವಾದುವು. ಈ ಪಾತ್ರೆಗಳನ್ನು ಶ್ರಾದ್ಧದಲ್ಲಿ ಉಪಯೋಗಿಸಿ ದಾನಮಾಡಿದರೆ ಮಹಾಫಲವು ಪ್ರಾಪ್ತಿಯಾಗುವುದು. ಅನಂತವೂ, ಅಕ್ಷಯವೂ, ಆದ ಸ್ವರ್ಗಾದಿಮಹಾಫಲವು ಪ್ರಾಪ್ತಿಯಾಗುವುದು. ಸತ್ಪುತ್ರರು ಇಂತಹ ಉತ್ತಮವಾದ ದಾನವನ್ನು ಮಾಡಿ ತಮ್ಮ ಪಿತೃಗಳಿಗೆ ಉತ್ತಮಪದವಿಯನ್ನು ದೊರಕಿಸುವರು. ನರಕಾದ್ಯನರ್ಥಗಳು ಬಾರದಂತೆ ಅದರಿಂದ ತಪ್ಪಿಸುವರು.

ರಾಜತೇ ಹಿ ಸ್ವಧಾ ದುಗ್ಧಾ ಪಾತ್ರೇಸ್ಮಿನ್ಪಿತೃಭಿಃ ಪುರಾ ।
ಸ್ವಧಾದಾಯಾರ್ಥಿಭಿಸ್ತಾತ ತಸ್ಮಿನ್ ದತ್ತೇ ತದಕ್ಷಯಂ ॥ ೩ ॥

ಕೃಷ್ಣಾಜಿನಸ್ಯ ಸಾನ್ನಿಧ್ಯಂ ದರ್ಶನಂ ದಾನಮೇವ ವಾ ।
ರಕ್ಷೋಘ್ನಂ ಬ್ರಹ್ಮವರ್ಚಸ್ಯಂ ಪಿತ್ರ್ಯಾಂಸ್ತತ್ತದ್ವಿತಾರಯೇತ್ ॥ ೪ ॥

ಕಾಂಚನಂ ರಾಜತಂ ತಾಮ್ರಂ ದೌಹಿತ್ರಂ ಕುತಪಸ್ತಿಲಾಃ ।
ವಸ್ತ್ರಂ ಚ ಪಾವನೀಯಾನಿ ತ್ರಿದಂಡೋ ಯೋಗಮೇವ ಚ ॥ ೫ ॥

ಶ್ರಾದ್ಧಕರ್ಮಣ್ಯಯಂ ಶ್ರೇಷ್ಠೋ ವಿಧಿರ್ಬ್ರಾಹ್ಮ್ಯಃ ಸನಾತನಃ ।
ಆಯುಃ ಕೀರ್ತಿಃ ಪ್ರಜಾಶ್ಚೈವ ಪ್ರಜ್ಞಾಸಂತತಿವರ್ಧನಃ ॥ ೬ ॥

---

೩. ಎಲೈ ಪ್ರಿಯನೇ, ಪೂರ್ವದಲ್ಲಿ ಸತ್ಪುತ್ರರು ರಜತಪಾತ್ರೆಯಲ್ಲಿ ಪಿಂಡ ತರ್ಪಣಾದಿ ದಾನಗಳನ್ನು ಮಾಡಿ ತಮ್ಮ ಪಿತೃಗಳಿಗೆ ಅಕ್ಷಯವಾದ ಮಹಾಫಲವನ್ನು ಕೊಡಿಸಿರುವರು. ಸ್ವಧಾಪೇಕ್ಷಿಗಳಾದ ಪಿತೃದೇವತೆಗಳು ಮಹಾಫಲವನ್ನು ಹೊಂದಿರುತ್ತಾರೆ.

೪. ಶ್ರಾದ್ಧಕಾಲದಲ್ಲಿ ಕೃಷ್ಣಾಜಿನವನ್ನು ಉಪಯೋಗಿಸಿ, ದರ್ಶನ, ದಾನ ಇವೇ ಮೊದಲಾದವುಗಳನ್ನು ಮಾಡಿದರೆ ಭೂತಾದಿಪರಿಹಾರವೂ ಬ್ರಹ್ಮವರ್ಚಸ್ಸೂ ಉಂಟಾಗುವುದು. ಪಿತೃಗಳಿಗೆ ನರಕಾದಿ ವಿಪತ್ತುಗಳು ಬಾರದೇ ತಪ್ಪಿಸುವುದು. ಇದರಿಂದ ಕೃಷ್ಣಾಜಿನವು ಬಹಳ ಪ್ರಿಯವಾದುದೆಂದು ತಿಳಿಯಬೇಕು.

೫–೬. ಸುವರ್ಣ, ರಜತ, ತಾಮ್ರ ಇವುಗಳ ಪಾತ್ರೆಗಳೂ ಮೊಮ್ಮಗ, ಕುತಪಕಾಲ, ಎಳ್ಳು, ತ್ರಿದಂಡ (ಯೋಗ) ಇವು ಶ್ರಾದ್ಧದಲ್ಲಿ ಪವಿತ್ರವಾದ ವಸ್ತುಗಳಾಗಿವೆ. ಶ್ರಾದ್ಧಕರ್ಮದಲ್ಲಿ ಮೇಲೆ ಹೇಳಿದ ವಸ್ತುಗಳು ಪವಿತ್ರವಾದುವುಗಳೂ. ಉತ್ತಮವೂ. ಆಗಿವೆ. ಶಾಸ್ತ್ರವಿಹಿತವಾಗಿಯೂ, ಬ್ರಹ್ಮಜ್ಞಾನದಾಯಕವಾಗಿಯೂ, ಸನಾತನವಾಗಿಯೂ, ಆಯುಸ್ಸು, ಕೀರ್ತಿ, ಸಂತಾನ, ದಿವ್ಯಜ್ಞಾನ, ಪ್ರಜೆ ಇವುಗಳನ್ನು ದಾಯಕವಾಗಿಯೂ ಇರುತ್ತವೆ.

ದಿಶಿ ದಕ್ಷಿಣಪೂರ್ವಸ್ಯಾಂ ವಿದಿಕ್‌ಸ್ಥಾನಂ ವಿಶೇಷತಃ ।
ಸರ್ವತೋಽರತ್ನಿಮಾತ್ರಂ ತು ಚತುರಸ್ರಂ ಸುಸಂಹಿತಂ ॥ ೭ ॥

ವಕ್ಷ್ಯಾಮಿ ವಿಧಿವತ್ ಸ್ಥಾನಂ ಪಿತೃಣಾಮನುಶಾಸನಾತ್ ।
ಧನ್ಯಮಾರೋಗ್ಯಮಾಯುಷ್ಯಂ ಬಲವರ್ಣವಿವರ್ಧನಂ ॥ ೮ ॥

ತತ್ರ ಗರ್ತಾಸ್ತ್ರಯಃ ಕಾರ್ಯಾಸ್ತ್ರಯೋ ದಂಡಾಶ್ಚ ಖಾದಿರಾಃ ।
ರತ್ನಿಮಾತ್ರಾಸ್ತು ತೇ ಕಾರ್ಯಾ ರಜತೇನ ವಿಭೂಷಿತಾಃ ॥
ತೇ ವಿತಸ್ತ್ಯಾಯತಾಃ ಕಾರ್ಯಾಃ ಸರ್ವತಶ್ಚತುರಂಗುಲಾಃ ॥ ೯ ॥

ಪ್ರಾಗ್ದಕ್ಷಿಣಮುಖಾ ಭೂಮೌ ಸ್ಥಿತಾನಸುಷಿರಾಂಸ್ತಥಾ ।
ಅದ್ಭಿಃ ಪವಿತ್ರ ಪೂತಾಭಿಃ ಪ್ಲಾವಯೇತ್ಸತತಂ ಶುಚಿಃ ॥ ೧೦ ॥

---

೭. ದಕ್ಷಿಣಪೂರ್ವದ ಆಗ್ನೇಯದಿಕ್ಕಿನಲ್ಲಿ ಶ್ರಾದ್ಧವನ್ನು ಮಾಡಬೇಕು ವಿದಿಕ್ಕುಗಳು ಶ್ರಾದ್ಧಕ್ಕೆ ಮುಖ್ಯ ಸ್ಥಾನಗಳಾಗಿವೆ. ಆ ಆಗ್ನೇಯದಿಕ್ಕಿನಲ್ಲಿ ಹಿಡಿ ಸಹಿತವಾದ ಮೊಳಕ್ಕೆ ಅಗಲ (ಚೌಕವಾದ) ಚತುಸ್ರಮಂಡಲವನ್ನು ಮಾಡಬೇಕು.

೮. ಪಿತೃದೇವತೆಗಳ ಆಜ್ಞಾನುಸಾರವಾಗಿ ಶಾಸ್ತ್ರೋಕ್ತಗಳಾದ ಸ್ಥಾನಗಳನ್ನು ಹೇಳುವೆನು ಕೇಳಿರೆಂದನು. ಅದು ಹೀಗೆ ಅನುಷ್ಠಾನ ಮಾಡಿದರೆ ಧನಧಾನ್ಯಾದಿಗಳು, ಆರೋಗ್ಯ, ಆಯುಷ್ಯ, ಬಲ, ಕಾಂತಿ ಇವುಗಳನ್ನು ಕೊಡುವುದು ಎಂದರು.

೯. ಆಗ್ನೇಯ ಮೂಲೆಯಲ್ಲಿ ಮೂರು ಗುಂಡಿಗಳನ್ನು ಅಗಿಯಬೇಕು. ಕಗ್ಗಲೀ ಮರದ ಮೂರು ದಂಡಗಳಿರಬೇಕು. ಆ ದಂಡಗಳು ಒಂದುಮೊಳ ಉದ್ದವಿರಬೇಕು. ಆ ಕೋಲುಗಳಿಗೆ ಬೆಳ್ಳಿಯ ಕಟ್ಟುಗಳನ್ನು ಹಾಕಿರಬೇಕು. ಆ ಹಳ್ಳಗಳು ಕೆಲವು ಗೇಣು ಅಗಲವೂ, ಚತುರಂಗಲ ಅಂತರವೂ ಉಳ್ಳವುಗಳಾಗಿರಬೇಕು.

೧೦. ಪುರುಷನು ಶುಚಿಯಾಗಿ ಅಂತಹ ಭೂಮಿಯಲ್ಲಿ ಪೂರ್ವದಕ್ಷಿಣಾಭಿ ಮುಖಗಳೂ ರಂಧ್ರಶೂನ್ಯಗಳೂ ಆದ ದರ್ಭೆಗಳನ್ನು ಹಾಸಿ ಪವಿತ್ರವಾದ ಜಲದಿಂದ ಚಿಮುಕಿಸಬೇಕು. ಅಂದರೆ ನೀರನ್ನು ಎರಚಿ ಆ ಸ್ಥಾನವನ್ನು ಶುದ್ಧಿಮಾಡಬೇಕು.

ಪಯಸಾ ಹ್ಯಾಜಗವ್ಯೇನ ಶೋಧನಂ ವಾಗ್ಭಿರೇವ ತು ।
ತರ್ಪಣಾತ್ಸತತಂ ಹ್ಯೇವಂ ತೃಪ್ತಿರ್ಭವತಿ ಶಾಶ್ವತೀ ॥ ೧೧ ॥

ಇಹ ಚಾಮುತ್ರ ಚ ಶ್ರೀಮಾನ್ ಸರ್ವಕರ್ಮಸಮನ್ವಿತಃ ।
ಏವಂ ತ್ರಿಷವಣಸ್ನಾತೋ ಯೋಽರ್ಚಯೇತ ಪಿತೄನ್ ಸದಾ ॥
ಮಂತ್ರೇಣ ವಿಧಿವತ್ಸಮ್ಯಗಶ್ವಮೇಧಫಲಂ ಲಭೇತ್ ॥ ೧೨ ॥

ತಸ್ಮಾತ್ ಪಯೋದಮಾವಾಸ್ಯಾಂ ಗರ್ತೇ ಭೂಚತುರಂಗುಲೇ ।
ತ್ರಿಃಸಪ್ತಸಂಜ್ಞಾಸ್ತೇ ಯಜ್ಞಾಸ್ತ್ರೈಲೋಕ್ಯಂ ಧಾರ್ಯತೇ ತು ವೈ ॥ ೧೩ ॥

ತಸ್ಯ ಪುಷ್ಟಿರಥೈಶ್ವರ್ಯಮಾಯುಃ ಸಂತತಿರೇವ ಚ ।
ವಿಚಿತ್ರಾ ಭಜತೇ ಲಕ್ಷ್ಮೀರ್ಮೋಕ್ಷಂ ಚ ಲಭತೇ ಕ್ರಮಾತ್ ॥ ೧೪ ॥

---

೧೧. ಅಂತಹ ಶ್ರಾದ್ಧ ಮಾಡುವ ಪ್ರದೇಶವನ್ನು ಶುದ್ಧಿ ಮಾಡಿ ಆಡು, ಹಸು ಇವುಗಳ ಹಾಲು ಮೊಸರು ಮೊದಲಾದವುಗಳಿಂದಲೂ ಮಂತ್ರಗಳಿಂದಲೂ, ಪಿತೃಗಳಿಗೆ ಸಂತೋಷವನ್ನುಂಟುಮಾಡಬೇಕು. ಕ್ಷೀರಾದಿಗಳಿಂದ ಬ್ರಾಹ್ಮಣಾದಿಗಳಿಗೆ ಸಂತೋಷ ಪಡಿಸಿದರೆ ಅದರಿಂದ ತೃಪ್ತರಾದ ಪಿತೃಗಳು ಶಾಶ್ವತವಾದ ಪದವಿಯನ್ನು ಕೊಡುವರು.

೧೨. ಪುರುಷನು ತ್ರಿಕಾಲಸ್ನಾನದಿಂದ ಪರಿಶುದ್ಧನಾಗಿ ಪಿತೃಗಳನ್ನು ಪವಿತ್ರವೂ ಸಾತ್ವಿಕವೂ ಆದ ವಸ್ತುಗಳಿಂದ ಶಾಸ್ತ್ರೋಕ್ತರೀತಿಯಲ್ಲಿ ಸಂತೋಷವನ್ನುಂಟು ಮಾಡಿದರೆ ಇಹಲೋಕದಲ್ಲಿ ಸಕಲ ಸಂಪತ್ತುಗಳಿಂದ ಪೂರ್ಣನಾಗಿ ಅಶ್ವಮೇಧ ಯಾಗದ ಫಲಗಳನ್ನು ಹೊಂದುವನು.

೧೩. ಅಂತಹ ಹೋಮದ್ರವ್ಯಗಳನ್ನು ಅಮಾವಾಸ್ಯಾದಿ ಪರ್ವಕಾಲಗಳಲ್ಲಿ ನಾಲ್ಕು ಅಂಗುಲ ವಿಶಾಲವಾಗಿ ಭೂಮಿಯಲ್ಲಿ ಮಾಡಿದ ಹಳ್ಳದಲ್ಲಿರುವ ಅಗ್ನಿಯಲ್ಲಿ ಆಹುತಿ ಕೊಡಬೇಕು. ಹೀಗೆ ಆ ಅಗ್ನಿಯಲ್ಲಿ ಇಪ್ಪತ್ತೊಂದುಸಲ ಆಹುತಿಯನ್ನು ಕೊಟ್ಟರೆ ಮೂರು ಲೋಕಗಳೂ ಉದ್ಧಾರವಾಗುವುದು. ಇಂತಹ ಸತ್ಕರ್ಮಗಳಿಂದ ಲೋಕಗಳಿಗೆ ಸುಖವು ಉಂಟಾಗುವುದು.

೧೪. ಇಂತಹ ಸತ್ಕರ್ಮಗಳನ್ನು ಮಾಡಿರುವ ಪುರುಷನಿಗೆ ಐಶ್ವರ್ಯಸಮೃದ್ಧಿಯು, ಆಯುಸ್ಸು, ಸಂತಾನ ವಿಚಿತ್ರವಾದ ಮಹದೈಶ್ವರ್ಯ ಇವುಗಳು ಉಂಟಾಗುವುವು. ಮತ್ತು ಪರಲೋಕದಲ್ಲಿ ಶಾಶ್ವತವಾದ ಮೋಕ್ಷಸುಖವೂ ದೊರೆಯುವುದು.

ಪಾಪ್ಮಾಪಹಂ ಪಾವನೀಯಮಶ್ವಮೇಧಫಲಂ ತಥಾ ।
ಅಶ್ವಮೇಧಫಲಂ ಹ್ಯೇತದ್ದ್ವಿಜೈಃ ಸತ್ಕೃತ್ಯ ಪೂಜಿತಂ ॥
ಮಂತ್ರಂ ವಕ್ಷ್ಯಾಮ್ಯಹಂ ತಸ್ಮಾದಮೃತಂ ಬ್ರಹ್ಮನಿರ್ಮಿತಂ ॥ ೧೫ ॥

ದೈವತೇಭ್ಯಃ ಪಿತೃಭ್ಯಶ್ಚ ಮಹಾಯೋಗಿಭ್ಯ ಏವ ಚ ।
ನಮಃ ಸ್ವಧಾಯೈ ಸ್ವಾಹಾಯೈ ನಿತ್ಯಮೇವ ಭವಂತ್ಯುತ ॥ ೧೬ ॥

ಆದ್ಯಾವಸಾನೇ ಶ್ರಾದ್ಧಸ್ಯ ತ್ರಿರಾವರ್ತಂ ಜಪೇತ್ಸದಾ ।
ಪಿಂಡನಿರ್ವಪಣೇ ಚೈವ ಜಪೇದೇತತ್ಸಮಾಹಿತಃ ॥
ಪಿತರಃ ಕ್ಷಿಪ್ರಮಾಯಾಂತಿ ರಾಕ್ಷಸಾಃ ಪ್ರದ್ರುಹಂತಿ ಚ ॥ ೧೭ ॥

ಪಿತೃಂಸ್ತ್ರಿಷು ಲೋಕೇಷು ಮಂತ್ರೋ ಯಂತಾರಯತ್ಯುತ ।
ಪಠ್ಯಮಾನಃ ಸದಾ ಶ್ರಾದ್ಧೇ ನಿಯತಂ ಬ್ರಹ್ಮವಾದಿಭಿಃ ॥ ೧೮ ॥

---

೧೫. ಹೀಗೆ ಪಿತೃಗಳನ್ನು ಸತ್ಕರಿಸಿ ಪೂಜಿಸಿದರೆ ಪಾಪ ಪರಿಹಾರವಾಗುವುದಲ್ಲದೆ, ಪವಿತ್ರವಾದ ಅಶ್ವಮೇಧಯಾಗವನ್ನು ಮಾಡಿದ ಫಲವೂ, ಅದಕ್ಕಿಂತಲೂ ಹೆಚ್ಚಾದ ಫಲವೂ ಉಂಟಾಗುವುದು. ಈ ವಿಷಯದಲ್ಲಿ ದಿವ್ಯಮಂತ್ರವನ್ನು ಹೇಳುವೆನು. ಈ ಮಂತ್ರೋಚ್ಚಾರದಿಂದ ಸತ್ಕರ್ಮಗಳನ್ನು ಮಾಡಿದರೆ ಬ್ರಹ್ಮನಿರ್ಮಿತವೂ ಶಾಶ್ವತವೂ ಆದ ನಿತ್ಯಸುಖವು ದೊರಯುವುದು

೧೬–೧೭. ಶ್ರಾದ್ಧದ ಆದಿಯಲ್ಲಿಯೂ, ಕೊನೆಯಲ್ಲಿಯೂ, ಮಧ್ಯದಲ್ಲಿಯೂ (ಪಿಂಡದಾನ ಮಾಡುವಾಗಲೂ) ಮೂರುಸಲ ದೇವತೆಗಳಿಗೂ, ಪಿತೃಗಳಿಗೂ, ಮಹಾಯೋಗಿಗಳಿಗೂ, ಸ್ವಧಾದೇವಿಗೂ, ಸ್ವಾಹಾದೇವಿಗೂ ಕೂಡ ಸದಾ ನನ್ನ ನಮಸ್ಕಾರವು ಸ್ಥಿರವಾಗಿರಲೆಂದು ನಮಸ್ಕಾರಗಳನ್ನು ಮಾಡಬೇಕು. ಈ ಮಂತ್ರೋಚ್ಚಾರಣೆಯಿಂದ ಪಿತೃಗಳು ಶೀಘ್ರವಾಗಿ ಬಂದು ತೃಪ್ತರಾಗುವರು ರಾಕ್ಷಸ ಪಿಶಾಚಾದಿಗಳು ಓಡಿ ಹೋಗುವುವು.

೧೮. ಜ್ಞಾನಿಗಳು ಈ ಮಂತ್ರವನ್ನು ಶ್ರಾದ್ಧದಲ್ಲಿ ಭಕ್ತಿಯಿಂದ ಉಚ್ಚರಿಸಿದರೆ ಅದರಿಂದ ಅವರ ಪಿತೃಗಳು ಸರ್ವಪಾಪಗಳಿಂದಲೂ ಮುಕ್ತರಾಗಿ, ಶಾಶ್ವತವಾದ ಪದವಿಯನ್ನು ಹೊಂದುವರು. ಶ್ರಾದ್ಧವನ್ನು ಮಾಡುವವನಿಗೂ ಸಕಲ ಮನೋರಥಗಳೂ ಸಂಭವಿಸುವುವು.

ರಾಜ್ಯಕಾಮೋ ಜಪೇದೇನಂ ಸದಾ ಮಂತ್ರಮತಂದ್ರಿತಃ ।
ವೀರ್ಯಶೌಚಾರ್ಥಸತ್ವಂ ಚ ಶ್ರೀರಾಯುರ್ಬಲವರ್ಧನಂ ॥ ೧೯ ॥

ಪ್ರೀಯಂತೇ ಪಿತರೋ ಯೇನ ಜಪ್ಯೇನ ನಿಯಮೇನ ಚ ।
ಸಪ್ತಾರ್ಚಿಷಂ ಪ್ರವಕ್ಷ್ಯಾಮಿ ಸರ್ವಕಾಮಪ್ರದಂ ಶುಭಂ ॥ ೨೦ ॥

ಅಮೂರ್ತಾನಾಂ ಸಮೂರ್ತಾನಾಂ ಪಿತೃಣಾಂ ದೀಪ್ತತೇಜಸಾಂ ।
ನಮಸ್ಯಾಮಿ ಸದಾ ತೇಭ್ಯೋ ಧ್ಯಾನಿಭ್ಯೋ ಯೋಗಚಕ್ಷುಷಾ ॥ ೨೧ ॥

ಇಂದ್ರಾದೀನಾಂ ಜನಯಿತಾರೋ ಭೃಗುಮಾರೀಚಯೋಸ್ತಥಾ ।
ಸಪ್ತರ್ಷೀಣಾಂ ಪಿತೃಣಾಂ ಚ ತಾನ್ನಮಸ್ಯಾಮಿ ಕಾಮದಾನ್ ॥ ೨೨ ॥

---

೧೯. ರಾಜ್ಯಕಾಮುಕರಾದವರು ಈ ಮಂತ್ರವನ್ನು ಜಪಿಸುವುದರಿಂದ ರಾಜ್ಯವು ಲಭಿಸುವುದು. ಮತ್ತು ವೀರ್ಯ, ಶೌರ್ಯ, ಶೌಚ, ಅರ್ಥ, ಸತ್ವ, ಸಂಪತ್ತು, ಆಯುಷ್ಯ, ಬಲ, ಪುಷ್ಟಿ ಇವುಗಳೂ ಸಹ ಶೀಘ್ರವಾಗಿ ಸಂಭವಿಸುವುವು.

೨೦. ಪಿತೃಗಳು ಯಾವ ನಿಯಮ ಜಪತಪ ಹೋಮಾದಿಗಳಿಂದ ಪ್ರೀತರಾಗುವರೋ ಅಂತಹ ಕಾರ್ಯಗಳನ್ನು ಮಾಡಬೇಕು. ಈಗ ಸಕಲ ಸಂಪದ್ದಾಯಕನೂ, ಮಂಗಳಪ್ರದನೂ ಆದ ಯಜ್ಞಪುರುಷನ ವಿಚಾರಗಳನ್ನು ತಿಳಿಸುವೆನು ಕೇಳಿರೆಂದನು.

೨೧. ಸೂಕ್ಷ್ಮಶರೀರವುಳ್ಳ ದೇವತೆಗಳಿಗೂ ಸ್ಥೂಲದೇಹವುಳ್ಳವರೂ, ತೇಜೋರೂಪಿಗಳೂ, ಯೋಗಮಹಿಮೆಯುಳ್ಳವರೂ, ಧ್ಯಾನನಿರತರೂ ಆದ ಪಿತೃದೇವತೆಗಳಿಗೂ ಸರ್ವಕಾಲದಲ್ಲಿಯೂ ನಮಸ್ಕಾರ ಮಾಡುತ್ತೇನೆ.

೨೨. ಇಂದ್ರಾದಿ ದೇವತೆಗಳೂ ಭೃಗು, ಮರಿಚ್ಯಾದಿ ಋಷಿಗಳೂ, ಸಪ್ತರ್ಷಿಗಳೂ ಇವರಿಗೆ ಜನಕರೂ ಸಕಲೇಷ್ಟಾರ್ಥಗಳನ್ನು ಕೊಡತಕ್ಕವರೂ ಆದ ಪಿತೃದೇವತೆಗಳಿಗೆ ನಮಸ್ಕಾರವನ್ನು ಸರ್ವಕಾಲದಲ್ಲಿಯೂ ಮಾಡುತ್ತೇನೆ.

**ಮನ್ವಾದೀನಾಂ ಸುರೇಶಾನಾಂ ಸೂರ್ಯಾಚಂದ್ರಮಸೋಸ್ತಥಾ ।**
**ತಾನ್ನಮಸ್ಕೃತ್ಯ ಸರ್ವಾನ್ವೈ ಪಿತೄನ್ಸ್ಕುಶಲದಾಯಕಾನ್ ॥ ೨೩ ॥**

**ನಕ್ಷತ್ರಾಣಾಂ ಚ ರಾಶೀನಾಂ ಪಿತೄನಥ ಪಿತಾಮಹಾನ್ ।**
**ದ್ಯಾವಾಪೃಥಿವ್ಯೋಶ್ಚ ತಥಾ ನಮಸ್ಯಾಮಿ ಕೃತಾಂಜಲಿಃ ॥ ೨೪ ॥**

**ದೇವರ್ಷೀಣಾಂ ಜನಯಿತೄಂಶ್ಚ ಸರ್ವಲೋಕನಮಸ್ಕೃತಾನ್ ।**
**ಅಭಯಸ್ಯ ಸದಾ ದಾತೄನ್ನಮಸ್ಯೇಽಹಂ ಕೃತಾಂಜಲಿಃ ॥ ೨೫ ॥**

**ಪ್ರಜಾಪತೇಃ ಕಶ್ಯಪಾಯ ಸೋಮಾಯ ವರುಣಾಯ ಚ ।**
**ಯೋಗಯೋಗೇಶ್ವರೇಭ್ಯಶ್ಚ ನಮಸ್ಯಾಮಿ ಕೃತಾಂಜಲಿಃ ॥ ೨೬ ॥**

**ಪಿತೃಗಣೇಭ್ಯಃ ಸಪ್ತಭ್ಯೋ ನಮೋ ಲೋಕೇಷು ಸಪ್ತಸು ।**
**ಸ್ವಯಂಭುವೇ ನಮಶ್ಚೈವ ಬ್ರಹ್ಮಣೇ ಯೋಗಚಕ್ಷುಷೇ ॥ ೨೭ ॥**

---

೨೩. ಮನ್ವಾದಿಮುನಿಗಳೂ, ಇಂದ್ರಾದಿಸುರೇಶರೂ, ಸೂರ್ಯಚಂದ್ರರೂ ಇವರೇ ಮೊದಲಾದವರಿಗೆ ಜನಕರೂ, ಕುಶಲದಾಯಕರೂ, ಸಕಲಕಾಮಪ್ರದರೂ ಆದ ಸಮಸ್ತ ಪಿತೃದೇವತೆಗಳಿಗೂ ನಮಸ್ಕಾರ ಮಾಡುತ್ತೇನೆ.

೨೪. ನಾನು ಶ್ರಾದ್ಧಕಾಲದಲ್ಲಿ ನಕ್ಷತ್ರಾದಿ ಗ್ರಹಗಳಿಗೂ ಬುಧಾದಿಗ್ರಹ ಗಳಿಗೂ, ಪಿತೃಗಳಿಗೂ, ಪಿತಾಮಹಂದಿರುಗಳಿಗೂ, ದ್ಯಾವಾಭೂಮಿಗಳಿಗೂ ಅಂಜಲಿ ಬದ್ಧನಾಗಿ ನಮಸ್ಕಾರ ಮಾಡುತ್ತೇನೆ.

೨೫. ಸರ್ವಲೋಕವಂದಿತರೂ, ದೇವರ್ಷಿಗಳಿಗೆ ಜನಕರೂ, ಅಭಯಪ್ರದರೂ, ಸಕಲ ಕಾಮದಾಯಕರೂ ಆದ ಪಿತೃದೇವತೆಗಳಿಗೆ ನಮಸ್ಕರಿಸುತ್ತೇನೆ

೨೬. ಪ್ರಜಾಪತಿಯಾದ ಕಶ್ಯಪನಿಗೂ, ಸೋಮನಿಗೂ, ವರುಣನಿಗೂ, ಯೋಗಿ ಗಳಿಗೂ, ಯೋಗೀಶ್ವರರಿಗೂ ಅಂಜಲಿಬದ್ಧನಾಗಿ ನಮಸ್ಕಾರ ಮಾಡುತ್ತೇನೆ.

೨೭. ಸಪ್ತಲೋಕಗಳಲ್ಲಿ ಪ್ರಖ್ಯಾತರೂ, ಮೂರ್ತಾಮೂರ್ತರೂ, ಸಪ್ತಗಣಗಳಲ್ಲಿ ಪ್ರಖ್ಯಾತರೂ ಆದ ಪಿತೃಗಳಿಗೂ ಯೋಗಜ್ಞಾನಿಯೂ ಸ್ವಯಂಭುವನೂ ಆದ ಬ್ರಹ್ಮದೇವನಿಗೂ ಸದಾ ಕಾಲದಲ್ಲಿಯೂ ಕೈಮುಗಿದು ನಮಸ್ಕರಿಸುತ್ತೇನೆ.

ಏತದುಕ್ತಂ ಸಸಪ್ತರ್ಷಿಬ್ರಹ್ಮರ್ಷಿಗಣಪೂಜಿತಂ ।
ಪವಿತ್ರಂ ಪರಮಂ ಹ್ಯೇತಚ್ಛ್ರೀಮದ್ರಕ್ಷೋ ವಿನಾಶನಂ || ೨೮ ||

ಅನೇನ ವಿಧಿನಾ ಯುಕ್ತಸ್ತ್ರೀನ್ವರಾನ್ ಲಭತೇ ನರಃ ।
ಅನ್ನಮಾಯುಃ ಸುತಾಂಶ್ಚೈವ ದದತೇ ಪಿತರೋ ಭುವಿ || ೨೯ ||

ಭಕ್ತ್ಯಾ ಪರಮಯಾ ಯುಕ್ತಃ ಶ್ರದ್ಧಧಾನೋ ಜಿತೇಂದ್ರಿಯಃ ।
ಸಪ್ತಾರ್ಚಿಷಂ ಜಪೇದ್ಯಸ್ತು ನಿತ್ಯಮೇವ ಸಮಾಹಿತಃ ॥
ಸಪ್ತದ್ವೀಪಸಮುದ್ರಾಯಾಂ ಪೃಥಿವ್ಯಾಮೇಕರಾಡ್ಭವೇತ್ || ೩೦ ||

ಯತ್ಕಿಂಚಿತ್ಪಚ್ಯತೇ ಗೇಹೇ ಭಕ್ಷ್ಯಂ ವಾ ಭೋಜ್ಯಮೇವ ಚ ।
ಅನಿವೇದ್ಯ ನ ಭೋಕ್ತವ್ಯಂ ತಸ್ಮಿನ್ನಾಯತಮೇ ಸದಾ || ೩೧ ||

---

೨೮. ಪೂರ್ವೋಕ್ತಕ್ರಮದಲ್ಲಿ ವಿಹಿತವೂ ಸಪ್ತರ್ಷಿಗಳು, ಬ್ರಹ್ಮರ್ಷಿಗಳು ಇವರಿಂದ ಪೂಜಿತವೂ ಅತ್ಯಂತ ಪವಿತ್ರವೂ ಪರಮ ರಹಸ್ಯವೂ ಆದ ಈ ಪಿತೃ ಕಾರ್ಯವು ಸಕಲೈಶ್ವರ್ಯಪ್ರದವೂ ರಾಕ್ಷಸರ ನಾಶಕವೂ ಆಗಿದೆ.

೨೯. ಯಾವ ಪುರುಷನು ಪೂರ್ವೋಕ್ತವಾದ ನಿಯಮಯುಕ್ತನಾಗಿ ಪಿತೃ ಕ್ರಿಯೆಯನ್ನು ಮಾಡಿ ಪಿತೃದೇವತೆಗಳಿಗೆ ತೃಪ್ತಿಯನ್ನುಂಟುಮಾಡುವನೋ ಅವನು (ಆಹಾರ) ಅನ್ನ, ಆಯುಷ್ಯ, ಸಂತಾನಗಳೆಂಬ ಮೂರು ವರಗಳನ್ನು ಪಿತೃಗಳಿಂದ ಪಡೆಯುವನು. ಪ್ರೀತರಾದ ಪಿತೃದೇವತೆಗಳು ಈ ಮೂರು ವರಗಳನ್ನೂ ಕೊಡುವರು.

೩೦. ಪರಮ ಭಕ್ತಿಯುತನೂ, ಶ್ರದ್ಧೆಯುಳ್ಳವನೂ, ಜಿತೇಂದ್ರಿಯನೂ ಆದ ಯಾವ ಪುರುಷನು ಸಮಾಹಿತಚಿತ್ತನಾಗಿ ಭಕ್ತಿಯಿಂದ ತೇಜೋರೂಪರಾದ ಸಪ್ತ ಪಿತೃಗಣದವರನ್ನು ಪೂಜಿಸುತ್ತಾನೆಯೋ ಅವನು ಸಪ್ತದ್ವೀಪಗಳಿಂದಾವೃತವಾದ ಅಖಂಡ ಭೂಮಂಡಲಕ್ಕೂ ಚಕ್ರವರ್ತಿ ಸಾರ್ವಭೌಮನಾಗುವನು.

೩೧. ಮನೆಮಠಗಳಲ್ಲಿ ಪುರುಷರು ಯಾವ ಭಕ್ಷ್ಯಭೋಜ್ಯಾದಿಗಳನ್ನು ಮಾಡುತ್ತಾರೆಯೋ ಆ ಭಕ್ಷ್ಯಭೋಜ್ಯಾದಿಗಳನ್ನು ದೇವರಿಗೆ ಶ್ರೀ ಭಗವಂತನಿಗೆ ಅರ್ಪಿಸದೆ ಭುಂಜಿಸಬಾರದು. ಶ್ರೀ ಭಗವಂತನಿಗೆ ನಿವೇದನಮಾಡಿ ಭೋಜನ ಮಾಡಿದರೆ ಮಹಾ ಫಲಪ್ರಾಪ್ತಿಯಾಗುವುದೆಂದನು.

**ಕ್ರಮಶಃ ಕೀರ್ತಯಿಷ್ಯಾಮಿ ಬಲಿಪಾತ್ರಾಣ್ಯತಃ ಪರಂ ।**
**ಯೇಷು ಯಚ್ಚ ಫಲಂ ಪ್ರೋಕ್ತಂ ತನ್ಮೇ ನಿಗದತಃ ಶೃಣು ॥ ೩೨ ॥**

**ಇತಿ ಶ್ರೀ ಮಹಾಪುರಾಣೇ ವಾಯುಪ್ರೋಕ್ತೇ "ಶ್ರಾದ್ಧಕಲ್ಪೋ" ನಾಮ ದ್ವಾದಶೋಽಧ್ಯಾಯಃ**

---

೩೨. ಎಲೈ ಮುನಿವರ್ಯರೇ, ಈಗ ಕ್ರಮವಾಗಿ ಶ್ರಾದ್ಧದಲ್ಲಿ ಬಲಿಯನ್ನು ಹೇಗೆ ದಾನಮಾಡಬೇಕು? ಯಾವ ಪಾತ್ರೆಗಳನ್ನೂ ಪದಾರ್ಥಗಳನ್ನೂ ಉಪಯೋಗಿಸಬೇಕು? ಇದರಿಂದ ಯಾವ ಫಲಪ್ರಾಪ್ತಿಯಾಗುವುದು? ಇವೇ ಮೊದಲಾದ ವಿಷಯಗಳನ್ನು ನಿಮಗಾಗಿ ನಿರೂಪಿಸುವೆನು ಕೇಳಿರೆಂದು ಸೂತಮುನಿಯು ಮುನಿಗಳಿಗೆ ಹೇಳಿದನು.

ಇಲ್ಲಿಗೆ ವಾಯುಪ್ರೋಕ್ತವಾದ ಮಹಾಪುರಾಣದಲ್ಲಿ "ಶ್ರಾದ್ಧಕ್ರಮನಿರೂಪಣವೆಂಬ" ಹನ್ನೆರಡನೆಯ ಅಧ್ಯಾಯವು ಸಮಾಪ್ತವಾದುದು.



## ಹನ್ನೆರಡನೆಯ ಅಧ್ಯಾಯದ ಸಾರಾಂಶವು

ಈ ಅಧ್ಯಾಯದಲ್ಲಿ ಶ್ರಾದ್ಧಕ್ಕೆ ಉಪಯೋಗಿಸುವ ಪಾತ್ರೆ ಪದಾರ್ಥಗಳು ವರ್ಣಿತವಾಗಿವೆ. ಶ್ರಾದ್ಧದಲ್ಲಿ ಸುವರ್ಣಪಾತ್ರೆಗಳು, ರಜತಪಾತ್ರೆಗಳು, ತಾಮ್ರ ಪಾತ್ರೆಗಳು ಇವುಗಳನ್ನು ಉಪಯೋಗಿಸಿ ರಜತಾದಿ ಪಾತ್ರೆಗಳನ್ನು ದಾನಮಾಡಿದರೆ ಅಕ್ಷಯ ಫಲಪ್ರಾಪ್ತಿಯಾಗುವುದು. ಕೃಷ್ಣಾಜಿನವನ್ನುಪಯೋಗಿಸಿ ದಾನಮಾಡಿದರೆ ಪಿತೃಗಳಿಗೆ ತೃಪ್ತಿಯಾಗಿ ಜ್ಞಾನೋದಯವಾಗುವುದು. ಮತ್ತು ಭೂತಪ್ರೇತಪಿಶಾಚಗಳ ಉಚ್ಚಾಟನೆಯೂ ಆಗುವುದು.

ಶ್ರಾದ್ಧಕಾಲದಲ್ಲಿ ಆಗ್ನೇಯ ಕೋಣೆಯಲ್ಲಿ ಬಲಿಕುಂಡವನ್ನು ಅಗೆದು, ದರ್ಭೆ ಗಳಿಂದಲೂ ಮಂತ್ರದಿಂದಲೂ ಶುದ್ಧಮಾಡಿ, ಪಿತೃಗಳ ಉದ್ದೇಶ್ಯಕವಾಗಿ ಹೋಮ ವನ್ನು ಮಾಡಬೇಕು. ಶ್ರಾದ್ಧದ ಆದ್ಯಂತದಲ್ಲಿಯೂ, ಪಿಂಡದಾನ ಕಾಲದಲ್ಲಿಯೂ, ದೇವತಾಭ್ಯಃ ಪಿತೃಭ್ಯಶ್ಚವೆಂಬ ಮಂತ್ರವನ್ನುಚ್ಚರಿಸಿ, ಸ್ಥೂಲಸೂಕ್ಷ್ಮ ಶರೀರಧಾರಿ ಗಳಾದ ಪಿತೃಗಳಿಗೂ, ಇಂದ್ರಾದಿ ದೇವತೆಗಳಿಗೂ, ಭೃಗ್ವಾದಿ ಮಹರ್ಷಿಗಳಿಗೂ, ಮನ್ವಾದಿಗಳಿಗೂ, ಸೂರ್ಯ ಚಂದ್ರರು, ನಕ್ಷತ್ರಗ್ರಹಗಳು, ಕಶ್ಯಪ ವರುಣ ಯೋಗಿ ಗಳು, ಪಿತೃಗಣ ಬ್ರಹ್ಮಾದಿ ದೇವತೆಗಳು ಇವರಿಗೂ ನಮಸ್ಕಾರಮಾಡಿ ಕಾರ್ಯವನ್ನು ಪ್ರಾರಂಭಿಸಬೇಕು. ಭಕ್ಷ್ಯಭೋಜ್ಯಾದಿಗಳನ್ನು ದೇವರಿಗೆ ಅರ್ಪಿಸಿ ಬ್ರಾಹ್ಮಣರಿಗೆ ದಾನಮಾಡಬೇಕು. ಇದರಿಂದ ಪ್ರೀತರಾದ ಪಿತೃದೇವತೆಗಳು (ಪ್ರೀತರಾಗಿ), ಆಯುರಾ ರೋಗ್ಯಾದಿ ಸಕಾಲಾಭೀಷ್ಟಗಳನ್ನು ಕೊಡುವರೆಂಬ ವಿಷಯವು ನಿರೂಪಿತವಾಗಿದೆ.

—|| ಹರಿಃ ಓಂ ||—

—ಶ್ರೀ ಗಣೇಶಾಯ ನಮಃ—

# ಶ್ರೀಮದ್ವಾಯು ಮಹಾಪುರಾಣಂ

## ತ್ರಯೋದಶೋಽಧ್ಯಾಯಃ

|| ಬೃಹಸ್ಪತಿರುವಾಚ ||

ಪಾಲಾಶಂ ಬ್ರಹ್ಮವರ್ಚಸ್ಯಮಶ್ವತ್ಥೇ ರಾಜ್ಯಭಾವನಾ |
ಸರ್ವಭೂತಾಧಿಪತ್ಯಂ ಚ ಪ್ಲಕ್ಷೇ ನಿತ್ಯಮುದಾಹೃತಂ || ೧ ||

ಪುಷ್ಟಿಕಾಮಂ ಚ ನ್ಯಗ್ರೋಧಂ ಬುದ್ಧಿಂ ಪ್ರಜ್ಞಾಂ ಧೃತಿಂ ಸ್ಮೃತಿಂ |
ರಕ್ಷೋಘ್ನಂ ಚ ಯಶಸ್ಯಂ ಚ ಕಾಶ್ಮರ್ಯಂ ಪಾತ್ರಮುಚ್ಯತೇ || ೨ ||

ಸೌಭಾಗ್ಯಮುತ್ತಮಂ ಲೋಕೇ ಮಧುಕೇ ಸಮುದಾಹೃತಂ |
ಫಲ್ಗುಪಾತ್ರೇ ಚ ಕುರ್ವಾಣಃ ಸರ್ವಾನ್ ಕಾಮಾನವಾಪ್ನುಯಾತ್ || ೩ ||

---

## ಹದಿಮೂರನೆಯ ಅಧ್ಯಾಯವು

೧–೨. ಬೃಹಸ್ಪತಿಗಳು ಹೇಳಿದರು :—ಪುರುಷನು ಪಿತೃಗಳಿಗೆ ಮುತ್ತುಕದ ಪಾತ್ರೆಯಿಂದ ಆಹುತಿಗಳನ್ನು ಕೊಟ್ಟರೆ ಬ್ರಹ್ಮವರ್ಚಸ್ಸನ್ನೂ ಅಶ್ವತ್ಥಪಾತ್ರೆಯಲ್ಲಿ ಕೊಟ್ಟರೆ ರಾಜ್ಯಲಾಭವನ್ನೂ (ಹಿಪ್ಪಲೀ) ಬಸಿರೀಪಾತ್ರೆಯಿಂದ ಕೊಟ್ಟರೆ ಸರ್ವ ಭೂತಾಧಿಪತ್ಯವನ್ನೂ, ಆಲದಪಾತ್ರೆಯಿಂದ ಪುಷ್ಟಿಯನ್ನೂ, ಬುದ್ಧಿ, ಜ್ಞಾನ, ಧೃತಿ, ಸ್ಮೃತಿಗಳು ಇವನ್ನೂ ಹೊಂದುವನು. ಮತ್ತು ಕುಂಬಳಪಾತ್ರೆಯಿಂದ ರಕ್ಷೋ ನಾಶನವೂ, ಮಹಾಕೀರ್ತಿಯೂ ಉಂಟಾಗುವುವು.

೩. ಮನುಷ್ಯರು ಅತಿಮದುರ ಪಾತ್ರೆಯಿಂದ ಆಹುತಿಯನ್ನು ಕೊಟ್ಟರೆ ಲೋಕದಲ್ಲಿ ಉತ್ತಮವಾದ ಸೌಭಾಗ್ಯವನ್ನೂ, ಕಲ್ಲತ್ತಿಗಿಡದ ಪಾತ್ರೆಯಿಂದ ಆಹುತಿ ಯನ್ನು ಕೊಟ್ಟರೆ ಸಕಲೇಷ್ಟಾರ್ಥಗಳನ್ನೂ ಪಡೆಯುವರು.

ಪರಾ ದ್ಯುತಿರಥೋ ಕುರ್ತುಃ ಪ್ರಾಕಾಶ್ಯಂ ಚ ವಿಶೇಷತಃ ।
ಬಿಲ್ವೇ ಲಕ್ಷ್ಮೀಸ್ತಥಾ ಮೇಧಾ ನಿತ್ಯಮಾಯುಷ್ಯಮೇವ ಚ ॥ ೪ ॥

ಕ್ಷೇತ್ರಾರಾಮತಡಾಗೇಷು ಸರ್ವಸಸ್ಯೇಷು ಚೈವ ಹಿ ।
ವರ್ಷೇದಜಸ್ರಂ ಪರ್ಜನ್ಯೋ ವೇಣುಪಾತ್ರೇಷು ಕುರ್ವತಃ ॥ ೫ ॥

ಏತೇಷ್ವೇವ ಸು ಪಾತ್ರೇಷು ಯೇ ಚೈವಾಗ್ರಯಣಂ ದದುಃ ।
ಸಕೃದಪ್ಯತ್ರ ಯಜ್ಞಾನಾಂ ಸರ್ವೇಷಾಂ ಫಲಮುಚ್ಯತೇ ॥ ೬ ॥

ಪಿತೃಭ್ಯೋ ಯಸ್ತು ಮಾಲ್ಯಾನಿ ಸುಗಂಧೀನಿ ಚ ಸರ್ವಶಃ ।
ಸದಾ ದದ್ಯಾಚ್ಛ್ರಿಯಾ ಯುಕ್ತಃ ಸ ವಿಭಾತಿ ದಿವಾಕರಃ ॥ ೭ ॥

---

೪. ಬಿಲ್ವಪಾತ್ರೆಯಿಂದ ದಾನಮಾಡಿದ ಯಜಮಾನನಿಗೆ ಉತ್ತಮವಾದ ತೇಜಸ್ಸೂ, ದಿವ್ಯಜ್ಞಾನವೂ, ಸಂಪತ್ತೂ, ಬುದ್ಧಿಶಕ್ತಿಯೂ ಮತ್ತು ಆಯುಷ್ಯವೂ ಉಂಟಾಗುವುವು.

೫. ವೇಣುಪಾತ್ರೆಯಿಂದ ಪಿತೃಗಳಿಗೆ ಹೋಮಮಾಡಿದ ಯಜಮಾನನಿಗೆ ಹೊಲ, ಗದ್ದೆ, ತೋಟ, ಕೆರೆ, ಕಟ್ಟೆ ಇವುಗಳಲ್ಲಿ ಯಥೇಷ್ಟವಾಗಿ ಮಳೆಯಾಗಿ ಸಕಲ ಧಾನ್ಯಗಳೂ ಸಮೃದ್ಧಿಯಾಗಿ ಉಂಟಾಗುವುವು.

೬. ಇಂತಹ ಪಾತ್ರೆಗಳಿಂದ ಹೋಮಮಾಡಿದ ಯಜಮಾನನಿಗೆ ಸಕಲ ಯಾಗಗಳನ್ನು ಮಾಡಿದ ಫಲಗಳೂ, ಸಕಲೇಷ್ಟಾರ್ಥಗಳೂ ಉಂಟಾಗುವುವು ಎಂಬ ವಿಷಯಗಳನ್ನು ತಿಳಿಸುತ್ತೇನೆ ಕೇಳಿರೆಂದನು.

೭. ಯಾವ ಪುರುಷನು ಶ್ರಾದ್ಧಕಾಲದಲ್ಲಿ ಪಿತೃಗಳಿಗೆ ಸುಗಂಧಿಯಾದ ಗಂಧ ಪುಷ್ಪಾದಿಗಳನ್ನು ಶ್ರದ್ಧೆಯಿಂದ ಕೊಡುತ್ತಾನೆಯೋ ಅವನು ಸ್ವರ್ಗಾದಿಲೋಕದಲ್ಲಿ ಸಂಪದ್ಯುಕ್ತನಾಗಿ ಸೂರ್ಯನ ಹಾಗೆ ಹೊಳೆಯುತ್ತಾನೆ.

ಗುಗ್ಗುಲಾದೀಸ್ತಥಾ ಧೂಪಾನ್ ಪಿತೃಭ್ಯೋ ಯಃ ಪ್ರಯಚ್ಛತಿ ।
ಸಂಯುಕ್ತಾನ್ಮಧುಸರ್ಪಿರ್ಭ್ಯಾಂ ಸೋಽಶ್ವಮೇಧಫಲಂ ಲಭೇತ್ ॥ ೮ ॥

ಧೂಪಂ ಗಂಧಗುಣೋಪೇತಂ ಕಾಂತಂ ಪಿತೃಪರಾಯಣಂ ।
ಲಭತೇ ಸ್ತ್ರೀಷ್ವಪತ್ಯಾನಿ ಇಹ ಚಾಮುತ್ರ ಚೋಭಯೋಃ ॥
ದದ್ಯಾದೇವ ಪಿತೃಭ್ಯಸ್ತು ನಿತ್ಯಮೇವ ಹ್ಯತಂದ್ರಿತಃ ॥ ೯ ॥

ದೀಪಂ ಪಿತೃಭ್ಯಃ ಪ್ರಯತಃ ಸದಾ ಯಸ್ತು ಪ್ರಯಚ್ಛತಿ ।
ಸ ಲೋಕೇಽಪ್ರತಿಮಂ ಚಕ್ಷುಃ ಸದಾ ಚ ಲಭತೇ ಶುಭಂ ॥ ೧೦ ॥

ತೇಜಸಾ ಯಶಸಾ ಚೈವ ಕಾಂತ್ಯಾ ಚೈವ ಬಲೇನ ಚ ।
ಭುವಿ ಪ್ರಕಾಶೋ ಭವತಿ ಭ್ರಾಜತೇ ಚ ತ್ರಿವಿಷ್ಟಪೇ ।
ಅಪ್ಸರೋಭಿಃ ಪರಿವೃತೋ ವಿಮಾನಾಗ್ರೇ ಸ ಮೋದತೇ ॥ ೧೧ ॥

---

೮. ಯಾವ ಪುರುಷನು ಶ್ರಾದ್ಧದಲ್ಲಿ ಪಿತೃಗಳಿಗೆ ಅಗರು ಮೊದಲಾದ ಧೂಪದೀಪಗಳಿಂದಲೂ, ಜೇನುತುಪ್ಪ. ತುಪ್ಪ ಮೊದಲಾದುವುಗಳಿಂದ ಮಿಶ್ರವಾದ ಪಿಂಡಾದಿಗಳಿಂದಲೂ ಪೂಜೆಗಳನ್ನು ಮಾಡುತ್ತಾನೋ ಅವನು ಅಶ್ವಮೇಧಯಾಗದ ಫಲವನ್ನು ಹೊಂದುವನು.

೯. ಯಾವ ಮನುಷ್ಯನು ಭಕ್ತಿಯುಕ್ತನಾಗಿ ಸರ್ವದಾ ಪಿತೃದೇವತೆಗಳಿಗೆ ಸುಗಂಧಯುಕ್ತವಾದ ಧೂಪದೀಪಗಳಿಂದಲೂ, ಮನೋಹರವಾದ ವಸ್ತುಗಳಿಂದಲೂ ನಿಯಮದಿಂದಲೂ ಪೂಜೆಯನ್ನು ಮಾಡುತ್ತಾನೋ ಅವನು ತನ್ನ ಪತ್ನಿಯಲ್ಲಿ ಪುತ್ರ ಸಂಪತ್ತನ್ನು ಪಡೆದು ಇಹಪರಗಳಲ್ಲಿ ಪರಮಸುಖವನ್ನು ಪಡೆಯುವನು

೧೦. ಯಾವ ನರನು ಸಮಾಧಾನಚಿತ್ತನಾಗಿ ಭಕ್ತಿಯಿಂದ ಪಿತೃಗಳಿಗೆ ದೀಪದಾನವನ್ನು ಮಾಡುವನೋ ಅವನು ಈ ಲೋಕದಲ್ಲಿ ಮಂಗಳಕರವಾದ ದಿವ್ಯ ಚಕ್ಷುಸ್ಸನ್ನು ಪಡೆಯುವನು

೧೧. ಯಾವ ಮನುಜನು ಶ್ರಾದ್ಧದಲ್ಲಿ ನಿಯಮಿತನಾಗಿ ಭಕ್ತಿಯಿಂದ ಹೀಗೆ ಧೂಪ, ದೀಪ, ಪಿಂಡಾದಿಗಳನ್ನು ದಾನಮಾಡುವನೋ ಅವನು ತೇಜಸ್ಸು, ಯಶಸ್ಸು, ಕಾಂತಿ, ಬಲ, ಜ್ಞಾನ, ಇವುಗಳಿಂದ ಯುಕ್ತನಾಗಿ ಈ ಲೋಕದಲ್ಲಿಯೂ, ಪರಲೋಕದಲ್ಲಿಯೂ ದಿವ್ಯತೇಜಸ್ಸಿನಿಂದ ಹೊಳೆಯುವನು. ಮತ್ತು ಸ್ವರ್ಗದಲ್ಲಿ ಅಪ್ಸರಸಿಯರಿಂದ ಕೂಡಿ ದಿವ್ಯವಿಮಾನದಲ್ಲಿ ನಿತ್ಯಸುಖವನ್ನು ಪಡೆಯುವನು.

ಗಂಧಾನ್ಪುಷ್ಪಾಣಿ ಧೂಪಾಂಶ್ಚ ದದ್ಯಾದಾಜ್ಯಾಹುತೀಶ್ಚ ವೈ ।
ಫಲಮೂಲಾನಮುಸ್ಕಾರೈಃ ಪಿತೃಣಾಂ ಪ್ರಯತಃ ಶುಚಿಃ ॥
ಪೂರ್ವಂ ಕೃತ್ವಾ ದ್ವಿಜಾನ್ಪಶ್ಚಾತ್ಪೂಜಯೇದನ್ನಸಂಪದಾ ॥೧೨॥

ಶ್ರಾದ್ಧಕಾಲೇ ತು ಸತತಂ ವಾಯುಭೂತಾಃ ಪಿತಾಮಹಾಃ ।
ಆವಿಶಂತಿ ದ್ವಿಜಾನ್ ದೃಷ್ಟ್ವಾ ತಸ್ಮಾದೇತದ್ಬ್ರವೀಮಿ ತೇ ॥ ೧೩ ॥

ವಸ್ತ್ರೈರನ್ನೈಃ ಪ್ರದಾನೈಸ್ತೈರ್ಭಕ್ಷ್ಯಪೇಯೈಸ್ತಥೈವ ಚ ।
ಗೋಭಿರಶ್ವೈಸ್ತಥಾ ಗ್ರಾಮೈಃ ಪೂಜಯಿತ್ವಾ ದ್ವಿಜೋತ್ತಮಾನ್ ॥ ೧೪ ॥

ಭವಂತಿ ಪಿತರಃ ಪ್ರೀತಾಃ ಪೂಜಿತೇಷು ದ್ವಿಜಾತಿಷು ।
ತಸ್ಮಾದನ್ನೇನ ವಿಧಿವತ್ ಪೂಜಯೇದ್ದ್ವಿಜಸತ್ತಮಾನ್ ॥ ೧೫ ॥

---

೧೨. ಮನುಷ್ಯನು ಶ್ರಾದ್ಧದಲ್ಲಿ ಗಂಧಪುಷ್ಪ ಧೂಪದೀಪಗಳಿಂದಲೂ ಫಲ ಮೂಲಗಳಿಂದಲೂ, ಗೆಡ್ಡೆಗೆಣಸುಗಳಿಂದಲೂ, ಆಜ್ಯಾಹುತಿಗಳಿಂದಲೂ ಮೊದಲು ಬ್ರಾಹ್ಮಣನಿಗೆ ಪೂಜೆಯನ್ನು ಮಾಡಿ ನಮಸ್ಕರಿಸಿ ತರುವಾಯ ಪಿತೃಗಳಿಗೆ ಅನ್ನೋದಕಾದಿಗಳನ್ನು (ಪಿಂಡತರ್ಪಣೋದಕವನ್ನು) ಕೊಡಬೇಕು. ಅದರಿಂದ ಪರಮ ಪದವಿಯನ್ನು ಹೊಂದುವನು.

೧೩. ಹೀಗೆ ಭಕ್ತಿಯಿಂದ ಶ್ರಾದ್ಧಮಾಡಿದರೆ ಪಿತೃದೇವತೆಗಳು ವಾಯು ರೂಪರಾಗಿ ಬ್ರಾಹ್ಮಣರಲ್ಲಿ ಪ್ರವೇಶಮಾಡುವರು. ಆದುದರಿಂದ ಭಕ್ತಿಯಿಂದ ಬ್ರಾಹ್ಮಣರ ಪೂಜೆಗಳನ್ನು ಮಾಡಬೇಕು. ಇದರಿಂದ ಪರಮಪದವಿಯು ದೊರೆಯುವುದು. ಆದುದರಿಂದ ನಿಮಗೆ ಹೀಗೆ ವಿವರಣೆಮಾಡುತ್ತೇನೆಂದನು.

೧೪–೧೫. ಮತ್ತು ಶ್ರಾದ್ಧಕಾಲದಲ್ಲಿ ವಸ್ತ್ರ, ಅನ್ನ, ದೂಪ, ದೀಪಾದಿ ದಾನಗಳಿಂದಲೂ, ಭಕ್ಷ್ಯ, ಭೋಜ್ಯ, ಚೋಷ್ಯಪೇಯಾದಿಗಳಿಂದಲೂ ಗೋವು, ಅಶ್ವ, ಗ್ರಾಮ. ಭೂಮಿಗಳು ಇವುಗಳಿಂದಲೂ, ಬ್ರಾಹ್ಮಣೋತ್ತಮರನ್ನು ಪೂಜಿಸಬೇಕು. ಹೀಗೆ.ಬ್ರಾಹ್ಮಣಾದಿಗಳು ಪೂಜಿತರಾದರೆ ಪಿತೃಗಳು ಸಂಪೂರ್ಣವಾಗಿ ತೃಪ್ತರಾಗುವರು. ಆದುದರಿಂದ ಬ್ರಾಹ್ಮಣೋತ್ತಮರನ್ನು ಶಾಸ್ತ್ರೋಕ್ತರೀತಿಯಿಂದ ಕ್ರಮವಾಗಿ ಪೂಜಿಸಬೇಕು. ಇದರಿಂದ ಮಹತ್ಫಲವು ಲಭಿಸುವುದು.

ಸವ್ಯೋತ್ತರಾಭ್ಯಾಂ ಪಾಣಿಭ್ಯಾಂ ಕುರ್ಯಾದುಲ್ಲೇಖನಂ ದ್ವಿಜಃ ।
ಪ್ರೋಕ್ಷಣಂ ಚ ತಥಾ ಕುರ್ಯಾಚ್ಛ್ರಾದ್ಧಕರ್ಮಣ್ಯತಂದ್ರಿತಃ ॥ ೧೬ ॥

ದರ್ಭಾನ್ಪಿಂಡಾಂಸ್ತಥಾ ಭಕ್ಷ್ಯಾನ್ಪುಷ್ಪಾಣಿ ವಿವಿಧಾನಿ ಚ ।
ಗಂಧದಾನಮಲಂಕಾರಮೇಕೈಕಂ ನಿರ್ವಪೇದ್ಬುಧಃ ॥ ೧೭ ॥

ಪೋಷಯಿತ್ವಾ ಜನಂ ಸಮ್ಯಗ್ವೈಶ್ಯಃ ಸ್ಯಾದುತ್ತರೋ ದ್ವಿಜಃ ।
ಅಭ್ಯಂಗದರ್ಭಪಿಂಜಾಲ್ಯೈಸ್ತ್ರಿಭಿಃ ಕುರ್ಯಾದ್ಯಥಾವಿಧಿ ॥ ೧೮ ॥

ಅಪಸವ್ಯಂ ಪಿತೃಭ್ಯಶ್ಚ ದದ್ಯಾದನ್ನಮನುತ್ತಮಂ ।
ತಮುಚ್ಚಾರ್ಯಾಥ ಸರ್ವೇಷಾಂ ವಸ್ತ್ರಾರ್ಥಂ ಸೂತ್ರಮೇವ ಚ ॥ ೧೯ ॥

---

೧೬–೧೭. ಬ್ರಾಹ್ಮಣಾದಿಗಳು ಶ್ರಾದ್ಧಕಾಲದಲ್ಲಿ ಭಕ್ತಿಯಿಂದ ಬ್ರಾಹ್ಮಣರಿಗೆ ಪೂಜೆಯನ್ನು ಮಾಡಿ ಸವ್ಯದಕ್ಷಿಣ ಹಸ್ತಗಳಿಂದ ಭೂಮಿಯನ್ನು ಕೆರದು ಪ್ರೋಕ್ಷಣವನ್ನು ಮಾಡಿ ಶ್ರದ್ಧೆಯಿಂದ ಜಾಗರೂಕನಾಗಿ ದರ್ಭೆಗಳನ್ನು ಹರಡಿ, ಪಿಂಡಗಳನ್ನು ದಾನಮಾಡಬೇಕು. ತರುವಾಯ ವಿವಿಧವಾದ ಭಕ್ಷ್ಯಭೋಜ್ಯಗಳು ನಾನಾವಿಧ ಪುಷ್ಪಗಳು, ಗಂಧಮಾಲ್ಯಗಳು, ಅಲಂಕಾರಗಳು ಇವುಗಳಿಂದ ಪೂಜಿಸಬೇಕು. ಜ್ಞಾನಿಯಾದ ಪುರುಷನು ಹೀಗೆ ಮಾಡಬೇಕು.

೧೮. ಹೀಗೆ ವೈಶ್ಯಾದಿಗಳೂ ಸಹ ಶ್ರದ್ಧೆಯಿಂದ ಪಿತೃಪೂಜೆಯನ್ನು ಮಾಡಿ ಪಿಂಡದಾನ, ಅಭ್ಯಂಗ, ದರ್ಭೆ, ಸುವರ್ಣ ಇವೇ ಮೊದಲಾದುವುಗಳಿಂದ ತೃಪ್ತಿಯನ್ನುಂಟುಮಾಡಿದರೆ ಉತ್ತರೋತ್ತರ ಬ್ರಾಹ್ಮಣಾದಿ ಉತ್ತಮ ಜನ್ಮವು ಲಭಿಸುವುದು.

೧೯. ಶ್ರಾದ್ಧದಲ್ಲಿ ಪಿತೃಗಳಿಗೆ ಅಪಸವ್ಯದಿಂದ ಪಿಂಡದಾನವನ್ನು ಮಾಡಿದ ತರುವಾಯ ಮಂತ್ರವನ್ನುಚ್ಚರಿಸಿ ವಸ್ತ್ರಾದ್ಯಲಂಕಾರಗಳಿಗೋಸ್ಕರವಾಗಿ ದಾರವನ್ನು ಅರ್ಪಿಸಿ ಪಿತೃಪೂಜಾ ನಮಸ್ಕಾರಾದಿಗಳನ್ನು ಮಾಡಬೇಕು.

ಖಂಡನಂ ಪ್ರೋಷಣಂಚೈವ ತಥೈವೋಲ್ಲೇಖನಂ ತಥಾ ।
ಸಕೃದೇವ ಹಿ ದೇವಾನಾಂ ಪಿತೄಣಾಂ ತ್ರಿಭಿರುಚ್ಯತೇ ॥ ೨೦ ॥

ಏಕಂ ಪವಿತ್ರಂ ಹಸ್ತೇನ ಪಿತ್ರ್ಯಾ ಸರ್ವಾನ್ಸಕೃತ್ಸಕೃತ್ ।
ಚೈಲಮಂತ್ರೇಣ ಪಿಂಡೇಭ್ಯೋ ದತ್ವಾ ದರ್ಶನಜಂ ಹಿತಂ ॥ ೨೧ ॥

ಸದಾ ಸರ್ಪಿಸ್ತಿಲೈರ್ಯುಕ್ತಾಂಸ್ತ್ರೀ ಪಿಂಡಾನ್ನಿರ್ವಪೇದ್ಭುವಿ ।
ಜಾನುಂ ಕೃತ್ವಾ ತಥಾ ಸವ್ಯಂ ಭೂಮೌ ಪಿತೃಪರಾಯಣಃ ॥ ೨೨ ॥

ಪಿತ್ರ್ಯಾ ಪಿತಾಮಹಾಂಶ್ಚೈವ ತಥೈವ ಪ್ರಪಿತಾಮಹಾ ।
ಆಯಾಯ ಚ ಪಿತ್ರ್ಯಾ ಪ್ರಾಂಚಾನ್ ಪಿತೃತೀರ್ಥೇನ ಯತ್ನತಃ ॥
ಪಿಂಡಾನ್ಪರಿಕ್ಷಿಪೇತ್ಸಮ್ಯಗಪಸವ್ಯಮುತಂದ್ರಿತಃ ॥ ೨೩ ॥

---

೨೦. ಪುರುಷನು ಭಕ್ತಿಯಿಂದ ಶ್ರಾದ್ಧಕಾಲದಲ್ಲಿ ಪಿಂಡದಾನವನ್ನು ಮಾಡಿ ಸಕ್ಕರೆ ವಸ್ತ್ರಾದಿ ಮರ್ಯಾದೆ ಉಲ್ಲೇಖನ ಇವುಗಳಿಂದ ದೇವತೆಗಳಿಗೆ ಒಂದು ಸಲವೂ ಪಿತೃಗಳಿಗೆ ಮೂರು ಸಲವೂ ಪೂಜೆಯನ್ನು ಮಾಡಬೇಕು.

೨೧. ಯಜಮಾನನು ಶ್ರಾದ್ಧಕಾಲದಲ್ಲಿ ಒಂದು ಪವಿತ್ರವನ್ನು ಹಸ್ತದಲ್ಲಿ ಧರಿಸಿಕೊಂಡು ಪಿತೃಗಳ ನಾಮಗೋತ್ರಗಳನ್ನು ಒಂದೊಂದು ಸಲ ಉಚ್ಚರಿಸಿ ಒಂದೊಂದು ಪಿಂಡವನ್ನು ದಾನಮಾಡಬೇಕು. ಅನಂತರ ಮಂತ್ರಪೂರ್ವಕವಾಗಿ ಆ ಪಿಂಡಗಳನ್ನು ವಸ್ತ್ರಾದಿಗಳಿಂದ ಪೂಜಿಸಿ, ಪಿತೃಗಳು ಸನ್ನಿಹಿತರಾಗಿರುವರೆಂದು ತಿಳಿದು ಪಿಂಡದರ್ಶನದಿಂದ ಸಂತೋಷವನ್ನು ಹೊಂದಬೇಕು.

೨೨. ಯಜಮಾನನು ಶ್ರಾದ್ಧಕಾಲದಲ್ಲಿ ಶುಚಿಯಾಗಿ ಸದಾ ಪಿತೃಗಳನ್ನು ಧ್ಯಾನಿಸುತ್ತಾ, ಭೂಮಿಯಲ್ಲಿ ಮೊಳಕಾಲನ್ನು ಊರಿಕೊಂಡು, ಅಪಸವ್ಯದಿಂದ ಅಂದರೆ ಯಜ್ಞೋಪವೀತವನ್ನು ಎಡಕ್ಕೆ ಹಾಕಿಕೊಂಡು, ತುಪ್ಪ, ಮಧು, ಎಳ್ಳು ಇವುಗಳಿಂದ ಮಿಳಿತವಾದ ಮೂರು ಪಿಂಡಗಳನ್ನೂ ನಾಮಗೋತ್ರೋಚ್ಚಾರಪೂರ್ವಕವಾಗಿ ಭೂಮಿಯಲ್ಲಿ ಹರಡಿರುವ ದರ್ಭೆಗಳ ಮೇಲೆ ಇಡಬೇಕು.

೨೩. ಹೀಗೆ ಪುರುಷನು ಶುಚಿಯಾಗಿ ಪಿಂಡದಾನಮಾಡುವಾಗ ಪ್ರಾಚೀನರಾದ ಪಿತೃ, ಪಿತಾಮಹ, ಪ್ರಪಿತಾಮಹ ಅಂದರೆ ತಂದೆ, ತಾತ, ಮುತ್ತಾತ ಈ ಮೂವರನ್ನೂ ನಾಮಗೋತ್ರಗಳಿಂದ ಕರೆದು ಜಾಗರೂಕತೆಯಿಂದ ಪಿಂಡಗಳನ್ನು ಅರ್ಪಿಸಬೇಕು.

ಅನ್ನೇನಾದ್ಭಿಶ್ಚ ಪುಷ್ಪೈಶ್ಚ ಭಕ್ಷ್ಯೈಶ್ಚೈವ ಪೃಥಗ್ವಿಧೈಃ ।
ಪೃಥಗ್ ಮಾತಾಮಹಾನಾಂ ತು ಕೇಚಿದಿಚ್ಛಂತಿ ಮಾನವಾಃ ॥ ೨೪ ॥

ತ್ರೀನ್ ಪಿಂಡಾನಾನುಪೂರ್ವ್ಯೇಣ ಸಾಂಗುಷ್ಠಾನ್ಪುಷ್ಟಿವರ್ಧನಾನ್ ।
ಜಾನ್ವಂತರಾಭ್ಯಾಂ ಯತ್ನೇನ ಪಿಂಡಾಂದದ್ಯಾದ್ಯಥಾಕ್ರಮಂ ॥ ೨೫ ॥

ಸವ್ಯೋತ್ತರಾಭ್ಯಾಂ ಪಾಣಿಭ್ಯಾಂ ಧರ್ಮೇ ಮಂತ್ರೇ ಚ ಪರ್ಯಯಃ ।
ನಮೋ ವಃ ಪಿತರಃ ಸೂಕ್ಷ್ಮೈಃ ಸದಾ ಹ್ಯೇವಮತಂದ್ರಿತಃ ॥ ೨೬ ॥

ದಕ್ಷಿಣಸ್ಯಾಂ ತು ಪಾಣಿಭ್ಯಾಂ ಪ್ರಥಮಂ ಪಿಂಡಮುತ್ಸೃಜೇತ್ ।
ನಮೋ ವಃ ಪಿತರಃ ಸೌಮ್ಯಾಃ ಪಠನ್ನಿತ್ಯಮತಂದ್ರಿತಃ ॥ ೨೭ ॥

---

೨೪. ಯಜಮಾನರು ಭಕ್ತಿಯಿಂದ ಶ್ರಾದ್ಧಕಾಲದಲ್ಲಿ ಅನ್ನ, ಉದಕ, ಪುಷ್ಪ, ಭಕ್ಷ್ಯ, ಭೋಜ್ಯ ಇವುಗಳಿಂದ ಪಿತೃ, ಪಿತಾಮಹ, ಪ್ರಪಿತಾಮಹಂದಿರಗೆ ಪ್ರತ್ಯೇಕ ಪ್ರತ್ಯೇಕವಾಗಿ ಪೂಜೆಯನ್ನು ಮಾಡಬೇಕೆಂದು ಕೆಲವರು ಹೇಳುವರು. ಇನ್ನು ಕೆಲವರು ಮಾತಾಮಹಂದರಿಗೆ ಮಾತ್ರ ಪೂಜಿಸಬೇಕೆಂದು ಹೇಳುವರು.

೨೫. ಪುರುಷನು ಹೀಗೆ ಮಂಗಳಪ್ರದಗಳೂ, ಪುಷ್ಟಿದಾಯಕಗಳೂ, ಹೆಬ್ಬೆರಳಿನ ಗುರುತುಳ್ಳವುಗಳೂ ಆದ ಮೂರು ಪಿಂಡಗಳನ್ನೂ ನಾಮಗೋತ್ರೋಚ್ಚಾರ ಪೂರ್ವಕವಾಗಿ ಎರಡು ಮೊಳಕಾಲುಗಳ ಮಧ್ಯದಲ್ಲಿ ಕ್ರಮವಾಗಿ ಪಿತೃ, ಪಿತಾಮಹ, ಪ್ರಪಿತಾಮಹಂದರಿಗೆ ದಾನಮಾಡಬೇಕು ಇದರಿಂದ ಮಹಾಫಲ ಪ್ರಾಪ್ತಿಯಾಗುವುದು.

೨೬. ದೇವತೋದ್ದೇಶ್ಯಗಳಾದ ಧರ್ಮಕಾರ್ಯಗಳಲ್ಲಿ ಸವ್ಯದಿಂದ ಕರ್ಮಗಳನ್ನು ಮಾಡಬೇಕು. ಪಿತೃಗಳ ಉದ್ದೇಶ್ಯಕಗಳಾದ ಶ್ರಾದ್ಧಾದಿಗಳಲ್ಲಿ ಅಪಸವ್ಯದಿಂದ ತರ್ಪಣಾದಿ ಕಾರ್ಯಗಳನ್ನು ಮಾಡಬೇಕು. ಅಂತಹ ಕರ್ಮಗಳನ್ನು ಮಾಡುವಾಗ ಸೂಕ್ಷ್ಮರೂಪಿಗಳಾದ ಪಿತೃಗಳು ಸನ್ನಿಹಿತರಾಗಿರುವರು. ಆದುದರಿಂದ ಅಂತಹ ಪಿತೃಗಳಿಗೆ ನಮಸ್ಕಾರವನ್ನು ಮಾಡಬೇಕು.

೨೭. ಯಜಮಾನನು ಸಮಾಧಾನಕರವಾದ ಮನಸ್ಸಿನಿಂದ ದಕ್ಷಿಣಾಭಿಮುಖನಾಗಿ ಕುಳಿತುಕೊಂಡು, "ನಮೋ ವಃ ಪಿತರಃ ಸೌಮ್ಯಾಃ" ಎಂಬ ಮಂತ್ರವನ್ನುಚ್ಚರಿಸಿ, ಸೌಮ್ಯನಾಮಕರೂ ಪಿತೃಗಳೂ ಆದ ನಿಮಗೆ ನಮಸ್ಕಾರಗಳು ಎಂದು ಹೇಳಿ ಎರಡು ಕೈಗಳಿಂದಲೂ ಪಿಂಡದಾನವನ್ನು ಮಾಡಬೇಕು.

ಸವ್ಯೋತ್ತರಾಭ್ಯಾಂ ಪಾಣಿಭ್ಯಾಂ ಧರ್ಮೇ ಸರ್ವಮತಂದ್ರಿತಃ ।
ಉಲೂಖಲಸ್ಯ ಲೇಖಾಯಾಮುದಪಾತ್ರಾಚ್ಚ ಸೇವನಂ ॥ ೨೮ ॥

ಕ್ಷೌಮಸೂತ್ರಂ ನವಂ ದದ್ಯಾಚ್ಛೋಣಂ ಕಾರ್ಪಾಸಿಕಂ ತಥಾ ।
ಪತ್ರೋರ್ಣಂ ಪಿತೃಸೂತ್ರಂ ಚ ಕೌಶೇಯಂ ಪರಿವರ್ಜಯೇತ್ ॥ ೨೯ ॥

ವರ್ಜಯೇತ್ತದ್ದಶಾಂ ಯಜ್ಞೇ ಯದಪ್ಯಹತವಸ್ತ್ರಜಾಂ ।
ನ ಪ್ರೀಣಂತಿ ತಥೈತಾನಿ ದಾತುರಾಪ್ಯಾಯತೋ ಭವೇತ್ ॥ ೩೦ ॥

ಶ್ರೇಷ್ಠಮಾಹುಸ್ತ್ರಿಕಕುದಮಂಜನಂ ನಿತ್ಯಮೇವ ಚ ।
ಕೃಷ್ಣೇಭ್ಯಶ್ಚ ತಿಲೇಭ್ಯಶ್ಚ ಯತ್ತೈಲಂ ಪರಿರಕ್ಷಿತಂ ॥ ೩೧ ॥

---

೨೮. ಪುರುಷನು ಧರ್ಮಕಾರ್ಯದಲ್ಲಿ ಸವ್ಯದಕ್ಷಿಣಹಸ್ತಗಳಿಂದ ಒರಳುಕಲ್ಲಿನಂತಿರುವ ಗೆರೆಯಲ್ಲಿ ಉದಕಪಾತ್ರೆಯಿಂದ ಸೇಚನೆಮಾಡಿ ತರ್ಪಣಾದಿಗಳನ್ನು ಕೊಡಬೇಕು.

೨೯. ಪುರುಷನು ಶ್ರಾದ್ಧದಲ್ಲಿ ಪಿಂಡದಾನಮಾಡುವ ಸಮಯದಲ್ಲಿ ನೂತನವಾದ ರೇಷ್ಮೆ ಸಣಬು ಹತ್ತಿ ಪಟ್ಟೆವಸ್ತ್ರ ಇವುಗಳ ನೂಲನ್ನು ಪಿತೃವಸ್ತ್ರವನ್ನಾಗಿ ಭಾವಿಸಿ, ಪಿಂಡದಮೇಲೆ ಸಮರ್ಪಿಸಬೇಕು. ಆದರೆ ಕ್ರಿಮಿಗಳಿಂದ ಜನ್ಯವಾದ ರೇಷ್ಮೆ ದಾರವನ್ನು ಮಾತ್ರ ಕೊಡಬಾರದು. ಅದನ್ನು ತ್ಯಾಗಮಾಡಬೇಕು.

೩೦. ಯಜಮಾನನು ದಾನಮಾಡುವಾಗ ಹರಿದುಹೋಗಿರುವ ಅಥವಾ ಚಿಂದಿಯಾದ ವಸ್ತ್ರದಾನವನ್ನು ಮಾಡಬಾರದು. ಅದರಿಂದ ಪಿತೃಗಳಿಗೆ ತೃಪ್ತಿಯಾಗುವುದಿಲ್ಲ. ಒಂದುವೇಳೆ ಯಜಮಾನನಿಗೆ ಸಂತೋಷವಾಗುವುದು. ಆದರೆ ಪಿತೃಗಳಿಗೆ ಸಂತೋಷವಾಗುವುದಿಲ್ಲ.

೩೧. ತ್ರಿಕೂಟಗಿರಿಯ ಮೂಲಿಕೆಗಳಿಂದಾದ ಅಂಜನವು ಶ್ರಾದ್ಧದಲ್ಲಿ ಉತ್ತಮವಾಗಿರುತ್ತದೆ. ಮತ್ತು ಕರೀ ಎಳ್ಳಿನ ಎಣ್ಣೆಯಿಂದ ಮಾಡಿದ ಪದಾರ್ಥಗಳು ಶ್ರಾದ್ಧದಲ್ಲಿ ಶ್ರೇಷ್ಠವಾಗಿರುತ್ತವೆಯೆಂದು ತಿಳಿಯಬೇಕು.

ಚಂದನಾಗುರಣೀ ಚೋಭೇ ತಮಾಲೋಶೀರಪದ್ಮಕಂ ।
ಧೂಪಂ ಚ ಗುಗ್ಗಲಶ್ರೇಷ್ಠಂ ತುರುಷ್ಕಂ ಧೂಪಮೇವ ಚ ॥ ೩೨ ॥

ಶುಕ್ಲಾಃ ಸುಮನಸಃ ಶ್ರೇಷ್ಠಾಸ್ತಥಾ ಪದ್ಮೋತ್ಪಲಾನಿ ಚ ।
ಗಂಧವಂತ್ಯುಪಪನ್ನಾನಿ ಯಾನಿ ಚಾನ್ಯಾನಿ ಕೃತ್ಸ್ನಶಃ ॥ ೩೩ ॥

ಜವಾಸುಮನಸೋ ಭಂಡೀರೂಪಕಾಮುಕುರಂಡಕಾಃ ।
ಪುಷ್ಪಾಣಿ ವರ್ಜನೀಯಾನಿ ಶ್ರಾದ್ಧಕರ್ಮಾಣಿ ನಿತ್ಯಶಃ ॥ ೩೪ ॥

ಯಾನಿ ಗಂಧಾದಪೇತಾನಿ ಉಪಗಂಧೀನಿ ಯಾನಿ ಚ ।
ವರ್ಜನೀಯಾನಿ ಪುಷ್ಪಾಣಿ ಭೂತಿಮನ್ವಿಚ್ಛತಾ ತದಾ ॥ ೩೫ ॥

---

೩೨. ಶ್ರಾದ್ಧದಲ್ಲಿ ಚಂದನ, ಅಗರು, ತಮಾಲ, ಲಾವಂಚ, ತಾವರೆ, ಲಾವಂಚದ ಜಲ, ಧೂಪಗಿಡದ ಧೂಪ, ಹಾಲುಮಡ್ಡಿಯ ಧೂಪ ಇವು ಉತ್ತಮ ವಸ್ತುಗಳಾಗಿವೆ.

ಸುಗಂಧಿಯೂ, ಬಿಳಿಯಪುಷ್ಪಗಳೂ, ಕಮಲಪುಷ್ಪಗಳೂ, ನೈದಿಲೇ ಹೂಗಳೂ, ಸುವಾಸನೆಯಾದ ಇತರ ಕುಸುಮಗಳೂ ಸಹ ಶ್ರಾದ್ಧದಲ್ಲಿ ಶ್ರೇಷ್ಠಗಳಾಗಿವೆ. ಮತ್ತು ಇವುಗಳು ಪಿತೃಗಳಿಗೆ ಪ್ರಿಯವಾಗಿವೆ.

೩೪. ಶ್ರಾದ್ಧಕಾಲದಲ್ಲಿ ದಾಸವಾಳದ ಹೂಗಳೂ, ಬಹಳ ಅಗಲವಾದ ಹೂಗಳೂ, ಗೋರಂಟಿ ಹೂಗಳೂ ಇವುಗಳನ್ನು ಶ್ರಾದ್ಧಕಾಲದಲ್ಲಿ ಉಪಯೋಗಿಸಬಾರದು. ಇವು ಪಿತೃಗಳಿಗೆ ಅಪ್ರಿಯಗಳು.

೩೫. ಮಂಗಳಾಕಾಂಕ್ಷಿಯಾದ ಪುರುಷನು ಶ್ರಾದ್ಧಕಾಲದಲ್ಲಿ ನಿರ್ಗಂಧಕುಸಮಗಳನ್ನೂ, ದುರ್ಗಂಧ ಪುಷ್ಪಗಳನ್ನೂ ಸುತರಾಂ ತ್ಯಾಗಮಾಡಬೇಕು. ಇವುಗಳಿಂದ ಪಿತೃಗಳಿಗೆ ತೃಪ್ತಿಯಾಗುವುದಿಲ್ಲ.

ದ್ವಿಜಾತಯಸ್ತಥಾನ್ವಿಷ್ಟಾ ನಿಯತಾಃ ಸ್ಯುರುದಂಙ್ಮುಖಾಃ ।
ಪೂಜಯೇದ್ಯಜಮಾನಸ್ತು ವಿಧಿವದ್ದಕ್ಷಿಣಾಮುಖಃ ॥ ೩೬ ॥

ತೇಷಾಮಭಿಮುಖೋ ದದ್ಯಾದ್ದರ್ಭಾನ್ಪಿಂಡಾಶ್ಚ ಯತ್ನತಃ ।
ಅನೇನ ವಿಧಿನಾ ಸಾಕ್ಷಾದರ್ಚಯೇತ್ ಸ್ವಾನ್ ಪಿತಾಮಹಾನ್ ॥ ೩೭ ॥

ಹರಿತಾ ವೈ ಸಪಿಂಜಲ್ಯಾಃ ಪುಷ್ಪಸ್ನಿಗ್ಧಾಃ ಸಮಾಹಿತಾಃ ।
ರತ್ನಿಮಾತ್ರಪ್ರದಾನೇನ ಪಿತೃತೀರ್ಥೇನ ಸಂಸ್ಥಿತಾಃ ॥ ೩೮ ॥

ಉಪಮೂಲೇ ತಥಾ ನೀಲಾಃ ಪ್ರಸ್ತರಾದ್ಯಕುಲೋದ್ಯಮಾಃ ।
ತಥಾ ಶ್ಯಾಮಾಕನೀವಾರಾ ದುರ್ವಾರಾಃ ಸಮುದಾಹೃತಾಃ ॥ ೩೯ ॥

---

೩೬. ಬ್ರಾಹ್ಮಣಾದಿ ಯಜಮಾನರು ಯೋಗ್ಯರಾದ ಸದ್ಬ್ರಾಹ್ಮಣರನ್ನು ಹುಡುಕಿ ತಂದು ಮರ್ಯಾದಿಸಿ, ಅವರನ್ನು ಉತ್ತರಾಭಿಮುಖರನ್ನಾಗಿ ಕುಳ್ಳಿರಿಸಿ, ತಾನು ದಕ್ಷಿಣಾಭಿಮುಖನಾಗಿ ಕುಳಿತುಕೊಂಡು, ಶಾಸ್ತ್ರೋಕ್ತಕ್ರಮದಿಂದ ಪೂಜಿಸಿ ಶ್ರಾದ್ಧವನ್ನು ಮಾಡಬೇಕು.

೩೭. ಯಜಮಾನನು ದಕ್ಷಿಣಾಭಿಮುಖನಾಗಿ ಬ್ರಾಹ್ಮಣರಿಗೆ ಎದುರಾಗಿ ಕುಳಿತುಕೊಂಡು, ಬ್ರಾಹ್ಮಣರ ಮೂಲಕ ತಮ್ಮ ಪಿತಾಮಹಂದಿರನ್ನು ಕ್ರಮವಾಗಿ ಪೂಜಿಸಿ, ಪ್ರಯತ್ನಪೂರ್ವಕವಾಗಿ ದರ್ಭೆಗಳನ್ನೂ ಪಿಂಡ(ದಾನ)ವನ್ನೂ ಮಾಡಬೇಕು, ಮತ್ತು ಕೊಡಬೇಕು.

೩೮–೩೯. ಹಸುರಾಗಿಯೂ, ಅಗ್ರದಿಂದ ಸಹಿತವೂ, ಪುಷ್ಪಗಳಿಂದ ಮನೋಹರವೂ, ನೇರವಾಗಿ ವಕ್ರವಿಲ್ಲದೆಯೂ, ಮುಷ್ಟಿಮೊಳ ಉದ್ದವೂ, ಪಿತೃತೀರ್ಥಗಳಲ್ಲಿ ಸಂಭೂತಗಳೂ, ಬುಡದಲ್ಲಿ ಕಪ್ಪಗೂ, ಕರಡುಭೂಮಿಯಲ್ಲಿ ಅನುದ್ಭೂತಗಳೂ ಆದ ದರ್ಭೆಯ ಹುಲ್ಲನ್ನು ಹರಡಿ, ಪಿಂಡದಾನವನ್ನು ಮಾಡಬೇಕು. ಅಥವಾ ಶ್ಯಾಮಾಕ, ನೀವಾರ, ದುರ್ವಾರ, ಧಾನ್ಯಗಳ ಹುಲ್ಲನ್ನು ಹರಡಿ ಕಾರ್ಯವನ್ನು ಮಾಡಬೇಕೆಂದು ಹಿರಿಯರು ಹೇಳುವರು.

ಪೂರ್ವಕೀರ್ತಿತವಾಂಚ್ಛ್ರೇಷ್ಠೋ ಬಭೂವಾಥ ಪ್ರಜಾಪತಿಃ ।
ತಸ್ಯ ವಾಲಾ ನಿಪತಿತಾ ಭೂಮೌ ಚಾಕಾಶಮಾರ್ಗತಃ ॥ ೪೦ ॥

ತಸ್ಮಾನ್ಮೇಧ್ಯಾ ಸಮಾಕಾಶಾಃ ಶ್ರಾದ್ಧಕರ್ಮಣಿ ಪೂಜಿತಾಃ ।
ಪಿಂಡಾನಿರ್ವಪಣಂ ತೇಷು ಕರ್ತವ್ಯಂ ಭೂತಿಮಿಚ್ಛತಾ ॥ ೪೧ ॥

ಪ್ರಜಾಪುಷ್ಟಿರ್ದ್ಯುತಿಃ ಕೀರ್ತಿಃ ಪ್ರಜಾಕಾಂತಿಸಮನ್ವಿತಾ ।
ಭವಂತಿ ರುಚಿರಾ ನಿತ್ಯಂ ವಿಪಾಪ್ಮಾನೋಽಘವರ್ಜಿತಾಃ ॥ ೪೨ ॥

ಸಕೃದೇವಾಸ್ತರೇದ್ದರ್ಭಾನ್ ಪಿಂಡಾರ್ಥಂ ದಕ್ಷಿಣಾಮುಖಃ ।
ಪ್ರಾಗ್ದಕ್ಷಿಣಾಗ್ರನಿಯತೋ ವಿಧಿಂ ಚಾಪ್ಯನುವಕ್ಷ್ಯತಿ ॥ ೪೩ ॥

---

೪೦. ಮೊದಲು ಹೇಳಿದ ಸುಲಕ್ಷಣಗಳುಳ್ಳ ದರ್ಭೆಗಳೇ ಪಿಂಡದಾನಕ್ಕೆ ಶ್ರೇಷ್ಠವಾಗಿವೆ. ಆ ದರ್ಭೆಗಳಾದರೋ ಬ್ರಹ್ಮದೇವನ ಕೂದಲು ಉದುರಿ, ಆಕಾಶ ಮಾರ್ಗದಿಂದ ಭೂಮಿಯಲ್ಲಿ ಬಿದ್ದು ಬೆಳದ ಪವಿತ್ರವಾದ ಪದಾರ್ಥವಾಗಿದೆ

೪೧. ಆದುದರಿಂದ ಆಕಾಶಮೂಲಕವಾಗಿ ಬಿದ್ದು ಬೆಳವ ಆ ದರ್ಭೆಗಳು ಶ್ರಾದ್ಧಕರ್ಮದಲ್ಲಿ ಅತ್ಯುಪಯುಕ್ತಗಳಾಗಿವೆ. ಐಶ್ವರ್ಯಕಾಮಿಯಾದ ಪುರುಷನು ಅವುಗಳಮೇಲೆ ಪಿಂಡದಾನವನ್ನು ಮಾಡುವುದು ಉತ್ತಮವಾಗಿದೆ

೪೨ ಯಾವ ಪುರುಷನು ಶ್ರದ್ಧೆಯಿಂದ ಪೂರ್ವೋಕ್ತರೀತಿಯಲ್ಲಿ ಶ್ರಾದ್ಧ ಕರ್ಮಗಳನ್ನು ಮಾಡುತ್ತಾನೆಯೋ ಅವನಿಗೆ ಪ್ರಜಾವೃದ್ಧಿಯೂ. ಕಾಂತಿಯೂ, ಕೀರ್ತಿಯೂ, ವಂಶಾಭಿವೃದ್ಧಿಯೂ, ಪವಿತ್ರತೆಯೂ, ಪೂಜ್ಯತೆಯೂ ಉಂಟಾಗುವುವು. ಮತ್ತು ಅವನು ಪಾಪರಹಿತನೂ, ದೋಷದೂರನೂ ಆಗುವನು.

೪೩. ಯಜಮಾನನು ಶ್ರಾದ್ಧಕರ್ಮದಲ್ಲಿ ದಕ್ಷಿಣಾಭಿಮುಖವಾಗಿ ಕುಳಿತು ಕೊಂಡು ಪಿಂಡದಾನವನ್ನು ಮಾಡುವದಕ್ಕಾಗಿ ದಕ್ಷಿಣಾಗ್ರಗಳಾದ ದರ್ಭೆಗಳನ್ನು ಹಾಸಿ ಅವುಗಳಮೇಲೆ ವಕ್ಷ್ಯಮಾಣರೀತಿಯಲ್ಲಿ ಪಿಂಡದಾನವನ್ನು ಮಾಡಬೇಕು.

ನ ದೀನೋ ವಾಪಿ ವಾ ಕ್ರುದ್ಧೋ ನ ಚೈವಾನ್ಯಮನಾ ನರಃ ।
ಏಕಾಗ್ರಮಾಧಾಯ ಮನಃ ಶ್ರಾದ್ಧಂ ಕುರ್ಯಾತ್ಸದಾ ಬುಧಃ ॥ ೪೪ ॥

ನಿಹನ್ಮಿ ಸರ್ವಂ ಯದಮೇಧ್ಯವದ್ಭವೇತ್
ಹತಾಶ್ಚ ಸರ್ವೇ ಸುರದಾನವಾ ಮಯಾ ।
ರಕ್ಷಾಂಸಿ ಯಕ್ಷಾಶ್ಚ ಪಿಶಾಚಸಂಘಾ
ಹತಾ ಮಯಾ ಯಾತುಧಾನಾಶ್ಚ ಸರ್ವೇ ॥ ೪೫ ॥

ಏವಂ ಪಿತ್ರೇ ದೃಷ್ಟಮನ್ನಂ ಹಿ ಯಸ್ಯ
ತಸ್ಯಾಸುರಾ ವರ್ಜಯಂತೀಹ ಸರ್ವೇ ।
ಯಸ್ಮಿಂದೇಶೇ ಪಠ್ಯತೇ ಏಷ ಮಂತ್ರಃ
ತಂ ವೈ ದೇಶಂ ರಾಕ್ಷಸಾ ವರ್ಜಯಂತಿ ॥ ೪೬ ॥

---

೪೪. ಯಜಮಾನನು ವ್ಯಸನದಿಂದಲೂ, ಕೋಪದಿಂದಲೂ, ಅನ್ಯಮನಸ್ಕತೆಯಿಂದಲೂ ಪಿತೃಕ್ರಿಯೆಯನ್ನು ಮಾಡಬಾರದು ಜ್ಞಾನಿಯಾದ ಪುರುಷನು ಏಕಾಗ್ರಚಿತ್ತನಾಗಿ ಮನಃಪೂರ್ವಕವಾಗಿ ಪಿತೃಕಾರ್ಯವನ್ನು ಪ್ರೀತಿಯೊಡನೆ ಮಾಡಬೇಕು.

೪೫. ಯಾರಿಂದ ಇಂತಹ ಶ್ರಾದ್ಧಕರ್ಮವು ಅಪವಿತ್ರವಾಗುವುದೋ ಅಂತಹ ಅಸುರರು, ದಾನವರು, ರಾಕ್ಷಸರು, ಯಕ್ಷರು, ಪಿಶಾಚಸಂಘಗಳು, ಯಾತುದಾನರು ಇವರೇ ಮೊದಲಾದ ಸರ್ವರೂ ಮೃತರಾಗಲಿ. ವಿಘ್ನಕಾರಿಗಳಾದ ಸರ್ವರನ್ನೂ ಸಂಹರಿಸುವೆನು ಎಂದು ತಿಳಿಯಬೇಕು. ಇವರೆಲ್ಲರೂ ಹತರಾಗುವರು.

೪೬. ಹೀಗೆ ಯಾವ ಸ್ಥಳದಲ್ಲಿ ಪಿತೃಗಳಿಗೋಸ್ಕರ ವಿಧಿಪೂರ್ವಕವಾಗಿ ಅನ್ನದಾನವನ್ನು ಮಾಡುತ್ತಾರೆಯೋ ಅಂತಹ ಪ್ರದೇಶವನ್ನು ಅಸುರರೂ, ದಾನವರೂ ಬಿಟ್ಟು ಓಡಿಹೋಗುವರು. ಯಾವ ಸ್ಥಳದಲ್ಲಿ ಈ ಮಂತ್ರಗಳು ಹೇಳಲ್ಪಡುತ್ತವೆಯೋ ಆ ಜಾಗವನ್ನು ರಾಕ್ಷಸರು ತ್ಯಾಗಮಾಡುವರು. ಈ ಮಂತ್ರಗಳು ರಾಕ್ಷಸರನ್ನು ಆ ಸ್ಥಳದಿಂದ ಓಡಿಸಿ ಬಿಡುವುವು.

ಅನೇನ ವಿಧಿನಾ ನಿತ್ಯಂ ಶ್ರಾದ್ಧಂ ಕುರ್ಯಾದ್ದ್ವಿಜಃ ಸದಾ ।
ಮನಸಾ ಕಾಂಕ್ಷಿತಂ ಯದ್ಯತ್ತತ್ತದ್ದದ್ಯುಃ ಪಿತಾಮಹಾಃ ॥ ೪೭ ॥

ಪಿತರೋ ಹೃಷ್ಟಮನಸೋ ರಕ್ಷಾಂಸಿ ವಿಮನಾಂಸಿ ಚ ।
ಭವಂತ್ಯೇವ ಕೃತೇ ಶ್ರಾದ್ಧೇ ನಿತ್ಯಮೇವ ಪ್ರಯತ್ನತಃ ॥ ೪೮ ॥

ಶೂದ್ರಾಃ ಶ್ರಾದ್ಧೇ ಕ್ಷೀರಚಾಶು ಬಿಲ್ವಜಾಸ್ತರವಸ್ತಥಾ ।
ವಾರಣಾಶ್ಚ ಲವಾಶ್ಚೈವ ಲವವರ್ಷಾಶ್ಚ ನಿತ್ಯಶಃ ।'
ಏವಮಾದೀನ್ಯಥಾನ್ಯಾನಿ ತೃಣಾನಿ ಪರಿವರ್ಜಯೇತ್ ॥ ೪೯ ॥

ಅಂಜನಾಭ್ಯಂಜನಾಗಂಧಾವಮಾನುಪ್ರಲಯಮನಂ ತಥಾ ।
ಕಾಶೈಃ ಪುನರ್ಭವೈಃ ಕಾರ್ಯಂ ಸರ್ವಮೇವ ಫಲಂ ಭವೇತ್ ॥ ೫೦ ॥

---

೪೭. ಈ ರೀತಿಯಾಗಿ ಪುರುಷನು ಶಾಸ್ತ್ರೋಕ್ತಕ್ರಮದಿಂದ ಕ್ರಮವಾಗಿ ಶ್ರಾದ್ಧವನ್ನು ಮಾಡಬೇಕು. ಹೀಗೆ ಶ್ರದ್ಧೆಯಿಂದ ಕ್ರಿಯೆಯನ್ನು ಮಾಡಿದರೆ ಪಿತಾಮಹಂದಿರಾದ ದೇವತೆಗಳು ಕೋರಿದ ಇಷ್ಟಾರ್ಥಗಳನ್ನು ಕೊಡುವರು.

೪೮. ಹೀಗೆ ಪುರುಷನು ಶ್ರದ್ಧೆಯಿಂದ ಕ್ರಮವಾಗಿ ಶ್ರಾದ್ಧವನ್ನು ಮಾಡಿದರೆ ಪಿತೃಗಳು ತೃಪ್ತರಾಗುವರು. ರಾಕ್ಷಸರು ವಿಮನಸ್ಕರಾಗಿ ಪಲಾಯನಮಾಡುವರು. ಆದುದರಿಂದ ಪ್ರಯತ್ನಪೂರ್ವಕವಾಗಿಯೂ, ಮನಃಪೂರ್ವಕವಾಗಿಯೂ ಮಾಡಬೇಕು.

೪೯. ಶ್ರಾದ್ಧದಲ್ಲಿ ಶೂದ್ರರು, ಕ್ಷೀರವೃಕ್ಷ, ಬಿಲ್ವವೃಕ್ಷ, ಆನೆ, ಕೂದಲು, ಚಂಡುಕೂದಲು, ರೋಮರಾಶಿ, ಹುಲ್ಲುಕಡ್ಡಿ ಮೊದಲಾದವುಗಳನ್ನು ತ್ಯಜಿಸಬೇಕು. ಈ ವಸ್ತುಗಳು ಶ್ರಾದ್ಧದಲ್ಲಿ ತ್ಯಾಜ್ಯಗಳಾಗಿವೆ.

೫೦. ಪುರುಷನು ಶ್ರಾದ್ಧಕರ್ಮದಲ್ಲಿ ಕಜ್ಜಲಸ್ನಾನ, ಗಂಧ, ಧೂಪ, ದೀಪ, ಅನುಲೇಪನ, ಮಾಲ್ಯಗಳು, ನೂತನವಾದ ಕಾಚೇಹುಲ್ಲು (ದರ್ಭೆಗಳು) ಇವುಗಳನ್ನು ಉಪಯೋಗಿಸುವುದರಿಂದ ಸಮಸ್ತವಾದ ಫಲಗಳೂ ಸಂಪೂರ್ಣವಾಗಿ ಲಭಿಸುವುವು.

**ಕಾಶಾಃ ಪುನರ್ಭವಾ ಯೇ ಚ ಬರ್ಹಣಾ ಉಪಬರ್ಹಣಾಃ ।**
**ಅಥ ತೇ ಪಿತರೋ ದೇವಾ ದೇವಾಶ್ಚ ಪಿತರಃ ಪುನಃ ॥ ೫೧ ॥**

**ಪುಷ್ಪಗಂಧಾದಿಧೂಪಾನಾಮೇಷ ಮಂತ್ರ ಉದಾಹೃತಃ ।**
**ಆಹೃತ್ಯ ದಕ್ಷಿಣಾಯಾಂ ತು ಹೋಮಾರ್ಥೇ ವಿಪ್ರಯತ್ನತಃ ॥ ೫೨ ॥**

**ಸೋಮಾಯ ವೈ ಪಿತೃಮತೇ ಸ್ವಧಾ ಅಂಗಿರಸೇ ನಮಃ ।**
**ಅಸ್ವರ್ಗ್ಯಂ ಲೌಕಿಕಂ ವಾಪಿ ಜುಹಯಾತ್ಕರ್ಮಸಿದ್ಧಯೇ ॥ ೫೩ ॥**

**ಅಂತರಾಧಾಯ ಸಮಿಧಂ ತಥಾ ಹೋಮೋ ವಿಧೀಯತೇ ।**
**ಸಮಾಹಿತೇನ ಮನಸಾ ಪ್ರಯತಾಗ್ನಿಃ ಪ್ರಯತ್ನತಃ ॥ ೫೪ ॥**

---

೫೧. ಕಾಚೀಹುಲ್ಲು, ಪುನರುತ್ಪನ್ನವಾದ ದರ್ಭೆಹುಲ್ಲು, ಎಲೆಗಳು, ತಲೆದಿಂಬು ಇವುಗಳು ಪಿತೃದೇವತೆಗಳಿಗೂ, ದೇವತೆಗಳಿಗೂ ಮತ್ತು ಪಿತೃಗಳಿಗೂ ಅತಿ ಪ್ರಿಯವಾದ ವಸ್ತುಗಳಾಗಿವೆ.

೫೨. ಪುರುಷನು ಶ್ರಾದ್ಧದಲ್ಲಿ ಪಿತೃಗಳಿಗೆ ಧೂಪ, ದೀಪ, ಗಂಧ, ಪುಷ್ಪ, ಮಾಲ್ಯಾದಿಗಳನ್ನು ಸಮರ್ಪಿಸುವಾಗ ಸೋಮಾಯ ವೈ ಇತ್ಯಾದಿ ವಕ್ಷ್ಯಮಾಣ ಮಂತ್ರಗಳನ್ನು ಹೇಳಬೇಕು. ಅನಾಯಾಸದಿಂದ ಲಬ್ಧವಾದ ವಸ್ತುಗಳಿಂದ ಹೋಮವನ್ನು ಮಾಡುವಾಗ ದಕ್ಷಿಣಾಭಿಮುಖನಾಗಿ ನಿಂತು ಪಿತೃಗಳನ್ನು ಆಹ್ವಾನಿಸಬೇಕು.

೫೩. ಪಿತೃವಂತನಾದ ಸೋಮದೇವನಿಗೆ ಸ್ವಧಾಕಾರವು ಅಂದರೆ ಈ ಹೋಮವು ಸೋಮದೇವನಿಗೆ ಸೇರಲಿ. ಅಂಗಿರಸಮುನಿಗೆ ನಮಸ್ಕಾರವು. ಈ ಹೋಮದಿಂದ ಸ್ವರ್ಗಾದಿ ಲೋಕಗಳು ಸಿದ್ಧಿಸದಿದ್ದರೂ ಲೌಕಿಕವಾದ ಫಲಸಿದ್ಧಿಗಾಗಿ ಕರ್ಮಾಂಗವಾಗಿ ಹೋಮವನ್ನು ಮಾಡಬೇಕು.

೫೪. ಆಹಿತಾಗ್ನಿಯುಳ್ಳ ಪುರುಷನು ಪ್ರಯತ್ನಪೂರ್ವಕವಾಗಿಯೂ ಸಮಾಹಿತ ಚಿತ್ತನಾಗಿಯೂ, ಏಕಾಂತವಾಗಿಯೂ ಸಮಿತ್ತನ್ನು ತಂದು ಹೋಮವನ್ನು ಮಾಡಬೇಕು.

ಅಗ್ನಯೇ ಕವ್ಯವಾಹಾಯ ಸ್ವಧಾ ಅಂಗಿರಸೇ ನಮಃ ।
ಯಮಾಯ ಚೈವಾಂಗಿರಸೇ ಸ್ವಧಾ ನಮ ಇತಿ ಬ್ರುವನ್ ॥ ೫೫ ॥

ಇತ್ಯೇತೇ ವೈ ಹೋಮಮಂತ್ರಾ ಮಂತ್ರಾಣಾಮನುಪೂರ್ವಶಃ ।
ದಕ್ಷಿಣಾತೋಽಗ್ನಯೇ ನಿತ್ಯಂ ಸೋಮಾಯಾಂತರಸ್ತಥಾ ॥ ೫೬ ॥

ಏತಯೋರಂತರಂ ನಿತ್ಯಂ ಜಹುಯಾದ್ವೈ ವಿವಸ್ವತೇ ।
ಉಪಚಾರಂ ಸ್ವಧಾಕಾರಂ ತಥೈವೋಲ್ಲೇಖನಂ ಚ ಯತ್ ॥ ೫೭ ॥

ಹೋಮಜಪ್ಯೇ ನಮಸ್ಕಾರಃ ಪ್ರೋಕ್ಷಣಂ ಚ ವಿಶೇಷತಃ ।
ಅಂಜನಾಭ್ಯಂಜನೇ ಚೈವ ಪಿಂಡಸಂವಪನಂ ತಥಾ ॥ ೫೮ ॥

ಅಶ್ವಮೇಧಫಲೇನೈವ ತತ್ಸ್ಮೃತಂ ಮಂತ್ರಪೂರ್ವಕಂ ।
ಕ್ರಿಯಾಃ ಸರ್ವಾ ಯಥೋದ್ದಿಷ್ಟಾಃ ಪ್ರಯತ್ನೇನ ಸಮಾಚರೇತ್ ॥ ೫೯ ॥

---

೫೫. ಕವ್ಯವಾಹನನಾದ ಅಗ್ನಿದೇವನಿಗೆ ಸ್ವಧಾಕಾರವು ಅಂಗಿರಸನಿಗೆ ನಮಸ್ಕಾರಗಳು. ಯಮನಿಗೂ ಅಂಗಿರಸನಿಗೂ ಆಹುತಿಗಳು ಮತ್ತು ನಮಸ್ಕಾರಗಳು ಎಂದು ಹೇಳುತ್ತಾ ಪಿತೃಕ್ರಿಯೆಯನ್ನು ಮಾಡಬೇಕು.

೫೬-೫೭. ಇವೇ ಮೊದಲಾದವು ಹೋಮಮಂತ್ರಗಳಾಗಿವೆ. ಈ ಮಂತ್ರಗಳನ್ನು ಕ್ರಮವಾಗಿ ಹೇಳಿ, ದಕ್ಷಿಣಭಾಗದಿಂದ ಅಗ್ನಿದೇವನಿಗೂ, ಕೊನೆಯಲ್ಲಿ ಸೋಮದೇವನಿಗೂ ಆಹುತಿಯನ್ನು ಕೊಡಬೇಕು. ಇವರಿಬ್ಬರ ಮಧ್ಯದಲ್ಲಿ ಸೂರ್ಯದೇವನಿಗೆ ಹೋಮವನ್ನು ಮಾಡಬೇಕು. ಅದರಂತೆಯೇ ಉಪಚಾರವನ್ನೂ, ಸ್ವಧಾಕಾರವನ್ನೂ, ಆಹ್ವಾನವನ್ನೂ ಮಾಡಿ ಸತ್ಕರಿಸಬೇಕು.

೫೮–೫೯. ಹೋಮ ಮತ್ತು ಜಪವನ್ನು ಮಾಡುವ ಕಾಲದಲ್ಲಿ ವಿಶೇಷವಾಗಿ ಪ್ರದಕ್ಷಿಣೆ ನಮಸ್ಕಾರಗಳನ್ನೂ, ಪ್ರೋಕ್ಷಣವನ್ನೂ, ಅಂಜನಾಭ್ಯಂಜನಗಳನ್ನೂ, ಪಿಂಡದಾನವನ್ನೂ ಮಂತ್ರಪೂರ್ವಕವಾಗಿ ಮಾಡಿದರೆ ಅಶ್ವಮೇಧಯಾಗ ಮಾಡಿದ ಫಲವು ಲಭಿಸುವುದು. ಈ ಸಮಸ್ತ ಕಾರ್ಯಗಳನ್ನೂ ಭಕ್ತಿಯಿಂದಲೂ, ಶ್ರದ್ಧೆಯಿಂದಲೂ ಮಾಡಬೇಕು.

ಬಹುಹವ್ಯತ್ವಮೇವಾಗ್ನೌ ಸುಸಮಿದ್ಧೇ ವಿಶೇಷತಃ ।
ವಿಧೂಮೇ ಲೇಲಿಹಾನೇ ಚ ಹೋತವ್ಯಂ ಕರ್ಮಸಿದ್ಧಯೇ ॥ ೬೦ ॥

ಅಪ್ರಬುದ್ಧೇ ಸ ಧೂಮೇ ಚ ಜುಹುಯಾದ್ಯೋಹುತಾಶನೇ ।
ಯಜಮಾನೋ ಭವೇದಂಧಃ ಸೋಽಪುತ್ರ ಇತಿ ನಃ ಶ್ರುತಂ ॥ ೬೧ ॥

ಅಲ್ಪೇಂಧನೋ ವಾ ರೂಕ್ಷೋ ವಾ ವಿಸ್ಫುಲಿಂಗಶ್ಚ ಸರ್ವಶಃ ।
ಜ್ವಾಲಾ ಧೂಮೋಪಸೇವ್ಯಶ್ಚ ಸ ತು ವಹ್ನಿರ್ನ ಸಿದ್ಧಯೇ ॥ ೬೨ ॥

ದುರ್ಗಂಧಶ್ಚೈವ ನೀಲಶ್ಚ ಕೃಷ್ಣಶ್ಚೈವ ವಿಶೇಷತಃ ।
ಭೂಮಿಂ ವಿಗಾಹತೇ ಯತ್ರ ತತ್ರ ವಿದ್ಯಾತ್ಪರಾಭವಂ ॥ ೬೩ ॥

---

೬೦. ಬಹಳವಾಗಿ ಅಭಿವೃದ್ಧಿಯಾದ ಅಗ್ನಿಯಲ್ಲಿ ವಿಶೇಷವಾಗಿ ಹೋಮಗಳನ್ನು ಮಾಡಬೇಕು. ಧೂಮರಹಿತವಾದ ಅಗ್ನಿಯಲ್ಲಿ ಕರ್ಮವು ಸಿದ್ಧಿಸುವುದಕ್ಕಾಗಿ ಕ್ರಮವರಿತು ಹೋಮವನ್ನು ಮಾಡಬೇಕು.

೬೧. ಯಾವ ಪುರುಷನು ಪ್ರಜ್ವಲಿಸದ ಅಗ್ನಿಯಲ್ಲಿಯೂ, ಧೂಮವ್ಯಾಪೃತವಾದ ಅಗ್ನಿಯಲ್ಲಿಯೂ ಹೋಮವನ್ನು ಮಾಡುವನೋ, ಅಂತಹ ಯಜಮಾನನು ಅಂಧನೂ ಪುತ್ರರಹಿತನೂ ಆಗುವನೆಂದು ಶ್ರುತವಾಗಿದೆ.

೬೨. ಅತಿಸ್ವಲ್ಪವಾದ ಸೌದೆಯಿಂದ ಸಹಿತವೂ, ಮಹಾಭಯಂಕರವೂ, ವ್ಯಾಪ್ತವೂ, ಕಿಡಿಗಳಿಂದ ಯುಕ್ತವೂ, ಧೂಮಜ್ವಾಲೆಗಳಿಂದ ವ್ಯಾಪ್ತವೂ ಆದ ಅಗ್ನಿಯಲ್ಲಿ ಹೋಮವನ್ನು ಮಾಡಿದರೆ ಯಜಮಾನನಿಗೆ ಕಾರ್ಯಸಿದ್ಧಿಯು ಆಗುವುದಿಲ್ಲ.

೬೩. ದುರ್ಗಂಧವೂ, ನೀಲವರ್ಣವೂ, ಕೃಷ್ಣವರ್ಣವೂ ಇರುವ ಭೂಮಿಯಲ್ಲಿರತಕ್ಕ ಅಗ್ನಿಯಲ್ಲಿ ಹೋಮಮಾಡಿದರೆ ಯಜಮಾನನಿಗೆ ಪರಾಭವವು ಉಂಟಾಗುವುದು.

**ಅರ್ಚಿಷ್ಮಾನ್ ಪಿಂಡಿತಶಿಖಃ ಸರ್ಪಿಃ ಕಾಂಚನಸಂಭವಃ ।**
**ಸ್ನಿಗ್ಧಃ ಪ್ರದಕ್ಷಿಣಶ್ಚೈವ ವಹ್ನಿಃ ಸ್ಯಾತ್ಕಾರ್ಯಸಿದ್ಧಯೇ ॥ ೬೪ ॥**

**ನರನಾರೀಗಣೇಭ್ಯಶ್ಚ ಪೂಜಾಂ ಪ್ರಾಪ್ನೋತಿ ಶಾಶ್ವತೀಂ ।**
**ಅಕ್ಷಯಾಃ ಪೂಜಿತಾಸ್ತೇನ ಭವಂತಿ ಪಿತರೋಽವ್ಯಯಾಃ ॥ ೬೫ ॥**

**ಸ್ಥಾಲ್ಯುದುಂಬರಪಾತ್ರಾಣಿ ಫಲಾನಿ ಸಮಿಧಸ್ತಥಾ ।**
**ಶ್ರಾದ್ಧೇ ಚಾತಿಪವಿತ್ರಾಣಿ ಮೇಧ್ಯಾನೀತಿ ವಿಶೇಷತಃ ॥ ೬೬ ॥**

**ಪವಿತ್ರಂ ವಾ ದ್ವಿಜಶ್ರೇಷ್ಠ ಶುದ್ಧಯೇ ಜನ್ಮಕರ್ಮಸು ।**
**ಪಾತ್ರೇಷು ಫಲಮುದ್ದಿಷ್ಟಂ ಯನ್ಮಯಾ ಶ್ರಾದ್ಧಕರ್ಮಣಿ ॥ ೬೭ ॥**

---

೬೪. ಜ್ವಾಲೆಗಳಿಂದ ವ್ಯಾಪ್ತವೂ, ಒಗ್ಗಟ್ಟಾದ ತುದಿಯುಳ್ಳದ್ದೂ (ಏಕಮುಖವೂ) ಘೃತ ಮತ್ತು ಸುವರ್ಣ ಇವುಗಳಂತೆ ಕಾಂತಿಯುಳ್ಳದ್ದೂ, ಮನೋಹರವೂ, ಪ್ರದಕ್ಷಿಣಾಕಾರವೂ ಆದ ಅಗ್ನಿಯಲ್ಲಿ ಹೋಮಮಾಡಿದರೆ ಯಜಮಾನನಿಗೆ ಕಾರ್ಯಸಿದ್ಧಿಯಾಗುವುದು.

೬೫. ಹೀಗೆ ಮೇಲೆ ಹೇಳಿದ ಕ್ರಮದಿಂದ ಅಂತಹ ಅಗ್ನಿಯಲ್ಲಿ ಭಕ್ತಿಯಿಂದ ಹೋಮವನ್ನು ಮಾಡಿದರೆ ಆ ಪುರುಷನು ಸಮಸ್ತರಾದ ಸ್ತ್ರೀಪುರುಷರ ಗುಂಪಿನಿಂದ ಪೂಜ್ಯನೂ ಆಗಿ ಶಾಶ್ವತವಾದ ಸುಖವನ್ನು ಹೊಂದುವನು. ಅವನಿಂದ ಪೂಜಿತರಾದ ಪಿತೃಗಳು, ಅಕ್ಷಯವೂ, ಅವ್ಯಯವೂ ಆದ ಪದವಿಯನ್ನು ಪಡೆಯುವರು.

೬೬. ಚರುಪಾತ್ರೆಗಳೂ, ಅತ್ತಿಯಮರದ ಪಾತ್ರೆಗಳೂ, (ಸೌಟು ಮೊದಲಾದವೂ) ಹಣ್ಣುಗಳೂ, ಅರಳಿಯಕಡ್ಡಿ, ದರ್ಭೆ ಮೊದಲಾದವುಗಳು ಶ್ರಾದ್ಧದಲ್ಲಿ ಅತಿ ವಿಶೇಷವಾಗಿ ಪವಿತ್ರವಾದವೂ, ಅತ್ಯಂತ ಶುದ್ಧಿದಾಯಕಗಳೂ ಆಗಿರುತ್ತವೆ.

೬೭. ಎಲೈ ವಿಪ್ರೋತ್ತಮನೇ, ಜನ್ಮಕರ್ಮಗಳಿಂದ ಪರಿಶುದ್ಧನಾದ ಪುರುಷನು ಉತ್ತಮನು. ಇಂತಹ ಪುರುಷನು ಶ್ರಾದ್ಧಕರ್ಮದಲ್ಲಿ ಭಕ್ತಿಯಿಂದ ಸತ್ಪಾತ್ರದಲ್ಲಿ ದಾನವನ್ನು ಮಾಡಿದರೆ ಮಹಾಫಲಪ್ರಾಪ್ತಿಯಾಗುವುದು.

ತದೇವ ಕೃತ್ಸ್ನಂ ವಿಜ್ಞೇಯಂ ಸಮಿತ್ಸು ಚ ಯಥಾಕ್ರಮಂ ।
ಕೃತ್ವಾ ಸಮಾಹಿತಂ ಚಿತ್ತಮಗ್ನಯೇ ವೈ ಕರೋಮ್ಯಹಂ ॥ ೬೮ ॥

ಅನುಜ್ಞಾತಃ ಕುರುಷ್ವೇತಿ ತಥೈವ ದ್ವಿಜಸತ್ತಮೈಃ ।
ಪತ್ನೀಮಾದಾಯ ಪುತ್ರಾಂಶ್ಚ ಜುಹುಯಾದ್ಧವ್ಯವಾಹನಂ ॥ ೬೯ ॥

ಸಮಾನಪ್ಲಕ್ಷನ್ಯಗ್ರೋಧಪ್ಲಕ್ಷಾಶ್ವತ್ಥವಿಕಂಕತಾಃ ।
ಉದುಂಬರಾಸ್ತಥಾಬಿಲ್ವಚಂದನಾ ಯಜ್ಞಿಯಾಶ್ಚ ತೇ ॥ ೭೦ ॥

ಸರಲೋ ದೇವದಾರುಶ್ಚ ಶಾಲಶ್ಚ ಖದಿರಸ್ತಥಾ ।
ಸಮಿದರ್ಥಂ ಪ್ರಶಸ್ತಾಃ ಸ್ಯುರೇತೇ ವೃಕ್ಷಾ ವಿಶೇಷತಃ ॥ ೭೧ ॥

ಗ್ರಾಮ್ಯಾಃ ಕಂಟಕಿನಶ್ಚೈವ ಯಜ್ಞಿಯಾ ಯೇನ ಕೇನ ಚ ।
ಪೂಜಿತಾಃ ಸಮಿದರ್ಥೇ ತು ಪಿತೄಣಾಂ ವಚನಂ ತಥಾ ॥ ೭೨ ॥

ಸಮಿದ್ಭಿಃ ಕಲ್ಕಲೇಯಾಭಿರ್ಜುಹುಯಾದ್ಯೋ ಹುತಾಶನಂ ।
ಫಲಂ ಯತ್ ಕರ್ಮಣಸ್ತಸ್ಯ ತನ್ಮೇ ನಿಗದತಃ ಶೃಣು ॥ ೭೩ ॥

---

೬೮–೬೯. ಹೀಗೆ ಸರ್ವವನ್ನೂ ಸಿದ್ಧಮಾಡಿಕೊಂಡು ಸಮಿತ್ತುಗಳಲ್ಲಿ ಕ್ರಮವಾಗಿ ಅನುಸಂಧಾನಮಾಡಿ ಸಮಾಹಿತಚಿತ್ತನಾಗಿ ಅಗ್ನಿಯಲ್ಲಿ ಆಹುತಿಗಳನ್ನು ಕೊಡಲು ಸದ್ಬ್ರಾಹ್ಮಣರಿಂದ ಅನುಮತಿಯನ್ನು ಪಡೆದು ಪತ್ನೀಪುತ್ರಸಮೇತನಾಗಿ ಅಗ್ನಿಯಲ್ಲಿ ಹೋಮಮಾಡಬೇಕು

೭೦–೭೧. ಉತ್ತಮವಾದ ಬಸರೀಮರ, ಆಲದಮರ, ಹಿಪ್ಪಲೀಮರ, ಅಶ್ವತ್ಥವೃಕ್ಷ, ಅತ್ತೀಮರ, ಬಿಲ್ವದಮರ, ಶ್ರೀಗಂಧದಮರ, ಬೇಲದಗಿಡ ಮತ್ತು ಸರಲ, ದೇವದಾರು, ಸಾರ, ಖದಿರ ಈ ವೃಕ್ಷಗಳು ಸಮಿತ್ತಿಗಾಗಿ ಅತ್ಯುತ್ತಮಗಳಾಗಿವೆ. ಇವುಗಳ ಕಡ್ಡಿಗಳು ಸಮಿತ್ತಿಗೆ ಶ್ರೇಷ್ಠವಾಗಿವೆ

೭೨. ಮೇಲೆ ನಿರೂಪಿಸಿರುವ ಸಮಿತ್ತುಗಳು ಸಿಕ್ಕದಿದ್ದರೆ ಆಯಾ ಗ್ರಾಮಗಳಲ್ಲಿ ಮುಳ್ಳಿರುವ ಯಾವುದಾದರೂ ಮರಗಳಿದ್ದರೆ ಅವುಗಳ ಸಮಿತ್ತುಗಳನ್ನು ಉಪಯೋಗಿಸಬಹುದೆಂದು ಪಿತೃಗಳು ಅಂಗೀಕರಿಸಿರುವರು

೭೩. ಯಾವ ಪುರುಷನು ಕಲ್ಕೀಯವೆಂಬ ವೃಕ್ಷದ ಸಮಿತ್ತುಗಳನ್ನು ಉಪಯೋಗಿಸಿ ಆಹುತಿಗಳನ್ನು ಕೊಡುತ್ತಾನೆಯೋ ಆ ಕರ್ಮದಿಂದ ಅವನಿಗೆ ಆಗಬಹುದಾದ ಫಲವನ್ನು ತಿಳಿಸುತ್ತೇನೆ ಕೇಳು ಎಂದನು.

ಆಯಸಂ ಸರ್ವಕಾಮೀಯಮಶ್ವಮೇಧಫಲಂ ಹಿ ತತ್ ।
ಶ್ಲೇಷ್ಮಾತಕೋ ನಕ್ತಮಾಲಃ ಕಪಿತ್ಥಃ ಶಾಲ್ಮಲಿಸ್ತಥಾ ॥ ೭೪ ॥

ನೀಪೋ ವಿಭೀತಕಶ್ಚೈವ ವಲ್ಲೀಭಿಶ್ಚ ತಥೈವ ಚ ।
ಶಕುನಾನಾಂ ನಿವಾಸಶ್ಚ ವರ್ಜಯೇಚ್ಚ ಮಹೀರುಹಾನ್ ॥
ಅಯಜ್ಞೀಯಾಃ ಸ್ಮೃತಾ ಯೇ ಚ ವೃಕ್ಷಾಂಶ್ಚೈವ ತು ವರ್ಜಯೇತ್ ॥೭೫॥

ಸ್ವಧೇತಿ ಚೈವ ಮಂತ್ರಾಂತೇ ಪಿತೃಣಾಂ ವಚನಂ ತಥಾ ।
ಸ್ವಾಹೇತಿ ಚೈವ ದೇವಾನಾಂ ಯಜ್ಞಕರ್ಮಣ್ಯುದಾಹೃತಂ ॥ ೭೬ ॥

ಇತಿ ಶ್ರೀ ಮಹಾಪುರಾಣೇ ವಾಯುಪ್ರೋಕ್ತೇ " ಶ್ರಾದ್ಧಕಲ್ಪೇ "
ನಾಮ ತ್ರಯೋದಶೋಽಧ್ಯಾಯಃ

---

೭೪–೭೫. ಆಯಸಪಾತ್ರೆಯು ಸರ್ವಕಾಮಪ್ರದವಾಗಿದೆ. ಕಬ್ಬಿಣದ ಪಾತ್ರೆಯನ್ನು ಯಾಗದಲ್ಲಿ ಉಪಯೋಗಿಸದರೆ ಅಶ್ವಮೇಧ ಯಾಗದ ಫಲವು (ದೊರಕುವುದು) ಪ್ರಾಪ್ತವಾಗುವುದು. ಯಜ್ಞಕರ್ಮಗಳಲ್ಲಿ ಚಳ್ಳೇಮರ, ಹೊಂಗೇಮರ, ಬೇಲದಗಿಡ ಬೂರಗದಮರ, ಈಚಲುಮರ, ತಾಳೇಮರ ಬಳ್ಳಿಗಳು ಮತ್ತು ಶಕುನಪಕ್ಷಿಗಳು ವಾಸಿಸುವ ವೃಕ್ಷಗಳು ಇವುಗಳು ಯಜ್ಞಕರ್ಮಗಳಲ್ಲಿ ತ್ಯಾಜ್ಯಗಳಾಗಿವೆ. ಈ ವೃಕ್ಷಗಳ ಸಮಿತ್ತುಗಳನ್ನು ಯಾಗದಲ್ಲಿ ಉಪಯೋಗಿಸಬಾರದು

೭೬. ಪಿತೃಕರ್ಮದಲ್ಲಿ ಪಿತೃಗಳ ಉದ್ದೇಶ್ಯವಾಗಿ ಮಂತ್ರಗಳ ಕೊನೆಯಲ್ಲಿ ಸ್ವಧಾಕಾರವನ್ನು ಹೇಳಬೇಕು. ಯಜ್ಞಯಾಗಾದಿ ಕರ್ಮಗಳಲ್ಲಿ ದೇವತೋದ್ದೇಶ್ಯಕಗಳಾದ ಮಂತ್ರಗಳ ಕೊನೆಯಲ್ಲಿ ಸ್ವಾಹಾಕಾರಗಳನ್ನು ಹೇಳಬೇಕೆಂದು ಜ್ಞಾನಿಗಳು ಹೇಳುವರು.

ಇಲ್ಲಿಗೆ ವಾಯುಪ್ರೋಕ್ತವಾದ ಮಹಾಪುರಾಣದಲ್ಲಿ " ಶ್ರಾದ್ಧಕ್ರಮನಿರೂಪಣ "ವೆಂಬ ಹದಿಮೂರನೆಯ ಅಧ್ಯಾಯವು ಮುಗಿದುದು.

## ಹದಿಮೂರನೆಯ ಅಧ್ಯಾಯದ ಸಾರಾಂಶವು

ಈ ಅಧ್ಯಾಯದಲ್ಲಿ ಶ್ರಾದ್ಧಕಾಲದಲ್ಲಿ ಮಾಡತಕ್ಕ ಹೋಮದಾನ ಪದಾರ್ಥಗಳೂ ವರ್ಣಿತವಾಗಿವೆ. ಯಾಗಾದಿಗಳಲ್ಲಿ ಮುತ್ತುಕದ ಪಾತ್ರೆಯು ಜ್ಞಾನದಾಯಕವೂ, ಅಶ್ವತ್ಥಪಾತ್ರೆಯು ರಾಜ್ಯದಾಯಕವೂ, ಗೋಣಿಯಪಾತ್ರೆಯು ಐಶ್ವರ್ಯದಾಯಕವೂ ಆಲದಪಾತ್ರೆಯು ಆಯುರಾರೋಗ್ಯಾದಿ ಪ್ರದವೂ ಆಗಿವೆ. ಹೀಗೆ ಅನೇಕ ಪಾತ್ರೆಗಳು ಅನೇಕೇಷ್ಟಾರ್ಥಪ್ರದವಾಗಿವೆ. ಶ್ರಾದ್ಧದಲ್ಲಿ ಪಿತೃಗಳಿಗೆ ಧೂಪದೀಪ ವಸ್ತ್ರಮಾಲ್ಯ ಗಂಧ ಫಲಪುಷ್ಪಾದಿಗಳನ್ನು ಕೊಟ್ಟರೆ ಅಕ್ಷಯಫಲ ಪ್ರಾಪ್ತಿಯಾಗುವುದು. ಪಿತೃಗಳು ವಾಯುರೂಪದಿಂದ ಬ್ರಾಹ್ಮಣರನ್ನು ಆವಿಷ್ಟರಾಗಿರುವರು. ಆದುದರಿಂದ ಬ್ರಾಹ್ಮಣರನ್ನು, ಪಿತೃಗಳೆಂದು ಭಾವಿಸಿ ಪೂಜಿಸಬೇಕು. ಸವ್ಯದಿಂದ ದೇವತೆಗಳನ್ನು ಅಪಸವ್ಯದಿಂದ ಪಿತೃಗಳನ್ನು ಪೂಜಿಸಬೇಕು. ಯಜಮಾನನು ಸ್ನಾನಾದಿಗಳನ್ನು ಮಾಡಿಕೊಂಡು ಪವಿತ್ರಧಾರಿಯಾಗಿ ಭೂಶುದ್ಧಿಮಾಡಿ ದರ್ಭೆಗಳನ್ನು ಹರಡಿ, ಘೃತ, ಎಳ್ಳು ಮೊದಲಾದುವುಗಳಿಂದ ಮಿಶ್ರವಾದ ಪಿಂಡಗಳನ್ನು ಮೊಳಕಾಲನ್ನು ಕೆಳಗೆ ಊರಿ ಅವಸವ್ಯದಿಂದ ನಾಮಗೋತ್ರಗಳನ್ನುಚ್ಚರಿಸಿ ಪಿತೃ ಪಿತಾಮಹ ಪ್ರಪಿತಾಮಹಂದಿರಗೆ ಪಿಂಡಾದಾನವನ್ನು ಮಾಡಬೇಕು. ಪಿತೃಗಳನ್ನು ಗಂಧಪುಷ್ಪ, ಧೂಪದೀಪ, ಭಕ್ಷ್ಯ, ಭೋಜ್ಯ, ಅಂಜನಾ, ಭ್ಯಂಜನಗಳಿಂದ ಪೂಜೆಮಾಡಬೇಕು. ದಾಸವಾಳವೇ ಮೊದಲಾದ ನಿರ್ಗಂಧ ಕುಸುಮಗಳು ಪಿತೃಗಳಿಗೆ ಪ್ರಿಯವಲ್ಲ, ಪುರುಷನು ಕೋಪತಾಪಾದಿಗಳಿಂದ ಕೂಡಿ ಮಾಡಿದರೆ ರಾಕ್ಷಸರಿಗೂ, ಭಕ್ತಿಯಿಂದ ಮಾಡಿದರೆ ಪಿತೃದೇವತೆಗಳಿಗೂ ಸೇರುತ್ತದೆಯೆಂಬ ವಿಷಯಗಳು ವರ್ಣಿತವಾಗಿವೆ.



—॥ ಹರಿಃ ಓಂ ॥—

—ಶ್ರೀ ಗಣೇಶಾಯ ನಮಃ—

# ಶ್ರೀಮದ್ವಾಯು ಮಹಾಪುರಾಣಂ

## ಚತುರ್ದಶೋಽಧ್ಯಾಯಃ

**॥ ಸೂತ ಉವಾಚ ॥**

**ದೇವಾಶ್ಚ ಪಿತರಶ್ಚೈವ ತೇಭ್ಯೋಽನ್ಯೇ ಪಿತರಸ್ತಥಾ ।**
**ಅಥರ್ವಣವಿಧಿರ್ಹ್ಯೇಷ ಪ್ರತ್ಯುವಾಚ ಬೃಹಸ್ಪತಿಃ ॥ ೧ ॥**

**ಪೂಜಯೇಚ್ಚ ಪಿತ್ನ್ ಪೂರ್ವಂ ದೇವಾಂಶ್ಚಾಪಿ ವಿಶೇಷತಃ ।**
**ದೇವೇಭ್ಯೋಽಪಿ ಪಿತ್ನ್ ಪೂರ್ವಮರ್ಚಯಂತೀಹ ಯತ್ನತಃ ॥ ೨ ॥**

---

## ಹದಿನಾಲ್ಕನೆಯ ಅಧ್ಯಾಯವು

೧. ಸೂತಮುನಿಯು ಹೇಳಿದನು:—ದೇವತೆಗಳು, ಪಿತೃದೇವತೆಗಳು ಮತ್ತು ಪಿತೃಗಳು ಇವರನ್ನು ಶ್ರಾದ್ಧಕಾಲದಲ್ಲಿ ಪೂರ್ವೋಕ್ತಕ್ರಮದಲ್ಲಿ ಪೂಜೆಯನ್ನು ಮಾಡುವ ಕ್ರಮಗಳನ್ನು ಬೃಹಸ್ಪತ್ಯಾಚಾರ್ಯನು ಅಥರ್ವಣವಿಧಾನದಿಂದ ಮಾಡಬೇಕೆಂದು ಹೇಳಿರುವನು.

೨. ಯಜಮಾನನು ಶ್ರಾದ್ಧಕರ್ಮದಲ್ಲಿ ಮೊದಲು ಪಿತೃಗಳನ್ನು ಪೂಜಿಸಿ, ತರುವಾಯ ದೇವತೆಗಳನ್ನು ವಿಶೇಷವಾಗಿ ಪೂಜಿಸಬೇಕು. ದೇವತೆಗಳಿಗಿಂತಲೂ ಪೂರ್ವದಲ್ಲಿಯೇ ಪ್ರಯತ್ನಪೂರ್ವಕವಾಗಿ ಪಿತೃಗಳನ್ನು ಅರ್ಚಿಸಬೇಕು.

ದಕ್ಷಸ್ಯ ದುಹಿತಾ ಖ್ಯಾತಾ ಲೋಕೇ ವಿಶ್ವೇತಿ ನಾಮತಃ ।
ವಿಧಿನಾ ಸಾ ತು ಧರ್ಮಜ್ಞ ದತ್ತಾ ಧರ್ಮಾಯ ಧರ್ಮತಃ ॥
ತಸ್ಯಾಃ ಪುತ್ರಾ ಮಹಾತ್ಮಾನೋ ವಿಶ್ವೇದೇವಾ ಇತಿ ಶ್ರುತಿಃ ॥ ೩ ॥

ಪ್ರಖ್ಯಾತಾಸ್ತ್ರಿಷು ಲೋಕೇಷು ಸರ್ವಲೋಕನಮಸ್ಕೃತಾಃ ।
ಸಮಸ್ತಾಸ್ತೇ ಮಹಾತ್ಮಾನಶ್ಚೇರುರುಗ್ರಂ ಮಹತ್ತಪಃ ॥ ೪ ॥

ಹಿಮವಚ್ಛಿಖರೇ ರಮ್ಯೇ ದೇವಗಂಧರ್ವಸೇವಿತೇ ।
ಸರ್ವಾಪ್ಸರೋಭಿಶ್ಚರಿತಂ ದೇವಗಂಧರ್ವಸೇವಿತಂ ॥ ೫ ॥

ಶುದ್ಧೇನ ಮನಸಾ ಪ್ರೀತಾಃ ಪಿತರಸ್ತಾನಥಾಬ್ರುವನ್ ।
ವರಂ ವೃಣೀಧ್ವಂ ಪ್ರೀತಾಃ ಸ್ಮ ಕಂ ಕಾಮಂ ಕರವಾಮಹೇ ॥ ೬ ॥

---

೩. ಎಲೈ ಧರ್ಮಾತ್ಮನೇ, ಪೂರ್ವದಲ್ಲಿ ದಕ್ಷಬ್ರಹ್ಮನಿಗೆ ಲೋಕವಿಖ್ಯಾತಳೂ, ವಿಶ್ವಾನಾಮಕಳೂ ಆದ ಕುಮಾರಿಯಿದ್ದಳು. ಅವಳನ್ನು ಧರ್ಮದೇವನಿಗೆ ಕೊಟ್ಟು, ಶಾಸ್ತ್ರೋಕ್ತಕ್ರಮದಲ್ಲಿ ವಿವಾಹಮಹೋತ್ಸವವನ್ನು ಮಾಡಿದನು. ಅವಳಿಗೆ ಮಹಾತ್ಮರೂ ವಿಶ್ವೇದೇವನಾಮಕರೂ ಆದ ಪುತ್ರರು ಜನಿಸಿದರೆಂದು ಶ್ರುತಿಗಳು ತಿಳಿಸುತ್ತವೆ.

೪–೫. ಮೂರುಲೋಕಗಳಲ್ಲಿ ಪ್ರಖ್ಯಾತರೂ, ಸಮಸ್ತ ಜನರಿಂದ ವಂದಿತರೂ, ಮಹಾತ್ಮರೂ ಆದ ಆ ಕುಮಾರರು ಸಮಸ್ತ ದೇವಗಂಧರ್ವರಿಂದ ಸೇವಿಸಲ್ಪಟ್ಟ ಸಮಸ್ತರಾದ ಅಪ್ಸರಸಿಯರು, ದೇವಗಂಧರ್ವರು ಇವರಿಂದ ಯುಕ್ತವಾದ ಹಿಮಾಲಯದ ರಮ್ಯವಾದ ಶಿಖರದಲ್ಲಿ ಘೋರವಾದ ತಪಸ್ಸನ್ನು ಮಾಡಿದರು.

೬. ಅವರ ಪರಿಶುದ್ಧವಾದ ತಪಸ್ಸಿನಿಂದ ಪಿತೃದೇವತೆಗಳು ಪ್ರೀತರಾಗಿ ಎಲೈ ಕುಮಾರರೇ, "ನಿಮ್ಮ ತಪಸ್ಸಿನಿಂದ ಪ್ರೀತರಾಗಿರುತ್ತೇವೆ. ನಿಮಗೆ ಯಾವ ವರಗಳು ಬೇಕು. ಆ ವರವನ್ನು ಕೊಡುತ್ತೇವೆಯೆಂದು ಹೇಳಿದರು."

ಏವಮುಕ್ತೇ ತು ಪಿತೃಭಿಸ್ತದಾ ತ್ರೈಲೋಕ್ಯಭಾವನಃ ।
ಪ್ರಜಾನಾಮಧಿಪೋ ಬ್ರಹ್ಮಾ ವಿಶ್ವಾನೀತೀದಮಬ್ರವೀತ್ ॥ ೭ ॥

॥ ಬ್ರಹ್ಮೋವಾಚ ॥

ಮಹಾತೇಜಾ ಮಹಾದೇವಸ್ತಪಸಾ ತೈಸ್ತು ತಾಪಿತಃ ।
ತಪಸಾ ತೇನ ಸುಪ್ರೀತಃ ಕಂ ಕಾಮಂ ವಿದಧಾಮಿ ವಃ ॥ ೮ ॥

ಏವಮುಕ್ತಾಸ್ತದಾ ವಿಶ್ವೇ ಬ್ರಹ್ಮಣಾ ಲೋಕಕರ್ತೃಣಾ ।
ಊಚುಸ್ತೇ ಸಹಿತಾಃ ಸರ್ವೇ ಬ್ರಹ್ಮಾಣಂ ಲೋಕಭಾವಿನಂ ॥ ೯ ॥

ಶ್ರಾದ್ಧೇಸ್ಮಾಕಂ ಭವೇದಂಶೋ ಹ್ಯೇಷ ನಃ ಕಾಂಕ್ಷಿತೋ ವರಃ ।
ಪ್ರತ್ಯುವಾಚ ತತೋ ಬ್ರಹ್ಮಾ ತಾನ್ಸೈ ತ್ರಿದಿವಪೂಜಿತಾನ್ ॥ ೧೦ ॥

---

೭ ಪಿತೃಗಳು ಹೀಗೆ ಹೇಳಲಾಗಿ, ತರುವಾಯ ಮೂರುಲೋಕಗಳಲ್ಲಿಯೂ ಪೂಜ್ಯನೂ, ಪ್ರಜೆಗಳಿಗೆ ಅಧಿಪತಿಯೂ ಆದ ಬ್ರಹ್ಮದೇವನು ವಿಶ್ವನಾಮಕ ಪುರುಷರಿಗೆ ಇಂತೆಂದನು.

೮ ಬ್ರಹ್ಮದೇವನು ಹೇಳಿದನು.—ಮಹಾತೇಜಸ್ವಿಯೂ, ಮಹಾದೇವನೂ, ಅವರ ತಪಸ್ಸಿನಿಂದ ಪ್ರೀತನೂ ಆದ ಬ್ರಹ್ಮದೇವನು ಅವರ ತಪಸ್ಸಿನಿಂದ ಪ್ರೀತನಾಗಿ ನಿಮಗೆ ಯಾವ ವರಗಳನ್ನು ಕೊಡಲಿ ಎಂದು ಕೇಳಿದನು.

೯ ಲೋಕಕರ್ತನಾದ ಬ್ರಹ್ಮದೇವನು ಹೀಗೆ ಹೇಳಲಾಗಿ ಆ ವಿಶ್ವೇದೇವತೆಗಳೆಲ್ಲರೂ ಮಿಳಿತರಾಗಿ ಸೃಷ್ಟಿಕರ್ತನಾದ ಬ್ರಹ್ಮದೇವನಿಗೆ ಇಂತೆಂದರು.

೧೦. ತರುವಾಯ ವಿಶ್ವೇದೇವತೆಗಳು ಬ್ರಹ್ಮದೇವನನ್ನು ಕುರಿತು, ಎಲೆ ಪಿತಾಮಹನೇ, ಶ್ರಾದ್ಧದಲ್ಲಿ ನಮಗೆ ಭಾಗವು ದೊರೆಯುವಂತೆ ವರವನ್ನು ಕೊಡಬೇಕೆಂದು ಕೇಳಿಕೊಂಡರು. ತರುವಾಯ ಬ್ರಹ್ಮನು ದೇವಪೂಜಿತರಾದ ಅವರಿಗೆ ಮುಂದೆ ಹೇಳುವಂತೆ ತಿಳಿಸಿದನು.

ಭವಿಷ್ಯತ್ಯೇವಮೇವೇತಿ ಕಾಂಕ್ಷಿತೋ ವೋ ವರಸ್ತು ಯಃ।
ಪಿತೃಭಿಸ್ತು ತಥೇತ್ಯುಕ್ತ್ವಾ ಏವಮೇತನ್ನ ಸಂಶಯಃ ॥ ೧೧ ॥

ಸಹಾಸ್ಮಾಭಿಸ್ತು ವೋ ಭಾವ್ಯಂ ಯತ್ಕಿಂಚಿತ್ ಕ್ರಿಯತೇ ತ್ವಿಹ।
ಅಸ್ಮಾಕಂ ಕಲ್ಪಿತೇ ಶ್ರಾದ್ಧೇ ಯುಷ್ಮಾನಗ್ರಾಸನಂ ಹ ವೈ ॥ ೧೨ ॥

ಭವಿಷ್ಯತಿ ಮನುಷ್ಯೇಷು ಸತ್ಯಮೇತದ್ಬ್ರವೀಮಿ ತೇ।
ಮಾಲ್ಯೈರ್ಗಂಧೈಸ್ತಥಾನ್ನೇನ ಯುಷ್ಮಾನಗ್ರೇಽರ್ಚಯಿಷ್ಯತಿ ॥ ೧೩ ॥

ಪ್ರದಾತಾ ಚೇತಿ ಯುಷ್ಮಾಕಮಸ್ಮಾಕಂ ದಾಸ್ಯತೇ ತತಃ।
ವಿಸರ್ಜನಮಥಾಸ್ಮಾಕಂ ಪೂರ್ವಂ ಪಶ್ಚಾತ್ತು ದೇವತಾಃ ॥ ೧೪ ॥

---

೧೧. ಎಲೈ ವಿಶ್ವೇದೇವತೆಗಳೇ, ನೀವು ಯಾವ ವರವನ್ನು ಕೇಳುತ್ತೀರೋ ಆ ವರಗಳು ಹಾಗೆಯೇ ಉಂಟಾಗಲಿ. ಪಿತೃಗಳು ಶ್ರಾದ್ಧದಲ್ಲಿ ಹೇಗೆ ಭಾಗಿಗಳಾಗಿರುವರೋ ಹಾಗೆಯೇ ನೀವೂ ಸಹ ಭಾಗಿಗಳಾಗಿ. ಈ ವಿಷಯದಲ್ಲಿ ಸಂದೇಹವಿಲ್ಲವೆಂದು ಬ್ರಹ್ಮದೇವನು ವಿಶ್ವೇದೇವತೆಗಳಿಗೆ ಹೇಳಿದನು. ಅದನ್ನು ಪಿತೃಗಳೂ (ತಥಾಸ್ತು) ಹಾಗೆಯೇ ಆಗಲೆಂದು ಅನುಮೋದಿಸಿದರು.

೧೨. ಆಗ ಪಿತೃಗಳೂ ಸಹ ವಿಶ್ವೇದೇವತೆಗಳಿಗೆ ನೀವೂ ಸಹ ನಮ್ಮೊಡನೇ ಮನುಷ್ಯರು ಮಾಡುವ ಶ್ರಾದ್ಧದಲ್ಲಿ ಭಾಗಿಗಳಾಗಿರಿ. ನಮಗಾಗಿ ಮಾಡುವ ಶ್ರಾದ್ಧದಲ್ಲಿ ನಿಮಗೆ ಅಗ್ರಾಸನ, ಅಗ್ರಪೂಜೆ ಮೊದಲಾದವು ಉಂಟಾಗಲೆಂದು ಹೇಳಿದರು.

೧೩. ಮನುಷ್ಯರು ಭಕ್ತಿಯಿಂದ ಮಾಡುವ ಶ್ರಾದ್ಧದಲ್ಲಿ ಗಂಧ, ಮಾಲ್ಯ, ಧೂಪ, ದೀಪ, ಭಕ್ಷ್ಯ, ಭೋಜ್ಯ ಮೊದಲಾದುವುಗಳಿಂದ ಅಗ್ರಪೂಜೆಯು ನಿಮಗಾಗಲೆಂದೂ ಇದು ಸತ್ಯಭಾಷಣವೆಂದೂ ಪಿತೃಗಳು ಹೇಳಿದರು.

೧೪. ಎಲೈ ವಿಶ್ವೇದೇವತೆಗಳೇ ಮೊದಲು ನಿಮಗೆ ಆವಾಹನೆ ಅರ್ಚನಾದಿಗಳನ್ನು ಮಾಡಿ ಅನಂತರ ನಮಗೆ ಪೂಜೆಯನ್ನು ಮಾಡಲಿ. ಮೊದಲು ಪಿತೃಗಳಾದ ನಮಗೆ ವಿಸರ್ಜನೆಯೂ ತರುವಾಯ ನಿಮಗೂ ಆಗಲೆಂದು ಪಿತೃಗಳು ಹೇಳಿದರು.

ರಕ್ಷಣಂ ಚೈವ ಶ್ರಾದ್ಧಸ್ಯ ಅತಿಥ್ಯಂ ಚ ವಿಧಿದ್ವಯಂ ।
ಭೂತಾನಾಂ ದೇವತಾನಾಂ ಚ ಪಿತ್ರೂಣಾಂ ಶ್ರಾದ್ಧಕರ್ಮಣಿ ॥
ಏವಂ ವಿಧಿಕೃತಃ ಸಮ್ಯಕ್ ಸರ್ವಮೇತದ್ಭವಿಷ್ಯತಿ ॥ ೧೫ ॥

ಏವಂ ದತ್ವಾ ವರಂ ತೇಷಾಂ ಬ್ರಹ್ಮಾ ಪಿತೃಗಣೈಃ ಸಹ ।
ಭೂತಾನುಗ್ರಹಕೃದ್ದೇವಃ ಸಂಚಚಾರ ಯಥಾಸುಖಂ ॥ ೧೬ ॥

ವೇದೇ ಪಂಚ ಮಹಾಯಜ್ಞಾ ನರಾಣಾಂ ಸಮುದಾಹೃತಾಃ ।
ಏತಾನ್ ಪಂಚ ಮಹಾಯಜ್ಞಾನ್ನಿರ್ವಪೇತ್ಸತತಂ ನರಃ ॥ ೧೭ ॥

ಯತ್ರ ಯಾಸ್ಯಂತಿ ದಾತಾರಃ ಸಂಸ್ಥಾನಂ ವೈ ನಿಬೋಧತ ।
ನಿರ್ಭಯಂ ನಿರಹಂಕಾರಂ ನಿಃಶೋಕಂ ನಿರ್ವ್ಯಥಕ್ಲಮಂ ॥
ಬ್ರಹ್ಮಸ್ಥಾನಮವಾಪ್ನೋತಿ ಸರ್ವಕಾಮಪುರಸ್ಕೃತಂ ॥ ೧೮ ॥

---

೧೫ ಶ್ರಾದ್ಧಕರ್ಮದಲ್ಲಿ ಪಂಚಭೂತಗಳು, ದೇವತೆಗಳು, ಪಿತೃಗಳು ಇವರ ಆತಿಥ್ಯ, ರಕ್ಷಣೆ ಎಂಬ ಎರಡು ಭಾಗಗಳು ವಿಧಿವಿಹಿತವಾಗಿದೆ. ಹೀಗೆ ಶಾಸ್ತ್ರವಿಹಿತ ಕ್ರಮದಿಂದ ಶ್ರಾದ್ಧವನ್ನು ಮಾಡಿದರೆ ಸಕಲ ಫಲವೂ ಸಿದ್ಧವಾಗುವುದು.

೧೬. ಸರ್ವಪ್ರಾಣಿಗಳಿಗೂ (ಸಹಾಯ) ಅನುಗ್ರಹವನ್ನು ಮಾಡುವವನೂ, ಸ್ವಾಮಿಯೂ ಆದ ಬ್ರಹ್ಮದೇವನು ಪಿತೃಗಣಗಳೊಡನೇ ವಿಶ್ವೇದೇವತೆಗಳಿಗೆ ವರವನ್ನು ಕೊಟ್ಟು ಲೋಕಾನುಗ್ರಹಕ್ಕಾಗಿ ಸ್ವೇಚ್ಛೆಯಾಗಿ ಸಂಚರಿಸಿದನು

೧೭. ಮನುಷ್ಯರಿಗೆ ಪಂಚಮಹಾಯಜ್ಞಗಳು ವೇದವಿಹಿತವಾಗಿವೆ. ಇಂತಹ ವೇದವಿಹಿತವಾದ ಪಂಚಮಹಾಯಜ್ಞವನ್ನು ಮಾಡುವ ಪುರುಷನು ಇಹಪರಗಳಲ್ಲಿಯೂ ದಿವ್ಯಸುಖವನ್ನು ಹೊಂದುವನು

೧೮. ಹೀಗೆ ಪಂಚಮಹಾಯಜ್ಞಗಳನ್ನು ಮಾಡಿದ ದಾನಿಯು ಎಲ್ಲಿಗೆ ಯಾವ ಸ್ಥಾನಕ್ಕೆ ಹೋಗುವನೋ ಅಂತಹ ಸ್ಥಾನಗಳ ಮಹಿಮೆಯನ್ನು ನಿರೂಪಿಸುವೆನು ಕೇಳಿರಿ. ಅಂತಹ ಜ್ಞಾನಿಯಾದ ಪುರುಷನು ಭಯರಹಿತವೂ, ಅಹಂಕಾರವರ್ಜಿತವೂ, ಶೋಕಶೂನ್ಯವೂ, ದುಃಖಾಯಾಸರಹಿತವೂ, ಸಕಲೇಷ್ಟಾರ್ಥಪ್ರದವೂ ಆದ ಪರಬ್ರಹ್ಮ ಪದವಿಯ ಮುಕ್ತಿಯನ್ನು ಪಡೆಯುವನು.

ಶೂದ್ರೇಣಾಪಿ ಪ್ರಕರ್ತವ್ಯಾಃ ಪಂಚೈತೇ ಮಂತ್ರವರ್ಜಿತಾಃ ।
ಅತೋಽನ್ಯಥಾ ತು ಯೋ ಭುಂಕ್ತೇ ಸ ಋಣಂ ನಿತ್ಯಮಶ್ನುತೇ ॥ ೧೯ ॥

ಋಣಂ ಚ ಭುಂಕ್ತೇ ಪಾಪಾತ್ಮಾ ಯಃ ಪಚೇದಾತ್ಮಕಾರಣಾತ್ ।
ತಸ್ಮಾನ್ನಿರ್ವರ್ತಯೇತ್ಪಂಚ ಮಹಾಯಜ್ಞಾನ್ ಸದಾ ಬುಧಃ ॥ ೨೦ ॥

ನೈವೇದ್ಯಂ ಕೇಚಿದಿಚ್ಛಂತಿ ಜೀವತ್ಯಪಿ ಪ್ರಯತ್ನತಃ ।
ಉದಃ ಪೂರ್ವಂ ಬಲಿಂ ಕುರ್ಯಾದುದಕುಂಭಂ ತಥೈವ ಚ ॥ ೨೧ ॥

ಬಲಿಂ ಸುವಿದಿತಂ ಕುರ್ಯಾದುಚ್ಚಾದುಚ್ಚತರಂ ಕ್ಷಿಪೇತ್ ।
ಪರಶೃಂಗಗವಾಂ ಪೂರ್ವಂ ಬಲಿಂ ಸೂಕ್ಷ್ಮಂ ಸಮುಪೇತ್ ॥ ೨೨ ॥

---

೧೯. ಈ ಪಂಚಮಹಾಯಜ್ಞಗಳನ್ನು ಮಂತ್ರರಹಿತವಾಗಿ ಶೂದ್ರರೂ ಕೂಡ ಮಾಡಬೇಕು. ಅವರಿಗೂ ಸಹ ಮಹಾಫಲಪ್ರಾಪ್ತಿಯಾಗುವುದು. ಹೀಗೆ ಪಂಚಮಹಾ ಯಜ್ಞಗಳನ್ನು ಮಾಡದೇ ಯಾವನು ಭೋಜನಾದಿಗಳನ್ನು ಮಾಡುವನೋ ಅವನು ಋಣಶೇಷಕ್ಕೆ ಭಾಗಿಯಾಗಿ ನಿತ್ಯದುಃಖವನ್ನು ಅನುಭವಿಸುವನು.

೨೦. ಯಾವ ಮನುಷ್ಯನು ದೇವಯಜ್ಞ, ಪಿತೃಯಜ್ಞಾದಿಗಳನ್ನು ಮಾಡದೇ ತನ್ನ ಉದರಪೂರ್ತಿಗಾಗಿ ಪಾಕಾದಿಗಳನ್ನು ಮಾಡುವನೋ ಅವನು ಋಣಬದ್ಧನಾಗಿ ಮಹಾಪಾಪಿಯಾಗುವನು. ಆದುದರಿಂದ ವಿವೇಕಿಯಾದ ಪುರುಷನು ಪಂಚಮಹಾ ಯಜ್ಞಗಳನ್ನು ಮಾಡಿ ನಿತ್ಯವಾದ ಸುಖಕ್ಕೆ ಭಾಗಿಯಾಗಬೇಕೆಂದು ಹೇಳಿದನು.

೨೧. ಕೆಲವು ಪುರುಷರು ತಾವು ಬದುಕಿರುವಾಗಲೇ ಪ್ರಯತ್ನಪೂರ್ವಕವಾಗಿ ಪರಲೋಕಸಹಾಯಾರ್ಥವಾಗಿ ಅನ್ನವನ್ನೂ, ಉದಕವನ್ನೂ, ಬಲಿಯನ್ನೂ ಮತ್ತು ಉದಕಕುಂಭವನ್ನೂ ದಾನಮಾಡುವರು.

೨೨. ಪುರುಷನು ಬಲಿದಾನವನ್ನು ಎಲ್ಲಾ ಪ್ರಾಣಿಗಳಿಗೂ ವಿದಿತವಾಗುವಂತೆ ಬಹಳ ಉನ್ನತವಾದ ಪ್ರದೇಶದಲ್ಲಿ ಎರಚಬೇಕು. ಪ್ರಥಮತಃ ಉತ್ತಮವಾದ ಶೃಂಗಗಳಿರುವ ಗೋವುಗಳಿಗೆ ಗೋಗ್ರಾಸವನ್ನು ಏಕಾಂತವಾಗಿ ಇಡಬೇಕು.

ನ ನಿವೇದ್ಯೋ ಭವೇತ್ ಪಿಂಡಃ ಪಿತೄಣಾಂ ಯಸ್ತು ಜೀವತಿ ।
ಇಷ್ಟೇನಾನ್ನೇನ ಭಕ್ಷ್ಯೈಶ್ಚ ಭೋಜಯೇತ ಯಥಾವಿಧಿ ॥
ವಿಧಾನಂ ವೇದವಿಹಿತಮೇತದ್ವಕ್ಷ್ಯಾಮಿ ಯತ್ನತಃ ॥ ೨೩ ॥

ದೇವದೇವಾ ಮಹಾತ್ಮಾನೋ ಹ್ಯೇತೇಽಪಿ ಪಿತರೋ ಹ್ಯುತ ।
ಇಚ್ಛಂತಿ ಕಿಂಚಿದಾಚಾರ್ಯಾಃ ಪಶ್ಚಾತ್ ಪಿಂಡನಿವೇದನಂ ॥ ೨೪ ॥

ಪೂಜನಂ ಚೈವ ವಿಪ್ರಾಣಾಂ ಸರ್ವಮೇವ ಹಿ ನಿತ್ಯಶಃ ।
ತದ್ಧಿ ಧರ್ಮಾರ್ಥಕುಶಲಾನಿತ್ಯುವಾಚ ಬೃಹಸ್ಪತಿಃ ॥ ೨೫ ॥

ಪೂರ್ವಂ ನಿವೇದಯೇತ್ಪಿಂಡಂ ಪಶ್ಚಾದ್ವಿಪ್ರಾಂಶ್ಚ ಭೋಜಯೇತ್ ।
ಯೋಗಾತ್ಮಾನೋ ಮಹಾತ್ಮಾನಃ ಪಿತರೋ ಯೋಗಸಂಭವಾಃ ॥
ಸೋಮಮಾಪ್ಯಾಯಯಂತ್ಯೇತೇ ಪಿತರೋ ಯೋಗಮಾಸ್ಥಿತಾಃ ॥ ೨೬ ॥

---

೨೩. ಪಿತೃಗಳು ಬದುಕಿರುವಾಗ ಮನುಷ್ಯರು ತಮ್ಮ ಪಿತೃಗಳಿಗೆ ಪಿಂಡದಾನವನ್ನು ಮಾಡಬಾರದು. ಆದರೆ ಅವರ ಪ್ರೀತಿಗಾಗಿ ಉತ್ತಮವಾದ ಅನ್ನ, ಉದಕ, ಭಕ್ಷ್ಯ, ಭೋಜ್ಯ ಇವೇ ಮೊದಲಾದವುಗಳಿಂದ ಶಾಸ್ತ್ರವಿಹಿತ ರೀತಿಯಲ್ಲಿ ಮಾಡಬಹುದು. ಈ ರೀತಿಯಾಗಿ ಮಾಡುವುದು ವೇದವಿಹಿತವಾಗಿದೆ. ಇದನ್ನು ಕ್ರಮವಾಗಿ ತಿಳಿಸುವೆನು.

೨೪. ಪೂರ್ವೋಕ್ತರಾದ ಪಿತೃಗಳು ದೇವೋತ್ತಮರೂ, ಮಹಾತ್ಮರೂ ಸಕಲೇಷ್ಟಾರ್ಥದಾಯಕರೂ ಆಗಿರುವರು. ಆದುದರಿಂದ ಕೆಲವು ಮಹಾತ್ಮರು ಇಂತಹ ಪಿತೃಗಳ ಪೂಜೆಯನ್ನು ಮಾಡಿ, ತರುವಾಯ ಪಿಂಡದಾನವನ್ನು ಮುಖ್ಯವಾಗಿ ಮಾಡಬೇಕೆಂದು ಹೇಳುವರು

೨೫. ಪುರುಷನು ನಿತ್ಯವೂ ಸಮಾಹಿತಚಿತ್ತನಾಗಿ ಬ್ರಾಹ್ಮಣರ ಅರ್ಚನಾದಿಗಳನ್ನು ಮಾಡಬೇಕು. ಹೀಗೆ ಮಾಡುವುದರಿಂದ ಧರ್ಮಾರ್ಥ, ಕಾಮ, ಮೋಕ್ಷವೇ ಮೊದಲಾದ ಸಕಲವಿಧ ಮಂಗಳವೂ ಉಂಟಾಗುವುದೆಂದು ಬೃಹಸ್ಪತ್ಯಾಚಾರ್ಯನು ತಿಳಿಸುವನು.

೨೬. ಶ್ರಾದ್ಧದಲ್ಲಿ ಮೊದಲು ಪಿತೃಗಳಿಗೆ ಪಿಂಡದಾನವನ್ನು ಮಾಡಿ ತರುವಾಯ ಬ್ರಾಹ್ಮಣ ಭೋಜನವನ್ನು ಮಾಡಿಸಬೇಕೆಂದು ಕೆಲವರು ಹೇಳುವರು. ಹೀಗೆ ಮಾಡಿದರೆ ಯೋಗಸಂಭೂತರೂ, ಮಹಾತ್ಮರೂ, ಯೋಗನಿರತರೂ, ಯೋಗಮಹಿಮೆಯುಳ್ಳವರೂ ಆದ ಪಿತೃಗಳು ಸೋಮದೇವನನ್ನು ಸಂತೋಷಪಡಿಸುವರು.

ತಸ್ಮಾದ್ದದ್ಯಾಚ್ಛುಚಿಃ ಪಿಂಡಾನ್ ಯೋಗಿಭ್ಯಸ್ತತ್ಪರಾಯಣಃ ।
ಪಿತೃಣಾಂ ಹಿ ಭವೇದೇತತ್ಸಾಕ್ಷಾದಿವ ಹುತಂ ಹವಿಃ ॥ ೨೭ ॥

ಬ್ರಾಹ್ಮಣಾನಾಂ ಸಹಸ್ರೇಭ್ಯೋ ಯೋಗೀ ಚಾಗ್ರಾಸನೇ ಯದಿ ।
ಯಜಮಾನಂ ಚ ಭೋಕ್ತೄಂಶ್ಚ ನೌರಿವಾಂಭಸಿ ತಾರಯೇತ್ ॥ ೨೮ ॥

ಅಸತಾಂ ಪ್ರಗ್ರಹೋ ಯತ್ರ ಸತಾಂ ಚೈವ ವಿಮಾನನಾ ।
ದಂಡೋ ದೇವಕೃತಸ್ತತ್ರ ಸದ್ಯಃ ಪತತಿ ದಾರುಣಃ ॥ ೨೯ ॥

ಹಿತ್ವಾಗಮಂ ಸ ಧರ್ಮಾಣಂ ಬಾಲಿಶಂ ಯತ್ರ ಭೋಜಯೇತ್ ।
ಆದಿಕರ್ಮ ಸಮುತ್ಸೃಜ್ಯ ದಾತಾ ತತ್ರ ವಿನಶ್ಯತಿ ॥ ೩೦ ॥

---

೨೭. ಆದುದರಿಂದ ಯಜಮಾನನು ಶುಚಿಯೂ, ಪಿತೃಪರಾಯಣನೂ, ಆಗಿ ಯೋಗಿಗಳಿಗೋಸ್ಕರ ಪೂಜೆಯನ್ನೂ ಪಿಂಡದಾನವನ್ನೂ ಮಾಡಬೇಕು. ಹೀಗೆ ಪಿಂಡ ದಾನವನ್ನು ಮಾಡಿದರೆ ಅದು ಪ್ರತ್ಯಕ್ಷವಾಗಿ ಅವರಿಗೆ ಸೇರುವುದು.

೨೮. ಸಹಸ್ರಾರು ಬ್ರಾಹ್ಮಣರಿಗಿಂತಲೂ ಯೋಗಿಯು ಉತ್ತಮನಾಗಿರುವನು. ಆದುದರಿಂದ ಅಂತಹ ಯೋಗಿಗೆ ಅಗ್ರಾಸನವನ್ನು ಕೊಟ್ಟು ಅಗ್ರಪೂಜೆಯನ್ನು ಮಾಡಿದರೆ ಯಜಮಾನನೂ, ಭೋಕ್ತೃಗಳೂ ಸಮುದ್ರವನ್ನು ಹಡಗಿನಂತೆ ಸಂಸಾರ ಸಮುದ್ರವನ್ನು ದಾಟುವರು.

೨೯. ಯಾವ ಕಾರ್ಯಗಳಲ್ಲಿ ಅಯೋಗ್ಯರಿಗೆ ಮರ್ಯಾದೆಯೂ, ಸಜ್ಜನರಿಗೆ ಅಪಮಾನವೂ ಆಗುವುವೋ, ಅದರಲ್ಲಿ ದೇವತೆಗಳು ಯಜಮಾನನನ್ನು ಶಿಕ್ಷಿಸುವರು. ಆ ಕಾರ್ಯವು ವ್ಯರ್ಥವಾಗುವುದು. ಮತ್ತು ವಿಪತ್ತುಗಳೂ ಸಂಭವಿಸುವುವು.

೩೦. ಯಾವ ಪುರುಷನು ಶಾಸ್ತ್ರೋಕ್ತಕ್ರಮವನ್ನು ಮೀರಿ ಕಾರ್ಯವನ್ನು ಮಾಡುತ್ತಾ ಅಯೋಗ್ಯನಿಗೆ ಭೋಜನವನ್ನು ಮಾಡಿಸುವನೋ ಅವನ ಕಾರ್ಯವು ವ್ಯರ್ಥವಾಗುವುದು. ಮತ್ತು ಯಜಮಾನನಿಗೆ ಕೇಡು ಸಂಭವಿಸುವುದು.

ಪಿಂಡಮಗ್ನೌ ಸದಾ ದದ್ಯಾದ್ಭೋಗಾರ್ಥೀ ತು ಪ್ರಯತ್ನತಃ ।
ಪ್ರಜಾರ್ಥೀ ಪತಯೇ ದದ್ಯಾನ್ಮಧ್ಯಮಂ ತತ್ರ ಪೂರ್ವಕಂ ॥ ೩೧ ॥

ಉತ್ತಮಾಂ ದ್ಯುತಿಮನ್ವಿಚ್ಛಂಗೋಷು ನಿತ್ಯಂ ಪ್ರಯಚ್ಛತಿ ।
ಪ್ರಜ್ಞಾಂ ಪೂಜಾಂ ಯಶಃ ಕೀರ್ತಿಂ ಗೋಷು ನಿತ್ಯಂ ಪ್ರಯಚ್ಛತಿ ॥ ೩೨ ॥

ಪ್ರಾರ್ಥಯನ್ ದೀರ್ಘಮಾಯುಶ್ಚ ವಾಯಸೇಭ್ಯಃ ಪ್ರಯಚ್ಛತಿ ।
ಸೌಕುಮಾರ್ಯಮಥಾನ್ವಿಚ್ಛನ್ ಕುಕ್ಕುಟೇಭ್ಯಃ ಪ್ರಯಚ್ಛತಿ ॥ ೩೩ ॥

ಏವಮೇತತ್ಸಮುದ್ದಿಷ್ಟಂ ಪಿಂಡನಿರ್ವಪಣಾತ್ ಫಲಂ ।
ಆಕಾಶಂ ಶಮಯೇದ್ವಾಪಿ ಸ್ಥಿತೌ ಸುದಕ್ಷಿಣಾಮುಖಃ ॥
ಪಿತೄಣಾಂ ಸ್ಥಾನಮಾಕಾಶಂ ದಕ್ಷಿಣಾ ಚೈವ ದಿಗ್ಭವೇತ್ ॥ ೩೪ ॥

---

೩೧. ಭೋಗಾಪೇಕ್ಷೆಯುಳ್ಳ ಪುರುಷನು ಆ ಪಿಂಡಗಳನ್ನು ಅಗ್ನಿಯಲ್ಲಿ ದಾನ ಮಾಡಬೇಕು. ಪ್ರಜಾಪೇಕ್ಷಿಗಳಾದವರು ತಮ್ಮ ಯಜಮಾನರಿಗೋಸ್ಕರ ಕೊಡಬೇಕು. ಆ ಪಿಂಡವನ್ನು ನದ್ಯಾದಿಗಳಲ್ಲಿ ಹಾಕಬೇಕು. ಹೀಗೆ ಹಾಕುವಾಗ ಮಧ್ಯಮಪಿಂಡವನ್ನು ಮೊದಲುಹಾಕಬೇಕು.

೩೨. ಆ ಪಿಂಡಗಳನ್ನು ಗೋವಿಗೆ ಕೊಟ್ಟರೆ ಯಜಮಾನನಿಗೆ ದಿವ್ಯತೇಜಸ್ಸೂ, ಮರ್ಯಾದೆ, ಜ್ಞಾನ, ಯಶಸ್ಸು, ಕೀರ್ತಿ, ಆರೋಗ್ಯ ಮುಂತಾದವು ಉಂಟಾಗುವುವು. ಆದುದರಿಂದ ಗೋವುಗಳಿಗೆ ಕೊಡುವುದು ಉತ್ತಮವಾಗಿದೆ.

೩೩. ಅಂತಹ ಪಿಂಡಗಳನ್ನು ಕಾಗೆಗಳಿಗೆ ಹಾಕಿದರೆ ದೀರ್ಘಾಯುಷ್ಯವೂ, ಕೋಳಿಗಳಿಗೆ ಕೊಟ್ಟರೆ ಸೌಂದರ್ಯಸೌಕುಮಾರ್ಯಾದಿಗಳೂ ಉಂಟಾಗುವುವು.

೩೪. ಹೀಗೆ ಪುರುಷರು ಭಕ್ತಿಯಿಂದ ಪಿತೃಕ್ರಿಯೆಯನ್ನು ಮಾಡಿ ದಕ್ಷಿಣಾಭಿಮುಖನಾಗಿ ನಿಂತು ಪಿಂಡದಾನಾದಿಗಳನ್ನು ಮಾಡಿ ಅದನ್ನು ಪಶ್ವಾದಿಗಳಿಗೆ ಕೊಟ್ಟರೆ ಯಾವ ಫಲವು ಬರುವುದೋ ಅದನ್ನು ನಿರೂಪಿಸಿರುವೆನು. ಇದರಿಂದ ಆಕಾಶವೂ, ದಕ್ಷಿಣದಿಕ್ಕು ಇವೆರಡೂ ಶಾಂತವಾಗುವುವು. ಏಕೆಂದರೆ ಅವುಗಳಲ್ಲಿ ಅವರು ವಾಸಿಸುವರು.

ಏಕಂ ವಿಪ್ರಾಃ ಪುನಃ ಪ್ರಾಹುಃ ಪಿಂಡೋದ್ಧರಣಮಗ್ರತಃ ।
ಅನುಜ್ಞಾತೇ ತು ತೈರ್ವಿಪ್ರೈರ್ವಾಸನಮುದ್ವಿಯತಾಮಿತಿ ॥ ೩೫ ॥

ಪುಷ್ಪಾಣಾಂ ಚ ಫಲಾನಾಂ ಚ ಭಕ್ಷ್ಯಾಣಾಮನ್ನತಸ್ತಥಾ ।
ಅಗ್ರಮುದ್ಧೃತ್ಯ ಸರ್ವೇಷಾಂ ಜುಹುಯಾಜ್ಜಾತವೇದಸಿ ॥ ೩೬ ॥

ಭಕ್ಷ್ಯಮನ್ನಂ ತಥಾ ಪೇಯಮನುತ್ತಮಫಲಾನಿ ಚ ।
ಹುತ್ವಾ ಚಾಗ್ನೌ ತತಃ ಪಿಂಡಾನ್ನಿರ್ವಪೇದ್ದಕ್ಷಿಣಾಮುಖಃ ॥ ೩೭ ॥

ಸ್ನಿಗ್ಧೈರ್ಭಕ್ಷ್ಯೈಃ ಸುಗಂಧೈಶ್ಚ ತರ್ಪಯೇತ ರಸೈಸ್ತಥಾ ।
ಏಕಾಗ್ರಃ ಪರ್ಯುಪಾಸೀತ ಪ್ರಯತಃ ಪ್ರಾಂಜಲಿಃ ಸ್ಥಿತಃ ॥
ತತ್ಪರಃ ಶ್ರದ್ಧದಾನಶ್ಚ ಕಾಮಾನಾಪ್ನೋತಿ ಮಾನವಃ ॥ ೩೮ ॥

ಅಕ್ಷುದ್ರತ್ವಂ ಕೃತಜ್ಞತ್ವಂ ದಾಕ್ಷಿಣ್ಯಂ ಸತ್ಕೃತಂ ಚ ಯತ್ ।
ತತೋ ಯಜ್ಞಂ ಚ ದಾನಂ ಚ ಪ್ರಯಚ್ಛಂತಿ ಪಿತಾಮಹಾಃ ॥ ೩೯ ॥

---

೩೫. ಶ್ರಾದ್ಧಕಾಲದಲ್ಲಿ ಈ ಪಿಂಡಗಳನ್ನು ಉದ್ವಾಸನಮಾಡುತ್ತೇನೆ, ತಾವು ಆಜ್ಞೆಯನ್ನು ಕೊಡಬೇಕೆಂದು ಬ್ರಾಹ್ಮಣರ ಆಜ್ಞೆಯನ್ನು ಹೊಂದಿ ಮೊದಲು ಒಂದು ಪಿಂಡವನ್ನು ಅನಂತರ ಉಳಿದುವುಗಳನ್ನು ತೆಗೆಯಬೇಕು.

೩೬. ಯಜಮಾನನು ಭಕ್ಷ್ಯ, ಅನ್ನ, ಪುಷ್ಪ, ಫಲ ಇವುಗಳ ಸಮೇತವಾಗಿ ಸರ್ವರ ಸಮಕ್ಷಮದಲ್ಲಿಯೂ ಅಗ್ನಿಯಲ್ಲಿ ಹೋಮಮಾಡಬೇಕು

೩೭. ಪುರುಷನು ಮೊದಲು ಭಕ್ಷ್ಯ, ಭೋಜ್ಯ, ಅನ್ನಪಾನ, ಫಲಪುಷ್ಪಾದಿಗಳನ್ನು ಅಗ್ನಿಯಲ್ಲಿ ಹೋಮವನ್ನು ಮಾಡಿ ಅನಂತರ ದಕ್ಷಿಣಾಭಿಮುಖರಾಗಿ ನಿಂತು ಅಗ್ನಿಯಲ್ಲಿ ಪಿಂಡವನ್ನು ಹೋಮಮಾಡಬೇಕು.

೩೮. ಪುರುಷರು ಸುವಾಸನೆಯೂ, ಮನೋಹರವೂ, ಸರಸವೂ ಆದ ಭಕ್ಷ್ಯ ಭೋಜ್ಯಾದಿಗಳಿಂದ ಪಿತೃಗಳಿಗೆ ತೃಪ್ತಿಪಡಿಸಿ ಅಂಜಲೀಬದ್ಧರಾಗಿ ವಿನೀತನಾಗಿರಬೇಕು. ಹಿರಿಯರ ಮಾತುಗಳನ್ನು ನಂಬಬೇಕು. ಹೀಗೆ ಮಾಡಿದರೆ ಇಷ್ಟಾರ್ಥಗಳನ್ನು ಹೊಂದುವರು.

೩೯. ಶ್ರಾದ್ಧದಲ್ಲಿ ಪ್ರೀತರಾದ ಪಿತೃದೇವತೆಗಳು ತಮ್ಮ ಭಕ್ತರಿಗೆ ಮಹಾತ್ಮ್ಯ ಕೃತಜ್ಞತೆ, ದಾಕ್ಷಿಣ್ಯ, ಸತ್ಕಾರ್ಯ, ಯಜ್ಞ, ಮತ್ತು ದಾನ ಇವುಗಳನ್ನು ಕೊಡುವರು.

ಅತಃ ಪರಂ ವಿಧಿಂ ಸೌಮ್ಯಂ ಭುಕ್ತವತ್ಸು ದ್ವಿಜಾತಿಷು ।
ಆನುಪೂರ್ವ್ಯೇಣ ವಿಧಿನಾ ತನ್ಮೇ ನಿಗದತಃ ಶೃಣು ॥ ೪೦ ॥

ಪ್ರೋಕ್ಷ್ಯ ಭೂಮಿಮುಥೋದ್ಧೃತ್ಯ ಪೂರ್ವಂ ಪಿತೃಪರಾಯಣಃ ।
ತತೋಽತ್ರ ವಿಕಿರಂ ಕುರ್ಯಾತ್ ವಿಧಿದೃಷ್ಟೇನ ಕರ್ಮಣಾ ॥ ೪೧ ॥

ಸ್ವಧಾಂ ವಾಚ್ಯ ತತೋ ವಿಪ್ರಾ ವಿಧಿವದ್ಭೂರಿದಕ್ಷಿಣಾನ್ ।
ಅನ್ನಶೇಷಮನುಜ್ಞಾಪ್ಯ ಸತ್ಕೃತ್ಯ ದ್ವಿಜಸತ್ತಮಾನ್ ॥
ಪ್ರಾಂಜಲಿಃ ಪ್ರಯತಶ್ಚೈವ ಅನುಗಮ್ಯ ವಿಸರ್ಜಯೇತ್ ॥ ೪೨ ॥

ಇತಿ ಶ್ರೀ ಮಹಾಪುರಾಣೇ ವಾಯುಪ್ರೋಕ್ತೇ " ಶ್ರಾದ್ಧಕಲ್ಪೋ "
ನಾಮ ಚತುರ್ದಶೋಽಧ್ಯಾಯಃ

---

೪೦. ಈಗ ಶಾಂತವಾದ ವಿಧಿಯನ್ನು ಹೇಳುವೆನು ಕೇಳಿರಿ. ಶ್ರಾದ್ಧದಲ್ಲಿ ಬ್ರಾಹ್ಮಣರು ಭೋಜನವನ್ನು ಮಾಡಿ ತೃಪ್ತರಾಗಿಹೋದರೆ ಸಕಲಫಲಗಳೂ ಪ್ರಾಪ್ತವಾಗುವುವು ಎಂಬ ವಿಷಯಗಳನ್ನು ನಿರೂಪಿಸಿರುವೆನು ಎಂದು ಹೇಳಿದನು.

೪೧ ಪುರುಷನು ಶ್ರಾದ್ಧವನ್ನು ಪ್ರಾರಂಭವಮಾಡುವಾಗ ಪಿತೃಭಕ್ತಿಯುಳ್ಳವನಾಗಿ ಭೂಮಿಯನ್ನು ಪ್ರೋಕ್ಷಣಮಾಡಿ ಶಾಸ್ತ್ರೋಕ್ತಕ್ರಮದಿಂದ ಎಳ್ಳನ್ನು ಎರಚಿ ಕಾರ್ಯವನ್ನು ಪ್ರಾರಂಭವಾಡಬೇಕು.

೪೨. ಅನಂತರ ಬ್ರಾಹ್ಮಣರು ಯಜಮಾನನಿಗೆ ಆಶೀರ್ವಾದಗಳನ್ನು ಮಾಡಿ ಭೂರಿದಕ್ಷಿಣೆಯನ್ನು ಪಡೆದು ಅನ್ನಶೇಷವನ್ನು ಇಷ್ಟಮಿತ್ರರೊಡನೇ ಭುಂಜಿಸುವಂತೆ ಆಜ್ಞೆಯನ್ನು ಕೊಟ್ಟು ಹೊರಡಬೇಕು. ಆಗ ಯಜಮಾನನು ಅಂಜಲಿಬದ್ಧನಾಗಿ ವಿನಯದಿಂದ ಬ್ರಾಹ್ಮಣರನ್ನು ಹಿಂಬಾಲಿಸಿ ಕಳುಹಿಸಿಕೊಡಬೇಕು. ತರುವಾಯ ಶ್ರಾದ್ಧವಿಸರ್ಜನೆಯನ್ನು ಮಾಡಬೇಕೆಂದು ಸೂತಮುನಿಯು ಹೇಳಿದನು.

ಹೀಗೆ ವಾಯುಪ್ರೋಕ್ತವಾದ ಮಹಾಪುರಾಣದಲ್ಲಿ " ಶ್ರಾದ್ಧಕರ್ಮನಿರೂಪಣವೆಂಬ "
ಹದಿನಾಲ್ಕನೆಯ ಅಧ್ಯಾಯವು ಸಮಾಪ್ತವಾದುದು.



## ಹದಿನಾಲ್ಕನೆಯ ಅಧ್ಯಾಯದ ಸಾರಾಂಶವು



ಈ ಅಧ್ಯಾಯದಲ್ಲಿ ಮುಖ್ಯವಾಗಿ ವಿಶ್ವೇದೇವತೆಗಳ ವಿಚಾರವೂ ಪಿಂಡದಾನ ಪೂಜಾವಿಷಯಗಳೂ ವರ್ಣಿತವಾಗಿವೆ. ದಕ್ಷಪ್ರಜಾಪತಿಗೆ ವಿಶ್ವಾನಾಮಕಳಾದ ಕುಮಾರಿಯು ಜನಿಸಿದಳು. ಅವಳನ್ನು ಧರ್ಮದೇವನಿಗೆ ಕೊಟ್ಟು ವಿವಾಹನಾಡಿದನು. ಆ ದೇವತೆಗಳಿಗೆ ವಿಶ್ವೇದೇವತೆಗಳೆಂಬ ಕುಮಾರರು ಜನಿಸಿ ಬ್ರಹ್ಮನಿಂದಲೂ ಪಿತೃಗಳಿಂದಲೂ ಶ್ರಾದ್ಧದಲ್ಲಿ ಅಗ್ರಪೂಜೆಯು ದೊರೆಯುವಂತೆ ವರವನ್ನು ಪಡೆದರು. ಆದುದರಿಂದ ಅವರ ಪೂಜೆಯು ಪಿತೃಪೂಜೆಗೆ ಅಂಗವಾಗಿದೆ. ನರರು ಪಂಚಮಹಾಯಜ್ಞಗಳನ್ನು ಮಾಡಬೇಕು. ಇದರಿಂದ ಋಣಮುಕ್ತರಾಗುವರು. ಶ್ರಾದ್ಧಾದಿಗಳಲ್ಲಿ ಸದ್ಬ್ರಾಹ್ಮಣರಿಗೆ ಪೂಜೆಯನ್ನು ಮಾಡದೇ ಅಯೋಗ್ಯತೆಗೆ ಮರ್ಯಾದೆಯನ್ನು ಮಾಡಿದರೆ ಯಮನ ಶಿಕ್ಷೆಯೂ, ದುಃಖವೂ, ಉಂಟಾಗುವುವು. ಆದುದರಿಂದ ಸತ್ಪುರುಷರಿಗೆ ಅನ್ನೋದಕಾದಿಗಳನ್ನು ಕೊಟ್ಟರೆ ಇಹದಲ್ಲಿ ಆಯುರಾರೋಗ್ಯಾದಿ ಮಹದೈಶ್ವರ್ಯಗಳೂ ಪರದಲ್ಲಿ ಪರಮಪದವಿಯೂ ಲಭಿಸುವುವು. ಎಂಬ ವಿಷಯಗಳು ಉಕ್ತವಾಗಿವೆ.



—: ಹರಿಃ ಓಂ :—

—ಶ್ರೀ ವೇದವ್ಯಾಸಾಯ ನಮಃ—

# ಶ್ರೀಮದ್ವಾಯುಪುರಾಣಂ

## ಪಂಚದಶೋಽಧ್ಯಾಯಃ

॥ ಬೃಹಸ್ಪತಿರುವಾಚ ॥

**ಸಕೃದಭ್ಯರ್ಚಿತಾಃ ಪ್ರೀತಾ ಭವಂತಿ ಪಿತರೋ ವ್ಯಯಾಃ ।**
**ಯೋಗಾತ್ಮಾನೋ ಮಹಾತ್ಮಾನೋ ವಿಪಾಪ್ಮಾನೋ ಮಹೌಜಸಃ ॥ ೧ ॥**

**ಪ್ರೇತ್ಯ ಚ ಸ್ವರ್ಗಲಾಭಾಯ ಕಾಮೈಶ್ವರ್ಯಂ ಸುವಿಸ್ತರಂ ।**
**ಯೇಷಾಂ ಚಾಪ್ಯನುಗೃಹ್ಣಂತಿ ಮೋಕ್ಷಪ್ರಾಪ್ತಿಕ್ರಮೇಣ ತು ॥ ೨ ॥**

---

## ಹದಿನೈದನೆಯ ಅಧ್ಯಾಯವು

೧. ಬೃಹಸ್ಪತಿಯು ಹೇಳಿದನು :—ಯೋಗಾಭ್ಯಾಸನಿರತರೂ, ಮಹಾತ್ಮರೂ, ಪಾಪರಹಿತರೂ, ಮಹಾತೇಜಸ್ವಿಗಳೂ. ನಾಶರಹಿತರೂ, ಆದ ಪಿತೃದೇವತೆಗಳನ್ನು ಒಂದು ಸಲ ನಾವು ಭಕ್ತಿಯಿಂದ ಪೂಜಿಸಿದರೂ ಕೂಡ ಅವರು ಬಹಳವಾಗಿ ಪ್ರೀತರಾಗುವರು.

೨. ಹೀಗೆ ಭಕ್ತಿಯಿಂದ ಪಿತೃಗಳನ್ನು ಪೂಜಿಸಿದ ಪುರುಷರು ಈ ಲೋಕದಲ್ಲಿ ವಿಸ್ತಾರವಾದ ಮಹದೈಶ್ವರ್ಯವನ್ನೂ ಸಕಲೇಷ್ಟಾರ್ಥಗಳನ್ನೂ ಪಡೆದು ಪರಲೋಕದಲ್ಲಿ ಕ್ರಮವಾಗಿ ಮೋಕ್ಷಸುಖವನ್ನು ಪಡೆಯುವಂತೆ ಪಿತೃಗಳು ಅನುಗ್ರಹಿಸುವರು.

ತಾನಿ ವಕ್ಷ್ಯಾಮ್ಯಹಂ ಸೌಮ್ಯಾಃ ಸರಾಂಸಿ ಸರಿತಸ್ತಥಾ ।
ತೀರ್ಥಾನಿ ಚೈವ ಪುಣ್ಯಾನಿ ದೇಶಾಂಚ್ಛೈಲಾಂಸ್ತಥಾಶ್ರಮಾನ್ ॥ ೩ ॥

ಪುಣ್ಯೋ ಯಸ್ತ್ರಿಷು ಲೋಕೇಷ್ವಮರಕಂಟಕಪರ್ವತಃ ।
ಪರ್ವತಃ ಪ್ರವರಃ ಪುಣ್ಯಃ ಸಿದ್ಧಚಾರಣಸೇವಿತಃ ॥ ೪ ॥

ಯತ್ರ ವರ್ಷಸಹಸ್ರಾಣಿ ಪ್ರಯುತಾನ್ಯರ್ಬುದಾನಿ ಚ ।
ತಪಃ ಸುದುಶ್ಚರಂ ತೇಪೇ ಭಗವಾನಂಗಿರಾಃ ಪುರಾಃ ॥ ೫ ॥

ಯತ್ರ ಮೃತ್ಯೋರ್ಗತಿರ್ನಾಸ್ತಿ ತಥೈವಾಸುರರಕ್ಷಸಾಂ ।
ನ ಭಯಂ ಚೈವ ವಾ ಲಕ್ಷ್ಮೀರ್ಯಾವದ್ಭೂಮಿರ್ಧರಿಷ್ಯತಿ ॥ ೬ ॥

---

೩. ಎಲೈ ಮುನಿವರ್ಯರೇ, ಅಂತಹ ಪವಿತ್ರವಾದ ಸ್ಥಾನಗಳನ್ನು ತಿಳಿಸುವೆನು ಕೇಳಿರಿ. ಅವು ಯಾವುವೆಂದರೆ ಸರಸ್ಸುಗಳು, ನದಿಗಳು, ತೀರ್ಥಗಳು, ಪುಣ್ಯಸ್ಥಳಗಳು, ಪುಣ್ಯದೇಶಗಳು, ಪರ್ವತಗಳು ಮತ್ತು ಆಶ್ರಮಗಳು ಇವುಗಳಾಗಿವೆ. ಇಂತಹ ತೀರ್ಥಯಾತ್ರೆಗಳ ಫಲವು ಲಭಿಸುವುದು.

೪-೫. ಅತಿಪವಿತ್ರವೂ, ಸಿದ್ಧಚಾರಣಸೇವಿತವೂ, ಮೂರು ಲೋಕಗಳಲ್ಲಿ ಪ್ರಖ್ಯಾತವೂ, ಸುಪ್ರಸಿದ್ಧವೂ ಆದ ಅಮರಕಂಟಕವೆಂಬ ಪರ್ವತೋತ್ತಮವು ಲೋಕಮಾನ್ಯವಾಗಿದೆ. ಅಂತಹ ಪರ್ವತಶ್ರೇಷ್ಠದಲ್ಲಿ ಮಹಾನುಭಾವನಾದ ಅಂಗಿರಸ ಮುನಿಯು ಪೂರ್ವದಲ್ಲಿ ಹತ್ತುಸಹಸ್ರ ವರ್ಷಗಳವರೆಗೂ ಅತಿಭಯಂಕರವಾದ ತಪಸ್ಸನ್ನು ಮಾಡಿದನು.

೬. ಆ ಗಿರಿಯಲ್ಲಿ ಮೃತ್ಯು, ಅಸುರರು, ರಾಕ್ಷಸರು, ಭೂತಗಳು, ಪ್ರೇತಗಳು, ಪಿಶಾಚಗಳು ಇವುಗಳಿಂದ ಸ್ವಲ್ಪವೂ ಭಯವಿಲ್ಲ. ಸರ್ವಕಾಲದಲ್ಲಿಯೂ ಮಹದೈಶ್ವರ್ಯವು ಸಿದ್ಧವಾಗಿರುವುದು. ಅದರಲ್ಲಿ ಅಂಗಿರಸಮುನಿಯು ಘೋರ ತಪಸ್ಸನ್ನು ಮಾಡಿದನು.

ತೇಜಸಾ ಯಶಸಾ ಚೈವ ಭ್ರಾಜತೇ ಸ ನಗೋತ್ತಮಃ ।
ಶೃಂಗಮಾಲ್ಯವತೋ ನಿತ್ಯಂ ವಹ್ನಿಃ ಸಂವರ್ತಕೋ ಯಥಾ ॥ ೭ ॥

ಮೃದವಶ್ಚ ಸುಗಂಧಾಶ್ಚ ಹೇಮಾಭಾಃ ಪ್ರಿಯದರ್ಶನಾಃ ।
ಶಾಂತಾಃ ಕುಶಾ ಇತಿ ಖ್ಯಾತಾಃ ಪಿಬಂದಕ್ಷಿಣನರ್ಮದಾಂ ॥ ೮ ॥

ದೃಷ್ಟವಾನ್ ಸ್ವರ್ಗಸೋಪಾನಂ ಭಗವಾನಂಗಿರಾಃ ಪುರಾ ।
ಅಗ್ನಿಹೋತ್ರೇ ಮಹಾತೇಜಾಃ ಪ್ರಸ್ತರಾರ್ಥಕುಶೋತ್ತಮಾನ್ ॥ ೯ ॥

ತೇಷು ದರ್ಭೇಷು ಯಃ ಪಿಂಡಾನ್ ಮರಕಂಟಕಪರ್ವತೇ ।
ದದ್ಯಾತ್ಸಕೃದಪಿ ಪ್ರಾಜ್ಞಸ್ತಸ್ಯ ವಕ್ಷ್ಯಾಮಿ ಯತ್ಫಲಂ ॥ ೧೦ ॥

---

೭. ಆ ಗಿರಿವನವು ತೇಜಸ್ಸಿನಿಂದಲೂ, ಕೀರ್ತಿಯಿಂದಲೂ ಪ್ರಕಾಶಿಸುತ್ತದೆ. ಅದರಂತೆಯೇ ಮಾಲ್ಯವತ್ಪರ್ವತದ ಶಿಖರವೂ ಸಹ ಪ್ರಲಯಕಾಲದ ಅಗ್ನಿಯಂತೆ ಕಂಗೊಳಿಸುತ್ತಿದೆ

೮. ಅದರಲ್ಲಿ ಕುಶನಾಮಕ ಪ್ರದೇಶಗಳು ಮೃದುವಾಗಿಯೂ, ಸುವರ್ಣದಂತೆ ಕಾಂತಿಯುಕ್ತವಾಗಿಯೂ, ನೋಡಲು ಅತಿಮನೋಹರವಾಗಿಯೂ, ಶಾಂತವಾಗಿಯೂ ಇವೆ. ನರ್ಮದಾನದಿಯು ದಕ್ಷಿಣತೀರದಲ್ಲಿರುವುದರಿಂದ ಅತಿಪವಿತ್ರವಾಗಿಯೂ ಮಂದಮಾರುತದಿಂದ ತಂಪಾಗಿಯೂ ಸೇವ್ಯವಾಗಿಯೂ ಇವೆ.

೯. ಪೂರ್ವದಲ್ಲಿ ಮಹಾತ್ಮರಾದ ಅಂಗಿರಸಮುನಿಯು ಮಹಾತೇಜಸ್ವಿಗಳಾಗಿ ಅಗ್ನಿಹೋತ್ರಕ್ಕಾಗಿ ಹರಡಿರುವ ದರ್ಭೆಗಳನ್ನು ನೋಡಿ ಸ್ವರ್ಗಲೋಕಕ್ಕೆ ಹೋಗುವುದಕ್ಕಾಗಿ ಕಟ್ಟಿರುವ ಸೋಪಾನಮಾರ್ಗವೋ ಏನೋ ಎಂಬಂತೆ ತಿಳಿದನು.

೧೦. ಜ್ಞಾನಿಯಾದ ಪುರುಷನು ಅಂತಹ ಅಮರಕಂಟಕಪರ್ವತದಲ್ಲಿರುವ ದರ್ಭೆಗಳಲ್ಲಿ ಪಿಂಡದಾನವನ್ನು ಮಾಡಿದರೆ ಯಾವ ಮಹಾಫಲ ಪ್ರಾಪ್ತಿಯಾಗುವುದೋ ಅವನ್ನು ಕ್ರಮವಾಗಿ ನಿಮಗೆ ನಿರೂಪಿಸುವೆನು ಕೇಳಿರೆಂದನು.

ತದ್ಭವತ್ಯಕ್ಷಯಂ ಶ್ರಾದ್ಧಂ ಪಿತೄಣಾಂ ಪ್ರೀತಿವರ್ಧನಂ ।
ಅಂತರ್ಧಾನಂ ಚ ಗಚ್ಛಂತಿ ಕ್ಷೇತ್ರಮಾಸಾದ್ಯ ತತ್ಸದಾ ॥ ೧೧ ॥

ತತ್ರ ಜ್ವಾಲಾರಸಃ ಪುಣ್ಯೋ ದೃಶ್ಯತೇಽದ್ಯಾಪಿ ಸರ್ವಶಃ ।
ಸಶಲ್ಯಾನಾಂ ಚ ಸತ್ವಾನಾಂ ವಿಶಲ್ಯಕರಣೀ ನದೀ ॥ ೧೨ ॥

ಪ್ರಾಗ್ದಕ್ಷಿಣಾ ತು ಸಾವರ್ತಾ ವಾಪೀ ಸಾ ಪರ್ವತೋತ್ತಮೇ ।
ಕಲಿಂಗದೇಶಪಾರ್ಶ್ವಾರ್ಧೇ ಪಿತೄಣಾಂ ಪ್ರೀತಿವರ್ಧನಂ ॥ ೧೩ ॥

ಸಿದ್ಧಕ್ಷೇತ್ರಮೃಷಿಶ್ರೇಷ್ಠಾ ಯದುಕ್ತಂ ಪರಮಂ ಭುವಿ ।
ಸಮ್ಮತೋ ದೇವದೈತ್ಯಾನಾಂ ಶ್ಲೋಕಮುಪ್ಯುಶನಾ ಜಗೌ ॥ ೧೪ ॥

---

೧೧. ಆ ಅಮರಪರ್ವತದಲ್ಲಿ ಮಾಡಿದ ಶ್ರಾದ್ಧವು ಪಿತೃಗಳಿಗೆ ಪ್ರೀತಿದಾಯಕವಾಗಿಯೂ, ಅಕ್ಷಯಫಲಪ್ರದವಾಗಿಯೂ, ಕ್ಷೇಮಕರವಾಗಿಯೂ, ಇದೆ. ಅಲ್ಲಿಗೆ ಪಿತೃದೇವತೆಗಳು ಬಂದು ಪ್ರತ್ಯಕ್ಷವಾಗಿ ಅದನ್ನು ಸ್ವೀಕರಿಸಿ ವರವನ್ನು ಕೊಟ್ಟು ಅಂತರ್ಧಾನವಾಗುವರು.

೧೨. ಆ ಗಿರಿವರದಲ್ಲಿ ಈಗಲೂ ಸಹ ಪುಣ್ಯಕರವಾದ ಜ್ವಾಲಾರಸವು ಸಂಪೂರ್ಣವಾಗಿ ಹೊಳೆಯುತ್ತಿದೆ. ಮತ್ತು ವಿಶಲ್ಯಕರಣೀ ಎಂಬ ಮಹಾನದಿಯು ಪ್ರಜೆಗಳ ಸಕಲ ವಿಧವಾದ ದುಃಖಗಳನ್ನು ಪರಿಹರಿಸುತ್ತಾ ಸುಪ್ರಸಿದ್ಧವಾಗಿದೆ.

೧೩. ಆ ಪರ್ವತೋತ್ತಮದ ಆಗ್ನೇಯಭಾಗದಲ್ಲಿ ಕಲಿಂಗದೇಶವು ಇರುತ್ತದೆ ಅದರ ಪಕ್ಕದಲ್ಲಿ ಪಿತೃಗಳಿಗೆ ಪ್ರೀತಿ ವರ್ಧಕವೂ, ಅಲೆಗಳಿಂದ ವ್ಯಾಪ್ತವೂ, ಆದ ಒಂದು ಸರೋವರವು ಪ್ರಕಾಶಿಸುತ್ತದೆ.

೧೪. ಪರಮರ್ಷಿಗಳು ಆ ಅಮರಕಂಟಕ ಕ್ಷೇತ್ರವನ್ನು ಭೂಲೋಕದಲ್ಲಿ ಸಿದ್ಧಿದಾಯಕವಾದ ಸಿದ್ಧಕ್ಷೇತ್ರವೆನ್ನುವರು. ಅದು ದೇವ ದೈತ್ಯರಿಗೂ ಅತ್ಯಂತ ಪ್ರಿಯವಾಗಿದೆಯೆಂದು ಶುಕ್ರಾಚಾರ್ಯರು ಅದನ್ನು ಹೊಗಳಿರುವರು.

ಧನ್ಯಾಸ್ತೇ ಪುರುಷಾಃ ಲೋಕೇ ಯೋ ಪ್ರಾಪ್ಯಾಮರಕಂಟಕಂ ।
ಪಿತೃರ್ಗ ಸಂತರ್ಪಯಿಷ್ಯಂತಿ ಶ್ರಾದ್ಧೇ ಪಿತೃಪರಾಯಣಾ || ೧೫ ||

ಅಲ್ಪೇನ ತಪಸಾ ಸಿದ್ಧಿಂ ಗಮಿಷ್ಯಂತಿ ನ ಸಂಶಯಃ ।
ಸಕೃದೇವಾರ್ಚಿತಾಸ್ತತ್ರ ಸ್ವರ್ಗಮಮರಕಂಟಕೇ || ೧೬ ||

ಮಹೇಂದ್ರಪರ್ವತೇ ರಮ್ಯೇ ಪುಣ್ಯಂ ಶಕ್ರ ನಿಷೇವಿತಂ ।
ತತ್ರಾರುಹ್ಯ ಭವೇತ್ ಪ್ರೀತಿಃ ಶ್ರಾದ್ಧಂ ಚೈವ ಮಹತ್ಫಲಂ || ೧೭ ||

ಬಿಲ್ವಾಧಃಶಿಖರೇ ಯುಕ್ತಾ ದಿವ್ಯಂ ಚಕ್ಷುಃ ಪ್ರವರ್ತತೇ ।
ಅದೃಶ್ಯಂ ಚೈವ ಭೂತಾನಾಂ ದೇವವಚ್ಚ ರತೇ ಮಹೀಂ || ೧೮ ||

---

೧೫. ಯಾವ ಪುರುಷರು ಅಮರಕಂಟಕವೆಂಬ ಪರ್ವತದಲ್ಲಿ ಪಿತೃಗಳನ್ನೇ ಧ್ಯಾನಮಾಡುತ್ತಾ ಶ್ರಾದ್ಧದಲ್ಲಿ ಪಿತೃಗಳಿಗೆ ಪೂಜಾದಿಗಳಿಂದ ತೃಪ್ತಿಯನ್ನುಂಟು ಮಾಡುವರೋ ಅಂತಹ ಪುರುಷರು ಪರಮಧನ್ಯರು, ಭಾಗ್ಯಶಾಲಿಗಳೆಂದು ಮುನಿಗಳು ಹೊಗಳಿರುವರು.

೧೬. ಪುರುಷರು ಅಮರಕಂಟಕವೆಂಬ ಕ್ಷೇತ್ರದಲ್ಲಿ ಅಲ್ಪವಾದ ತಪಸ್ಸನ್ನು ಮಾಡಿದರೂ ಮಹಾಸಿದ್ಧಿಯನ್ನು ಹೊಂದುವರು. ಮತ್ತು ಒಂದು ಸಲ ಪಿತೃಗಳಿಗೋಸ್ಕರ (ತಪಸ್ಸನ್ನು ಮಾಡಿದರೆ) ಅಂದರೆ ಶ್ರಾದ್ಧಾದಿಗಳಲ್ಲಿ ಪೂಜೆಯನ್ನು ಮಾಡಿದರೆ ಉಭಯರಿಗೂ ಸ್ವರ್ಗಲೋಕ ಪ್ರಾಪ್ತಿಯಾಗುವುದು. ಈ ವಿಷಯದಲ್ಲಿ ಸಂದೇಹವಿಲ್ಲ

೧೭. ಅದರ ಸಮೀಪದಲ್ಲಿಯೇ ಅತಿ ರಮ್ಯವೂ, ದೇವೇಂದ್ರನಿಂದ ನಿಷೇವಿತವೂ, ಆದ ಮಹೇಂದ್ರಪರ್ವತವಿರುವುದು. ಆ ಪರ್ವತದ ಆರೋಹಣದಿಂದ ಪ್ರೀತನಾದ ದೇವೇಂದ್ರನು ಮಹತ್ಫಲವನ್ನು ಕೊಡುವನು. ಅಲ್ಲಿ ಮಾಡಿದ ಶ್ರಾದ್ಧವು ಮಹತ್ಫಲದಾಯಕವಾಗುವುದು.

೧೮. ಆ ಪರ್ವತ ಶಿಖರದಲ್ಲಿ ಬಿಲ್ವವೃಕ್ಷದ ಛಾಯೆಯಲ್ಲಿ ಧ್ಯಾನಮಾಡಿದರೆ ದಿವ್ಯದೃಷ್ಟಿಯುಂಟಾಗುವುದು. ಭೂತಗಳಿಗೆ ಅದೃಶ್ಯವಾಗುವ ಶಕ್ತಿಯುಂಟಾಗುವುದು. ಮತ್ತು ದೇವತೆಗಳಂತೆ ಭೂಮಿಯಲ್ಲಿ ಯಾರಿಗೂ ಗೋಚರನಾಗದಂತೆ ಸಂಚರಿಸಬಲ್ಲನು.

**ಸಪ್ತಗೋದಾವರೇ ಚೈವ ಗೋಕರ್ಣೇ ಚ ತಪೋವನೇ ।**
**ಅಶ್ವಮೇಧಫಲಂ ತತ್ರ ಸ್ನಾತ್ವಾ ಚ ಲಭತೇ ನರಃ ॥ ೧೯ ॥**

**ಧೂತಪಾಪಸ್ಥಲಂ ಪ್ರಾಪ್ಯ ಪೂತಃ ಸ್ನಾತ್ವಾ ಭವೇನ್ನರಃ ।**
**ರುದ್ರಸ್ತತ್ರ ತಪಸ್ತೇಪೇ ದೇವದೇವೋ ಮಹೇಶ್ವರಃ ॥ ೨೦ ॥**

**ಗೋಕರ್ಣೇ ವರ್ಣಿತಂ ವಿಪ್ರೈರ್ನಾಸ್ತಿಕಾನಾಂ ನಿದರ್ಶನಂ ।**
**ಅಬ್ರಾಹ್ಮಣಸ್ಯ ಸಾವಿತ್ರೀ ಪಠತಃ ಸಂಪ್ರಣಶ್ಯತಿ ॥ ೨೧ ॥**

**ದೇವರ್ಷಿಭವನೇ ಶೃಂಗೇ ಸಿದ್ಧಚಾರಣಸೇವಿತೇ ।**
**ಆರುಹ್ಯ ತಂತು ನಿಯಮಾತ್ತತೋಯಾಂತಿ ತ್ರಿವಿಷ್ಟಪಂ ॥ ೨೨ ॥**

---

೧೯. ಪುರುಷರು ಸಪ್ತಗೋದಾವರಿಯಲ್ಲಿಯೂ, ಗೋಕರ್ಣದ ತಪೋವನದಲ್ಲಿರುವ ತೀರ್ಥಗಳಲ್ಲಿಯೂ, ಸ್ನಾನವನ್ನು ಮಾಡಿ ಧ್ಯಾನಮಾಡಿದರೆ ಅಶ್ವಮೇಧ ಯಾಗವನ್ನು ಮಾಡಿದ ಮಹಾಫಲವನ್ನು ಪಡೆಯುವರು.

೨೦. ಪುರುಷನು ಗೋಕರ್ಣದಲ್ಲಿರುವ ಧೂತಪಾಪಸ್ಥಲವನ್ನು ಹೊಂದಿ ಸ್ನಾನ ಜಪತಪಾದಿಗಳನ್ನು ಮಾಡಿದರೆ ತಕ್ಷಣವೇ ಸಕಲ ಪಾಪಾದಿಗಳಿಂದ ಮುಕ್ತನಾಗುವನು. ಏಕೆಂದರೆ ದೇವದೇವನೂ ಮಹೇಶ್ವರನೂ ಆದ ರುದ್ರದೇವನು ಅದರಲ್ಲಿ ತಪಸ್ಸನ್ನು ಮಾಡಿರುವನು.

೨೧. ಗೋಕರ್ಣಕ್ಷೇತ್ರದಲ್ಲಿ ಬ್ರಾಹ್ಮಣರು ವರ್ಣಿಸುವ ಫಲವನ್ನು ಪ್ರತ್ಯಕ್ಷವಾಗಿ ಕೈಗೂಡುವುದರಿಂದ ನಾಸ್ತಿಕರಿಗೂ ಆಕ್ಷೇತ್ರವು ನಿದರ್ಶನವಾಗಿದೆ. ಶೂದ್ರಾದಿಗಳೂ ಸಹ ಅಲ್ಲಿಗೆ ಹೋಗಿ ಸಾವಿತ್ರೀದೇವಿಯನ್ನು ಧ್ಯಾನಮಾಡಿದರೆ, ಅವರ ಸಕಲ ಪಾಪಗಳೂ ಪರಿಹಾರವಾಗುವುವು.

೨೨. ಮನುಷ್ಯರು ಸಿದ್ಧಚಾರಣರಿಂದ ಸೇವಿತವೂ ದೇವರ್ಷಿಗೆ ಆಶ್ರಯವೂ ಆದ ಆ ಗಿರಿಯ ಉನ್ನತಶಿಖರವನ್ನೇರಿ ಧ್ಯಾನಾದಿಗಳನ್ನು ಮಾಡಿದರೆ, ಅವರು ಹಿಂತಿರುಗದೆ, ಅಲ್ಲಿಂದಲೇ ಸಶರೀರರಾಗಿ ಸ್ವರ್ಗಲೋಕವನ್ನು ಹೊಂದಿ ದಿವ್ಯಸುಖವನ್ನು ಪಡೆಯುವರು.

ದಿವ್ಯೈಶ್ಚಂದನವೃಕ್ಷೈಶ್ಚ ಪಾದಪೈರುಪಶೋಭಿತಂ ।
ಆಪಃ ಸ್ವಾದನಸಂಪೃಕ್ತಾ ವಹಂತಿ ಸತತಂ ಯತಃ ॥ ೨೩ ॥

ನದೀ ಪ್ರವರ್ತತೇ ತಾಭ್ಯಸ್ತಾಮ್ರಪರ್ಣೀತಿ ನಾಮತಃ ।
ಯೋಷೇವ ಸಮುಹಾಖೇದಾ ದಕ್ಷಿಣಂ ಯಾತಿ ಸಾಗರಂ ॥ ೨೪ ॥

ಸದ್ಯಾಸ್ತಸ್ಯಾತ್ತು ಯಾ ಆಪೋ ಮೂರ್ಚ್ಛ್ಯಮಾನಾ ಮಹೋದಧೌ ।
ಶಂಖಾ ಭವಂತಿ ಮುಕ್ತಾಶ್ಚ ಜಾಯಂತೇ ಶಂಖಮುಕ್ತಿಕಾಃ ॥ ೨೫ ॥

ಉದಕಾನಯನಂ ಕೃತ್ವಾ ಶಂಖಮೌಕ್ತಿಕಸಂಯುತಂ ।
ಆದಿಭಿರ್ವ್ಯಾದಿಭಿಶ್ಚೈವ ಮುಕ್ತಾ ಯಾಂತ್ಯಮರಾವತೀಂ ॥ ೨೬ ॥

---

೨೩. ಆ ಪರ್ವತದ ಶಿಖರವು ದಿವ್ಯವಾದ ಚಂದನವೃಕ್ಷಗಳಿಂದಲೂ, ಚಂಪಕ ಚಾಂಪೇಯ ಪುನ್ನಾಗಾದಿ ವೃಕ್ಷಗಳಿಂದಲೂ ಮಂಡಿತವಾಗಿದೆ. ಆ ಶಿಖರದಿಂದ ಅತಿ ಸ್ವಾದುವಾದ ಜಲದಿಂದ ಪೂರ್ಣವಾದ ನದಿಗಳು ಸರ್ವಕಾಲದಲ್ಲಿಯೂ ಹರಿಯುವುವು.

೨೪. ಆ ಶಿಖರದಲ್ಲಿ ಹುಟ್ಟಿದ ತಾಮ್ರಪರ್ಣೀನಾಮಕವಾದ ಮಹಾನದಿಯು ಸ್ತ್ರೀಯರು ಪತಿಯ ಗೃಹಕ್ಕೆ ಹೋಗುವಾಗ ದುಃಖಿಸುವಂತೆ, ತನ್ನ ಪತಿಯಾದ ದಕ್ಷಿಣ ಸಮುದ್ರಕ್ಕೆ ಹೋಗಲು ವ್ಯಸನಪಡುತ್ತಾ ಇದೆಯೋ ಎಂಬಂತೆ ಆ ಸಮುದ್ರವನ್ನು ಹೊಂದುವುದು.

೨೫. ಆ ತಾಮ್ರಪರ್ಣೀನದಿಯು ಸಮುದ್ರವನ್ನು ಸೇರುವಾಗ ಅತ್ಯಂತ ಗರ್ಜನೆಯನ್ನು ಮಾಡುವುದು. ಅದರ ಜಲವು ಅತಿವೇಗದಿಂದ ಸಮುದ್ರದಲ್ಲಿ ಬೀಳುವಾಗ ಅಲ್ಲಿ ಶಂಖಗಳೂ ಮುತ್ತುಗಳೂ ವಿಶೇಷವಾಗಿ ಉಂಟಾಗುವುವು.

೨೬. ಶಂಖ ಮುತ್ತುಗಳಿಂದ ಸಹಿತವಾದ ತಾಮ್ರಪರ್ಣೀನದಿಯಲ್ಲಿ ಸ್ನಾನ ಪಾನಾದಿಗಳನ್ನು ಮಾಡುವುದರಿಂದ ಮನುಷ್ಯರು ರೋಗೋಪದ್ರವಾದಿಗಳಿಂದ ಮುಕ್ತರಾಗಿ, ಇಂದ್ರಲೋಕವನ್ನು ಹೊಂದುವರು.

ಚಂದನೇಭ್ಯಃ ಪ್ರಯುಕ್ತಾನಾಂ ಶಂಖಾನಾಂ ಮೌಕ್ತಿಕಸ್ಯ ಚ ।
ಪಾಪಕರ್ತ್ನಾನಪಿ ಪಿತೄಂಸ್ತಾರಯಂತಿ ಯಥಾ ಶ್ರುತಿಃ ॥ ೨೭ ॥

ಚಂದ್ರತೀರ್ಥೇ ಕುಮಾರ್ಯಾಂ ತು ಕಾವೇರ್ಯಾಂ ಪ್ರಭವೇಕ್ಷಯೇ ।
ಶ್ರೀಪರ್ವತಸ್ಯ ತೀರ್ಥೇಷು ವೈಕೃತೇ ಚ ತಥಾ ಗಿರೌ ॥ ೨೮ ॥

ಏಕಸ್ಥಾ ಯತ್ರ ದೃಶ್ಯಂತೇ ವೃಕ್ಷಾ ಹ್ಯೌಷಿರಪರ್ವತೇ ।
ಪಾಲಾಶಾಃ ಖಾದಿರಾ ಬಿಲ್ವಾ ಪ್ಲಕ್ಷಾಶ್ವತ್ಥವಿಕಂಕತಾಃ ॥ ೨೯ ॥

ಏತದ್ಧಿ ಮಂಡಲಂ ಸಿದ್ಧಂ ಯಜ್ಞೀಯಂ ದ್ವಿಜಸತ್ತಮಾಃ ।
ಅಸ್ಮಿನ್ಕೃತ್ವಾ ಜನೋಂಗಾನಿ ಕ್ಷಿಪ್ರಂ ಯಾತ್ಯಮರಾವತೀಂ ॥ ೩೦ ॥

---

೨೭. ಶ್ರೀಗಂಧ ಶಂಖ ಮುತ್ತು ಇವುಗಳಿಂದ ಸಹಿತವಾದ ತಾಮ್ರಪರ್ಣೀ ನದಿಯ ಜಲದಿಂದ ಪಿತೃಗಳಿಗೆ ತರ್ಪಣವನ್ನು ಕೊಟ್ಟರೆ, ಆ ಪಿತೃಗಳು ಪಾಪಗಳನ್ನು ಮಾಡಿದ್ದರೆ ಅಂತಹ ಪಾಪಗಳಿಂದ ಮುಕ್ತರಾಗುವರೆಂದು ವೇದಗಳು ಘೋಷಿಸುತ್ತವೆ.

೨೮-೨೯. ಚಂದ್ರತೀರ್ಥ, ಕುಮಾರೀತೀರ್ಥ, ಅಕ್ಷಯಕರವಾದ ಕಾವೇರೀ ನದಿಯ ಉತ್ಪತ್ತಿಸ್ಥಾನ, ಶ್ರೀಪರ್ವತದ ತೀರ್ಥಗಳು, ವೈಕೃತಪರ್ವತ ಇವೇ ಮೊದಲಾದ ಪರ್ವತಗಳಲ್ಲಿಯೂ, ಯಾಗೋಪಯುಕ್ತವಾದ ಮುತ್ತಕ, ಖದಿರ, ಬಿಲ್ವ, ಆಲ, ಅಶ್ವತ್ಥ, ಬೇಲ ಈ ವೃಕ್ಷಗಳಿಂದಲಂಕೃತವಾದ ಔಶಿರಗಿರಿಯಲ್ಲಿಯೂ ಪುಣ್ಯಕಾರ್ಯಗಳನ್ನು ಮಾಡಿದರೆ ಪಾಪದಿಂದ ಮುಕ್ತರಾಗಿ ಸ್ವರ್ಗಸುಖವನ್ನು ಹೊಂದುವರು.

೩೦. ಎಲೈ ವಿಪ್ರೋತ್ತಮರೇ, ಮೇಲೆ ನಿರೂಪಿಸಿದ ವೃಕ್ಷಗಳೆಲ್ಲವೂ ಯಾಗೋಪಕರಣಗಳಾಗಿವೆ. ಇಂತಹ ಉತ್ತಮವಾದ ತೀರ್ಥಕ್ಷೇತ್ರಗಳಲ್ಲಿ ಸ್ನಾನಾದಿ ಜಪತಪಾದಿಗಳನ್ನು ಮಾಡಿ, ಪಿತೃಕಾರ್ಯಗಳನ್ನೂ ದೇವತಾಕಾರ್ಯಗಳನ್ನೂ ಮಾಡಿದರೆ ಸಕಲ ದೋಷಗಳೂ ಪರಿಹಾರವಾಗಿ ಪರದಲ್ಲಿ ಸ್ವರ್ಗಸುಖವನ್ನು ಹೊಂದುವರು.

ಕರ್ಮಾಣಿ ಸ್ವಪ್ರಯುಕ್ತಾನಿ ಸಿಧ್ಯಂತಿ ಪ್ರಭವಾತ್ಯಯೇ ।
ದುಷ್ಪ್ರಸಕ್ತಾನಿ ಪಿತೃಷು ಪ್ರಯುಕ್ತಾನಿ ಭವಂತ್ಯುತ ॥ ೩೦ ॥

ಪಿತ್ಯಾಣಾಂ ದುಹಿತಾ ಪುಣ್ಯಾ ನರ್ಮದಾ ಸರಿತಾಂ ವರಾ ।
ತತ್ರ ಶ್ರಾದ್ಧಾನಿ ದತ್ತಾನಿ ಅಕ್ಷಯಾಣಿ ಭವಂತ್ಯುತ ॥ ೩೨ ॥

ಮಾತರಸ್ಯ ವನೇ ಪುಣ್ಯೇ ಸಿದ್ಧಚಾರಣಸೇವಿತೇ ।
ಅಂತರ್ಧಾನಂ ನ ಗಚ್ಛಂತಿ ಸಕ್ತಾಸ್ತಸ್ಮಿನ್ಮಹಾಗಿರೌ ॥ ೩೩ ॥

ವಿಂಧ್ಯೇ ಚೈವ ಗಿರೌ ಪುಣ್ಯೇ ಧರ್ಮಾಧರ್ಮನಿದರ್ಶನಂ ।
ಪಾಪಧಾರಾಂ ನ ಪಶ್ಯಂತಿ ಧಾರಾಂಪಶ್ಯಂತಿ ಸಾಧವಃ ॥ ೩೪ ॥

---

೩೧. ಮನುಷ್ಯರು ಮಾಡಿದ ಕರ್ಮಗಳ ಫಲವನ್ನು ಈ ಜನ್ಮದಲ್ಲಿಯೂ ಮುಂದಿನ ಜನ್ಮದಲ್ಲಿಯೂ ಅನುಭವಿಸುವರು ಪಿತೃಗಳ ಉದ್ದೇಶ್ಯಕವಾಗಿ ಮೇಲೆ ಹೇಳಿದ ಕ್ಷೇತ್ರಗಳಲ್ಲಿ ಮಾಡಿದ ಕರ್ಮಗಳು ಅಕ್ರಮವಾಗಿದ್ದರೂ ಕೂಡ ಅವು ಕ್ರಮವಾಗಿ ಮಾಡಿದಂತೆ ಅವರಿಗೆ ಸೇರುತ್ತವೆ.

೩೨. ನದಿಗಳಲ್ಲಿ ಶ್ರೇಷ್ಠಳಾದ ನರ್ಮದೆಯು ಪಿತೃದೇವತೆಗಳಿಗೆ ಕುಮಾರಿಯಾಗಿರುವಳು. ಅಂತಹ ನರ್ಮದೆಯ ತೀರದಲ್ಲಿ ಮಾಡಿದ ಪಿತೃಕಾರ್ಯಗಳು ಅಕ್ಷಯಫಲದಾಯಕವಾಗುತ್ತವೆ.

೩೩. ಸಿದ್ಧಚಾರಣರಿಂದ ಸೇವಿತವೂ, ಅತ್ಯಂತ ಪವಿತ್ರವೂ, ಆದ ಮಾತರ ವನದಲ್ಲಿರುವ ಮಹಾಪರ್ವತದಲ್ಲಿ ಶ್ರಾದ್ಧಾದಿಗಳನ್ನು ಮಾಡಿದರೆ ಪಿತೃಗಳು ಪ್ರತ್ಯಕ್ಷವಾಗಿ ಬಂದು ಸ್ವೀಕರಿಸುವರು ಪಿತೃಗಳು ಮಾಯವಾಗುವುದಿಲ್ಲ.

೩೪. ಪವಿತ್ರವಾದ ವಿಂಧ್ಯಪರ್ವತದಲ್ಲಿ ಪಿತೃಕಾರ್ಯಗಳನ್ನು ಮಾಡಿದರೆ ಧರ್ಮಾಧರ್ಮಗಳು ಪ್ರತ್ಯಕ್ಷವಾಗಿ ಕಾಣುತ್ತವೆ. ಸಾಧುಗಳಿಗೆ ಪಾಪಗಳು ಕಾಣುವುದಿಲ್ಲ. ಅವರು ಪುಣ್ಯಪರಂಪರೆಗಳನ್ನೇ ನೋಡುವರು.

ತಸ್ಯಾಂ ನ ದೃಶ್ಯತೇ ಪಾಪಂ ಕೇಷಾಂಚಿತ್ ಪಾಪಕರ್ಮಣಾಂ ।
ಸ್ಪಷ್ಟಾ ಭವತಿ ಸಾಧಾರಾ ಪ್ರಾಯಶಃ ಶುಭಕರ್ಮಣಾಂ ॥ ೩೫ ॥

ಕೋಶಲಾಯಾಂ ಮತಂಗಸ್ಯ ವಾಪೀ ಪಾಪನಿಷೂದನೀ ।
ಸ್ನಾತಾಸ್ತಸ್ಯಾಂ ದಿವಂ ಯಾಂತಿ ಕಾಮಚಾರವಿಹಂಗಮಾಃ ॥ ೩೬ ॥

ಕುಮಾರಕೋಶಲಾತೀರ್ಥೇ ಪರ್ವತೇ ಪಾಲಪಂಜರೇ ।
ಪಾಂಡುಕೂಲೇ ಸಮುದ್ರಾಂತೇ ಪಂಡಾರಕವನ್ಯೇ ತಥಾ ॥ ೩೭ ॥

ವಿಮಲೇ ಚ ವಿಪಾಪೇ ಚ ಸತ್ಕೃತ್ಯ ಪ್ರಭವೇಽಭಯೇ ।
ಶ್ರೀವೃಕ್ಷೇ ಗೃಧ್ರಕೂಟೇ ಚ ಜಂಬೂಮಾರ್ಗೇ ಚ ನಿತ್ಯತಃ ॥ ೩೮ ॥

---

೩೫. ಕೆಲವು ಪಾಪಿಗಳೇನಾದರೂ ಅಲ್ಲಿ ಶುಭಕರ್ಮಗಳನ್ನು ಮಾಡಿದರೆ ಆ ಪಾಪಗಳು ಕಾಣದೇ ಹಾರಿಹೋಗುವುದು. ಅದಕ್ಕೆ ಪ್ರತಿಯಾಗಿ ಶುಭಕರ್ಮಿಗಳ ಫಲಪರಂಪರೆಗಳು ಪ್ರಾಯಕವಾಗಿ ಕಂಡುಬರುವುವು. ಪುಣ್ಯಗಳು ವಿಶೇಷವಾಗಿ ಸಂಭವಿಸುವುವು.

೩೬. ಕೋಶಲದೇಶದಲ್ಲಿರುವ ಮತಂಗಗ್ರಾಮದಲ್ಲಿ ಪಾಪನಾಶಿನಿ ಎಂಬ ಸರೋವರವು ಪ್ರಖ್ಯಾತವಾಗಿರುವುದು. ಅದರಲ್ಲಿ ಸ್ನಾನಪಾನಾದಿಗಳನ್ನು ಮಾಡುವುದರಿಂದ ಸ್ವೇಚ್ಛಾಚಾರಿಗಳಾದ ಪಕ್ಷಿಗಳೂ ಸಹ ಸ್ವರ್ಗವನ್ನು ಹೊಂದುವುವು.

೩೭-೩೮. ಪಾಲಪಿಂಜರ ಪರ್ವತದಲ್ಲಿರುವ ಕುಮಾರ ಕೌಶಲಾತೀರ್ಥದಲ್ಲಿಯೂ, ಸಮುದ್ರದ ದಡದಲ್ಲಿರುವ ಪಾಂಡುಕೂಲಕ್ಷೇತ್ರದಲ್ಲಿಯೂ, ಪಂಡಾರಕವನದಲ್ಲಿಯೂ, ವಿಮಲವೂ, ಪಾಪರಹಿತವೂ, ಭಯರಹಿತವೂ, ಸತ್ಕಾರ್ಯಗಳಿಗೆ ಆಶ್ರಯವೂ ಆದ ಶ್ರೀವೃಕ್ಷದಲ್ಲಿಯೂ, ಗೃಧ್ರಕೂಟದಲ್ಲಿಯೂ, ಜಂಬೂಮಾರ್ಗದಲ್ಲಿಯೂ ಮಾಡಿದ ಪಿತೃಕಾರ್ಯಗಳು ಅನಂತಫಲದಾಯಕಗಳಾಗುತ್ತವೆ.

ಅಸಿತಸ್ಯ ಗುರೋಃ ಪುಣ್ಯೇ ಯೋಗಾಚಾರ್ಯಸ್ಯ ಧೀಮತಃ ।
ತತ್ರಾಪಿ ಶ್ರಾದ್ಧಮಾನಂತ್ಯಮಸಿತಾಯಾಂ ಚ ನಿತ್ಯಶಃ ॥ ೩೯ ॥

ಪುಷ್ಕರೇಷ್ವಕ್ಷಯಂ ಶ್ರಾದ್ಧಂ ತಪಶ್ಚೈವ ಮಹಾಫಲಂ ।
ಮಹೋದಧೌ ಪ್ರಭಾಸೇ ಚ ತಸ್ಮಾದೇವಂ ವಿನಿರ್ದಿಶೇತ್ ॥ ೪೦ ॥

ದೇವಿಕಾಯಾಂ ವೃಷೋ ನಾಮ ಕೂಪಃ ಸಿದ್ಧನಿಷೇವಿತಃ ।
ಸಮುತ್ಪತಂತಿ ತಸ್ಯಾಪೋ ಗವಾಂ ಶಬ್ದೇನ ನಿತ್ಯಶಃ ॥ ೪೧ ॥

ಯೋಗೇಶ್ವರೈಃ ಸದಾ ಜುಷ್ಟಃ ಸರ್ವಪಾಪಬಹಿಷ್ಕೃತೇಃ ।
ದದ್ಯಾಚ್ಛ್ರಾದ್ಧಂ ತು ಯಸ್ತಸ್ಮಿಂಸ್ತಸ್ಯ ವಕ್ಷ್ಯಾಮಿ ಯತ್ಫಲಂ ॥ ೪೨ ॥

---

೩೯. ಜ್ಞಾನಿಗಳೂ, ಯೋಗಾಚಾರ್ಯರೂ, ಗುರುಗಳೂ ಆದ ಅಸಿತಮುನಿಯ ಪುಣ್ಯಾಶ್ರಮದಲ್ಲಿಯೂ, ಅಸಿತಾನದಿಯ ತೀರದಲ್ಲಿಯೂ ಮಾಡಿದ ಪಿತೃಕಾರ್ಯಗಳು ಅನಂತಫಲದಾಯಕವಾಗುತ್ತವೆ.

೪೦. ಪುಷ್ಕರಕ್ಷೇತ್ರದಲ್ಲಿಯೂ, ಸಮುದ್ರದ ದಡದಲ್ಲಿಯೂ, ಪ್ರಭಾಸಕ್ಷೇತ್ರೇ ದಲ್ಲಿಯೂ ಮಾಡಿದ ಶ್ರಾದ್ಧ ಮತ್ತು ತಪಸ್ಸು ಇವೆರಡೂ ಅಕ್ಷಯವೂ ಮಹತ್ತೂ ಆದ ಫಲದಾಯಕವಾಗುತ್ತವೆ ಎಂಬುದನ್ನು ಜ್ಞಾನಿಗಳು ಹೇಳುವರು.

೪೧. ದೇವಿಯ ಕ್ಷೇತ್ರದಲ್ಲಿ ಸಿದ್ಧರಿಂದ ಸೇವಿತವೂ ವೃಷನಾಮಕವೂ ಆದ ಕೂಪವಿರುತ್ತದೆ. ಅದರಲ್ಲಿ ನಿತ್ಯವೂ ಜಲವು ಗೋವುಗಳಂತೆ ಶಬ್ದಮಾಡುತ್ತಾ ನೆಗೆಯುತ್ತಿದೆ.

೪೨. ಆ ವೃಷಕ್ಷೇತ್ರವು ಸರ್ವಪಾಪಗಳಿಂದ ಮುಕ್ತರಾದ ಯೋಗೀಶ್ವರರಿಂದ ಸದಾಕಾಲದಲ್ಲಿಯೂ ಸೇವಿಸಲ್ಪಟ್ಟದ್ದಾಗಿದೆ. ಆ ಕ್ಷೇತ್ರದಲ್ಲಿ ಯಾವ ಪುಣ್ಯಾತ್ಮನು ಶ್ರಾದ್ಧವನ್ನು ಮಾಡುವನೋ, ಅದರ ಮಹಾಫಲಗಳನ್ನು ನಿರೂಪಿಸುವೆನು ಕೇಳಿ ರೆಂದನು.

ಅಕ್ಷಯಂ ಸಾರ್ವಕಾಮಿಾಯಂ ಶ್ರಾದ್ಧಂ ಪ್ರೀಣಾತಿ ವೈ ಪಿತೄರ್ |
ಜಾತವೇದಃ ಶಿಲಾ ತತ್ರ ಸಾಕ್ಷಾದಗ್ನೇಃ ಸನಾತನೀ || ೪೩ ||

ಯಸ್ತ್ವಗ್ನಿಂ ಪ್ರವಿಶೇತ್ತತ್ರ ನಾಕಪೃಷ್ಠೇ ಸ ಮೋದತೇ |
ಅಗ್ನಿಃ ಶಾಂತಃ ಪುನರ್ಜಾತಸ್ತಸ್ಮಿಂದತ್ತಂ ತದಕ್ಷಯಂ || ೪೪ ||

ದಶಾಶ್ವಮೇಧಿಕೇ ತೀರ್ಥೇ ತೀರ್ಥೇ ಪಂಚಾಶ್ವಮೇಧಿಕೇ |
ಯಥೋದ್ದಿಷ್ಟಂ ಫಲಂ ತೇಷಾಂ ಕ್ರತೂನಾಂ ನಾತ್ರ ಸಂಶಯಃ || ೪೫ ||

ಖ್ಯಾತಂ ಹಯಶಿರೋ ನಾಮ ತೀರ್ಥಂ ಸದ್ಯೋ ವರಪ್ರದಂ |
ಶ್ರಾದ್ಧಂ ತತ್ರ ತದಾಕ್ಷಯ್ಯಂ ದತ್ವಾ ಸರ್ಗೇ ಚ ಮೋದತೇ || ೪೬ ||

---

೪೩. ಆ ಕ್ಷೇತ್ರದಲ್ಲಿ ಮಾಡಿದ ಶ್ರಾದ್ಧವು ಅಕ್ಷಯವೂ, ಸಕಲೇಷ್ಟಾರ್ಥಗಳಿಂದ ಪೂರ್ಣವೂ, ಆದ ಫಲವನ್ನು ಕೊಡುವುದು. ಮತ್ತು ಪಿತೃಗಳಿಗೆ ತೃಪ್ತಿಯುಂಟಾಗುವುದು. ಅಲ್ಲಿ ಪುರಾತನವೂ, ಅಗ್ನಿಜನಕವೂ, ಆದ ಜಾತವೇದನಾಮಕವಾದ ಶಿಲೆಯು ಪ್ರಖ್ಯಾತವಾಗಿದೆ

೪೪. ಯಾವನು ಆ ಕ್ಷೇತ್ರದಲ್ಲಿ ಅಗ್ನಿಪ್ರವೇಶಮಾಡುವನೋ ಅವನಿಗೆ ಪುನರ್ಜನನವಿಲ್ಲದೆಯೆ ಸ್ವರ್ಗದಲ್ಲಿ ನಿತ್ಯಸುಖವನ್ನು ಹೊಂದುವನು. ಅಲ್ಲಿ ಅಗ್ನಿಯು ಶಾಂತವಾಗಿ ಪುನಃ ಯಾರ ಪ್ರಯತ್ನವಿಲ್ಲದೆಯೆ ಅದೇ ಉದ್ಭವಿಸುವುದು. ಅದರಲ್ಲಿ ಕೊಟ್ಟ ದಾನವು ಅಕ್ಷಯಫಲವನ್ನು ಕೊಡುವುದು.

೪೫. ದಶಾಶ್ವಮೇಧ, ಪಂಚಾಶ್ವಮೇಧಗಳೆಂಬ ತೀರ್ಥಗಳಲ್ಲಿ ಮಾಡಿದ ಪಿತೃಕಾರ್ಯವು ಮಹಾಯಾಗಗಳನ್ನು ಮಾಡಿದ ಫಲವನ್ನು ಕೊಡುತ್ತದೆ. ಈ ವಿಷಯದಲ್ಲಿ ಸಂದೇಹವಿಲ್ಲ. ನಿಶ್ಚಯವಾಗಿ ಫಲಿಸುತ್ತದೆ.

೪೬. ಹಯಗ್ರೀವವೆಂಬ ತೀರ್ಥವು ಲೋಕದಲ್ಲಿ ಅತ್ಯಂತ ಪ್ರಖ್ಯಾತವಾಗಿದೆ. ಮತ್ತು ತಕ್ಷಣದಲ್ಲಿಯೇ ವರದಾಯಕವಾಗಿದೆ. ಆ ಕ್ಷೇತ್ರದಲ್ಲಿ ಮಾಡಿದ ಶ್ರಾದ್ಧವು ಅಕ್ಷಯಫಲದಾಯಕವಾಗಿದೆ. ಅದರಲ್ಲಿ ಪಿಂಡಾದಿಗಳನ್ನು ಪಿತೃಗಳಿಗೆ ದಾನಮಾಡಿದರೆ ಕೂಡಲೇ ಸ್ವರ್ಗಪ್ರಾಪ್ತಿಯಾಗುವುದು.

**ಶ್ರಾದ್ಧಂ ಕುಂಭೇ ವಿಮುಚ್ಯಂತಿ ಜ್ಞೇಯಂ ಪಾಪನಿಷೂದನಂ ।**
**ಶ್ರಾದ್ಧಂ ತತ್ರಾಕ್ಷಯಂ ಪ್ರೋಕ್ತಂ ಜಪ್ಯಹೋಮ ತಪಾಂಸಿ ಚ ॥ ೪೭ ॥**

**ಅಜತುಂಗೇ ಶುಭೇ ತೀರ್ಥೇ ತರ್ಪಯೇತ್ಸತತಂ ಪಿತೄನ್ ।**
**ದೃಶ್ಯತೇ ಪರ್ವಸು ಚ್ಛಾಯಾ ಯತ್ರ ನಿತ್ಯಂ ದಿವೌಕಸಾಂ ॥**
**ಪೃಥಿವ್ಯಾಮಕ್ಷಯಂ ದತ್ತಂ ನಿರುಜಾ ಯತ್ರ ಪಾಂಡವಾಃ ॥ ೪೮ ॥**

**ಯೋಗೇಶ್ವರೈಃ ಸದಾ ಜುಷ್ಟಂ ಸರ್ವಪಾಪಬಹಿಷ್ಕೃತೈಃ ।**
**ದದ್ಯಾಚ್ಛ್ರಾದ್ಧಂ ತು ಯಸ್ತಸ್ಮಿಂಸ್ತಸ್ಯ ವಕ್ಷ್ಯಾಮಿ ಯತ್ಫಲಂ ॥ ೪೯ ॥**

**ಅರ್ಚಿತಾಸ್ತೇನ ವೈ ಸಾಕ್ಷಾದ್ಭವಂತಿ ಪಿತರಃ ಸದಾ ।**
**ಅಸ್ಮಿಂಲ್ಲೋಕೇ ವಶೀ ಯಃ ಸ್ಯಾತ್ಪ್ರೇತ್ಯ ಸ್ವರ್ಗೇ ಸ ಮೋದತೇ ॥ ೫೦ ॥**

---

೪೭. ಕುಂಭತೀರ್ಥದಲ್ಲಿ ಶ್ರಾದ್ಧ ವಿಸರ್ಜನೆಯು ಸಕಲ ಪಾಪನಾಶಕವಾಗಿದೆ. ಆ ತೀರ್ಥದಲ್ಲಿ ಮಾಡಿದ ಸ್ನಾನ, ಜಪ, ತಪ, ಹೋಮ, ಶ್ರಾದ್ಧಾದಿಗಳು ಅಕ್ಷಯ ಫಲಪ್ರದವಾಗಿವೆ ಎಂಬುದು ಸುಪ್ರಸಿದ್ಧವು

೪೮. ಅಜತುಂಗವೆಂಬ ಶುಭತೀರ್ಥವು ಪಿತೃತರ್ಪಣಾದಿಗಳಿಗೆ ಅತ್ಯಂತ ಮುಖ್ಯವಾಗಿದೆ. ಅದರಲ್ಲಿ ದೇವತೆಗಳ ಛಾಯೆಯು ಪರ್ವಕಾಲದಲ್ಲಿ ಪ್ರತ್ಯಕ್ಷವಾಗಿ ಕಾಣುತ್ತದೆ. ಭೂಮಂಡಲದಲ್ಲಿ ಆ ಕ್ಷೇತ್ರವು ಅಕ್ಷಯಫಲಪ್ರದವೆಂದು ಪ್ರಸಿದ್ಧಿಯಾಗಿದೆ. ಅದರಲ್ಲಿ ಪಾಂಡವರು ಶ್ರಾದ್ಧಾದಿ ಕಾರ್ಯಗಳನ್ನು ಮಾಡಿ ಪಾಪರಹಿತರಾದರೆಂದು ಸುಪ್ರಸಿದ್ಧವಾಗಿದೆ

೪೯. ಅದರಲ್ಲಿ ಸರ್ವಪಾಪಗಳಿಂದ ಮುಕ್ತರಾದ ಯೋಗೀಶ್ವರರೂ ಕೂಡ ಸದಾ ನಿರತರಾಗಿ ಶ್ರಾದ್ಧಾದಿಕಾರ್ಯಗಳನ್ನು ಮಾಡುವರು. ಇದರಿಂದ ಅವರಿಗೆ ಆಗುವ ಮಹಾಫಲಗಳನ್ನು ವರ್ಣಿಸುವೆನು ಕೇಳಿರೆಂದನು.

೫೦. ಆ ಕ್ಷೇತ್ರದಲ್ಲಿ ಶ್ರಾದ್ಧವನ್ನು ಮಾಡಿ ಪಿತೃಪೂಜೆಯನ್ನು ಮಾಡಿದರೆ ಪಿತೃಗಳು ಪ್ರತ್ಯಕ್ಷವಾಗಿ ಬಂದು ಸ್ವೀಕರಿಸುವರು. ಆ ಪುರುಷನು ಈ ಲೋಕದಲ್ಲಿ ಸ್ವತಂತ್ರನಾಗಿದ್ದು ಪರಲೋಕದಲ್ಲಿ ಪರಮಸುಖವನ್ನು ಪಡೆಯುವನು.

ಪ್ರಾಯಶಃ ಪ್ರವರಃ ಪುಣ್ಯಃ ಶಿವೋ ನಾಮ ಹ್ರದಸ್ತಥಾ ।
ತತ್ರ ವ್ಯಾಸಸರಃ ಪುಣ್ಯಂ ದಿವ್ಯಂ ಬ್ರಹ್ಮಸರಸ್ತಥಾ ॥ ೫೧ ॥

ಉಜ್ಜಂತಃ ಪರ್ವತಃ ಪುಣ್ಯೋ ವಸಿಷ್ಠಸ್ಯ ಮಹಾತ್ಮನಃ ।
ಋಗ್ಯಜುಃಸಾಮಶಿರಸಃ ಕಾಪೋತಃ ಪುಷ್ಕಸಾಹ್ವಯಃ ।
ಆಖ್ಯಾತೋ ಪಂಚಮೋ ವೇದೋ ಸೃಷ್ಟ್ವಾ ಹ್ಯೇತೇಷು ಬ್ರಹ್ಮಣಾ ॥ ೫೨ ॥

ಗತ್ವೈತಾನ್ಮುಚ್ಯತೇ ಪಾಪಾದ್ದ್ವಿಜೋ ವಹ್ನಿಃ ಸನಾತನಃ ।
ಶ್ರಾದ್ಧಂಚಾನಂತ್ಯಮೇತೇಷು ಜಪ್ಯ ಹೋಮತಪಾಂಸಿ ಚ ॥ ೫೩ ॥

ಪುಂಡರೀಕೇ ಮಹಾತೀರ್ಥೇ ಪುಂಡರೀಕಸಮಂ ಫಲಂ ।
ಬ್ರಹ್ಮತೀರ್ಥೇ ಮಹಾತೀರ್ಥೇ ಅಶ್ವಮೇಧಫಲಂ ಲಭೇತ್ ॥ ೫೪ ॥

---

೫೧. ಈ ಭೂಮಿಯಲ್ಲಿ ಅತ್ಯಂತ ಪ್ರಖ್ಯಾತವೂ, ಪುಣ್ಯಪ್ರದವೂ ಆದ ಶಿವನಾಮಕ ಮಹಾಹ್ರದವು ಸುಪ್ರಸಿದ್ಧವಾಗಿದೆ. ಅದರ ಪಕ್ಕದಲ್ಲಿಯೇ ವ್ಯಾಸ ಸರೋವರವೂ ಬ್ರಹ್ಮಸರಸ್ಸೂ ಕೂಡ ದಿವ್ಯವೂ ಪುಣ್ಯಪ್ರದವೂ ಆಗಿವೆ.

೫೨. ಋಗ್ವೇದ, ಯಜುರ್ವೇದ, ಸಾಮವೇದಗಳಿಗೆ ಮುಖ್ಯ ಆಶ್ರಯರೂ ಮಹಾತ್ಮರೂ ಆದ ವಸಿಷ್ಠಮುನಿಯ ಪವಿತ್ರವಾದ ಉಜ್ವಂತವೆಂಬ ಗಿರಿಯು ಕಾಪೋತ ಪುಷ್ಕರವೆಂಬ ಕ್ಷೇತ್ರಗಳೂ ವಿಖ್ಯಾತವಾಗಿವೆ. ಈ ಕ್ಷೇತ್ರಗಳಲ್ಲಿ ಬ್ರಹ್ಮದೇವನು ಪಂಚಮ ವೇದವಾದ ಪುರಾಣಾದಿಗಳನ್ನು ನಿರೂಪಿಸಿರುವನು.

೫೩. ಬ್ರಾಹ್ಮಣರು ಅತಿಪುರಾತನವೂ ಪವಿತ್ರವೂ ಆದ ಈ ಕ್ಷೇತ್ರಗಳಿಗೆ ಹೋದರೆ ಪಾಪದಿಂದ ಮುಕ್ತರಾಗುವರು. ಇವುಗಳಲ್ಲಿ ಮಾಡಿದ ಜಪತಪ ಹೋಮಾದಿ ಗಳು ಅನಂತವೂ, ಅಕ್ಷಯವೂ ಆದ ಫಲಗಳನ್ನು ಕೊಡುತ್ತವೆ.

೫೪. ಪುಂಡರೀಕವೆಂಬ ಮಹಾತೀರ್ಥದಲ್ಲಿ ಮಾಡಿದ ಪಿತೃಕಾರ್ಯವು ಕಮಲ ದಂತೆ ಶುಭ್ರವಾಗಿ ಕೀರ್ತಿದಾಯಕವಾಗುತ್ತದೆ. ಮತ್ತು ಬ್ರಹ್ಮತೀರ್ಥದಲ್ಲಿಯೂ ಮಹಾತೀರ್ಥದಲ್ಲಿಯೂ ಮಾಡಿದ ಪಿತೃಕಾರ್ಯವು ಅಶ್ವಮೇಧಫಲದಾಯಕ ವಾಗುವುದು.

**ಸಿಂಧುಸಾಗರಸಂಭೇಧೇ ತಥಾ ಪಂಚನದೇಽಕ್ಷಯಂ ।**
**ಕೀರಕಾತ್ಮಾ ತತಃ ಪುಣ್ಯೋ ಮಂಡವಾಯಾಂ ಚ ಪರ್ವತೇ || ೫೫ ||**

**ದೇಯಂ ಸಪ್ತಹ್ರದೇ ಶ್ರಾದ್ಧಂ ಮಾನಸೇ ಚ ವಿಶೇಷತಃ ।**
**ಮಹಾಕೂಟೇ ಚ ವಂದೇ ಚ ಗಿರೌ ತ್ರಿಕಕುದೇ ತಥಾ || ೫೬ ||**

**ಸಧ್ಯಾಯಾಂ ಚ ಮಹಾವೇದ್ಯಾಂ ದೃಶ್ಯತೇ ಮಹದದ್ಭುತಂ ।**
**ಅಶ್ರದ್ಧಧಾನಾನ್ನಾಭ್ಯೇತಿ ಸಾಭ್ಯೇತಿ ಚ ಧೃತವ್ರತಾನ್ || ೫೭ ||**

**ಜಾತವೇದಃ ಶಿಲಾ ತತ್ರ ಸಾಕ್ಷಾದಗ್ನೇಃ ಸನಾತನೀ ।**
**ಶ್ರಾದ್ಧಾನಿ ಚಾಗ್ನಿಕಾರ್ಯಾಣಂ ಚ ತತ್ರ ಕುರ್ಯಾತ್ ಸದಾಕ್ಷಯಂ || ೫೮ ||**

**ಸಂಶ್ರಯಿತ್ವೈಕಮೇಕೇನ ಸಾಯಾಹ್ನಂ ಪ್ರತಿ ನಿತ್ಯಶಃ ।**
**ತಸ್ಮಿಂದೇಯಂ ಸದಾ ಶ್ರಾದ್ಧಂ ಪಿತೄಣಾಮಕ್ಷಯಾರ್ಥಿನಾ || ೫೯ ||**

---

೫೫. ಸಿಂಧುನದೀ ಸಾಗರಗಳ ಮಧ್ಯದಲ್ಲಿಯೂ ಪಂಚನದೀ ದಡದಲ್ಲಿಯೂ, ಕೀರಕ ಕ್ಷೇತ್ರದಲ್ಲಿಯೂ, ಮಂಡವಾಯು ಗಿರಿಯಲ್ಲಿಯೂ ಮಾಡಿದ ಕಾರ್ಯಗಳು ಅಕ್ಷಯಫಲದಾಯಕಗಳಾಗುವುವು.

೫೬-೫೭ ಸಪ್ತಹ್ರದ, ಮಾನಸಸರೋವರ, ಮಹಾಕೂಟ, ಮಂದಗಿರಿ, ತ್ರಿಕುಕುತ್ಪರ್ವತ ಇವುಗಳಲ್ಲಿ ಮಾಡಿದ ಶ್ರಾದ್ಧಾದಿಗಳು ಅನಂತಫಲಪ್ರದವಾಗುತ್ತವೆ. ಮತ್ತು ಮಹಾವೇದಿಯಲ್ಲಿ ಸಾಯಂಕಾಲದಲ್ಲಿ ಮಹದಾಶ್ಚರ್ಯಗಳು ಅತ್ಯದ್ಭುತವಾಗಿ ಕಾಣುವುವು. ಆ ಆಶ್ಚರ್ಯಗಳು ನಾಸ್ತಿಕರಿಗೆ ಕಾಣಿಸುವುದಿಲ್ಲ. ಆಸ್ತಿಕರಿಗೆ ಮಾತ್ರ ಗೋಚರವಾಗುವುವು.

೫೮ ಸಾಕ್ಷಾದಗ್ನಿಜನಕವೂ, ಪುರಾತನವೂ ಆದ ಅಗ್ನಿಶಿಲೆಯು ಸುಪ್ರಸಿದ್ಧವಾಗಿದೆ ಅದರಲ್ಲಿ ಶ್ರಾದ್ಧವನ್ನೂ ಅಗ್ನಿಕಾರ್ಯವನ್ನೂ ಮಾಡಿದರೆ ಅಕ್ಷಯಫಲ ಪ್ರಾಪ್ತಿಯಾಗುವುದು

೫೯. ಪುರುಷರು ಪವಿತ್ರವಾದ ಆ ಕ್ಷೇತ್ರಕ್ಕೆ ಹೋಗಿ ಪರಿಶುದ್ಧರಾಗಿ ಸಾಯಾಹ್ನದಲ್ಲಿ ಪಿತೃಗಳ ಉದ್ದೇಶ್ಯಕವಾಗಿ ಶ್ರಾದ್ಧಾದಿಗಳನ್ನು ಮಾಡಿದರೆ ಅನಂತವಾದ ಫಲವನ್ನು ಪಡೆಯುವರು.

ಕೃತಾತ್ಮಾ ವಾಽಕೃತಾತ್ಮಾ ವಾ ತತ್ರ ವಿಜ್ಞಾಯತೇ ನರಃ ।
ಸ್ವರ್ಗ್ಯಮಾರ್ಗಪ್ರದಂ ನಾಮ ತೀರ್ಥಂ ಸದ್ಯೋ ವರಪ್ರದಂ ॥
ವೈರಾಣ್ಯುತ್ಸೃಜ್ಯ ತಸ್ಮಿಂಸ್ತು ದಿವಂ ಸಪ್ತರ್ಷಯೋ ಗತಾಃ ॥ ೬೦ ॥

ಅದ್ಯಾಪಿ ತಾನಿ ದೃಶ್ಯಂತೇ ವೈರಾಣ್ಯೇವ ಗತಾನಿ ತು ।
ಸ್ನಾತ್ವಾ ಸ್ವರ್ಗಮವಾಪ್ನೋತಿ ತಸ್ಮಿ್ ತೀರ್ಥೋತ್ತಮೇ ನರಃ ॥ ೬೧ ॥

ಖ್ಯಾತಮಾಯತನಂ ತತ್ರ ನಂದಿಸಿದ್ಧನಿಷೇವಿತಂ ।
ನಂದೀಶ್ವರಸ್ಯ ಯಾ ಮೂರ್ತಿರ್ದುರಾಚಾರೈರ್ನ ದೃಶ್ಯತೇ ॥ ೬೨ ॥

ದೃಶ್ಯಂತೇ ಕಾಂಚನಾ ಯೂಪಾಃ ಸಂಚಿಷ್ಯೇ ಭಾಸ್ಕರೋದಯೇ ।
ಕೃತ್ವಾ ಪ್ರದಕ್ಷಿಣಂ ತೇ ತು ಗಚ್ಛಂತ್ಯಂತರ್ಹಿತಾ ದಿವಂ ॥ ೬೩ ॥

---

೬೦. ಯಾವ ಸ್ಥಳದಲ್ಲಿ ಯೋಗ್ಯನಾದ ಪುರುಷನೂ ಅಥವಾ ಅಯೋಗ್ಯನಾದ ಪುರುಷನೂ ಸಹ ಜಪತಪಾದಿಕಾರ್ಯವನ್ನು ಮಾಡಿದರೆ ಅದು ಸ್ವರ್ಗಮಾರ್ಗಪ್ರದವಾಗುವುದು. ಆ ಕ್ಷೇತ್ರದಲ್ಲಿ ಸಪ್ತರ್ಷಿಗಳೂ ಕೂಡ ದ್ವೇಷಾಸೂಯಾದಿಗಳನ್ನು ಬಿಟ್ಟು ತಪೋನುಷ್ಠಾನವನ್ನು ಮಾಡಿದ್ದರಿಂದ ಸ್ವರ್ಗಸುಖವನ್ನು ಹೊಂದಿರುವರು.

೬೧. ಈಗಲೂ ಸಹ ಆ ಕ್ಷೇತ್ರಗಳು ವೈರನಾಶಕವಾಗಿವೆಯೆಂದು ಲೋಕವಿಖ್ಯಾತವಾಗಿದೆ. ಪುರುಷರು ಆ ತೀರ್ಥೋತ್ತಮಗಳಲ್ಲಿ ಸ್ನಾನಪಾನಾದಿಗಳನ್ನು ಮಾಡಿದರೆ ಅವರು ಸ್ವರ್ಗಲೋಕವನ್ನು ಹೊಂದುವರು.

೬೨. ಅದರಲ್ಲಿ ನಂದಿಸಿದ್ಧರಿಂದ ಸೇವಿಸಲ್ಪಟ್ಟ ಪ್ರಖ್ಯಾತವಾದ ನಂದೀಶ್ವರನ ದೇವಾಲಯವಿರುವುದು. ಆ ನಂದೀಶ್ವರಮೂರ್ತಿಯು ದುರಾಚಾರಿಗಳಾದ ನಾಸ್ತಿಕರ ದೃಷ್ಟಿಗೆ ಗೋಚರವಾಗುವುದಿಲ್ಲ.

೬೩. ಆ ಕ್ಷೇತ್ರದಲ್ಲಿ ಸುವರ್ಣಮಯವಾದ ಯೂಪಸ್ತಂಭಗಳು ಪ್ರಸಿದ್ಧವಾಗಿವೆ. ಅಂತಹ ಸ್ತಂಭಗಳನ್ನು, ಸೂರ್ಯೋದಯ ಕಾಲದಲ್ಲಿ ಸ್ನಾನವನ್ನು ಮಾಡಿಸಿ, ಅದಕ್ಕೆ ಪ್ರದಕ್ಷಿಣೆ ನಮಸ್ಕಾರಗಳನ್ನು ಮಾಡಿದವರು ಸ್ವರ್ಗಲೋಕವನ್ನು ಹೊಂದುವರು. ಇದು ರಹಸ್ಯ ಸಂಗತಿಯಾಗಿದೆ.

ಸರ್ವತಶ್ಚ ಕುರುಕ್ಷೇತ್ರಂ ಸುತೀರ್ಥಂ ಚ ವಿಶೇಷತಃ ।
ಪುಣ್ಯಂ ಸನತ್ಕುಮಾರಸ್ಯ ಯೋಗೇಶಸ್ಯ ಮಹಾತ್ಮನಃ ॥
ಕೀರ್ತ್ಯತೇ ಚ ತಿಲಾನ್ ದತ್ವಾ ಪಿತೄಣಾಂ ವೈ ಸದಾಕ್ಷಯಂ ॥ ೬೪ ॥

ಓಜಸೇ ಚಾಕ್ಷಯಂ ಸಾದ್ಧಂ ಧರ್ಮರಾಜನಿವೇಶನೇ ।
ಶ್ರಾದ್ಧಂ ದತ್ತಮಮಾವಾಸ್ಯಾಂ ವಿಧಿನಾ ಚ ಯಥಾಕ್ರಮಂ ॥ ೬೫ ॥

ಪುನಃ ಸನ್ನಿಹಿತಾನಾಂ ವೈ ಕುರುಕ್ಷೇತ್ರೇ ವಿಶೇಷತಃ ।
ಅರ್ಚಯೇದ್ವಾ ಪಿತ್ರ್ಯಂಸ್ತತ್ರ ಸತ್ಪುತ್ರಸ್ತ್ವನೃಣೋ ಭವೇತ್ ॥ ೬೬ ॥

ವಿನಶನ ಸರಸ್ವತ್ಯಾಂ ಪ್ಲಕ್ಷಪ್ರಸ್ರವಣೇ ತಥಾ ।
ವ್ಯಾಸತೀರ್ಥೇ ಸರಸ್ವತ್ಯಾಂ ಬ್ರಹ್ಮಕ್ಷೇತ್ರೇ ವಿಶೇಷತಃ ॥ ೬೭ ॥

---

೬೪ ಕುರುಕ್ಷೇತ್ರದ ಎಲ್ಲಾ ಭಾಗವೂ ಅಲ್ಲಿನ ತೀರ್ಥಗಳೂ ಪ್ರಖ್ಯಾತವಾಗಿವೆ. ಯೋಗೀಶ್ವರನೂ ಮಹಾತ್ಮನೂ ಆದ ಸನತ್ಕುಮಾರನ ಪವಿತ್ರವಾದ ಆಶ್ರಮವು ಪ್ರಖ್ಯಾತವಾಗಿದೆ. ಅದರಲ್ಲಿ ತಿಲೋದಕವನ್ನು ಕೊಟ್ಟರೆ ಅದು ಪಿತೃಗಳಿಗೆ ಅಕ್ಷಯ ಫಲವನ್ನು ಕೊಡುವುದು

೬೫. ಪ್ರಖ್ಯಾತವಾದ ಧರ್ಮರಾಜನ ಕ್ಷೇತ್ರದಲ್ಲಿ ಅಮಾವಾಸ್ಯೆಯ ದಿವಸ ಶಾಸ್ತ್ರೋಕ್ತಕ್ರಮದಲ್ಲಿ ಮಾಡಿದ ಶ್ರಾದ್ಧವು ಅಕ್ಷಯಫಲಪ್ರದವೂ ಕೀರ್ತಿದಾಯಕವೂ ಆಗುವುದು

೬೬. ಯಾವ ಕುಮಾರನು ಸದಾ ಸದಾ ಕುರುಕ್ಷೇತ್ರದಲ್ಲಿ ಸನ್ನಿಹಿತರಾದ ಪಿತೃಗಳಿಗೆ ಅರ್ಚನ ವಂದನಾದಿಗಳನ್ನು ಮಾಡುವನೋ, ಅಂತಹ ಪುತ್ರನು ಋಣಮುಕ್ತನಾಗುವನು.

೬೭. ವಿನಶನಕ್ಷೇತ್ರ, ಸರಸ್ವತೀನದಿ, ಪ್ಲಕ್ಷಶ್ರವಣ, ವ್ಯಾಸತೀರ್ಥ, ಬ್ರಹ್ಮ ಕ್ಷೇತ್ರ ಇವುಗಳಲ್ಲಿ ಯಾವನು ಪಿತೃಗಳ ನಿಮಿತ್ತವಾಗಿ ಶ್ರಾದ್ಧಾದಿ ಕರ್ಮಗಳನ್ನು ಮಾಡುವನೋ, ಅವನಿಗೆ ಮಹಾಫಲಪ್ರಾಪ್ತಿಯಾಗುವುದು.

ದೇಯಮೋಂಕಾರಪಠನೈಃ ಶ್ರಾದ್ಧಮಕ್ಷಯಮಿಚ್ಛತಾ ।
ಸರ್ವತಶ್ಚೈವ ಗಂಗಾಯಾಂ ಮೈನಾಕೇ ಚ ನಗೋತ್ತಮೇ ॥ ೬೮ ॥

ಯಮುನಾಪ್ರಭವೇ ಚೈವ ಸರ್ವಪಾಪೈಃ ಪ್ರಮುಚ್ಯತೇ ।
ಅತ್ಯುಷ್ಣಾಶ್ಚಾತಿಶೀತಾಶ್ಚ ಅಪಸ್ತತ್ರ ನಿದರ್ಶನಂ ॥ ೬೯ ॥

ಯಮಸ್ಯ ಭಗಿನೀ ಪುಣ್ಯಾ ಮಾರ್ತಂಡದುಹಿತಾ ತಥಾ ।
ತತ್ರಾಕ್ಷಯಂ ತದಾ ಶ್ರಾದ್ಧಂ ಪಿತೃಭಿಃ ಪೂರ್ವಕೀರ್ತಿತಂ ॥ ೭೦ ॥

ಬ್ರಹ್ಮಾನುಗಹ್ರದೇ ಸ್ನಾತ್ವಾ ಸದ್ಯೋ ಭವತಿ ಬ್ರಾಹ್ಮಣಃ ।
ತಸ್ಮಿನ್ ಹಿ ಶ್ರಾದ್ಧಮಾನಂತ್ಯಂ ಜಪಹೋಮತಪಾಂಸಿ ಚ ॥ ೭೧ ॥

---

೬೮. ಗಂಗಾನದಿಯ ಸರ್ವಭಾಗದಲ್ಲಿಯೂ, ಉತ್ತಮವಾದ ಮೈನಾಕಗಿರಿಯಲ್ಲಿಯೂ, ಓಂಕಾರಪಠನಪೂರ್ವಕವಾಗಿ ಶ್ರಾದ್ಧವನ್ನು ಮಾಡಿದರೆ ಅಕ್ಷಯಫಲ ಪ್ರಾಪ್ತಿಯಾಗುವುದು.

೬೯. ಯಮುನಾನದಿಯ ಉದ್ಗಮದಲ್ಲಿ ಶ್ರಾದ್ಧವನ್ನು ಮಾಡಿದರೆ ಸರ್ವ ಪಾಪಗಳಿಂದ ಮುಕ್ತನಾಗುವನು. ಇದಕ್ಕೆ ನಿದರ್ಶನವಾಗಿ ಆ ನದಿಯಲ್ಲಿ ಅತ್ಯುಷ್ಣವೂ ಅತಿಶೀತಲವೂ ಆದ ಜಲವು ಇರುವುದು. ಇದೇ ನಿದರ್ಶನವಾಗಿದೆ.

೭೦. ಯಮುನೆಯು ಯಮದೇವನ ತಂಗಿಯೂ, ಸೂರ್ಯನ ಕುಮಾರಿಯೂ ಆಗಿರುವಳು. ಅಂತಹ ಯಮುನೆಯ ದಡದಲ್ಲಿ ಮಾಡಿದ ಶ್ರಾದ್ಧವು ಅಕ್ಷಯಫಲ ದಾಯಕವಾಗಿದೆಯೆಂದು ಪಿತೃಗಳು ಅನಾದಿಯಿಂದಲೂ ವರ್ಣಿಸಿರುವರು.

೭೧. ಬ್ರಾಹ್ಮಣನು ಬ್ರಹ್ಮಾನುಗಹ್ರದದಲ್ಲಿ ಸ್ನಾನವನ್ನು ಮಾಡಿದರೆ ತಕ್ಷಣವೇ ಮುಕ್ತನಾಗುವನು. ಅದರಲ್ಲಿ ಮಾಡಿದ ಶ್ರಾದ್ಧ, ಜಪತಪಹೋಮಾದಿಗಳು ಅನಂತ ಫಲದಾಯಕಗಳಾಗುತ್ತವೆ.

ಸ್ಥಾಣುಭೂತಶ್ಚರಂಸ್ತತ್ರ ವಸಿಷ್ಠೋ ವೈ ಮಹಾತಪಾಃ ।
ಅದ್ಯಾಪಿ ಯತ್ರ ದೃಶ್ಯಂತೇ ಪಾದಪಾ ಮಣಿಚರ್ಚಿತಾಃ ॥ ೭೨ ॥

ತುಲಾ ತು ದೃಶ್ಯತೇ ಯತ್ರ ಧರ್ಮಾಧರ್ಮಪ್ರದರ್ಶಿನೀ ।
ಯಯಾ ವೈ ತುಲಿತಂ ವಿಪ್ರೈಸ್ತೀರ್ಥಾನಾಂ ಫಲಮುತ್ತಮಂ ॥ ೭೩ ॥

ಪಿತೄಣಾಂ ದುಹಿತಾ ಯೋಗಾ ಗಂಧಕಾಲೀತಿ ವಿಶ್ರುತಾ ।
ಚತುರ್ಥೋ ಬ್ರಹ್ಮಣಶ್ಚಾಂಶಃ ಪರಾಶರಕುಲೋದ್ವಹಃ ॥ ೭೪ ॥

ವ್ಯಸ್ಯಸ್ತ್ಯೇಕಂ ಚತುರ್ಧಾ ತು ವೇದಂ ಧೀಮಾನ್ಮಹಾಮುನಿಃ ।
ಮಹಾಯೋಗಂ ಮಹಾತ್ಮಾನಂ ಯೋ ವ್ಯಾಸಂ ಜನಯಿಷ್ಯತಿ ॥ ೭೫ ॥

---

೭೨. ಅದರಲ್ಲಿ ವಸಿಷ್ಠಮಹರ್ಷಿಯು ಮಹಾತಪಸ್ಸನ್ನು ಮಾಡುತ್ತಾ, ಒಣಗಿದ ಮರದಂತೆ ಅಚಲನಾಗಿರುವನು. ಈಗಲೂ ಅಲ್ಲಿನ ವೃಕ್ಷಗಳು ರತ್ನಖಚಿತವಾದ ವೇದಿಕೆ ಮೊದಲಾದುವುಗಳಿಂದ ಶೋಭಿಸುತ್ತವೆ.

೭೩. ಬ್ರಾಹ್ಮಣರು ಯಾವ ತಕ್ಕಡಿಯಿಂದ ತೀರ್ಥಕ್ಷೇತ್ರಗಳ ಮಾಹಾತ್ಮ್ಯಗಳ ತಾರತಮ್ಯವನ್ನು ತಿಳಿಯುತ್ತಿದ್ದರೋ, ಅಂತಹ ಧರ್ಮಾಧರ್ಮನಿರ್ಣಾಯಕವಾದ ಧರ್ಮತಕ್ಕಡಿಯು ಅಲ್ಲಿ ಈಗಲೂ ಸಹ ಹೊಳೆಯುತ್ತಿದೆಯೆಂದು ಮಹಾತ್ಮರು ಹೇಳುವರು.

೭೪. ಗಂಧಕಾಲೀ ಎಂಬುವಳು ಪಿತೃದೇವತೆಗಳ ಮಾನಸಪುತ್ರಿಯಾಗಿಯೂ, ಯೋಗಧ್ಯಾನಪರಾಯಣೆಯಾಗಿಯೂ, ಪ್ರಸಿದ್ಧಳಾಗಿಯೂ ಇದ್ದಳು. ಆಕೆಯು ಪರಾಶರಮುನಿಯನ್ನು ಮದುವೆಯಾಗಿ ಬ್ರಹ್ಮಾಂಶಸಂಪನ್ನನಾದ ವ್ಯಾಸನಾಮಕ ಮುನಿಯನ್ನು ಪಡೆದಳು.

೭೫. ಯಾವ ವೇದವ್ಯಾಸರು ಅಖಂಡವಾದ ವೇದವನ್ನು ಲೋಕೋಪಕಾರಕ್ಕಾಗಿ ನಾಲ್ಕು ಭಾಗಗಳನ್ನಾಗಿ ಮಾಡಿದರೋ, ಅಂತಹ ಮಹಾತ್ಮರೂ, ಜ್ಞಾನಿಗಳೂ, ಮಹಾಯೋಗಿಗಳೂ ಆದ ದ್ವೈಪಾಯನಮುನಿಯನ್ನು ಮಹಾತ್ಮರಾದ ಪರಾಶರರು ಪಡೆದರು.

ಅಚ್ಛೋದಕಂ ನಾಮ ಸರೋ ಯತ್ರಾಚ್ಛೋದಾ ಸಮುತ್ಥಿತಾ ।
ಮತ್ಸ್ಯಯೋನೌ ಪುನರ್ಜಾತಾ ನಿಯೋಗಾದ್ವಾರಣೇನ ತು ॥ ೭೬ ॥

ತಸ್ಯಾ ಯತ್ರಾಶ್ರಮಃ ಪುಣ್ಯಃ ಪುಣ್ಯಕೃದ್ಭಿರ್ನಿಷೇವಿತಃ ।
ಸಕೃದ್ದತ್ತಂ ತು ವೈ ಶ್ರಾದ್ಧಮಕ್ಷಯಂ ಸಮುದಾಹೃತಂ ॥
ತಸ್ಯಾಂ ಯೋಗಸಮಾಧಾನೇ ದತ್ತಂ ಯುಗಪದುದ್ಭವೇತ್ ॥ ೭೭ ॥

ಕುಬೇರತುಂಗೇ ವ್ಯಾಮೋಚ್ಚೇ ವ್ಯಾಸತೀರ್ಥೇ ತಥೈವ ಚ ।
ಪುಣ್ಯಃ ಸ ಬ್ರಾಹ್ಮಣೋ ದದ್ಯಾಚ್ಛ್ರಾದ್ಧಮಾನಂತ್ಯಮಕ್ಷಯಂ ॥ ೭೮ ॥

ಸಿದ್ಧೈಸ್ತು ಸೇವಿತಾ ನಿತ್ಯಂ ದೃಶ್ಯತೇ ನಾಕೃತಾತ್ಮಭಿಃ ।
ಅನಿವರ್ತನಂ ತು ನಂದಾಯಾಂ ವೇದ್ಯಾಂ ಪ್ರಾಗುತ್ತರೇ ದಿಶಿ ॥ ೭೯ ॥

---

೭೬. ಅಚ್ಛೋದಕವೆಂಬ ಸರೋವರವು ಸರ್ವದಾ ಪ್ರಕಾಶಿಸುತ್ತಿದೆ. ಆದರಲ್ಲಿ ಅತಿಸ್ವಚ್ಛವಾದ ಜಲವು ಸದಾಕಾಲದಲ್ಲಿ ಉಕ್ಕುತ್ತಿರುವುದು. ವ್ಯಾಸರು ಮತ್ಸ್ಯಯೋನಿಯಾದ ಮತ್ಸ್ಯಗಂಧಿಯಲ್ಲಿ (ಸತ್ಯವತೀದೇವಿಯಲ್ಲಿ) ಅವತರಿಸಿದರು.

೭೭. ಅಂತಹ ವ್ಯಾಸರ ಪುಣ್ಯಕರವೂ ಮಹಾತ್ಮರಿಂದ ಆಶ್ರಿತವೂ ಆದ ವ್ಯಾಸಾಶ್ರಮವು ಸುಪ್ರಸಿದ್ಧವಾಗಿದೆ. ಆ ಆಶ್ರಮದಲ್ಲಿ ನಮ್ಮ ಜನ್ಮದಲ್ಲಿ ಒಂದುಸಲ ಪಿತೃಗಳಿಗೋಸ್ಕರವಾಗಿ ಮಾಡಿದ ಶ್ರಾದ್ಧವು ಅಕ್ಷಯವೂ ಅನಂತಪುಣ್ಯದಾಯಕವೂ ಆಗುವುದು.

೭೮. ಉನ್ನತವಾದ ಕುಬೇರತುಂಗತೀರ್ಥದಲ್ಲಿಯೂ, ಪವಿತ್ರವಾದ ವ್ಯಾಸತೀರ್ಥದಲ್ಲಿಯೂ ಬ್ರಾಹ್ಮಣಾದಿಗಳು ಮಾಡಿದ ಶ್ರಾದ್ಧವು ಅಮಿತವೂ, ಅಕ್ಷಯವೂ ಆದ ಫಲವನ್ನು ಕೊಡುವುದು.

೭೯. ಅಂತಹ ಕ್ಷೇತ್ರವು ಸರ್ವದಾ ಸಿದ್ಧರಿಂದ ಸೇವಿತವಾಗಿದೆ. ಅಯೋಗ್ಯರಿಗೆ ಅಲ್ಲಿ ಪ್ರವೇಶವೇ ಇಲ್ಲ. ನಂದವೇದಿಕೆಯು ಈಶಾನ್ಯ ದಿಕ್ಕಿನಲ್ಲಿದೆ. ಅಲ್ಲಿಗೆ ಹೋಗಿ ಜಪತಪಾದಿಗಳನ್ನು ಮಾಡಿದವರಿಗೆ ಪುನರಾವೃತ್ತಿ ಇಲ್ಲವೆಂದು ಜ್ಞಾನಿಗಳು ಹೇಳುವರು.

**ಸಿದ್ಧಕ್ಷೇತ್ರಂ ತು ವೈ ಜುಷ್ಟಂ ಯತ್ಪ್ರಾಪ್ಯ ನ ನಿರ್ವರ್ತತೇ ।**
**ಮಹಾಲಯೇ ಪದಂ ನ್ಯಸ್ತಂ ಮಹಾದೇವೇನ ಧೀಮತಾ ॥ ೮೦ ॥**

**ದೇವ್ಯಾಲಯೇ ತಪಸ್ತಪ್ತ್ವಾ ಏಕಪಾದೇನ ಈಶ್ವರಃ ।**
**ನೀಹಾರಶ್ಚ ಯುಗಂದಿವ್ಯಮುಮಾತುಂಗೇ ಸ್ಥಿತಂ ಜಲಂ ॥ ೮೧ ॥**

**ಉಮಾತುಂಗೇ ಭೃಗೋಸ್ತುಂಗೇ ಬ್ರಹ್ಮತುಂಗೇ ಮಹಾಲಯೇ ।**
**ಕಾದ್ರವತ್ಯಾಂ ಚ ಶಾಂಡಿಲ್ಯಾಂ ಗುಹಾಯಾಂ ವಾಮನಸ್ಯ ಚ ॥ ೮೨ ॥**

**ಗತ್ವಾ ಚೈತಾನಿ ಪೂತಃ ಸ್ಯಾಚ್ಛ್ರಾದ್ಧಮಕ್ಷಯಮೇವ ಚ ।**
**ಜಪೋಹೋಮಸ್ತಥಾ ಧ್ಯಾನಂ ಯತ್ಕಿಂಚಿತ್ಸುಕೃತಂ ಭವೇತ್ ॥ ೮೩ ॥**

---

೮೦. ಅದರ ಸಮೀಪದಲ್ಲಿರುವ ಸಿದ್ಧಕ್ಷೇತ್ರವು ಮಹಾಮುನಿಗಳಿಂದ ಸೇವಿತವಾಗಿದೆ. ಅಲ್ಲಿಗೆ ಹೋದಂತಹ ಮಹಾತ್ಮರಿಗೆ ಪುನರ್ಜನನವಿಲ್ಲ. ಏಕೇದರೆ ಜ್ಞಾನಿಯಾದ ಪರಮೇಶ್ವರನು ಮಹಾಲಯದ ಕಾಲದಲ್ಲಿ ಅಲ್ಲಿ ಸಾಕ್ಷಾತ್ತಾಗಿ ಸನ್ನಿತನಾಗಿರುವನು

೮೧. ಪರಮೇಶ್ವರನು ಪಾರ್ವತೀದೇವಿಯ ಆಲಯದಲ್ಲಿ ಏಕಪಾದದಿಂದ ನಿಂತು ಘೋರವಾದ ತಪಸ್ಸನ್ನು ಮಾಡಿದನು. ಉಮಾಶಿಖರದಲ್ಲಿ ಸರ್ವಕಾಲದಲ್ಲಿಯೂ ಹಿಮವು ಮನೋಹರವಾಗಿರುತ್ತದೆ. ಆ ಉಮಾತುಂಗದಲ್ಲಿನ ಜಲವೂ ಸಹ ದಿವ್ಯವೂ ಅತಿಮಧುರವೂ ಹಿತವೂ ಆಗಿರುತ್ತದೆ.

೮೨–೮೩. ಉಮಾತುಂಗ, ಭೃಗುತುಂಗ, ಬ್ರಹ್ಮತುಂಗ, ನಾಗಹ್ರದ, ಶಾಂಡಿಲ್ಯ ಕ್ಷೇತ್ರ (ಗುಹೆ) ವಾಮನಗವಿ, ಇವುಗಳ ದರ್ಶನವು ಅತಿಪವಿತ್ರವಾಗಿದೆ. ಅವುಗಳಲ್ಲಿ ಮಾಡಿದ ಶ್ರಾದ್ಧ, ಜಪತಪ, ಹೋಮ, ಧ್ಯಾನಾದಿಗಳಲ್ಲಿ ಯಾವುದೊಂದನ್ನು ಮಾಡಿದರೂ ಅನಂತಫಲಪ್ರಾಪ್ತಿಯಾಗುವುದು. ಆ ಕ್ಷೇತ್ರಗಳಲ್ಲಿ ಮಾಡಿದ ಪ್ರತಿಯೊಂದು ಸತ್ಕಾರ್ಯವೂ ಮಹಾಫಲವನ್ನು ಕೊಡುವುದು.

ಬ್ರಹ್ಮಚರ್ಯಂ ಯಜಂತೇ ವೈ ಗುರುಭಕ್ತಾಃ ಶತಂ ಸಮಾಃ ।
ಏವಮಾದೀನಿ ಸದ್ಯಸ್ತಾಂ ಸ್ನಾತ್ವಾ ಪ್ರಾಪ್ನೋತಿ ಸತ್ಫಲಂ ॥ ೮೪ ॥

ಕುಮಾರಧಾರಾ ತತ್ರೈವ ದೃಷ್ಟ್ವಾ ಪಾಪಪ್ರಣಾಶನೀ ।
ಯಾನಾಸನಂ ಚ ತತ್ರೈವ ಸದ್ಯಃ ಸ್ಯಾದ್ಯತ್ ಪ್ರದೃಶ್ಯತೇ ॥ ೮೫ ॥

ಶೈಲಕೀರ್ತಿಪುರಾಭ್ಯಾಶೋ ಕಾಮಾನಾಪ್ನೋತಿ ಪುಷ್ಕಲಾನ್ ।
ಅದೃಶ್ಯಃ ಸರ್ವಭೂತಾನಾಂ ದೇವವಚ್ಚರತೇ ಮಹೀಂ ॥ ೮೬ ॥

ಕಾಶ್ಯಪಸ್ಯ ಮಹಾತೀರ್ಥಂ ಕಾಲಸರ್ಪಿರಿತಿ ಶ್ರುತಂ ।
ತತ್ರ ಶ್ರಾದ್ಧಾನಿ ದೇಯಾನಿ ನಿತ್ಯಮಕ್ಷಯಮಿಚ್ಛಿತಾ ॥ ೮೭ ॥

---

೮೪. ಅಂತಹ ಕ್ಷೇತ್ರಗಳಲ್ಲಿ ಅನೇಕ ವಟುಗಳು ನೂರಾರು ವರ್ಷಗಳವರೆಗೂ ಬ್ರಹ್ಮಚರ್ಯವ್ರತವನ್ನೂ ಭಕ್ತಿಯಿಂದ ಗುರುಸೇವೆಯನ್ನೂ ಅಧ್ಯಯನವನ್ನೂ ಮಾಡುವರು. ಅಲ್ಲಿ ಸ್ನಾನಮಾಡಿದ ಪುರುಷರಿಗೆ ಆ ಮಹಾಫಲಗಳೆಲ್ಲವೂ ಸಂಭವಿಸುವುವು.

೮೫. ಕುಮಾರಧಾರೆಯ ಕ್ಷೇತ್ರವು ದರ್ಶನ ಮಾತ್ರದಿಂದ ಪಾಪನಾಶಕವೂ ಪುಣ್ಯಪ್ರದವೂ ಆಗಿದೆ. ಅಲ್ಲಿ ಸ್ನಾನ ಜಪತಪ ಧ್ಯಾನಾದಿಗಳು ಮಹಾಫಲಪ್ರದ ವಾಗಿದೆ.

೮೬. ಶೈಲಕೀರ್ತಿಪುರದ ಸಮೀಪದಲ್ಲಿ ಶ್ರಾದ್ಧಾದಿಕಾರ್ಯಗಳನ್ನು ಮಾಡಿ ದವರು ಸಂಪೂರ್ಣವಾದ ಇಷ್ಟಾರ್ಥಗಳನ್ನು ಹೊಂದುವರು. ಅವರ ಪಿತೃಗಳು ದೇವತೆಗಳಂತೆ ಅದೃಶ್ಯರಾಗಿ ಭೂಮಿಯಲ್ಲಿ ಸಂಚರಿಸುವರು.

೮೭. ಕಶ್ಯಪಮುನಿಯ ಮಹಾತೀರ್ಥವು ಕಾಲಸರ್ಪಿಯೆಂದು ಪ್ರಸಿದ್ಧವಾಗಿದೆ. ಅಕ್ಷಯ ಫಲಾಕಾಂಕ್ಷಿತರಾದ ಪುರುಷರು ಆ ಕ್ಷೇತ್ರದಲ್ಲಿ ಶ್ರಾದ್ಧಗಳನ್ನು ಮಾಡಬೇಕು.

ಅಕ್ಷಯಂ ತು ಭವೇಚ್ಛ್ರಾದ್ಧಂ ಶಾಲಗ್ರಾಮುಸಮಂತತಃ ।
ದೃಷ್ಟ್ವಾ ನ ದೃಶ್ಯತೇ ತತ್ರ ಪ್ರತ್ಯಕ್ಷಮಕೃತಾತ್ಮನಾ || ೮೮ ||

ಪ್ರತ್ಯಾದೇಶೋ ಹ್ಯಶಿಷ್ಟಾನಾಂ ಶಿಷ್ಟಾನಾಂ ಚ ನಿವೇಶನಂ ।
ತತ್ರ ಚೈವ ಹ್ರದೇ ಪುಣ್ಯೇ ದಿವ್ಯೋ ವೈ ನಾಗರಾಡ್ಯತಃ || ೮೯ ||

ಪಿಂಡಂ ಗೃಹ್ಣಾತಿ ಹಿ ಸತಾಂ ನ ಗೃಹ್ಣಾತ್ಯಸತಾಂ ಹಿ ಸಃ ।
ಅತಿಪ್ರದೀಪ್ತೈರ್ಭುಜಗೈರ್ಭೋಕ್ತುಮನ್ನಂ ನ ಶಕ್ಯತೇ || ೯೦ ||

ಪ್ರತ್ಯಕ್ಷಂ ದೃಶ್ಯತೇ ಧರ್ಮಸ್ತೀರ್ಥಯೋರನಯೋರ್ದ್ವಯೋಃ ।
ದೇವದಾರುವನೇ ಚಾಪಿ ಚಾರಯೇಸ್ತಂ ನಿದರ್ಶನಂ || ೯೧ ||

---

೮೮ ಶಾಲಗ್ರಾಮಕ್ಷೇತ್ರದ ಸುತ್ತಲೂ ಮಾಡಿದ ಶ್ರಾದ್ಧವು ಅನಂತ ಫಲಪ್ರದವಾಗುವುದು ಅದರಲ್ಲಿ ದೇವತೆಗಳು ಅಯೋಗ್ಯರ ದೃಷ್ಟಿಗೆ ಗೋಚರವಾಗುವುದಿಲ್ಲ ಯೋಗ್ಯರಿಗೆ ಮಾತ್ರ ಪ್ರತ್ಯಕ್ಷವಾಗಿ ಕಾಣುವರು.

೮೯. ಪವಿತ್ರವಾದ ನಾಗಹ್ರದದಲ್ಲಿ ದೇವರೂಪಿಯಾದ ನಾಗರಾಜನು ವಾಸಿಸುವನು. ಅದು ಆಸ್ತಿಕರಾದ ಶಿಷ್ಟರಿಗೆ ಆಶ್ರಯವಾಗಿಯೂ, ನಾಸ್ತಿಕರಾದ ಅಯೋಗ್ಯರಿಗೆ ವಾಸಿಸಲನರ್ಹವಾಗಿಯೂ ಇದೆ.

೯೦. ನಾಗಹ್ರದದಲ್ಲಿ ವಾಸಿಸುವ ನಾಗರಾಜಾದಿಗಳು ಸತ್ಪುರುಷರು ಶ್ರಾದ್ಧದಲ್ಲಿ ಕೊಟ್ಟ ಪಿಂಡಗಳನ್ನು ಸ್ವೀಕರಿಸುತ್ತವೆ. ಅಯೋಗ್ಯರು ಕೊಟ್ಟ ಅನ್ನಾದಿಗಳನ್ನು ಸ್ವೀಕರಿಸುವುದಿಲ್ಲ ಅಲ್ಲಿರುವ ನಾಗಗಳು ದಿವ್ಯರೂಪಿಗಳೂ, ತೇಜೋಮಯಗಳೂ ಆಗಿರುವುವು.

೯೧. ಮೇಲೆ ಹೇಳಿದ ಎರಡು ತೀರ್ಥಗಳಲ್ಲಿಯೂ ಧರ್ಮಗಳು ಪ್ರತ್ಯಕ್ಷವಾಗಿ ಕಾಣುತ್ತವೆ. ಅದರಂತೆ ದೇವದಾರುವನದಲ್ಲಿ ಸಂಚರಿಸಿದರೂ ಧರ್ಮಗಳು ಗೋಚರವಾಗುವುವು.

ವಿಧೂತಾನಿ ತು ಪಾಪಾನಿ ದೃಶ್ಯಂತೇ ಸುಕೃತಾತ್ಮನಾ ।
ಭಾಗೀರಥ್ಯಾಂ ಪ್ರಯಾಗೇ ಚ ನಿತ್ಯಮಕ್ಷಯ್ಯಮುಚ್ಯತೇ ॥ ೯೨ ॥

ಕಾಲಂಚರೇ ದಶಾರ್ಣಾಯಾಂ ನೈಮಿಷೇ ಕುರುಜಾಂಗಲೇ ।
ವಾರಣಾಸ್ಯಾಂ ನಗರ್ಯಾಂ ತು ದೇಯಂ ಶ್ರಾದ್ಧಂ ತು ಯತ್ನತಃ ॥ ೯೩ ॥

ತಸ್ಯಾಂ ಯೋಗೇಶ್ವರೋ ನಿತ್ಯಂ ತತ್ತಸ್ಯಾ ದತ್ತಮಕ್ಷಯಂ ।
ದತ್ವಾ ಚೈತೇಷು ಪೂತಃ ಸ್ಯಾಚ್ಛ್ರಾದ್ಧಮಾನಂತ್ಯಮೇವ ಚ ॥ ೯೪ ॥

ತಪೋ ಹೋಮಸ್ತಥಾ ಧ್ಯಾನಂ ಯತ್ ಕಿಂಚಿತ್ಸುಕೃತಂ ಭವೇತ್ ।
ಲೌಹಿತ್ಯೇ ವೈತರಣ್ಯಾಂ ವೈ ಸ್ವರ್ಣವೇದ್ಯಾಂ ತಥೈವ ಚ ॥ ೯೫ ॥

---

೯೨ ಆ ಕ್ಷೇತ್ರಗಳಲ್ಲಿ ಪುಣ್ಯಾತ್ಮರ ಪಾಪಗಳು ಪರಿಹಾರವಾಗುವುದು ಪ್ರತ್ಯಕ್ಷವಾಗಿ ಕಾಣುವುದು. ಭಾಗೀರಥೀ ತೀರದಲ್ಲಿಯೂ, ಪ್ರಯಾಗ ಕ್ಷೇತ್ರದಲ್ಲಿಯೂ ಮಾಡಿದ ಶ್ರಾದ್ಧವು ಅಕ್ಷಯವೂ ಮಹಾಫಲಪ್ರದವೂ ಆಗುವುದು.

೯೩. ಕಾಲಂಜರದಲ್ಲಿಯೂ, ದಶಾರ್ಣದಲ್ಲಿಯೂ, ನೈಮಿಷಾರಣ್ಯದಲ್ಲಿಯೂ, ಕುರುಜಾಂಗಲದಲ್ಲಿಯೂ, ಕಾಶೀನಗರದಲ್ಲಿಯೂ ಮಾಡಿದ ಶ್ರಾದ್ಧವು ಅನಂತಫಲಪ್ರದವಾಗುವುದು. ಪಿತೃಗಳು ಮುಕ್ತರಾಗುವರು.

೯೪. ಕಾಶೀ ಮೊದಲಾದ ಕ್ಷೇತ್ರಗಳಲ್ಲಿ ಯೋಗೇಶ್ವರನಾದ ಶ್ರೀಭಗವಂತನು ಸದಾ ಸನ್ನಿಹಿತನಾಗಿರುವನು. ಆದುದರಿಂದ ಅಲ್ಲಿ ಮಾಡಿದ ಶ್ರಾದ್ಧವು ಅಕ್ಷಯಫಲಪ್ರದವಾಗುವುದು. ಆ ಕ್ಷೇತ್ರದಲ್ಲಿ ಅನ್ನದಾನದಿಂದ ಪುರುಷನು ಪರಿಶುದ್ಧನಾಗುವನು. ಶ್ರಾದ್ಧವೂ ಕೂಡ ಅನಂತಫಲಪ್ರದವಾಗುವುದು. ಇದರಲ್ಲಿ ಸಂಶಯವಿಲ್ಲ.

೯೫. ಲೋಹಿತ್ಯಕ್ಷೇತ್ರ, ವೈತರಿಣೀನದಿಯತೀರ, ಸ್ವರ್ಣನದೀತಟ ಇವೇ ಮೊದಲಾದ ಪುಣ್ಯಕ್ಷೇತ್ರದಲ್ಲಿ ಮಾಡಿದ ಪಿತೃಕಾರ್ಯಾದಿಗಳು ತಪಸ್ಸು, ಹೋಮ, ಧ್ಯಾನ, ಜಪ ಇವೇ ಮೊದಲಾದ ಸತ್ಕರ್ಮಗಳು ಸಫಲವಾಗುವುವು. ಮುಖ್ಯವಾಗಿ ಇವುಗಳಲ್ಲಿ ಮಾಡಿದ ಶುಭಕರ್ಮಗಳು ಅನಂತಫಲವನ್ನು ಕೊಡುವುವು.

ಸಕೃದೇವ ಸಮುದ್ರಾಂತೇ ದೃಶ್ಯತೇ ಪುಣ್ಯಕರ್ಮಭಿಃ ।
ಗಯಾಯಾಂ ಧರ್ಮಪೃಷ್ಠೇ ಚ ಸರಸಿ ಬ್ರಹ್ಮಣಸ್ತಥಾ ॥ ೯೬ ॥

ಗಯಾಯಾಂ ಗೃಧ್ರಕೂಟೇ ಚ ಶ್ರಾದ್ಧಂ ದತ್ತಂ ಮಹಾಫಲಂ ।
ಹಿಮಂ ಚ ಪತತೇ ತತ್ರ ಸಮಂತಾತ್ ಪಂಚಯೋಜನಂ ॥ ೯೭ ॥

ಭರತಸ್ಯಾಶ್ರಮೇ ಪುಣ್ಯೇಽರಣ್ಯಂ ಪುಣ್ಯತಮಂ ಸ್ಮೃತಂ ।
ಮತಂಗಸ್ಯ ಪದಂ ತತ್ರ ದೃಶ್ಯತೇ ಮಾಂಸಚಕ್ಷುಷಾ ॥ ೯೮ ॥

ಖ್ಯಾಪಿತಂ ಧರ್ಮಸರ್ವಸ್ವಂ ಲೋಕಸ್ಯಾಸ್ಯ ನಿದರ್ಶನಂ ।
ಏವಂ ಪಂಚವನಂ ಪುಣ್ಯಂ ಪುಣ್ಯಕೃದ್ಭಿರ್ನಿಷೇವಿತಂ ॥
ಯಸ್ಮಿನ್ ಪಾಂಡುವಿಶಾಲೇತಿ ತೀರ್ಥಂ ಸದ್ಯೋ ನಿದರ್ಶನಂ ॥ ೯೯ ॥

---

೯೬-೯೭. ಮಹಾತ್ಮರು ಸಮುದ್ರದ ಸಮೀಪದಲ್ಲಿಯೂ, ಗಯಾಕ್ಷೇತ್ರದಲ್ಲಿಯೂ, ಧರ್ಮಪೃಷ್ಠ, ಬ್ರಹ್ಮಸರಸ್ಸು, ಗೃಧ್ರಕೂಟ, ಇವುಗಳಲ್ಲಿಯೂ ಮಾಡಿದ ಶ್ರಾದ್ಧವು ಮಹಾಫಲಪ್ರದವಾಗುವುದು. ಆ ಕ್ಷೇತ್ರದ ಸುತ್ತಲೂ ಐದು ಯೋಜನಗಳವರೆಗೂ ಹಿಮವು ನಿರಂತರವೂ ಬೀಳುವುದು

೯೮. ಅಲ್ಲಿರುವ ಭರತಾಶ್ರಮವು ಅತ್ಯಂತ ಪುಣ್ಯಮಯವಾಗಿರುವುದು. ಅದರಲ್ಲಿ ಪವಿತ್ರವಾದ ಮತಂಗಾಶ್ರಮವು ಪುಣ್ಯತಮವಾಗಿರುವುದು. ಈಗಲೂ ಸಹ ಮನುಷ್ಯರು ಈ ಚರ್ಮಚಕ್ಷುಸ್ಸುಗಳಿಂದ ಆ ಮಹರ್ಷಿಗಳ ಹೆಜ್ಜೆಗಳನ್ನು ನೋಡಬಹುದು.

೯೯. ಮತಂಗಮುನಿಗಳು ಆ ಆಶ್ರಮದಲ್ಲಿ ಸಮಸ್ತವಾದ ಧರ್ಮಗಳನ್ನು ಲೋಕಕ್ಕೆ ಉದಾಹರಣೆಗಳಾಗಿ ಸ್ಥಾಪಿಸಿರುವರು. ಇದರಂತೆ ಮಹಾತ್ಮರಿಗೆ ಆಶ್ರಯವಾದ ಪಂಚವನವೂ ಕೂಡ ಪುಣ್ಯತಮವಾಗಿದೆ. ಅದರಲ್ಲಿ ಅತಿವಿಶಾಲವಾದ ಪಾಂಡುತೀರ್ಥವು ಮಹಾಫಲಪ್ರದವಾಗಿದೆ ಎಂಬುದಕ್ಕೆ ಉದಾಹರಣೆಯಾಗಿದೆ.

ತುಲಾಮಾನೈಸ್ತಥಾ ಚಾಪ್ಯೈಃ ಶಾಸ್ತ್ರೈಶ್ಚ ವಿವಿಧೈಸ್ತಥಾ ।
ಉನ್ಮಜ್ಜಂತಿ ತಥಾ ಲಗ್ನೇ ಯೇ ವೈ ಪಾಪಕೃತೋ ಜನಾಃ ॥ ೧೦೦ ॥

ತೃತೀಯಾಯಾಂ ತಥಾ ಪಾದೇ ನಿಃಸ್ವರೇ ಪಾವಮಂಡಲೇ ।
ಮಹಾಹ್ರದೇ ವೈ ಕೌಶಿಕ್ಯಾಂ ದತ್ತಂ ಶ್ರಾದ್ಧಂ ಮಹಾಫಲಂ ॥ ೧೦೧ ॥

ಮುಂಡಪೃಷ್ಠೇ ಪದಂ ನ್ಯಸ್ತಂ ಮಹಾದೇವೇನ ಧೀಮತಾ ।
ಬಹೂನ್ ದೇವಯುಗಾಂಸ್ತಪ್ತ್ವಾ ತಪಸ್ತೀವ್ರಂ ಸುದುಶ್ಚರಂ ॥ ೧೦೨ ॥

ಅಲ್ಪೇನಾಪ್ಯತ್ರ ಕಾಲೇನ ನರೋ ಧರ್ಮಪರಾಯಣಃ ।
ಪಾಪ್ಮಾನಮುತ್ಸೃಜತ್ಯಾಶು ಜೀರ್ಣತ್ವಚಮಿವೋರಗಃ ॥ ೧೦೩ ॥

---

೧೦೦. ಆ ಪಾಂಡುತೀರ್ಥದಲ್ಲಿ ತುಲಾಮಾನಗಳೂ (ತಕ್ಕಡಿಗಳೂ), ಧನಸ್ಸುಗಳೂ, ವಿವಿಧ ಶಾಸ್ತ್ರಗಳೂ ಪ್ರಖ್ಯಾತವಾಗಿವೆ. ಪರ್ವಕಾಲಗಳಲ್ಲಿ ಯಾರು ಪಾಪ ಮಾಡಿರುವರೋ ಅವರು ಆ ತುಲಾಮಾನದಲ್ಲಿ ಕುಳಿತರೆ ಮೇಲಕ್ಕೆ ಹೋಗುವರು. ಯಾರು ಪಾಪಿಗಳೋ ಅವರು ಹಗುರವಾಗುವರು. ಇದು ನಿದರ್ಶನವಾಗಿದೆ.

೧೦೧. ಮೂರನೆಯ ಪಾದದಲ್ಲಿಯೂ, ನಿಶ್ಶಬ್ದವಾದ ಪಾವಮಂಡಲದಲ್ಲಿಯೂ, ಕೌಶಿಕಿಯೆಂಬ ಮಹಾಹ್ರದದಲ್ಲಿಯೂ ಮಾಡಿದ ಶ್ರಾದ್ಧವು ಮಹಾಫಲದಾಯಕ ವಾಗಿದೆ.

೧೦೨. ಜ್ಞಾನಿಯಾದ ಪರಮೇಶ್ವರನು ಮುಂಡಪೃಷ್ಠವೆಂಬ ಕ್ಷೇತ್ರದಲ್ಲಿ ಪಾದವನ್ನು ಊರಿಕೊಂಡು ಅನೇಕ ದೇವಯುಗಗಳವರೆಗೂ ಅತಿ ಭಯಂಕರವಾದ ತಪಸ್ಸನ್ನು ಮಾಡಿದನು.

೧೦೩. ಧರ್ಮಪರಾಯಣನಾದ ಪುರುಷನು ಈ ಕ್ಷೇತ್ರದಲ್ಲಿ ಅಲ್ಪಕಾಲ, ತಪಸ್ಸು ಮಾಡಿದರೆ, ಸರ್ಪವು ಜೀರ್ಣವಾದ ಪೊರೆಯನ್ನು ಬಿಡುವಂತೆ, ಬೇಗನೇ ಪಾಪದಿಂದ ಮುಕ್ತನಾಗುವನು.

ಸಿದ್ಧಾನಾಂ ಪ್ರೀತಿಜನನ್ಯೈಃ ಪಾಪಾನಾಂ ಚ ಭಯಂಕರ್ಯೈಃ ।
ಲೇಲಿಹಾನ್ಯೈರ್ಮಹಾಭಾಗ್ಯೈಃ ರಕ್ಷಿತಂ ತು ದಿವಾನಿಶಂ ॥ ೧೦೪ ॥

ನಾಮ್ನಾ ಕನಕನಂದೀತಿ ತೀರ್ಥಂ ತ್ರೈಲೋಕ್ಯವಿಶ್ರುತಂ ।
ಉದೀಚ್ಯಾಂ ಮುಂಡಪೃಷ್ಠಸ್ಯ ದೇವರ್ಷಿಗಣಸೇವಿತಂ ॥
ತತ್ರ ಸ್ನಾತ್ವಾ ದಿವಂ ಯಾಂತಿ ಕಾಮಚಾರಾ ವಿಹಂಗಮಾಃ ॥ ೧೦೫ ॥

ದತ್ತಂ ಚಾಪಿ ತಥಾ ಶ್ರಾದ್ಧಮಕ್ಷಯಂ ಸಮುದಾಹೃತಂ ।
ಋಣೈಸ್ತ್ರಿಭಿಸ್ತದಾ ಸ್ನಾತ್ವಾ ನಿಕ್ಷಿಣೋತಿ ನರೋತ್ತಮಃ ॥ ೧೦೬ ॥

ತೀರೇ ತು ಸರಸಸ್ತತ್ರ ದೇವಸ್ಯಾಯತನಂ ಮಹತ್ ।
ಆರುಹ್ಯ ತಜ್ಜಪಂಸ್ತತ್ರ ಸಿದ್ಧೋ ಯಾತಿ ದಿವಂ ತತಃ ॥ ೧೦೭ ॥

---

೧೦೪. ಸಿದ್ಧರಿಗೆ ಅತಿಪ್ರಿಯಗಳೂ, ಪಾಪಿಗಳಿಗೆ ಅತಿಭಯಂಕರಗಳೂ, ಮಹಾಭಾಗ್ಯಶಾಲಿಗಳೂ ಆದ ಸರ್ಪಗಳು ಸರ್ವಕಾಲದಲ್ಲಿಯೂ, ಹಗಲೂರಾತ್ರಿಯಲ್ಲಿಯೂ ಕೂಡ ರಕ್ಷಿಸುತ್ತವೆ.

೧೦೫. ಮೂರುಲೋಕಪ್ರಖ್ಯಾತವೂ, ದೇವರ್ಷಿಗಳಿಂದ ವಂದಿತವೂ ಆದ ಕನಕನಂದೀ ಎಂಬ ತೀರ್ಥವೂ ಕ್ಷೇತ್ರವೂ ಮುಂಡಪೃಷ್ಠದ ಉತ್ತರದಿಗ್ಭಾಗದಲ್ಲಿ ಪ್ರಖ್ಯಾತವಾಗಿದೆ. ಅಂತಹ ತೀರ್ಥಗಳಲ್ಲಿ ಆಕಸ್ಮಿಕವಾಗಿ ಸ್ನಾನವನ್ನು ಮಾಡಿದ ಪಕ್ಷಿಗಳೂ ಸಹ ಪಾಪಗಳಿಂದ ಮುಕ್ತವಾಗಿ ಸ್ವರ್ಗಸುಖವನ್ನು ಪಡೆಯುವುವು.

೧೦೬ ಪುರುಷೋತ್ತಮನು ಆ ಕನಕನಂದಿಯಲ್ಲಿ ಶ್ರಾದ್ಧಮಾಡಿದರೆ ಅನಂತ ಫಲಗಳನ್ನು ಹೊಂದುವನು. ಮತ್ತು ದೇವಋಣ, ಪಿತೃಋಣ, ಋಷಿಋಣವೆಂಬ ಋಣತ್ರಯಗಳಿಂದ ಮುಕ್ತನಾಗುವನು. ಅದರಲ್ಲಿ ಮಾಡಿದ ಸ್ನಾನದಾನಾದಿಗಳಿಂದ ಮಹಾಫಲವು ಲಭಿಸುವುದು.

೧೦೭. : ಆ ಸರೋವರದ ದಡದಲ್ಲಿ ಶ್ರೀಭಗವಂತನ ಮಹಾಲಯವು ಹೊಳೆಯುತ್ತಿರುವುದು. ಅಲ್ಲಿಗೆ ಹೋಗಿ ಸ್ನಾನ ಜಪತಪಾದಿಗಳನ್ನು ಮಾಡುವ ಪುರುಷನು ಸಿದ್ಧಪುರುಷನಾಗಿ ಸ್ವರ್ಗಲೋಕವನ್ನು ಹೊಂದುವನು.

**ಉತ್ತರಂ ಮಾನಸಂ ಗತ್ವಾ ಸಿದ್ಧಿಂ ಪ್ರಾಪ್ನೋತ್ಯನುತ್ತಮಾಂ ।**
**ತತ್ರ ಗತ್ವಾ ಪುರಶ್ರೇಷ್ಠಂ ದೃಶ್ಯತೇ ಮಹದದ್ಭುತಂ ॥ ೧೦೮ ॥**

**ತಸ್ಮಿನ್ನಿರ್ವರ್ತಯೇಚ್ಛ್ರಾದ್ಧಂ ಯಥಾಶಕ್ತಿ ಯಥಾಬಲಂ ।**
**ಕಾಮಾತ್ ಸ ಲಭತೇ ದಿವ್ಯಾನ್ಮೋಕ್ಷೋಪಾಯಂ ಚ ನಿತ್ಯಶಃ ॥ ೧೦೯ ॥**

**ಮಾನಸೇ ಸರಸಿ ಶ್ರೇಷ್ಠೇ ದೃಶ್ಯತೇ ಮಹದದ್ಭುತಂ ।**
**ದಿವಶ್ಚ್ಯುತಾ ಮಹಾಭಾಗಾ ಹ್ಯಂತರಿಕ್ಷೇ ವಿರಾಜತೇ ॥ ೧೧೦ ॥**

**ಗಂಗಾ ತ್ರಿಪಥಗಾ ದೇವೀ ಸೋಮಪಾದಾಚ್ಚ್ಯುತಾ ಭುವಿ ।**
**ಆಕಾಶೇ ದೃಶ್ಯತೇ ತತ್ರ ತೋರಣಂ ಸೂರ್ಯಸನ್ನಿಭಂ ॥ ೧೧೧ ॥**

---

೧೦೮. ಮನುಷ್ಯರು ಉತ್ತರ ಮಾನಸ ಸರೋವರಕ್ಕೆ ಹೋದರೆ ಮಹಾಸಿದ್ಧಿಯನ್ನು ಹೊಂದುವರು. ಅಲ್ಲಿಗೆ ಹೋದರೆ ಪರಮಾಶ್ಚರ್ಯಕರವೂ ಅತಿಶ್ರೇಷ್ಠವೂ ಆದ ನಗರವನ್ನು ನೋಡಬಹುದು.

೧೦೯. ಆ ಉತ್ತರ ಮಾನಸ ಸರಸ್ಸಿನಲ್ಲಿ ಪುರುಷನು ಶ್ರಾದ್ಧವನ್ನು ತನ್ನ ಯೋಗ್ಯತಾನುಸಾರ ಯಥಾಶಕ್ತಿಯಾಗಿ ಮಾಡಿದರೆ ಸಕಲೇಷ್ಟಾರ್ಥಗಳನ್ನೂ ಪಡೆದು ಕೊನೆಗೆ ಪರಮಪದವಿಯಾದ ಮೋಕ್ಷವನ್ನು ಹೊಂದುವನು.

೧೧೦. ಅತ್ಯುತ್ತಮವಾದ ಮಾನಸಸರೋವರದಲ್ಲಿ ಅತ್ಯಾಶ್ಚರ್ಯಕರಗಳಾದ ಸಂಗತಿಗಳು ತಿಳಿದುಬರುತ್ತವೆ ಅದೇನೆಂದರೆ ಆ ಸರಸ್ಸಿನ ತೀರದಲ್ಲಿ ನಿಂತು ನೋಡಿದರೆ ಮಹಾನುಭಾವರಾದ ಅನೇಕರು ತಮ್ಮ ಪುಣ್ಯಗಳು ಕ್ಷೀಣವಾಗಲು ಸ್ವರ್ಗದಿಂದ ಚ್ಯುತರಾಗಿ ಅಂತರಿಕ್ಷದಲ್ಲಿಯೇ ಹೊಳೆಯುತ್ತಿರುವುದು ಕಾಣುವುದು. ಇಂತಹ ಅದ್ಭುತ ಸಂಗತಿಗಳು ವ್ಯಕ್ತವಾಗುತ್ತವ.

೧೧೧. ಅಲ್ಲಿ ನಿಂತುನೋಡಿದರೆ ಆಕಾಶಗಂಗೆಯು ಸ್ವರ್ಗಲೋಕದಿಂದ ಚಂದ್ರನ ಕಿರಣಗಳಮೂಲಕ ಭೂಮಿಗೆ ಇಳಿಯುತ್ತಿರುವುದು ಕಾಣುವುದು. ಆಗ ಆಕೆಯು ಸೂರ್ಯನಿಗೆ ಸಮಾನವಾದ ಕಾಂತಿಯಿಂದ ಹೊಳೆಯುವ ತೋರಣದಂತೆ ಪ್ರಕಾಶಿಸುವಳು.

ಜಾಂಬೂನದಮಯಂ ದಿವ್ಯಂ ಸ್ವರ್ಗದ್ವಾರಮಿವಾಯತಂ ।
ಯತಃ ಪ್ರವರ್ತತೇ ಭೂಯಃ ಪೂರ್ವಸಾಗರಮಂತಿಮಂ || ೧೧೨ ||

ಪಾವನೀ ಸರ್ವಭೂತಾನಾಂ ಧರ್ಮಜ್ಞಾನಾಂ ವಿಶೇಷತಃ ।
ಚಂದ್ರಭಾಗಾ ಚ ಸಿಂಧುಶ್ಚ ಉಭೌ ಮಾನಸಸನ್ನಿಭೌ ॥
ಸಾಗರಂ ಪಶ್ಚಿಮಂ ಯಾತಿ ದಿವ್ಯಸಿಂಧುರ್ನದೀವರಃ || ೧೧೩ ||

ಪರ್ವತೋ ಹಿಮವಾನ್ನಾಮ ನಾನಾಧಾತುವಿಭೂಷಿತಃ ।
ಯೋಜನಾನಾಂ ಸಹಸ್ರಾಣಿ ಆಯತೋಽಶೀತಿರುಚ್ಯತೇ || ೧೧೪ ||

ಸಿದ್ಧಚಾರಣಸಂಕೀರ್ಣಃ ಸಿದ್ಧಚಾರಣಸೇವಿತಃ ।
ತತ್ರ ಪುಷ್ಕರಣೀ ರಮ್ಯಾ ಸುಷುಮ್ನಾ ನಾಮ ವಿಶ್ರುತಾ || ೧೧೫ ||

---

೧೧೨. ಆ ಮಾನಸಸರೋವರದಲ್ಲಿ ನಿಂತು ನೋಡಿದರೆ ಸುವರ್ಣಮಯವೂ, ಅತಿವಿಶಾಲವೂ ಆದ ಸ್ವರ್ಗದ ದ್ವಾರಗಳೋ ಏನೋ ಎಂಬಂತೆ ಪೂರ್ವ ಸಮುದ್ರದ ಕೊನೆಯಭಾಗವು ತೋರುವುದು.

೧೧೩. ಸರ್ವಭೂತಗಳನ್ನೂ, ವಿಶೇಷವಾಗಿ ಧರ್ಮಾತ್ಮರನ್ನೂ ಪವಿತ್ರವನ್ನಾಗಿಮಾಡುವ ಚಂದ್ರಭಾಗಾ ಮತ್ತು ಸಿಂಧು ಇವೆರಡೂ ಮಾನಸಸರಸ್ಸಿಗೆ ಸಮಾನವಾದ ಮಹಿಮೆಗಳುಳ್ಳವುಗಳಾಗಿವೆ. ನದಿಗಳಲ್ಲಿ ಶ್ರೇಷ್ಠವಾದ ಸಿಂಧುನದಿಯು ಪಶ್ಚಿಮ ಸಮುದ್ರವನ್ನು ಸೇರುವುದು

೧೧೪. ಅವರ ಸಮೀಪದಲ್ಲಿ ನಾನಾ ಧಾತುಗಳಿಂದ ಮಂಡಿತವೂ, ಅತ್ಯುನ್ನತವೂ, ಹತ್ತು ಸಹಸ್ರ ಯೋಜನಗಳಷ್ಟು ವಿಸ್ತೀರ್ಣವೂ ಆದ ಹಿಮಾಲಯವು ಹೊಳೆಯುತ್ತಿರುವುದು.

೧೧೫. ಆ ಹಿಮಾಲಯದಲ್ಲಿರುವುದೂ ಸಿದ್ಧರೂ, ಚಾರಣರೂ ಇವರಿಂದ ವ್ಯಾಪ್ತವೂ, ಸಿದ್ಧಚಾರಣರಿಂದ ಸೇವಿತವೂ, ಅತ್ಯಂತ ರಮ್ಯವೂ, ಸುಷುಮ್ನಾ ನಾಮಕವೂ ಆದ ಪುಷ್ಕರಿಣಿಯು ಮೂರು ಲೋಕದಲ್ಲಿಯೂ ಪ್ರಖ್ಯಾತವಾಗಿದೆ.

**ದಶವರ್ಷಸಹಸ್ರಾಣಿ ತತ್ರ ಜಾತಸ್ತು ಜೀವತಿ ।**
**ಶ್ರಾದ್ಧಂ ಭವತಿ ಚಾನಂತ್ಯಂ ತಸ್ಯಾಂ ದತ್ತಂ ಮಹೋದಯಂ ॥**
**ತಾರಯೇಚ್ಚ ಯದಾ ಶ್ರಾದ್ಧಂ ದಶಪೂರ್ವಾನ್ ದಶಾಪರಾನ್ ॥ ೧೧೬ ॥**

**ಸರ್ವಂ ಪುಣ್ಯಂ ಹಿಮವತೋ ಗಂಗಾ ಪುಣ್ಯಾ ಚ ಸರ್ವತಃ ।**
**ಸಮುದ್ರಗಾಃ ಸಮುದ್ರಾಶ್ಚ ಸರ್ವೇ ಪುಣ್ಯಾಃ ಸಮಂತತಃ ॥ ೧೧೭ ॥**

**ಏವಮಾದಿಷು ಸರ್ವೇಷು ಶ್ರಾದ್ಧಂ ನಿರ್ವರ್ತಯೇದ್ಬುಧಃ ।**
**ಪೂತೋ ಭವತಿ ಸ್ನಾತ್ವಾ ನು ದತ್ವಾ ದತ್ವಾ ತಥೈವ ಚ ॥ ೧೧೮ ॥**

**ಶೈಲಸಾನುಷು ತುಂಗೇಷು ಕಂದರೇಷು ಗುಹಾಸು ಚ ।**
**ಉಪಹ್ವರನಿತಂಬೇಷು ತಥಾ ಪ್ರಸ್ರವಣೇಷು ಚ ॥ ೧೧೯ ॥**

---

೧೧೬. ಆ ದೇಶದಲ್ಲಿ ಹುಟ್ಟಿದ ಪುರುಷನು ಹತ್ತುಸಾವಿರ ವರ್ಷಗಳು ಜೀವಿಸುವನು. ಅಲ್ಲಿ ಮಾಡಿದ ಶ್ರಾದ್ಧವು ಅನಂತಮಹಾಫಲಪ್ರದವಾಗುವುದು. ಮತ್ತು ಪಿತೃಕಾರ್ಯವು ಯಜಮಾನನ ಹಿಂದಿನ ಮತ್ತು ಮುಂದಿನ ಹತ್ತು ತಲೆಯವರನ್ನು ನರಕಾದ್ಯನರ್ಥಗಳಿಂದ ಉದ್ಧರಿಸುವುದು.

೧೧೭. ಹಿಮಾಲಯದಲ್ಲಿರುವ ಸರ್ವವಸ್ತುಗಳೂ ಪವಿತ್ರಕರಗಳಾಗಿವೆ. ಅವುಗಳಲ್ಲಿ ಗಂಗೆಯು ಎಲ್ಲಕ್ಕಿಂತಲೂ ಪವಿತ್ರತಮವಾಗಿರುವುದು. ಹಿಮಾಲಯದ ಸುತ್ತಲಿರುವ ಸಮುದ್ರಗಾಮಿಗಳಾದ ಮಹಾ ನದಿಗಳೂ ಸಮುದ್ರವೂ ಸಹ ಅತ್ಯಂತ ಪುಣ್ಯಪ್ರದವಾಗಿವೆ.

೧೧೮. ಜ್ಞಾನಿಯಾದ ಪುರುಷನು ಮೇಲೆ ನಿರೂಪಿಸಿದ ಮಹಾ ತೀರ್ಥಗಳಲ್ಲಿ ಸ್ನಾನ ಜಪ ತಪಾದಿಗಳನ್ನು ಶ್ರಾದ್ಧಕರ್ಮವನ್ನು ಪಿಂಡದಾನವನ್ನು ಮಾಡಬೇಕು ಇದರಿಂದ ಮಹಾಫಲವು ದೊರಕುವುದು.

೧೧೯-೧೨೨. ಉನ್ನತವಾದ ಹಿಮಾಲಯದ ತಪ್ಪಲುಗಳು, ಗವಿಗಳು, ಗುಹೆಗಳು ಸಮೀಪದ ಮಧ್ಯ ಭಾಗಗಳು ನದಿಗಳು ನದಿಗಳ ಮರಳು ದಿಣ್ಣೆಗಳು ಉಗಮಗಳು (ನದೀಮುಖಗಳು) ಮಹಾಸಮುದ್ರವು ದನಕರುಗಳ ಕೊಟ್ಟಿಗೆಗಳು ನದಿಗಳ

ಪುಲಿನೇಷ್ವಾಪಗಾನಾಂ ಚ ತಥೈವ ಪ್ರಭುವೇ ಯುಗೇ ।
ಮಹೋದಧೌ ಗವಾಂ ಗೋಷ್ಠೇ ಸಂಗಮೇಷು ವನೇಷು ಚ ॥ ೧೨೦ ॥

ಅಸಂಸ್ಪೃಷ್ಟೋಪಲಿಪ್ತಾಸು ಹೃದ್ಯಾಸು ಸುರಭೀಷು ಚ ।
ಗೋಮಯೇನೋಪಲಿಪ್ತೇಷು ವಿವಿಕ್ತೇಷು ಗೃಹೇಷು ಚ ॥ ೧೨೧ ॥

ಕುರ್ಯಾಚ್ಛ್ರಾದ್ಧಮಥೈತೇಷು ನಿತ್ಯಮೇವ ಯಥಾವಿಧಿ ।
ಪ್ರದಕ್ಷಿಣಂ ದಿಶಂ ಗತ್ವಾ ಸರ್ವಕಾಮಚಿಕೀರ್ಷವಃ ॥ ೧೨೨ ॥

ಏವಮೇತೇಷು ಸರ್ವೇಷು ಶ್ರಾದ್ಧಂ ಕುರ್ಯಾದತಂದ್ರಿತಃ ।
ಏವಮೇವ ತು ಮೇಧಾವೀ ಬ್ರಾಹ್ಮೀಂ ಸಿದ್ಧಿಮವಾಪ್ನುಯಾತ್ ॥ ೧೨೩ ॥

ತ್ರೈವರ್ಣ್ಯೇ ವಿಹಿತೇ ಸ್ಥಾನೇ ಧರ್ಮವರ್ಣಾಶ್ರಮೇ ತಥಾ ।
ಕೋಪಸ್ಥಾನಸ್ಯ ಸಂತ್ಯಾಗಾತ್ಪ್ರಾಪ್ಯತೇ ಪಿತೃಪೂಜನಂ ॥ ೧೨೪ ॥

---

ಸಂಗಮವಾಗುವ ವನಗಳು ವಿವಿಕ್ತವೂ, ಹೃದ್ಯವೂ, ಪರಿಶುದ್ಧವೂ, ಸುಗಂಧಿಯೂ, ಗೋಮಯಲಿಪ್ತವೂ ನಿರ್ಜನವೂ ಆದ ಗೃಹಗಳು ಇವುಗಳಲ್ಲಿ ಶಾಸ್ತ್ರೋಕ್ತಕ್ರಮವಾಗಿ ಭಕ್ತಿಯಿಂದ ಶ್ರಾದ್ಧವನ್ನು ಮಾಡಿ ಪ್ರದಕ್ಷಿಣೆ ನಮಸ್ಕಾರಗಳನ್ನು ಮಾಡಿದರೆ ಇಹದಲ್ಲಿ ಪರಮ ಸೌಖ್ಯಗಳೂ ಪರದಲ್ಲಿ ಮೋಕ್ಷವೂ ಉಂಟಾಗುವುವು. ಇದರಲ್ಲಿ ಸಂದೇಹವಿಲ್ಲ.

೧೨೩ ಹೀಗೆ ಮೇಲೆ ಹೇಳಿದ ಸ್ಥಾನಗಳಲ್ಲಿ ಜ್ಞಾನಿಯಾದ ಪುರುಷನು ಜಾಗರೂಕನಾಗಿ ಶಾಸ್ತ್ರೋಕ್ತಕ್ರಮದಲ್ಲಿ ಶ್ರಾದ್ಧವನ್ನು ಮಾಡಿದರೆ ಪರಬ್ರಹ್ಮಪದವಿಯನ್ನು ಹೊಂದುವನು. ಅಂದರೆಪರಮಪದವಿಯು ದೊರಕುವುದು

೧೨೪. ಬ್ರಾಹ್ಮಣ, ಕ್ಷತ್ರಿಯ, ವೈಶ್ಯರೆಂಬ ತ್ರಿವರ್ಣದವರ ಕರ್ಮಾನುಷ್ಠಾನಕ್ಕೆ ಯೋಗ್ಯವೂ ವರ್ಣಾಶ್ರಮ ಧರ್ಮಾನುಷ್ಠಾನಕ್ಕೆ ಅನುಕೂಲವೂ ಆದ ಪ್ರಯಾಗಾದಿ ಕ್ಷೇತ್ರಗಳಲ್ಲಿ ಕಾಮಕ್ರೋಧಾದ್ಯರಿ ಷಡ್ವರ್ಗವನ್ನು ತ್ಯಾಗಮಾಡಿ ಭಕ್ತಿಯಿಂದ ಪಿತೃಕಾರ್ಯ ಪೂಜೆಗಳನ್ನು ಮಾಡಿದರೆ ಅದು ಅನಂತಫಲದಾಯಕವಾಗುವುದು.

**ತೀರ್ಥಾನ್ಯನುಸರಂಧೀರಃ ಶ್ರದ್ದಧಾನೋ ಜಿತೇಂದ್ರಿಯಃ ।**
**ಕೃತಪಾಪಶ್ಚ ಶುದ್ಧ್ಯತೇ ಕಿಂ ಪುನಃ ಶುಭಕರ್ಮಕೃತ್ ॥ ೧೨೫ ॥**

**ತಿರ್ಯಗ್ಯೋನಿಂ ನ ಗಚ್ಛೇಚ್ಚ ಕುದೇಶೇ ನ ಚ ಜಾಯತೇ ।**
**ಸ್ವರ್ಗೀ ಭವತಿ ವೈ ವಿಪ್ರೋ ಮೋಕ್ಷೋಪಾಯಂ ಚ ವಿಂದತಿ ॥ ೧೨೬ ॥**

**ಅಶ್ರದ್ದಧಾನಾಃ ಪ್ರಾಪ್ಮಾನೋ ನಾಸ್ತಿಕಾಃ ಸ್ಥಿತಸಂಶಯಾಃ ।**
**ಹೇತುದ್ರಷ್ಟಾ ಚ ಪಂಚೈತೇ ನ ತೀರ್ಥಫಲಮಶ್ನುತೇ ॥ ೧೨೭ ॥**

**ಗುರುತೀರ್ಥೇ ಪರಾ ಸಿದ್ಧಿಸ್ತೀರ್ಥಾನಾಂ ಪರಮಂ ಪದಂ ।**
**ಧ್ಯಾನಂ ತೀರ್ಥಪರಂ ತಸ್ಮಾದ್ಬ್ರಹ್ಮತೀರ್ಥಂ ಸನಾತನಂ ॥ ೧೨೮ ॥**

---

೧೨೫. ಧೀರನೂ ಜಿತೇಂದ್ರಿಯನೂ ಆದ ಪುರುಷನು ಇಂತಹ ತೀರ್ಥಕ್ಷೇತ್ರಗಳಿಗೆ ಹೋಗಿ ನಂಬಿ ಅನುಸಂಧಾನಪೂರ್ವಕವಾಗಿ ಸ್ನಾನ ಜಪತಪಾದಿಗಳನ್ನು ಮಾಡಿದರೆ ಸಕಲ ಪಾಪಗಳಿಂದಲೂ ಬಿಡಲ್ಪಟ್ಟು ಮುಕ್ತನಾಗುವನು. ಹೀಗಿರುವಲ್ಲಿ ಶುಭ ಕರ್ಮಗಳನ್ನು ಮಾಡಿದರೆ ಫಲಪ್ರಾಪ್ತಿಯಾಗುವುದೆಂದು ಹೇಳತಕ್ಕುದ್ದೇನಿದೆ.

೧೨೬. ಈ ರೀತಿಯಾಗಿ ಮೇಲೆ ನಿರೂಪಿಸಿದ ಕ್ಷೇತ್ರಗಳಲ್ಲಿ ಪಿತೃಕಾರ್ಯಾದಿ ಸತ್ಕರ್ಮಗಳನ್ನು ಮಾಡಿದ ಪುರುಷನು ಅಯೋಗ್ಯದೇಶಗಳಲ್ಲಿ ಪ್ರಾಣಿಗಳಾಗಿಯೂ ಜನಿಸುವುದಿಲ್ಲ. ಅಂತಹ ವಿಪ್ರನೇ ಮೊದಲಾದವರು ಸ್ವರ್ಗಸುಖಗಳನ್ನು ಅನುಭವಿಸಿ ಕೊನೆಗೆ ಮುಕ್ತರಾಗುವರು.

೧೨೭. ಹೀಗೆ ತೀರ್ಥಕ್ಷೇತ್ರಗಳ ಮಹಿಮೆಗಳನ್ನು ನಂಬದೇ ಇರುವ ಪುರುಷನೂ, ಪಾಪಿಷ್ಠನೂ, ನಾಸ್ತಿಕನೂ, ಸಂಶಯಗ್ರಸ್ತನೂ, ಹೇಗೆ ಪಾಪಗಳು ಪರಿಹೃತವಾಗುವುದೆಂದು ಕಾರಣವನ್ನು ಹುಡುಕುವವನೂ ಎಂಬ ಈ ಐವರೂ ಆ ತೀರ್ಥಗಳಿಂದ ಉಂಟಾಗುವ ಫಲಗಳನ್ನು ಹೊಂದುವುದಿಲ್ಲ.

೧೨೮. ಗುರುತೀರ್ಥದಲ್ಲಿ ಉತ್ತಮವಾದ ಸಿದ್ಧಿಯಾಗುವುದು. ಆ ಗುರುತೀರ್ಥವು ತೀರ್ಥಗಳಲ್ಲೆಲ್ಲಾ ಉತ್ತಮಸ್ಥಾನವಾಗಿದೆ. ಅದರಲ್ಲಿ ಸ್ನಾನ, ಜಪತಪ ಧ್ಯಾನಾದಿಗಳನ್ನು ಮಾಡಿದರೆ ಉತ್ತಮವಾದ ಫಲಗಳು ಸಂಭವಿಸುವುವು. ಅವುಗಳಲ್ಲಿಯೂ ಬ್ರಹ್ಮತೀರ್ಥವು ಬಹಳ ಪುರಾತನವಾದುದು.

**ಉಪವಾಸಾತ್ಪರಂ ಧ್ಯಾನಮಿಂದ್ರಿಯಾಣಾಂ ನಿವರ್ತನಂ।**
**ಉಪವಾಸನಿಬದ್ಧಾ ಹಿ ಪ್ರಾಣೈರಿಹ ಪುನಃ ಪುನಃ || ೧೨೯ ||**

**ಪ್ರಾಣಾಪಾನೌ ಸಮೌ ಕೃತ್ವಾ ವಿಷಯಾಣೀಂದ್ರಿಯಾಣಿ ಚ।**
**ಬುದ್ಧಿಂ ಮನಸಿ ಸಂಯಮ್ಯ ಸರ್ವೇಷಾಂ ತು ನಿವರ್ತನಂ || ೧೩೦ ||**

**ಪ್ರತ್ಯಾಹಾರಂ ಪುನರ್ವಿದ್ಧಿ ಮೋಕ್ಷೋಪಾಯಮಸಂಶಯಂ।**
**ಇಂದ್ರಿಯಾಣಾಂ ಮನೋ ಘೋರಂ ಬುದ್ಧ್ಯಾದೀನಾಂ ಪ್ರವರ್ತನಂ ||೧೩೧||**

**ಅನಾಹಾರಾತ್ ಕ್ಷಯಂ ಯಾತಿ ವಿದ್ಯಾದನಶನಂ ತಪಃ।**
**ನಿಗ್ರಹಾದ್ಬುದ್ಧಿಮನಸೋ ರಮ್ಯಾ ಬುದ್ಧಿಸ್ತು ಜಾಯತೇ || ೧೩೨ ||**

---

೧೨೯-೧೩೦ ಉಪವಾಸಕ್ಕಿಂತಲೂ ಇಂದ್ರಿಯವ್ಯಾಪಾರಗಳನ್ನು ತಡೆಯುವುದು ಉತ್ತಮ. ಉಪವಾಸಮಾಡುವುದಕ್ಕಿಂತಲೂ ಏಕಾಗ್ರಚಿತ್ತತೆಯಿಂದ ಧ್ಯಾನಮಾಡಿ ಇಂದ್ರಿಯವೃತ್ತಿಗಳನ್ನು ಕುಗ್ಗಿಸುವುದು ಉತ್ತಮವಾಗಿದೆ. ಹೇಗೆಂದರೆ ಪ್ರಾಣಾಪಾನಗಳನ್ನು ಸಮನಾಗಿ ಮಾಡಿಕೊಂಡು ಇಂದ್ರಿಯಗಳನ್ನು ವಿಷಯಗಳ ಕಡೆಗೆ ಹೋಗದಂತೆ ತಡೆದು ಬುದ್ಧಿಯನ್ನು ಮನಸ್ಸಿನಲ್ಲಿ ನಿರೋಧಿಸಿ ಸರ್ವೇಂದ್ರಿಯಗಳನ್ನೂ, ಚಿತ್ತವನ್ನೂ ಸ್ವಾಧೀನದಲ್ಲಿಟ್ಟುಕೊಂಡಿರುವುದೇ ಧ್ಯಾನವಾಗುವುದು

೧೩೧. ಸರ್ವೇಂದ್ರಿಯಗಳ ನಿಗ್ರಹವೇ ಮೋಕ್ಷಕ್ಕೆ ಮುಖ್ಯಸಾಧಕವಾಗಿದೆ. ಇದರಲ್ಲಿ ಸಂಶಯವಿಲ್ಲ. ಬಹಿರಿಂದ್ರಿಯ ನಿಗ್ರಹಕ್ಕಿಂತಲೂ ಮನೋನಿಗ್ರಹವು ಬಹು ಮುಖ್ಯವಾಗಿದೆ. ಏಕೆಂದರೆ ಬುದ್ಧ್ಯಾದಿಸರ್ವಪ್ರೇರಕವೂ ಮನಸ್ಸೇ ಆಗಿದೆ. ಆದುದರಿಂದ ಮನೋನಿಗ್ರಹವು ಅತ್ಯಾವಶ್ಯಕವಾಗಿರುತ್ತದೆ.

೧೩೨. ಆಹಾರವಿಲ್ಲದಿದ್ದರೆ ಇಂದ್ರಿಯಗಳು ಕ್ಷಯಿಸುವುವು. ಆದುದರಿಂದ ಆಹಾರಾಭಾವವೇ ತಪಸ್ಸಾಗಿದೆ. ಬುದ್ಧಿ, ಮನಸ್ಸುಗಳನ್ನು ನಿಗ್ರಹಿಸುವುದರಿಂದ ಉತ್ತಮವಾದ ಜ್ಞಾನವು ಉದಯಿಸುವುದು.

ಕ್ಷೀಣೇಷು ಸರ್ವಪಾಪೇಷು ಕ್ಷೀಣೇಷ್ವೇವೇಂದ್ರಿಯೇಷು ಚ ।
ಪರಿನಿರ್ವಾತಿ ಶುದ್ಧಾತ್ಮಾ ಯಥಾ ವಹ್ನಿರ್ನಿರಂಧನಃ ॥ ೧೩೩ ॥

ಕಾರಣೇಭ್ಯೋ ಗುಣೇಭ್ಯೋಽಥ ವ್ಯಕ್ತಾವ್ಯಕ್ತಸ್ಯ ಕೃತ್ಸ್ನಶಃ ।
ವಿಯೋಜಯತಿ ಕ್ಷೇತ್ರಜ್ಞಂ ತೇಭ್ಯೋ ಯೋಗೇನ ಯೋಗವಿತ್ ॥ ೧೩೪ ॥

ತಸ್ಯ ನಾಸ್ತಿ ಗತಿಸ್ಥಾನಂ ವ್ಯಕ್ತಾವ್ಯಕ್ತಂ ನ ಸಂಶಯಃ ।
ಅಸನ್ನಃ ಸದಸನ್ನೈವ ನೈವ ಕಿಂಚಿತ್ ಸ್ಥಿತ ಇತಿ ॥ ೧೩೫ ॥

ಇತಿ ಶ್ರೀ ಮಹಾಪುರಾಣೇ ವಾಯುಪ್ರೋಕ್ತೇ " ಶ್ರಾದ್ಧಕಲ್ಪೇ "
ನಾಮ ಪಂಚದಶೋಽಧ್ಯಾಯಃ

---

೧೩೩. ಹೀಗೆ ಸರ್ವೇಂದ್ರಿಯಗಳ ವ್ಯಾಪಾರವೂ ನಿಂತು ಸರ್ವಪಾಪಗಳೂ ಕ್ಷಯಿಸಲು ಆತ್ಮನು ಸೌದೆಯಿಲ್ಲದ ಅಗ್ನಿಯು ಶಾಂತಿಯಾಗುವಂತೆ ಪರಿಶುದ್ಧ ರೂಪನಾಗಿ ಹೊಳೆಯುವನು.

೧೩೪. ಯೋಗಮಹಿಮೆಯುಳ್ಳ ಪುರುಷನು ಯೋಗಶಕ್ತಿಯಿಂದ ತನ್ನ ಆತ್ಮನು ಸರ್ವೇಂದ್ರಿಯಗಳೂ, ಸತ್ತ್ವರಜಸ್ತಮೋಗುಣಗಳೂ, ಕಾರಣಗಳೂ, ವ್ಯಕ್ತವಾದ ಪಂಚಭೂತಗಳೂ, ಅವ್ಯಕ್ತಗಳಾದ ಪ್ರಕೃತ್ಯಾದಿಗಳೂ ಮತ್ತು ಸಮಸ್ತ ಇವುಗಳಿಗಿಂತ ಭಿನ್ನನಾಗಿರುವನೆಂದು ತಿಳಿಯುತ್ತಾನೆ. ಅವನೇ ಕ್ಷೇತ್ರಜ್ಞನಾಗಿರುವನು.

೧೩೫. ಅಂತಹ ಆತ್ಮನಿಗೆ ಪ್ರಾಪ್ಯವಾದ ಸ್ಥಾನವೇ ಇಲ್ಲ ಅವನು ವ್ಯಕ್ತಾವ್ಯಕ್ತ ಸ್ವರೂಪನೂ ಅಲ್ಲ. ಸಂಶಯಾತ್ಮಕನೂ ಅಲ್ಲ. ಅವನು ಪ್ರಕೃತಿಭೂತಗಳೂ ಅಲ್ಲ. ಸದ್ರೂಪನೂ, ಅಸದ್ರೂಪನೂ, ಇಂದ್ರಿಯಾದಿಸ್ವರೂಪನೂ ಆಗಿರುವುದಿಲ್ಲ. ಕೇವಲ ಚಿದ್ರೂಪನಾಗಿರುವನೆಂದು ತಿಳಿಯಬೇಕು ಎಂದು ಸೂತಮುನಿಯು ಹೇಳಿದನು.

ಇಲ್ಲಿಗೆ ವಾಯುಪ್ರೋಕ್ತವಾದ ಮಹಾಪುರಣದ " ಶ್ರಾದ್ಧಪ್ರಕರಣದಲ್ಲಿ
ತೀರ್ಥಯಾತ್ರಾಕ್ರಮವೆಂಬ " ಹದಿನೈದನೆಯ ಅಧ್ಯಾಯವು ಮುಗಿದುದು.



## ಹದಿನೈದನೆಯದ ಅಧ್ಯಾಯದ ಸಾರಾಂಶವು

ಈ ಅಧ್ಯಾಯದಲ್ಲಿ ತೀರ್ಥಕ್ಷೇತ್ರಗಳ ಮಹಿಮೆಗಳು ವರ್ಣಿತವಾಗಿವೆ. ಮೂರು ಲೋಕಗಳಲ್ಲಿ ಪಖ್ಯಾತವೂ, ಅತಿಪವಿತ್ರವೂ ಆದ ಅಮರಕಟಕಪರ್ವತವು ಸ್ವರ್ಗಕ್ಕೆ ಹೋಗುವ ಸೋಪಾನದಂತಿದೆ. ಅದು ದೇವತೆಗಳಿಗೂ, ಪಿತೃಗಳಿಗೂ, ಮಹರ್ಷಿಗಳಿಗೂ ಆಶ್ರಯವಾಗಿದೆ ಇದರಂತೆ ಇಂದ್ರಗಿರಿ, ಗೋಕರ್ಣಕ್ಷೇತ್ರ, ಸಪ್ತಗೋದಾವರೀಪ್ರದೇಶ, ಶ್ರೀಪರ್ವತ, ಕುಮಾರತೀರ್ಥ, ಚಂದ್ರತೀರ್ಥ, ಅಮರಾವತೀ, ವಿಂಧ್ಯಗಿರಿ ಈ ಕ್ಷೇತ್ರಗಳು ಸುಪ್ರಸಿದ್ಧಗಳಾಗಿವೆ ಇವುಗಳಲ್ಲಿ ಮಾಡಿದ ಶ್ರಾದ್ಧವು ಅನಂತಫಲಪ್ರದವಾಗಿದೆ.

ಹಾಗೆಯೇ ಗೃಧ್ರಕೂಟ, ಶಿವಹ್ರದ, ವ್ಯಾಸತೀರ್ಥ, ಪುಂಡರೀಕ್ಷೇತ್ರ, ಬ್ರಹ್ಮತೀರ್ಥ, ಹೇಮಕೂಟ, ಅಚ್ಛೋದಸರಸ್ಸು, ಸಿದ್ಧಕ್ಷೇತ್ರ, ಕಾಶ್ಯಪತೀರ್ಥ, ನಾಗಹ್ರದ, ಗಂಗಾನದೀ, ಪ್ರಯಾಗ, ದಶಾರ್ಣ, ನೈಮಿಷಾರಣ್ಯ, ವೈತರಿಣೀ, ಭರತಾಶ್ರಮ, ಮತಂಗಾಶ್ರಮ, ಕನಕನದೀ, ಮಾನಸಸರಸ್ಸು, ಹಿಮಾಲಯ, ಚಂದ್ರಭಾಗ, ಕಾಶೀ, ಪ್ರಯಾಗ, ತಾಮ್ರಪರ್ಣಿ ಇವೇ ಮೊದಲಾದ ತೀರ್ಥಕ್ಷೇತ್ರಗಳಲ್ಲಿ ಭಕ್ತಿಯಿಂದ ಯಥಾಶಕ್ತಿಯಾಗಿ ನಿಯಮದಿಂದ ಶ್ರಾದ್ಧ, ಜಪ, ತಪಾದಿಗಳನ್ನು ಮಾಡಿದರೆ ಪಿತೃಗಳು ತೃಪ್ತರಾಗುವರು. ಸಕಲೈಶ್ವರ್ಯಪ್ರಾಪ್ತಿಯೂ, ಋಣಮುಕ್ತಿಯೂ ಆಗುವುವು. ಯಜಮಾನನು ಋಣಿಯೂ, ಕುರೂಪಿಯೂ, ಸಂತಾನರಹಿತನೂ ಆಗದೇ ಸರ್ವದಾ ಸುಖಿಯಾಗುವನು.

ಏಕೆಂದರೆ ಮೇಲೆ ಹೇಳಿದ ತೀರ್ಥಕ್ಷೇತ್ರಗಳಲ್ಲಿ ಪಿತೃದೇವತೆಗಳು ಕೆಲವು ಪ್ರದೇಶಗಳಲ್ಲಿ ಪ್ರತ್ಯಕ್ಷರಾಗಿಯೂ, ಕೆಲವುಕಡೆ ಅದೃಶ್ಯರಾಗಿಯೂ ಇದ್ದು ಅಲ್ಲಲ್ಲಿ ಭಕ್ತಿಯಿಂದ ಮಾಡಿದ ಶ್ರಾದ್ಧದಿಂದ ಪ್ರೀತರಾಗಿ ಇಹಲೋಕದಲ್ಲಿ ಸಕಲೇಷ್ಟಾರ್ಥಗಳನ್ನೂ, ಕೊನೆಗೆ ಪರಮಪದವಿಯನ್ನೂ ದಯಪಾಲಿಸುವರು ಎಂಬ ವಿಷಯಗಳು ವರ್ಣಿತವಾಗಿವೆ.

—: ಹರಿಃ ಓಂ :—

—ಶ್ರೀ ವೇದವ್ಯಾಸಾಯ್ಯ ನಮಃ—

# ಶ್ರೀಮದ್ವಾಯು ಪುರಾಣಂ

## ಷೋಡಶೋಽಧ್ಯಾಯಃ

|| ಬೃಹಸ್ಪತಿರುವಾಚ ||

**ಅತಃ ಪರಂ ಪ್ರವಕ್ಷ್ಯಾಮಿ ದಾನಾನಿ ಚ ಫಲಾನಿ ಚ ।**
**ಶ್ರಾದ್ಧಕರ್ಮಾಣಿ ಮೇಧ್ಯಾನಿ ವರ್ಜನೀಯಾನಿ ಯಾನಿ ಚ || ೧ ||**

**ಹಿಮಪ್ರಪತನೇ ಕುರ್ಯಾದಾಹರೇದ್ವಾ ಹಿಮಂತತಃ ।**
**ಅಗ್ನಿಹೋತ್ರಮತಃ ಪುಣ್ಯಂ ಪರಮಂ ಹಿ ತತಃ ಸ್ಮೃತಂ || ೨ ||**

---

## ಹದಿನಾರನೆಯ ಅಧ್ಯಾಯವು

೧. ಬೃಹಸ್ಪತಿಯು ಹೇಳಿದನು :—ಈ ಅಧ್ಯಾಯದಲ್ಲಿ ಶ್ರಾದ್ಧದಲ್ಲಿ ಮಾಡ ಬೇಕಾದ ದಾನಗಳು ಯಾವುವು ? ಅವುಗಳ ಫಲಗಳು ಯಾವುವು ? ಶ್ರಾದ್ಧಕರ್ಮ ದಲ್ಲಿ ಪವಿತ್ರವಾದ ವಸ್ತುಗಳು ಯಾವುವು ? ತ್ಯಾಜ್ಯವಾದ ವಸ್ತುಗಳು ಯಾವುವು ? ಎಂಬುದನ್ನು ತಿಳಿಸುತ್ತೇನೆ ಕೇಳಿರೆಂದನು.

೨. ಹಿಮವು ಬೀಳುವ ಸ್ಥಳದಲ್ಲಿ ಹಿಮದ ಗೆಡ್ಡೆಯನ್ನು ತೆಗೆದುಹಾಕಿ ಶ್ರಾದ್ಧಾದಿ ಕರ್ಮಗಳನ್ನು ಮಾಡಬೇಕು. ಅಂತಹ ಶೀತವಾದ ಸ್ಥಳದಲ್ಲಿ ಅಗ್ನಿ ಹೋತ್ರಗಳನ್ನು ಮಾಡಿದರೆ ಬಹಳ ಪುಣ್ಯವು ಉಂಟಾಗುವುದು. ಅದು ಪರಮ ಪವಿತ್ರವಾಗಿದೆ.

ನಕ್ತಂ ತು ವರ್ಜಯೇಚ್ಛ್ರಾದ್ಧಂ ರಾಹೋರನ್ಯತ್ರ ದರ್ಶನಾತ್ ।
ಸರ್ವಸ್ವೇನಾಪಿ ಕರ್ತವ್ಯಂ ಕ್ಷಿಪ್ರಂ ವೈ ರಾಹುದರ್ಶನೇ ॥ ೩ ॥

ಉಪರಾಗೇ ನ ಕುರ್ಯಾದ್ಯಃ ಪಂಕೇ ಗೌರಿವ ಸೀದತಿ ।
ಕುರ್ವಾಣಸ್ತೂದ್ಧರೇತ್ಪಾಪಾನ್ ಮಗ್ನಾನ್ನೌರಿವ ಸಾಗರೇ ॥ ೪ ॥

ವಿಶ್ವದೇವಂ ಚ ಸೌಮ್ಯಂ ಚ ಬಹುಮಾಂಸಪರಂ ಹರಿಃ ।
ವಿಷಾಣಂ ವರ್ಜಯೇತ್ ಖಾಡ್ಗಮಸೂಯಾನಾಶನಾಯ ವೈ ॥ ೫ ॥

ತ್ವಷ್ಟಾ ವೈ ವಾರ್ಯಮಾಣಸ್ತು ದೇವೇಶೇನ ಮಹಾತ್ಮನಾ ।
ಪಿಬಂಚ್ಛಚೀಪತೇಃ ಸೋಮಂ ಪೃಥಿವ್ಯಾಮಪತತ್ಪುರಾ ॥ ೬ ॥

---

೩. ರಾತ್ರಿಯಕಾಲದಲ್ಲಿಯೂ, ಗ್ರಹಣಕಾಲದಲ್ಲಿಯೂ, ಶ್ರಾದ್ಧಕರ್ಮವನ್ನು ಮಾಡಬಾರದು. ರಾಹುದರ್ಶನಕಾಲವು ಪ್ರಾಪ್ತವಾದರೆ ಸರ್ವಸ್ವವನ್ನೂ ದಾನಮಾಡಿ ಜಪತಪಾದಿಗಳನ್ನು ಮಾಡಬೇಕು.

೪. ಗ್ರಹಣಕಾಲದಲ್ಲಿ ಶ್ರಾದ್ಧಕರ್ಮಗಳನ್ನು ಮಾಡಬಾರದು ಹಾಗೆ ಮಾಡಿದರೆ ಕೆಸರಲ್ಲಿ ಸಿಕ್ಕುಬಿದ್ದ ಗೋವಿನಂತೆ ದುಃಖಪಡುವನು. ಆದುದರಿಂದ ಸಕಾಲದಲ್ಲಿ ಪಿತೃಕಾರ್ಯವನ್ನು ಮಾಡಿದವನು ತಮ್ಮ ಪಿತೃಗಳನ್ನು ಸಮುದ್ರದಲ್ಲಿ ಮುಳುಗಿದ ಹಡಗನ್ನು ಎತ್ತುವಂತೆ ಪಾಪಗಳಿಂದ ಮುಕ್ತರನ್ನಾಗಿ ಮಾಡುವನು.

೫. ಪುರುಷನು ಶ್ರಾದ್ಧದಲ್ಲಿ ವಿಶ್ವೇದೇವತೆಗಳಿಗೂ, ಸೌಮ್ಯದೇವನಿಗೂ, ಬಹುಮಾಂಸಯುಕ್ತವಾದ ಹವಿಸ್ಸನ್ನೂ ಕೊಂಬು, ಖಡ್ಗ, ಇವನ್ನೂ ಕೊಡಬಾರದು. ಅಸೂಯಾರಹಿತನಾಗಿ ಪಿತೃಕಾರ್ಯವನ್ನು ಸಾತ್ವಿಕ ವೃತ್ತಿಯಿಂದ ಮಾಡಬೇಕು.

೬. ಪೂರ್ವದಲ್ಲಿ ದೇವತೆಗಳ ಬಡಗಿಯಾದ ಮಯನು ಮಹಾತ್ಮನೂ, ದೇವೇಶನೂ, ಆದ ಶ್ರೀಭಗವಂತನಿಂದ ನಿವಾರಿತನಾದರೂ ಅಸೂಯೆಯಿಂದ ಶಚೀಪತಿಯಾದ ಇಂದ್ರನಿಗೆ ಕೊಟ್ಟ ಸೋಮವನ್ನು ಪಾನಮಾಡಿದ್ದರಿಂದ ಸ್ವರ್ಗದಿಂದ ಭೂಮಿಯಲ್ಲಿ ಬಿದ್ದನು.

ಶ್ಯಾಮಾಕಸ್ತು ತಥೋತ್ಪನ್ನಾಃ ಪಿತ್ರರ್ಥಮಪಿ ಪೂಜಿತಾಃ ।
ವಿಪ್ರುಷಸ್ತಸ್ಯ ನಾಸಾಭ್ಯಾಮಸಕ್ತಾಭ್ಯಾಂ ತಥೈವ ಚ ॥ ೭ ॥

ಶ್ಲೇಷ್ಮಾಣಃ ಶೀತಲಾ ಹೃದ್ಯಾ ಮಧುರಾಶ್ಚ ತಥೇಕ್ಷವಃ ।
ಶ್ಯಾಮಾಕೈರಿಕ್ಷುಭಿಶ್ಚೈವ ಪಿತೄಣಾಂ ಸಾರ್ವಕಾಮಿಕಂ ॥
ಕುರ್ಯಾದಾಗ್ರಯಣಂ ಯಸ್ತು ಸ ಶೀಘ್ರಂ ಸಿದ್ಧಿಮಾಪ್ನುಯಾತ್ ॥ ೮ ॥

ಶ್ಯಾಮಾಕಾ ಹಸ್ತಿನಾಮಾ ಚ ಪಟೋಲಂ ಬೃಹತೀಫಲಂ ।
ಅಗಸ್ತ್ಯಸ್ಯ ಶಿಖಾ ತೀವ್ರಾ ಕಷಾಯಾಃ ಸರ್ವ ಏವ ಚ ॥ ೯ ॥

ಏವಮಾದೀನಿ ಚಾನ್ಯಾನಿ ಸ್ವಾದೂನಿ ಮಧುರಾಣಿ ಚ ।
ನಾಗರಂಚಾತ್ರ ವೈ ದೇಯಂ ದೀರ್ಘಮೂಲಕಮೇವ ಚ ॥ ೧೦ ॥

---

೭. ತಾವಾಗಿಯೇ ಉತ್ಪನ್ನವಾದ ಸಾವೆಧಾನ್ಯಗಳು ಪಿತೃಗಳಿಗೆ ಪ್ರಿಯವಾಗಿವೆ. ಆ ಸಾವೆಯ ಹನಿಗಳನ್ನು ಮೂಗಿನಿಂದ ವಾಸನೇ ತೆಗೆದುಕೊಳ್ಳದೆಯೇ ಪಿತೃಗಳಿಗೆ ಅರ್ಪಿಸಬೇಕು.

೮. ತಂಪಾದ ಕರೀ ನೆಲಕುಂಬಳವು ಸಿಹಿಯಾದ ಕಬ್ಬು ಇವು ಪಿತೃಗಳಿಗೆ ಪ್ರಿಯವಾಗಿವೆ. ಯಾವ ಪುರುಷನು ಸಾವೆಯ ಧಾನ್ಯಗಳಿಂದಲೂ ಕಬ್ಬುಗಳಿಂದಲೂ ಪಿತೃಗಳಿಗೆ ಪ್ರಿಯವನ್ನುಂಟುಮಾಡುವನೋ ಅವನು ಬೇಗನೆ ಮಹಾಸಿದ್ಧಿಯನ್ನು ಹೊಂದುವನು.

೯. ಸಣ್ಣಸಾವೆ, ಆನೆಸಾವೆ, ಪಡವಲಕಾಯಿ, ರಾಮಗುಳ, ಅಗಸೇಸೊಪ್ಪು, ಸರ್ವವಿಧವಾದ ಕಷಾಯವಸ್ತುಗಳು ಪಿತೃಗಳಿಗೆ ಇಷ್ಟವಾದ ಪದಾರ್ಥಗಳಾಗಿವೆ. ಇವು ಸಾತ್ವಿಕಾಹಾರಗಳಾಗಿವೆ.

೧೦. ಸ್ವಾದುವಾಗಿಯೂ, ಮಧುರವಾಗಿಯೂ, ಇರುವ ಪೂರ್ವೋಕ್ತವಾದ ಪದಾರ್ಥಗಳನ್ನೂ ಹಸಿಶುಂಠಿ, ಗೆಡ್ಡೆಗೆಣಸುಗಳು ಲಾವಂಚಿಬಳ್ಳಿ, ಇವೇ ಮೊದಲಾದುವನ್ನು ಶ್ರಾದ್ಧದಲ್ಲಿ ಉಪಯೋಗಿಸಬಹುದು. ಇವು ಪಿತೃಗಳಿಗೆ ಪ್ರಿಯವಾಗಿವೆ.

**ವಂಶೀಕರೀರಾಃ ಸುರಸಾಃ ಸರ್ಜಕಂ ಭೂಸ್ತೃಣಾನಿ ಚ |**
**ವರ್ಜನೀಯಾನಿ ವಕ್ಷ್ಯಾಮಿ ಶ್ರಾದ್ಧಕರ್ಮಣಿ ನಿತ್ಯಶಃ || ೧೧ ||**

**ಲಶುನಂ ಗೃಂಜನಂ ಚೈವ ಪಲಾಂಡುಃ ಪಿಂಡಮೂಲಕಂ |**
**ಕರಂಭಾದ್ಯಾನಿ ಚಾನ್ಯಾನಿ ಹೀನಾನಿ ರಸಗಂಧತಃ || ೧೨ ||**

**ಶ್ರಾದ್ಧಕರ್ಮಣಿ ವರ್ಜ್ಯಾನಿ ಕಾರಣಂ ಚಾತ್ರ ವಕ್ಷ್ಯತೇ |**
**ಪುರಾ ದೇವಾಸುರೇ ಯುದ್ಧೇ ನಿರ್ಜಿತಸ್ಯ ಬಲೇಃ ಸುರೈಃ || ೧೩ ||**

**ವ್ರಣೇಭ್ಯೋ ವಿಸ್ಫುರಂತೋ ವೈ ಪತಿತಾ ರಕ್ತಬಿಂದವಃ |**
**ತತ ಏತಾನಿ ವರ್ಜ್ಯಾನಿ ಶ್ರಾದ್ಧಕರ್ಮಣಿ ನಿತ್ಯಶಃ || ೧೪ ||**

**ಅಥ ವೇದೋಕ್ತನಿರ್ಯಾಸಾನ್ ಲವಣಾನ್ಯೂಷರಾಣಿ ಚ |**
**ಶ್ರಾದ್ಧಕರ್ಮಣಿ ವರ್ಜ್ಯಾನಿ ಯಾಶ್ಚ ನಾರ್ಯೋ ರಜಸ್ವಲಾಃ || ೧೫ ||**

---

೧೧. ಸುರಸವಾದ ಬಿದರು ಮೂಲಿಕೆ ಅಥವಾ ವಂಶಪಾತ್ರೆ, ಮತ್ತೀಗಿಡದ ವಸ್ತು ಮತ್ತು ಮಾರವಳಿ ಹುಲ್ಲು ಇವುಗಳನ್ನು ಶ್ರಾದ್ಧದಲ್ಲಿ ಉಪಯೋಗಿಸಬಹುದು. ಈಗ ತ್ಯಾಜ್ಯವಾದ ವಸ್ತುಗಳನ್ನು ಹೇಳುವೆನು ಕೇಳಿರಿ.

೧೨. ಸಣ್ಣದಾದ ಬೆಳ್ಳುಳ್ಳಿ, ದೊಡ್ಡ ಬೆಳ್ಳುಳ್ಳಿ, ಈರುಳ್ಳಿ, ದಾಸವಾಳಪುಷ್ಪ, ಕಾಡುಹಿಪ್ಪಲಿ ಇವೇ ಮೊದಲಾದವು ರಸದಿಂದಲೂ, ಗಂಧದಿಂದಲೂ ತ್ಯಾಜ್ಯವಾಗಿವೆ.

೧೩–೧೪. ಪೂರ್ವದಲ್ಲಿ ಹೇಳಿದ ವಸ್ತುಗಳನ್ನು ಶ್ರಾದ್ಧಕರ್ಮದಲ್ಲಿ ಉಪಯೋಗಿಸಬಾರದು. ಏಕೆಂದರೆ, ಪೂರ್ವದಲ್ಲಿ ದೇವಾಸುರರು ಹೋರಾಡಿದರು. ಆಗ ಬಲಿಚಕ್ರವರ್ತಿಯ ಪಕ್ಷದವರು ದೇವತೆಗಳಿಂದ ಸೋತುಹೋದರು. ಶತ್ರುಪಕ್ಷದವರಾದ ರಾಕ್ಷಸರ (ಗಾಯ) ವ್ರಣಗಳಿಂದ ಕೆಳಗೆ ಬಿದ್ದ ರಕ್ತಬಿಂದುಗಳು ಈರುಳ್ಳಿ ಮೊದಲಾದ ವಸ್ತುಗಳಾಗಿ ಸಂಭವಿಸಿರುತ್ತವೆ. ಆದುದರಿಂದ ಅವುಗಳನ್ನು ಶ್ರಾದ್ಧಕರ್ಮದಲ್ಲಿ ತ್ಯಾಗಮಾಡಬೇಕು.

೧೫. ನಿರ್ಮಲವಾದ ಪ್ರದೇಶಗಳಲ್ಲಿ ವೇದೋಕ್ತವಾದ ಶ್ರಾದ್ಧಕರ್ಮವನ್ನು ಮಾಡಬೇಕು. ಶ್ರೀವೇಷ್ಟಕಗಳು ಅಂದರೆ ಮರದಧೂಮ, ಉಪ್ಪು, ಮಣ್ಣು, ರಜಸ್ವಲೆಯರು ಇವರಿರುವ ಪ್ರದೇಶಗಳನ್ನು ಬಿಟ್ಟು ಸ್ವಚ್ಛವಾದ ಸ್ಥಳಗಳಲ್ಲಿ ಶ್ರಾದ್ಧವನ್ನು ಮಾಡಬೇಕು.

ದುರ್ಗಂಧಂ ಫೇನಿಲಂ ಚೈವ ತಥಾ ವೈ ಪಲ್ವಲೋದಕಂ ।
ನ ಲಭೇದ್ಯತ್ರ ಗೌಸ್ತೃಪ್ತಿಂ ನಕ್ತಂ ಯಚ್ಚೈವ ಗೃಹ್ಯತೇ ॥ ೧೬ ॥

ಆವಿಕಂ ಮಾರ್ಗಮೌಷ್ಟ್ರಂ ಚ ಸರ್ವಮೇಕಶಫಂ ಚ ಯತ್ ।
ಮಾಹಿಷಂ ಚಾಮರಂ ಚೈವ ಪಯೋ ವರ್ಜ್ಯಂ ವಿಜಾನತಾ ॥ ೧೭ ॥

ಅತಃ ಪರಂ ಪ್ರವಕ್ಷ್ಯಾಮಿ ವರ್ಜ್ಯಾನ್ ದೇಶಾನ್ ಪ್ರಯತ್ನತಃ ।
ನ ದ್ರಷ್ಟವ್ಯಂ ಚ ಯೈಃ ಶ್ರಾದ್ಧಂ ಶೌಚಾಶೌಚಂ ಚ ಕೃತ್ಸ್ನಶಃ ॥ ೧೮ ॥

ವನ್ಯಮೂಲಫಲಾಹಾರೈಃ ಶ್ರಾದ್ಧಂ ಕುರ್ಯಾತ್ತು ಶ್ರದ್ಧಯಾ ।
ರಾಷ್ಟ್ರಮಿಷ್ಟಮವಾಪ್ನೋತಿ ಸ್ವರ್ಗಂ ಮೋಕ್ಷಂ ಯಶಸ್ಕರಂ ॥ ೧೯ ॥

---

೧೬. ದುರ್ಗಂಧವೂ, ನೊರೆಯೂ ಇರುವ ಸ್ಥಾನಗಳಲ್ಲಿ ಶ್ರಾದ್ಧವನ್ನು ಮಾಡಬಾರದು. ಸಣ್ಣ ಹೊಂಡದ ಜಲವನ್ನು ಶ್ರಾದ್ಧಕ್ಕೆ ಉಪಯೋಗಿಸಬಾರದು. ಹಸುಗಳು ತೃಪ್ತಿಹೊಂದದ ಸ್ಥಾನಗಳಲ್ಲಿ ಪಿತೃಕಾರ್ಯವನ್ನು ಮಾಡಬಾರದು.

೧೭. ಜ್ಞಾನಿಯಾದ ಯಜಮಾನನು ಶ್ರಾದ್ಧಕಾರ್ಯಗಳಲ್ಲಿ ಕುರಿ, ಆಡು, ಮೃಗ, ಒಂಟೆ, ಒಂದೇ ಗೊರಸುಳ್ಳ ಪ್ರಾಣಿಗಳು, ಎಮ್ಮೆ, ಚಮರೀಮೃಗ ಇವುಗಳ ಹಾಲು ಮೊಸರನ್ನು ಉಪಯೋಗಿಸಬಾರದು.

೧೮. ಈಗ ಶ್ರಾದ್ಧಕರ್ಮಗಳನ್ನು ಮಾಡಬಾರದ ನಿಷಿದ್ಧಸ್ಥಾನಗಳನ್ನು ಪ್ರಯತ್ನಪೂರ್ವಕವಾಗಿ ನಿರೂಪಿಸುವೆನು ಕೇಳಿರಿ. ಶೌಚಾಶೌಚಗಳನ್ನು ವಿಚಾರ ಮಾಡದೆಯೆ ಅಶುಚಿಯಾದ ಸ್ಥಾನದಲ್ಲಿ ಮಾಡಿದ ಕಾರ್ಯವನ್ನು ಪಿತೃಗಳು ನೋಡುವುದೂ ಇಲ್ಲ.

೧೯. ವನದಲ್ಲಿ ಸಿಕ್ಕುವ ಕಂದಮೂಲ, ಗೆಡ್ಡೆಗೆಣಸು, ಫಲಗಳು ಇವುಗಳಿಂದ ಭಕ್ತಿಪೂರ್ವಕ ಶ್ರಾದ್ಧಕರ್ಮಗಳನ್ನು ಮಾಡಿದರೆ ಪುರುಷರು ಇಷ್ಟವಾದ ರಾಜ್ಯ, ಕೋಶ, ಸ್ವರ್ಗ, ಮೋಕ್ಷ, ಕೀರ್ತಿ ಇವೇ ಮೊದಲಾದವನ್ನು ಹೊಂದುವರು.

ಅನಿಷ್ಟಶಬ್ದಸಂಕೀರ್ಣಂ ಜಂತುವ್ಯಾಪ್ತಮಥಾಪಿ ವಾ ।
ಪೂತಿಗಂಧಾಂ ತಥಾ ಭೂಮಿಂ ಶ್ರಾದ್ಧಕರ್ಮಣಿ ವರ್ಜಯೇತ್ ॥ ೨೦ ॥

ಷದ್ಯಃ ಸಾಗರಪರ್ಯಂತಾ ದ್ವಾರಂ ದಕ್ಷಿಣಪೂರ್ವತಃ ।
ತ್ರಿಶಂಕುಂ ವರ್ಜಯೇದ್ದೇಶಂ ಸರ್ವಂ ದ್ವಾದಶಯೋಜನಂ ॥ ೨೧ ॥

ಉತ್ತರೇಣ ಮಹಾನದ್ಯಾ ದಕ್ಷಿಣೇನ ಚ ಕೈಕಟಾತ್ ।
ದೇಶಸ್ತ್ರೈಶಂಕವೋ ನಾಮ ವರ್ಜಿತಃ ಶ್ರಾದ್ಧಕರ್ಮಣಿ ॥ ೨೨ ॥

ಕಾರಂಕರಾಃ ಕಲಿಂಗಾಶ್ಚ ಸಿಂಧೋರುತ್ತರಮೇವ ಚ ।
ಪ್ರನಷ್ಟಾಶ್ರಮಧರ್ಮಾಶ್ಚ ವರ್ಜ್ಯಾ ದೇಶಾಃ ಪ್ರಯತ್ನತಃ ॥ ೨೩ ॥

ನಗ್ನಾದಯೋ ನ ಪಶ್ಯೇಯುಃ ಶ್ರಾದ್ಧಮೇವ ವ್ಯವಸ್ಥಿತಂ ।
ಗಚ್ಛಂತಿ ತೈಸ್ತೈರ್ದೃಷ್ಟಾನಿ ನ ಪಿತೄನ್ನ ಪಿತಾಮಹಾನ್ ॥ ೨೪ ॥

---

೨೦ ಕಠೋರವಾದ ಧ್ವನಿಯಿಂದ ಸಹಿತವೂ ದುಷ್ಟಪ್ರಾಣಿಗಳಿಂದ ವ್ಯಾಪ್ತವೂ ದುರ್ಗಂಧದಿಂದ ಅಸಹ್ಯವೂ ಆದ ಸ್ಥಾನಗಳಲ್ಲಿ ಪಿತೃಕರ್ಮಗಳನ್ನು ಮಾಡದೆ ಆ ಪ್ರದೇಶಗಳನ್ನು ತ್ಯಾಗಮಾಡಬೇಕು.

೨೧. ಸಮುದ್ರದವರೆಗೂ ನದಿಗಳಿಂದ ವ್ಯಾಪ್ತವೂ, ಆಗ್ನೇಯಮೂಲೆಯ ದ್ವಾರಗತವೂ, ದ್ವಾದಶಯೋಜನ ವಿಸ್ತೀರ್ಣವೂ ಆದ ತ್ರಿಶಂಕುದೇಶದಲ್ಲಿ ಶ್ರಾದ್ಧ ಕರ್ಮವನ್ನು ಮಾಡಬಾರದು.

೨೨. ಮಹಾನದಿಯ ಉತ್ತರಭಾಗಗತವೂ, ಕೈಕಟದೇಶದ ದಕ್ಷಿಣದಿಗ್ಗತವೂ ಆದ ತ್ರಿಶಂಕುದೇಶವನ್ನು ಶ್ರಾದ್ಧಕರ್ಮದಿಂದ ಬಿಡಬೇಕು.

೨೩. ಕಾರಂಕರ, ಕಲಿಂಗ, ಸಿಂಧುವಿನ ಉತ್ತರಭಾಗ, ವರ್ಣಾಶ್ರಮವಿರಹಿತವೂ ಆದ ದೇಶಗಳನ್ನು ಪ್ರಯತ್ನಪೂರ್ವಕವಾಗಿ ಶ್ರಾದ್ಧಕರ್ಮದಲ್ಲಿ ತ್ಯಾಗ ಮಾಡಬೇಕು. ಇವು ವರ್ಜ್ಯಗಳಾಗಿವೆ.

೨೪. ದಿಗಂಬರಾದಿಗಳು ಶ್ರಾದ್ಧವನ್ನು ನೋಡಬಾರದೆಂದು ವ್ಯವಸ್ಥಿತವಾದ ವಿಷಯುವಾಗಿದೆ. ಪಾಷಂಡಾದಿಗಳು ನೋಡಿದ ಶ್ರಾದ್ಧಗಳು ಪಿತೃಪಿತಾಮಹಾದಿಗಳಿಗೆ ಹೋಗಿ ಸೇರುವುದಿಲ್ಲ. ವ್ಯರ್ಥವಾಗುವುದು.

|| ಶಂಯುರುವಾಚ ||

ನಗ್ನಾದೀನ್ ಭಗವನ್ ಸಂವ್ಯಂಜ್ಯಮಾದ್ಯ ಪರಿಪೃಚ್ಛತಃ ।
ಕಥಯ ದ್ವಿಜಮುಖ್ಯಾಗ್ರ ವಿಸ್ತರೇಣ ಯಥಾತಥಂ || ೨೫ ||

ಏವಮುಕ್ತೋ ಮಹಾತೇಜಾ ಬೃಹಸ್ಪತಿರುವಾಚ ತಂ ।
ಸರ್ವೇಷಾಮೇವ ಭೂತಾನಾಂ ತ್ರಯೀಸಂವರಣಂ ಸ್ಮೃತಂ || ೨೬ ||

ಪರಿತ್ಯಜತಿ ಯೋ ಮೋಹಾತ್ತೇ ವೈ ನಗ್ನಾ ದ್ವಿಜೋತ್ತಮಾಃ ।
ಪ್ರಲೀಯತೇ ನರೋ ಯಃ ಸ್ಯಾನ್ನಿರಾಲಂಬಶ್ಚ ಯೋ ವೃಷಃ || ೨೭ ||

ವೃಷಂ ಯಶ್ಚ ಪರಿತ್ಯಜ್ಯ ಮೋಕ್ಷಮನ್ಯತ್ರ ಮಾರ್ಗತಿ ।
ವೃಷೋ ವೇದಸಮಸ್ತಸ್ಮಿನ್ ಯೋ ವೈ ಸಮ್ಯಂಜ್ಞ ಪಶ್ಯತಿ || ೨೮ ||

---

೨೫. ಶಂಯುಮುನಿಯು ಹೇಳಿದನು:–ಮಹಾನುಭಾವನೂ, ಬ್ರಾಹ್ಮಣೋತ್ತಮನೂ ಆದ ಎಲೈ ಮುನಿಯೇ, ದಿಗಂಬರರೇ ಮೊದಲಾದವರು ಯಾರು ? ಅವರು ಪೂರ್ವದಲ್ಲಿ ಯಾರಾಗಿದ್ದರು ? ಅವರು ಹೀಗಾಗಲು ಕಾರಣವೇನು ? ಎಂಬುದನ್ನು ಕೇಳುವ ನನಗೆ ಈ ವಿಷಯಗಳನ್ನು ವಿಸ್ತಾರವಾಗಿಯೂ, ಯಥಾಸ್ಥಿತವಾಗಿಯೂ ತಿಳಿಸುವನಾಗು ಎಂದು ಹೇಳಿದನು.

೨೬. ಹೀಗೆ ಶಂಯುಮುನಿಯು ಕೇಳಲಾಗಿ ಬೃಹಸ್ಪತಿಗಳು ಹೇಳಿದ್ದೇನೆಂದರೆ ಸಮಸ್ತ ಭೂತಗಳಿಗೂ ವೇದತ್ರಯಗಳೇ ಆವರಕವಾಗಿವೆ.

೨೭. ಆದುದರಿಂದ ಈ ಲೋಕದಲ್ಲಿ ಯಾವನು ಅಜ್ಞಾನದಿಂದ ವೇದಗಳನ್ನು ತ್ಯಾಗಮಾಡುವನೋ ವೇದಬಾಹ್ಯನಾದ ಅವನೇ ನಗ್ನನಾಗುವನು. ಮತ್ತು ಯಾವ ಪುರುಷನು ವಿಷಯಸುಖಗಳಲ್ಲಿಯೇ ಮಗ್ನನಾಗುವನೋ ಅವನು ಧರ್ಮಗಳಿಗೆ ನಿರಾಶ್ರಯನಾಗುವನು. ಮತ್ತು ಧರ್ಮಮುಕ್ತನಾಗುವನು.

೨೮. ಯಾವ ಪುರುಷನು ಧರ್ಮವನ್ನು ತ್ಯಜಿಸಿ ಮೋಕ್ಷವನ್ನು ಬೇರೆ (ವಿಧದಿಂದ) ಉಪಾಯಗಳಿಂದ ಸಾಧಿಸುವನೋ ಅವನೇ ನಗ್ನನಾಗುವನು. ಧರ್ಮವು ವೇದಗಳಿಗೆ ಸಮವಾಗಿದೆ. ಯಾವನು ಹೀಗೆ ಭಾವಿಸುವುದಿಲ್ಲವೋ ಅವನೇ ಪಾಷಂಡಿಯಾಗುವನು.

ಬ್ರಾಹ್ಮಣಾಃ ಕ್ಷತ್ರಿಯಾ ವೈಶ್ಯಾಃ ವೃಷಲಾಶ್ಚೈವ ಸರ್ವಶಃ ।
ಪುರಾ ದೇವಾಸು ಯುದ್ಧೇ ನಿರ್ಜಿತೈರಸುರೈಸ್ತದಾ ॥ ೨೯ ॥

ಪಾಷಂಡವೈಕೃತಸ್ಥಾನೇ ನೈಷಾ ಸೃಷ್ಟಿಃ ಸ್ವಯಂಭುವಾ ।
ದ್ವಿಶ್ರಾದ್ಧಕಶ್ಚ ನಿರ್ಗ್ರಂಥಾಃ ಶಾಕ್ಯಾಃ ಪುಷ್ಟಿಕಲಂಶಕಾಃ ॥ ೩೦ ॥

ಯೇ ಧರ್ಮಂ ನಾನುವರ್ತಂತೇ ತೇ ವೈ ನಗ್ನಾದಯೋ ಜನಾಃ ।
ವೃಥಾ ಜಟೀ ವೃಥಾ ಮುದ್ರೀ ವೃಥಾ ನಗ್ನಶ್ಚ ಯೋ ದ್ವಿಜಃ ॥ ೩೧ ॥

ವೃಥಾ ವ್ರತೀ ವೃಥಾ ಜಾಪೀ ತೇ ವೈ ನಗ್ನಾದಯೋ ಜನಾಃ ।
ಕುಲಂಧಮಾ ನಿಷಾದಾಶ್ಚ ತಥಾ ಪುಷ್ಟಿವಿನಾಶಕಾಃ ॥ ೩೨ ॥

ಕೃತಕರ್ಮಾಕ್ಷಿತಾಸ್ತ್ವೇತೇ ಕುಪಥಾಃ ಪರಿಕೀರ್ತಿತಾಃ ।
ಏಭಿರ್ನಿರ್ವೃತ್ತಂ ದೃಷ್ಟಂ ವಾ ಶ್ರಾದ್ಧಂ ಗಚ್ಛಂತಿ ಮಾನವಾಃ ॥ ೩೩ ॥

---

೨೯–೩೦. ಪೂರ್ವದ ದೇವಾಸುರರ ಯುದ್ಧದಲ್ಲಿ ಪರಾಜಿತರಾದ ಅಸುರರು, ಕೋಪದಿಂದ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರರೆಂಬ ನಾಲ್ಕು ವರ್ಣದವರನ್ನೂ ಹೀಗೆ ಕರ್ಮಭ್ರಷ್ಟರೂ, ವೇದಬಾಹ್ಯರೂ ಆದ ನಗ್ನರನ್ನಾಗಿ ಮಾಡಿದರು. ಈ ಪಾಷಂಡಿಗಳೂ, ವಿಕಾರಿಗಳೂ ಆದ ಈ ಸೃಷ್ಟಿಯು ಬ್ರಹ್ಮದೇವನು ಮಾಡಿದ ಸೃಷ್ಟಿಯಲ್ಲ. ಅಸುರರು ಮಾಡಿದ ಸೃಷ್ಟಿಯಾಗಿದೆ. ಎರಡುಸಲ ಶ್ರಾದ್ಧ ಮಾಡುವವನೂ, ನಗ್ನನೂ (ದಿಗಂಬರನೂ), ಶಾಕ್ಯನೂ, ಪುಷ್ಟಿಕನೂ, ಕಲಶಂಕನೂ ಇವರೆಲ್ಲರೂ ಏಕಜಾತೀಯರಾಗಿರುವರು.

೩೧–೩೨ ಯಾರು ಪ್ರಾಚೀನಧರ್ಮವನ್ನು ತ್ಯಾಗಮಾಡುವರೋ ಮತ್ತು ಯಾವ ಬ್ರಾಹ್ಮಣರು ವ್ಯರ್ಥವಾಗಿ ಜಟಾಧಾರಿಗಳಾಗುವರೋ, ನಿರರ್ಥಕವಾಗಿ ಮುದ್ರಾಧಾರಿಗಳಾಗುವರೋ ವ್ಯರ್ಥವಾಗಿ ನಗ್ನರಾಗುವರೋ ಮತ್ತು ನಿಷ್ಕಾರಣವಾಗಿ ವ್ರತಿಗಳಾಗುವರೋ, ನಿರರ್ಥಕವಾಗಿ ಜಪತಪಾದಿಗಳನ್ನು ಮಾಡುವರೋ ಅವರೇ ನಗ್ನರೂ, ಕುಲಾಧಮರೂ, ಬೇಡರೂ, ಧರ್ಮನಾಶಕರೂ ಆಗಿರುವರು.

೩೩. ಪೂರ್ವೋಕ್ತರಾದ ಪುರುಷರು ಕುಮಾರ್ಗಿಗಳೆಂದೂ, ಕರ್ಮಭ್ರಷ್ಟರೆಂದೂ ಪ್ರಖ್ಯಾತರಾಗಿರುವರು. ಈ ಮನುಷ್ಯರು ಮಾಡಿದ ಕರ್ಮಗಳೂ ನೋಡಿದ ಶ್ರಾದ್ಧಾದಿಗಳೂ ವ್ಯರ್ಥವಾಗುತ್ತವೆ. ಬೂದಿಯಲ್ಲಿ ಮಾಡಿದ ಹೋಮದಂತೆ ನಿರರ್ಥಕವಾಗುವುವು

ಬ್ರಹ್ಮಘ್ನಾಶ್ಚ ಕೃತಘ್ನಾಶ್ಚ ನಾಸ್ತಿಕಾ ಗುರುತಲ್ಪಗಾಃ ।
ದಸ್ಯವಶ್ಚ ನೃಶಂ ಸಾಶ್ಚ ದರ್ಶನೇನೈವ ವರ್ಜಿತಾಃ ॥ ೩೪ ॥

ಯೇ ಚಾನ್ಯೇ ಪಾಪಕರ್ಮಾಣಃ ಸರ್ವಾಂಸ್ತಾನ್ ಪರಿವರ್ಜಯೇತ್ ।
ದೇವದೇವರ್ಷಿನಿಂದಾಯಾಂ ರತಾಶ್ಚೈವ ವಿಶೇಷತಃ ॥ ೩೫ ॥

ಅಸುರಾನ್ ಯಾತುಧಾನಾಂಶ್ಚ ದೃಷ್ಟಮೇಭಿರ್ವ್ರಜಂತ್ಯುತ ।
ಬ್ರಾಹ್ಮಂ ಕೃತಯುಗಂ ಪ್ರೋಕ್ತಂತ್ರೇತಾ ತು ಕ್ಷತ್ರಿಯಂ ಸ್ಮೃತಂ ॥ ೩೬ ॥

॥ ಪಿತರಃ ಊಚುಃ ॥

ವೈಶ್ಯಂ ದ್ವಾಪರಮಿತ್ಯಾಹುಃ ಶೂದ್ರಂ ಕಲಿಯುಗಂ ಸ್ಮೃತಂ ।
ವೇದಾಃ ಕೃತಯುಗೇ ಪೂಜ್ಯಾಸ್ತ್ರೇತಾಯಾಂ ತು ಸುರಾಸ್ತಥಾ ॥ ೩೭ ॥

---

೩೪. ಬ್ರಹ್ಮಘಾತುಕರೂ, ಉಪಕಾರಸ್ಮರಣೆಯಿಲ್ಲದವರೂ, ನಾಸ್ತಿಕರೂ, ಗುರುಪತ್ನಿಗಮನವನ್ನು ಮಾಡಿದವರೂ, ಚೋರರೂ, ಕ್ರೂರರೂ ಇವರು ದರ್ಶನಕ್ಕೆ ಅನರ್ಹರಾಗಿರುವರು

೩೫. ಯಾರು ಪಾಪಕರ್ಮಗಳಲ್ಲಿ ಆಸಕ್ತರಾಗಿರುವರೋ ಮತ್ತು ದೇವತೆಗಳು ದೇವರ್ಷಿಗಳು, ಪಿತೃಗಳು ಇವರನ್ನು ನಿಂದಿಸುವರೋ ಅವರನ್ನು ಸಂಪೂರ್ಣವಾಗಿ ತ್ಯಾಗವಮಾಡಬೇಕು.

೩೬–೩೭. ಪಿತೃಗಳು ಹೇಳಿದರು :—ಆದುದರಿಂದ ಅಸುರರೂ, ರಾಕ್ಷಸರೂ ನೋಡಿದ ಶ್ರಾದ್ಧವು ವ್ಯರ್ಥವಾಗುವುದು. ಕೃತಯುಗಕ್ಕೆ ಬ್ರಹ್ಮಯುಗವೆಂದೂ, ತ್ರೇತಾಯುಗಕ್ಕೆ ಕ್ಷತ್ರಿಯಯುಗವೆಂದೂ, ದ್ವಾಪರಯುಗಕ್ಕೆ ವೈಶ್ಯಯುಗವೆಂದೂ, ಕಲಿಯುಗಕ್ಕೆ ಶೂದ್ರಯುಗವೆಂದೂ ಸಂಜ್ಞೆಗಳು ಪ್ರಾಪ್ತವಾಗಿವೆ. ಅಂದರೆ ಕೃತಯುಗ ದಲ್ಲಿ ಯಜ್ಞಯಾಗಾದಿಕರ್ಮಗಳೂ, ತ್ರೇತಾಯುಗದಲ್ಲಿ ಯುದ್ಧಕಾರ್ಯಗಳೂ, ದ್ವಾಪರಯುಗದಲ್ಲಿ ವ್ಯಾಪಾರಾದಿವೈಶ್ಯವೃತ್ತಿಗಳೂ, ಕಲಿಯುಗದಲ್ಲಿ ಶೂದ್ರರೆ ಸನಾತನ ವಿರುದ್ಧ ಧರ್ಮಗಳೂ ವಿಶೇಷವಾಗಿರುವುವು.

ಯುದ್ಧಾನಿ ದ್ವಾಪರೇ ನಿತ್ಯಂ ಪಾಷಂಡಾಶ್ಚ ಕಲೌ ಯುಗೇ।
ಅಪಮಾನಾಪವಿತ್ರಶ್ಚ ಕುಕ್ಕುಟೋ ಗ್ರಾಮಸೂಕರಃ ॥ ೩೮ ॥

ಶ್ವಾ ಚೈವ ದರ್ಶನಾದೇವ ಹಂತಿ ಶ್ರಾದ್ಧಂ ನ ಸಂಶಯಃ।
ಶಾವಸೂತಕಸಂಸ್ಪೃಷ್ಟೋ ದೀರ್ಘರೋಗಿಭಿರೇವ ಚ ॥ ೩೯ ॥

ಮಲಿನೈಃ ಪತಿತೈಶ್ಚೈವ ನ ದ್ರಷ್ಟವ್ಯಂ ಕಥಂಚನ।
ಅನ್ನಂ ಪಶ್ಯೇಯುರೇತೇ ವೈ ನೈತಶ್ಚಾಽದ್ಧವ್ಯಕವ್ಯಯೋಃ ॥ ೪೦ ॥

ತತ್ಸಂಸ್ಪೃಷ್ಟಂ ಪ್ರದಾನಾರ್ಥಂ ಸಂಸ್ಕಾರಶ್ಚಾಪದೋ ಭವೇತ್।
ಹವಿಷಾಂ ಸಂಹತಾನಂ ತು ಪೂರ್ವಮೇವ ವಿವರ್ಜಿತಂ ॥
ಮೃತ್ಸಂಯುಕ್ತಾಭಿರದ್ಭಿಶ್ಚ ಪ್ರೋಕ್ಷಣಂ ಚ ವಿಧೀಯತೇ ॥ ೪೧ ॥

---

೩೮. ಕೃತಯುಗದಲ್ಲಿ ವೇದಗಳಿಗೆ ಪೂಜ್ಯತೆಯೂ, ತ್ರೇತಾಯುಗದಲ್ಲಿ ದೇವತೆಗಳಿಗೆ ಮರ್ಯಾದೆಯೂ, ದ್ವಾಪರಯುಗದಲ್ಲಿ ಯುದ್ಧಗಳಿಗೆ ಪ್ರಾಶಸ್ತ್ಯವೂ, ಕಲಿಯುಗದಲ್ಲಿ ಅಯೋಗ್ಯರಿಗೆ ಶ್ರೇಷ್ಠತೆಯೂ ಉಂಟಾಗುವುವು.

೩೯. ಅಪಮಾನದಿಂದ ಅಪವಿತ್ರನಾದ ಪುರುಷನೂ ಕೋಳಿ, ನಾಯಿ, ಹಂದಿ ಇವುಗಳ ದರ್ಶನವಾದರೆ ಶ್ರಾದ್ಧಘಾತುಕವಾಗುವುದು. ಇದರಂತೆಯೇ ಶವಸಂಪರ್ಕವೂ, ಸೂತಕಸ್ಪೃಷ್ಟವೂ, ದೀರ್ಘರೋಗಿಸಂಬಂಧಿಯೂ ಆದ ಶ್ರಾದ್ಧವು ವ್ಯರ್ಥವಾಗುವುದು.

೪೦. ಮಲಿನರೂ ಪತಿತರೂ ಮೊದಲಾದವರು ಶ್ರಾದ್ಧವನ್ನು ನೋಡಕೂಡದು. ಪತಿತಸೂಕರಾದಿಗಳು ಶ್ರಾದ್ಧಾನ್ನವನ್ನು ನೋಡಿದರೆ ಅದನ್ನು ತ್ಯಾಗಮಾಡಬೇಕು. ಇದು ಪಿತೃಗಳ ಉದ್ದೇಶ್ಯಕವಾದ ಕವ್ಯದಲ್ಲಿಯೂ, ದೇವತೋದ್ದೇಶ್ಯಕಗಳಾದ ಹವ್ಯ ಕರ್ಮದಲ್ಲಿಯೂ ನಿಷಿದ್ಧವಾಗಿದೆ

೪೧. ಹಾಗೆ ಸೂಕರಾದಿಗಳಿಂದ ಸಂಸ್ಪೃಷ್ಟವಾದ ಪ್ರಧಾನ ವಸ್ತುವನ್ನು ಹೋಮಮಾಡಬಾರದು. ಹಾಗೆ ಮಾಡಿದರೆ ಯಜಮಾನನು ಅರಣ್ಯದಲ್ಲಿ ದುಷ್ಟ ಮೃಗವಾಗಿ ಜನಿಸುವನು. ಅಂತಹ ಸಂದರ್ಭಗಳಲ್ಲಿ ಶುದ್ಧಿಮಾಡಬೇಕು. ಇಲ್ಲದಿದ್ದರೆ ಆ ಪದಾರ್ಥಗಳನ್ನು ತ್ಯಜಿಸಬೇಕು. ಆ ಶುದ್ಧಿಯು ಮೃತ್ತು, ಜಲ, ಪ್ರೋಕ್ಷಣ, ಇವುಗಳಿಂದ ಆಗುವುದು.

**ಸಿದ್ಧಾರ್ಥಕೈಃ ಕೃಷ್ಣತಿಲೈಃ ಕಾರ್ಯಂ ವಾಪ್ಯವಕೀರಣಂ |**
**ಗುರುಸೂರ್ಯಾಗ್ನಿವಸ್ತೂನಾಂ ದರ್ಶನಂ ವಾಪಿ ಯತ್ನತಃ || ೪೨ ||**

**ಆಸನಾರೂಢಮಾನೇಷು ಪಾದೋಪಹತಮೇವ ಚ |**
**ಅಮೇಧ್ಯೈರ್ಜಂಗಮೈರ್ದೃಷ್ಟಂ ಶುಷ್ಕಂ ಪರ್ಯುಷಿತಂ ಚ ಯತ್ || ೪೩ ||**

**ಅಸಿತಂ ಪರಿದುಷ್ಟಂ ಚ ತಥೈವಾಗ್ರಾವಲೇಹಿತಂ |**
**ಶರ್ಕರಾಕೇಶಪಾಷಾಣೈಃ ಕೀಟೈರ್ಯಚ್ಚಾಪ್ಯುಪದ್ರುತಂ || ೪೪ ||**

**ಪಿಣ್ಯಾಕಮಥಿತಂ ಚೈವ ತಥಾ ತಿಲಯವಾದಿಷು |**
**ಸಿದ್ಧಾಕ್ಷತಾಶ್ಚ ಯೇ ಭಕ್ಷ್ಯಾಃ ಪ್ರತ್ಯಕ್ಷ ಲವಣೀಕೃತಾಃ || ೪೫ ||**

**ವಾಸಸಾ ಚಾವಧೂತಾನಿ ವರ್ಜ್ಯಾನಿ ಶ್ರಾದ್ಧಕರ್ಮಣಿ |**
**ಸಂತಿ ವೇದವಿರೋಧೇನ ಕೇಚಿದ್ವಿಜ್ಞಾನಮಾನಿನಃ || ೪೬ ||**

---

೪೨. ಅಂತಹ ದೋಷಗಳ ಪರಿಹಾರಕ್ಕಾಗಿ ದೋಷಪರಿಹಾಕಗಳಾದ ಕರೀ ಎಳ್ಳನ್ನು ಎರಚಬೇಕು. ಮತ್ತು ಗುರುಗಳು, ಸೂರ್ಯ, ಅಗ್ನಿ, ಮೊದಲಾದ ಪರಿಶುದ್ಧ ವಸ್ತುಗಳನ್ನು ಪ್ರಯತ್ನಪೂರ್ವಕವಾಗಿ ದರ್ಶನಮಾಡಬೇಕು.

೪೩–೪೪. ಪೀಠದ ಮೇಲೆ ಕೂಡುವಾಗ ಪಾದಸಂಪರ್ಕದಿಂದ ದೂಷಿತವೂ ಅಮೇಧ್ಯ ಸಂಪರ್ಕವುಳ್ಳದ್ದೂ, ಪಾಷಂಡಿಗಳಿಂದ ದೃಷ್ಟವೂ ಶುಷ್ಕವೂ ಹಳಸಿ ಹೋಗಿರುವುದೂ ಅತಿ ಕಪ್ಪಗೂ, ಅತಿ ದುಷ್ಟವೂ, ಮೊದಲೇ ರುಚಿ ನೋಡಿರುವುದೂ, ನುರುಜುಕಲ್ಲು, ಕೂದಲು, ಕಲ್ಲುಮಣ್ಣು, ಕಸಕಡ್ಡಿ, ಇವುಗಳಿಂದ ಯುಕ್ತವೂ ಕ್ರಿಮಿ ಕೀಟಗಳಿಂದ ಭಕ್ಷಿತವೂ ಆದ ಪದಾರ್ಥಗಳನ್ನು ಶ್ರಾದ್ಧಕಾರ್ಯಗಳಲ್ಲಿ ಉಪಯೋಗಿಸ ಬಾರದು ಅವು ದೂಷ್ಯವಾಗಿರುತ್ತವೆ

೪೫–೪೬. ಮತ್ತು ಹಿಂಡಿಯಂತೆ ಮಥಿತವಾಗಿಯೂ ತಿಲತಂಡುಲಗಳಿಂದ ಮಿಶ್ರವಾಗಿಯೂ ಮೊದಲೇ ಸಿದ್ಧವಾಗಿಯೂ ಕ್ಷತವಾಗಿಯೂ ಲವಣಮಿಶ್ರವಾಗಿಯೂ ಇರುವ ಭಕ್ಷ್ಯಭೋಜ್ಯಗಳನ್ನು ಶ್ರಾದ್ಧಕರ್ಮದಲ್ಲಿ ತ್ಯಜಿಸಬೇಕು. ಕೆಲವು ವಿಜ್ಞಾನಾಭಿ ಮಾನಿಗಳು ವೇದವಿರುದ್ಧವಾಗಿ ಕಾರ್ಯಗಳನ್ನು ಮಾಡುವರು. ಇವು ನಿಷಿದ್ಧ ವಾಗಿರುವುವು.

**ಅಜಜ್ಞಪತಯೋ ನಾಮ ತೇ ಶ್ರಾದ್ಧಸ್ಯ ಯಥಾ ರಜಃ ।**
**ದಧಿ ಶಾಕಂ ತಥಾ ಭಕ್ಷ್ಯಾಃ ಶುಕ್ತಂ ಚೈವ ವಿವರ್ಜಿತಂ ॥ ೪೭ ॥**

**ವಾರ್ತಾಕಂ ವರ್ಜಯೇದದ್ಯಾತ್ಸರ್ವಾನಭಿಷವಾನಪಿ ।**
**ಸೈಂಧವಂ ಲವಣಂ ಯಚ್ಚ ತಥಾ ಮಾನಸಸಂಭವಂ ॥ ೪೮ ॥**

**ಪವಿತ್ರಂ ಪರಮಂ ಹ್ಯೇತತ್ ಪ್ರತ್ಯಕ್ಷಮಪಿ ವರ್ತತೇ ।**
**ಅಗ್ನೌ ನಿಕ್ಷಿಪ್ಯ ಬಧ್ನೀಯಾದ್ಧಸ್ತೌ ಪ್ರಕ್ಷಿಪ್ಯ ಯತ್ನತಃ ॥ ೪೯ ॥**

**ಗಮಯೇನ್ಮಸ್ತಕಂ ಚೈವ ಬ್ರಹ್ಮತೀರ್ಥಂ ಹಿ ತತ್ಸ್ಮೃತಂ ।**
**ದ್ರವ್ಯಾಣಾಂ ಪ್ರೋಕ್ಷಣಂ ಕಾರ್ಯಂ ತಥೈವಾವಪನಂ ಪುನಃ ॥ ೫೦ ॥**

**ನಿಧಾಯ ಚಾದ್ಭಿಃ ಸಿಂಚೇತ ತಥೈವಾಪ್ಸು ನಿವೇಶನಂ ।**
**ಅರಿಷ್ಟತುಮುಲೇ ಬಿಲ್ವಂ ತ್ರಿಂಗುದಶ್ವದನಾನ್ಯಪಿ ॥ ೫೧ ॥**

---

೪೭. ಪಿತೃಯಜ್ಞಯಾಗಾದಿಗಳಿಗೆ ಅನರ್ಹರಾದ ಅವರು ರಜಸ್ಸಿನಂತೆ ಶ್ರಾದ್ಧ ಘಾತುಕರಾಗುವರು. ಹುಳಿಯಾದ ಮೊಸರು, ಕೊಳತಿರುವ ಕಾಯಿಪಲ್ಯ, ಅನರ್ಹವಾದ ಭಕ್ಷ್ಯ ಹುಳಿಯಾದ ವಸ್ತು ಕಠಿನವಾದ ಭಕ್ಷ್ಯ ಇವುಗಳು ತ್ಯಾಜ್ಯಗಳಾಗಿವೆ.

೪೮–೪೯. ಶ್ರಾದ್ಧಕರ್ಮದಲ್ಲಿ ಬದನೇಕಾಯಿಯನ್ನು ಬಿಡಬೇಕು. ಸಮಸ್ತವಾದ ಸೋಮಲತೆಗಳು (ಸೋಮರಸ) ಸೈಂಧವಲವಣ, ಮಾನಸಸರಸ್ಸಿನಲ್ಲಿ ಜನಿಸಿದ ಪವಿತ್ರವಾದ ವಸ್ತುಗಳು ಇವುಗಳನ್ನು ಶ್ರಾದ್ಧದಲ್ಲಿ ಉಪಯೋಗಿಸಬಹುದು. ಇವು ಪ್ರತ್ಯಕ್ಷವಾಗಿಯೂ ಶುದ್ಧವಾಗಿವೆ ಹಾಗಿಲ್ಲದಿದ್ದರೆ ಅಗ್ನಿಯಿಂದಲೂ ಹಸ್ತದಿಂದಲೂ ಶುದ್ಧಿಮಾಡಬೇಕು

೫೦ ಸಕಲವಸ್ತುಗಳು ಶಿರಸಾ ವಹಿಸಿ ಶುದ್ಧಿಮಾಡಬೇಕು ಮತ್ತು ಗೌರವಿಸಬೇಕು ಶಿರಸ್ಸು ಬ್ರಹ್ಮತೀರ್ಥವಾಗಿದೆ. ಸಕಲ ವಸ್ತುಗಳನ್ನು ಪ್ರೋಕ್ಷಣ ಕ್ಷಾಳನಾದಿಗಳಿಂದ ಶುದ್ಧಿಮಾಡಿ ಉಪಯೋಗಿಸಬೇಕು.

೫೧–೫೨. ಪದಾರ್ಥಗಳನ್ನು ತಂದು ನೀರಿನಿಂದ ಪ್ರೋಕ್ಷಿಸಬೇಕು ಅಥವಾ ಜಲದಲ್ಲಿಡಬೇಕು. ಬೇವು, ಬಿಲ್ವ, ಕಾರೇಗಿಡ, ನಾಯಿಮತ್ತಿ, ಇವುಗಳ ದಳಗಳನ್ನು ಪಂಚ ಪಲ್ಲವಗಳನ್ನು ತಂದು ಧರ್ಮಕಾಯವನ್ನು ಮಾಡುವಂತೆ ಸರ್ವವಸ್ತುಗಳನ್ನು

**ವಿದಲಾನಾಂ ಚ ಸರ್ವೇಷಾಂ ಧರ್ಮವಚ್ಛಾಚಮಿಷ್ಯತೇ ।**
**ತಥಾ ದಂತಾಸ್ಥಿದಾರೂಣಾಂ ಶೃಂಗಾಣಾಂ ಚಾವಲೇಖನಂ ॥ ೫೨ ॥**

**ಸರ್ವೇಷಾಂ ಮೃನ್ಮಯೂನಾಂ ತು ಪುನರ್ದಾಹ ಉದಾಹೃತಃ ।**
**ಮಣಿವಜ್ರಪ್ರವಾಲಾನಾಂ ಮುಕ್ತಾಶಂಖಮಣೇಸ್ಥಥಾ ॥ ೫೩ ॥**

**ಸಿದ್ಧಾರ್ಥಕಾನಾಂ ಕಲ್ಕೇನ ತಿಲಕಲ್ಕೇನ ವಾ ಪುನಃ ।**
**ಸ್ಯಾಚ್ಛಾಚಂ ಸರ್ವವಾಲಾನಾಮಾವಿಕಾನಾಂ ಚ ಸರ್ವಶಃ ॥ ೫೪ ॥**

**ಆವಿಕಾನಾಂ ಚ ಸರ್ವೇಷಾಂ ಮೃದ್ಭಿರದ್ಭಿರ್ವಿಧೀಯತೇ ।**
**ಅದ್ಯಂತಯೋಸ್ತು ಶೌಚಾನಾಮದ್ಭಿಃ ಪ್ರಕ್ಷಾಲನಂ ಪುನಃ ॥ ೫೫ ॥**

**ತಥಾ ಕಾರ್ಪಾಸಿಕಾನಾಂ ಚ ಭಸ್ಮನಾ ಸಮುದಾಹೃತಂ ।**
**ಫಲಪುಷ್ಪಶಲಾಕಾನಾಂ ಪ್ಲಾವನಂ ಚಾದ್ಭಿರಿಷ್ಯತೇ ॥ ೫೬ ॥**

---

ಶುದ್ಧಿಮಾಡಬೇಕು. ಇದರಂತೆಯೇ ದಂತ, ಮೂಳೆ, ದಂಡ, ಕೊಂಬು, ಇವುಗಳಿಂದ ಕೆರದಿದ್ದರೂ ಶುದ್ಧಿಮಾಡಬೇಕು ಅಂದರೆ ಬಿದರುಬುಟ್ಟಿ, ಮರದ ಪಾತ್ರೆ, ದಂತದ ಪಾತ್ರೆ ಇವುಗಳನ್ನು ಉಜ್ಜಿ ಶುದ್ಧಿಮಾಡಬೇಕು.

೫೩. ಮೃಣ್ಮಯ ಪಾತ್ರೆಗಳೆಲ್ಲವನ್ನೂ ಅಗ್ನಿಯಲ್ಲಿ ಸುಟ್ಟು ಶುದ್ಧಿಮಾಡಬೇಕು. ಇದರಂತೆಯೇ ರತ್ನಮಯ ಪಾತ್ರೆಗಳೂ, ವಜ್ರ, ಹವಳ, ಶಂಖ, ಮತ್ತು ಇವುಗಳ ಪಾತ್ರೆಗಳೂ ಅಗ್ನಿಸ್ಪರ್ಶದಿಂದ ಶುದ್ಧಿಯಾಗುವುವು.

೫೪. ಸಾಸವೆ ಮೊದಲಾದ ಪದಾರ್ಥಗಳನ್ನು ಸಾಮಾನ್ಯ ಎಣ್ಣೆಯಿಂದಲೂ, ಎಳ್ಳೆಣ್ಣೆಯಿಂದಲೂ ಶುದ್ಧಿಮಾಡಬೇಕು. ಕುರಿಯ ತುಪ್ಪಟಾದಿಗಳಿಂದ ಮಾಡಿದ ಕಂಬಳಿ ಮೊದಲಾದುವನ್ನು ಜಲದಿಂದ ಶುದ್ಧಿಮಾಡಬೇಕು.

೫೫. ಕುರಿ ತುಪ್ಪಟಗಳಿಂದ ಆದ ಕಂಬಳಿಗಳು ಜಲದಿಂದಲೂ ಮಣ್ಣಿನಿಂದಲೂ ಶುದ್ಧಿಯಾಗುತ್ತವೆ. ಅಗ್ನಿಸ್ಪರ್ಶಾದಿಗಳಿಂದ ಶುದ್ಧಿಮಾಡಿದ ಮಣ್ಯಾದಿಗಳೂ, ಮಣ್ಣಿನಿಂದ ಮಾಡಿದ ವಸ್ತುಗಳೂ ಕೊನೆಯಲ್ಲಿ ಜಲದಿಂದಲೇ ಶುದ್ಧಿಯಾಗುವುವು.

೫೬. ಹತ್ತಿಯಿಂದ ಮಾಡಿದ ಬಟ್ಟೆಗಳು ಭಸ್ಮದಿಂದಲೂ, ಜಲದಿಂದಲೂ ಶುದ್ಧಿಯಾಗುವುವು. ಫಲ, ಪುಷ್ಪ, ಕಾಯಿಪಲ್ಯಗಳು ಉದಕದಲ್ಲಿ ಮಜ್ಜನಮಾಡಿಸುವುದರಿಂದ ನಿರ್ಮಲವಾಗುವುವು.

ಸಂಮಾರ್ಜನಂ ಪ್ರೋಕ್ಷಣಂ ಚ ಭೂಮೇಶ್ಚೈವೋಪಲೇಪನಂ ।
ನಿಷ್ಕ್ರಮ್ಯ ಬಾಹ್ಯತೋ ಗ್ರಾಮಾದ್ವಾಯುಪೂತಾ ವಸುಂಧರಾ ॥ ೫೭ ॥

ಧನುಷ್ಮತ್ಪಕ್ಷಿಣಾಂ ಚೈವ ಮೃದ್ಭಿಃ ಶೌಚಂ ವಿಧೀಯತೇ ।
ಏವಮೇಷ ಸಮುದ್ದಿಷ್ಟಃ ಶೌಚಾನಾಂ ವಿಧಿರುತ್ತಮಃ ॥
ಅತಃ ಪರಂ ಪ್ರವಕ್ಷ್ಯಾಮಿ ತನ್ಮೇ ನಿಗದತಃ ಶೃಣು ॥ ೫೮ ॥

ಪ್ರಾತರ್ಗೃಹಾತ್ಪಶ್ಚಿಮದಕ್ಷಿಣೇನ
ಇಷುಕ್ಷೇಪಂ ಚಾಕ್ಷಮಾತ್ರಂ ಪದಂ ಚ ।
ಕುರ್ಯಾತ್ಪುರೀಷಂ ಶಿರೋವಗುಂಠ್ಯ
ನ ಚ ಸ್ಪೃಶೇತ್ತತ್ರ ಶಿರಃ ಕರೇಣ ॥ ೫೯ ॥

ಶುಷ್ಕೈಸ್ತೃಣೈರ್ವಾ ಕಾಷ್ಠೈರ್ವಾ ಪತ್ರೈರ್ವೇಣುದಲೇನ ವಾ ।
ಮೃನ್ಮಯೈರ್ಭಾಜನೈರ್ವಾಪಿ ತಿರೋಧಾಯ ವಸುಂಧರಾಂ ॥ ೬೦ ॥

---

೫೭ ಭೂಮಿಯನ್ನು ಸಂಮಾರ್ಜನ ಪ್ರೋಕ್ಷಣ, ಸಾರಿಸುವುದು, ಗುಡಿಸುವುದು ಇವುಗಳಿಂದ ಶುದ್ಧಿ ಮಾಡಬೇಕು. ಗೃಹದ ಮತ್ತು ಗ್ರಾಮದ ಹೊರಗಣ ಪ್ರದೇಶಗಳು ಸೂರ್ಯಕಿರಣಗಳಿಂದಲೂ, ವಾತದಿಂದಲೂ ಶುದ್ಧವಾಗಿರುತ್ತವೆ.

೫೮. ಬಿಲ್ಲಿನಿಂದ ಹೊಡೆದ ಪಕ್ಷಿ ಮೊದಲಾದುವುಗಳನ್ನು ಮೃತ್ತಿನಿಂದ ಶುದ್ಧಿ ಮಾಡಬೇಕು. ಹೀಗೆ ಶೌಚಕ್ರಮವು ವಿಹಿತವಾಗಿದೆ. ಇನ್ನುಮುಂದೆ ತಿಳಿಸುವ ವಿಶೇಷ ಸಂಗತಿಗಳನ್ನು ಕೇಳಿರೆಂದನು.

೫೯. ಮನುಷ್ಯನು ಪ್ರಾತಃಕಾಲದಲ್ಲಿ ಎದ್ದು ನೈರುತ್ಯದಿಕ್ಕಿಗೆ ಹೋಗಿ ಬಾಣ ಬೀಳಲು ಯೋಗ್ಯವಾದ ಪ್ರದೇಶದಲ್ಲಿ ಗುಂಡಿಯನ್ನು ತೋಡಿ, ಶಿರೋವೇಷ್ಟನಮಾಡಿಕೊಂಡು ಜಲಮಲಗಳನ್ನು ವಿಸರ್ಜನೆ ಮಾಡಬೇಕು. ಮಲವಿಸರ್ಜನೆ ಮಾಡುವಾಗ ಹಸ್ತದಿಂದ ಶಿರಸ್ಸನ್ನು ಮುಟ್ಟಬಾರದು.

೬೦. ಆ ಗುಂಡಿಯನ್ನು ಒಣಗಿದ ಹುಲ್ಲು. ಕಡ್ಡಿಗಳು, ಬಿದಿರು ಎಲೆಗಳು, ಎಲೆಗಳು, ಮಡಿಕೆಯಚೂರು ಇವುಗಳಿಂದ ಮುಚ್ಚಬೇಕು.

ಉದ್ಧೃತೋದಕಮಾದಾಯ ಮೃತ್ತಿಕಾಂಚೈವ ವಾಗ್ಯತಃ ।
ದಿವಾ ಉದಂಙ್ಮುಖಃ ಕುರ್ಯಾದ್ರಾತ್ರೌ ವೈ ದಕ್ಷಿಣಾಮುಖಃ ॥ ೬೧ ॥

ದಕ್ಷಿಣೇನ ಚ ಹಸ್ತೇನ ಗೃಹ್ಣೀಯಾದ್ವೈ ಕಮಂಡಲುಂ ।
ಶೌಚಂ ಚ ವಾಮಹಸ್ತೇನ ಗುದೇ ತಿಸ್ರಸ್ತು ಮೃತ್ತಿಕಾಃ ॥ ೬೨ ॥

ದಶ ಚಾಪಿ ಪುನರ್ದದ್ಯಾದ್ವಾಮಹಸ್ತಕ್ರಮೇಣ ತು ।
ದ್ವಾಭ್ಯಾಂ ವಾಪಿ ಪುನರ್ದದ್ಯಾದ್ಧಸ್ತಾನಾಂ ಪಂಚ ಮೃತ್ತಿಕಾಃ ॥ ೬೩ ॥

ಮೃದಾ ಪ್ರಕ್ಷಾಲ್ಯ ಪಾದೌ ಚ ಆಚಮ್ಯ ಚ ಯಥಾವಿಧಿ ।
ಆಪಸ್ತ್ಯಾಜ್ಯಾಸ್ತ್ರಯಶ್ಚೈವ ಸೂರ್ಯಾಗ್ನಿಪವನಾಂಭಸಾಂ ॥ ೬೪ ॥

ಕುರ್ಯಾತ್ಸನ್ನಿಹಿತಂ ನಿತ್ಯಂ ಪ್ರಾಜ್ಞಸ್ತೀರ್ಥೇ ಕಮಂಡಲುಂ ।
ಅಸತ್ಕಾರ್ಯಂ ಕಾರ್ಯಮೇತೈರ್ಯಥಾವತ್ಪಾದಧಾವನಂ ॥ ೬೫ ॥

---

೬೧. ಶೌಚಕ್ಕೆ ಹೋಗುವಾಗ ಪಾತ್ರೆಯಲ್ಲಿ ನೀರನ್ನೂ ಮೃತ್ತಿಕೆಯನ್ನೂ ತೆಗೆದುಕೊಂಡು ಹೋಗಿ, ಹಗಲುಕಾಲದಲ್ಲಿ ಉತ್ತರಾಭಿಮುಖನಾಗಿಯೂ, ರಾತ್ರಿವೇಳೆಯಲ್ಲಿ ದಕ್ಷಿಣಾಭಿಮುಖನಾಗಿಯೂ ಕೂತುಕೊಂಡು ಮಲವನ್ನು ವಿಸರ್ಜಿಸಬೇಕು

೬೨. ಬಲಗೈಯಲ್ಲಿ ಪಾತ್ರೆಯನ್ನು ಹಿಡಿದುಕೊಂಡು ಎಡಹಸ್ತದಿಂದ ಗುದಪ್ರಕ್ಷಾಳನೆಯನ್ನು ಮೂರುಸಲ ಮೃತ್ತಿಕೆಯಿಂದಲೂ ಜಲದಿಂದಲೂ ಮಾಡಿಕೊಳ್ಳಬೇಕು.

೬೩. ಪುನಃ ಹತ್ತುಸಲ ಮೃತ್ತಿಕಾಶೌಚವನ್ನು ಮಾಡಬೇಕು. ಎರಡು ಕೈಕಾಲುಗಳಿಗೂ ಐದೈದುಸಲ ಮೃತ್ತಿಕಾಶೌಚಗಳನ್ನು ಮಾಡಿಕೊಂಡು ಶುದ್ಧನಾಗಬೇಕು.

೬೪. ಪುನಃ ಮಣ್ಣಿನಿಂದ ಕೈಕಾಲುಗಳನ್ನು ತೊಳೆದುಕೊಂಡು ಆಚಮನವನ್ನು ಮಾಡಿ, ಶುದ್ಧನಾಗುವನು. ಸೂರ್ಯ, ಅಗ್ನಿ, ಗಾಳಿ, ಇವುಗಳ ಸಂಬಂಧವಿಲ್ಲದ ಜಲವನ್ನು ಬಿಡಬೇಕು. ಅವು ಅಪರಿಶುದ್ಧಗಳು.

೬೫. ಪ್ರಾಜ್ಞನಾದವನು ಝಾಡಿಯಲ್ಲಿ ನೀರನ್ನು ತುಂಬಿ ಸಮೀಪದಲ್ಲಿಯೇ ಇಟ್ಟುಕೊಂಡಿರಬೇಕು. ಅಂತಹ ಜಲವನ್ನು ಪ್ರಕ್ಷಾಳನಾದಿಗಳಿಗೆ ಉಪಯೋಗಿಸಿಕೊಳ್ಳಬೇಕು.

**ಆಚಮನಂ ದ್ವಿತೀಯೇನ ದೇವಕಾರ್ಯಂ ತತಃ ಪರಂ।**
**ಉಪವಾಸಸ್ತ್ರಿರಾತ್ರಂ ತು ದುಷ್ಟಹಸ್ತೇ ಹೃದಾಹೃತಃ ॥ ೬೬ ॥**

**ವಿಪ್ರಕೃಷ್ಟೇನ ಕೃಚ್ಛ್ರೇಣ ಪ್ರಾಯಶ್ಚಿತ್ತಮುದಾಹೃತಂ।**
**ಸ್ಪೃಷ್ಟ್ವಾ ಶ್ವಾನಂ ಶ್ವಪಾಕಂ ವಾ ತಪ್ತಕೃಚ್ಛ್ರಂ ಸಮಾಚರೇತ್ ॥ ೬೭ ॥**

**ಮಾನುಷಾಸ್ಥೀನಿ ಸಂಸ್ಪೃಶ್ಯ ಉಪೋಷ್ಯಂ ಶುದ್ಧಿಕಾರಣಂ।**
**ತ್ರಿರಾತ್ರಮುಕ್ತಂ ಸಸ್ನೇಹಮೇಕರಾತ್ರಮತೋಽನ್ಯಥಾ ॥ ೬೮ ॥**

**ಕಾರಸ್ಕರಾಃ ಪುಲಿಂದಾಶ್ಚ ತಥಾಂಧಶಬರಾದಯಃ।**
**ಪೀತ್ವಾ ಚಾಪೋಭೂತಿಲಯೇ ಗತ್ವಾ ಚೈವ ಯುಗಂಧರಾಂ ॥ ೬೯ ॥**

**ಸಿಂಧೋರುತ್ತರಪರ್ಯಂತಂ ತಥಾ ದಿವ್ಯಂತರೇ ಶತಂ।**
**ಪಾಪದೇಶಾಶ್ಚ ಯೇ ಕೇಚಿತ್ಪಾಪೈರಧ್ಯುಷಿತಾ ಜನೈಃ ॥ ೭೦ ॥**

---

೬೬. ಮೊದಲು ಕೈಕಾಲುಗಳನ್ನು ತೊಳೆದುಕೊಂಡು ಅನಂತರ ಆಚಮನ ವನ್ನು ಮಾಡಿ ದೇವಕಾರ್ಯಗಳನ್ನು ಮಾಡಬೇಕು ಅಶುದ್ಧವಾದ ಕೈಗಳಿಂದ ಪದಾರ್ಥಗಳನ್ನು ಸ್ಪರ್ಶಮಾಡಿದರೆ ಮೂರು ದಿವಸ ಉಪವಾಸವನ್ನು ಮಾಡಬೇಕು.

೬೭. ಅಪವಿತ್ರ ವಸ್ತುಗಳನ್ನು ಸ್ಪರ್ಶಿಸಿದರೆ ಕೃಚ್ಛ್ರಚಾಂದ್ರಾದಿ ವ್ರತಗಳನ್ನು ಆಚರಿಸಬೇಕು. ಇಲ್ಲದಿದ್ದರೆ ಪ್ರಾಯಶ್ಚಿತ್ತವನ್ನಾದರೂ ಮಾಡಿ ಶುದ್ಧನಾಗಬೇಕು. ನಾಯಿಯನ್ನೂ, ಚಂಡಾಲನನ್ನೂ, ಸ್ಪರ್ಶಮಾಡಿದರೆ ಏಳುಸಲ ಕೃಚ್ಛ್ರವನ್ನು ಆಚರಿಸುವುದರಿಂದ ಶುದ್ಧನಾಗುವನು.

೬೮. ಮನುಷ್ಯರ ಮೂಳೆಯನ್ನು ಮುಟ್ಟಿದರೆ ಉಪವಾಸದಿಂದ ಶುದ್ಧಿಯಾಗು ವನು. ಮೂರು ದಿವಸಗಳು ತೈಲಾಭ್ಯಂಜನ ಸ್ನಾನದಿಂದಲೂ, ಒಂದು ದಿವಸದ ಶುದ್ಧೋಪೋಷ್ಯದಿಂದಲೂ ಶುದ್ಧನಾಗುವನು

೬೯. ಕಾರಸ್ಕರರು, ಬೇಡರು, ಅಂಧರು, ಕಿರಾತರು, ಶ್ಮಶಾನ ಮತ್ತು ನೊಗ ಇವುಗಳ ಜಲವನ್ನು ಪಾನಮಾಡಿ ಅಪರಿಶುದ್ಧರಾಗುವರು

೭೦ ಸಿಂಧೂನದಿಯ ಉತ್ತರಭಾಗದಲ್ಲಿರುವ ಕೆಲವು ನೂರಾರು ದೇಶಗಳು ಪಾಪಿ ಗಳು ವಾಸಮಾಡುವ ದೇಶಗಳು. ಪಾಪದೇಶಗಳಾಗಿರುವುವು. ಅವು ತ್ಯಾಜ್ಯವಾಗಿವೆ.

ಶಿಷ್ಟೈಶ್ಚ ವರ್ಜಿತಾ ಯೇ ಚ ಬ್ರಾಹ್ಮಣೈರ್ವೇದಪಾರಗೈಃ ।
ಗತ್ವಾ ದೇಶಾನುಪುಣ್ಯಾಂಸ್ತು ಕೃತ್ಸ್ನಂ ಪಾಪಂ ಸಮಶ್ನುತೇ ॥ ೭೧ ॥

ಮನೋಽವ್ಯಕ್ತಿರಥಾಗ್ನಿಶ್ಚ ಕಾಲೇ ಚೈವೋಪಲೇಪನಂ ।
ವಿಖ್ಯಾಪನಂ ಚ ಶೌಚಾನಾಂ ನಿತ್ಯಮಜ್ಞಾನಮೇವ ಚ ॥ ೭೨ ॥

ಅತೋಽನ್ಯಥಾ ತು ಯಃ ಕುರ್ಯಾನ್ಮೋಹಾಚ್ಛೌಚಸ್ಯ ಸಂಕರಂ ।
ಪಿಶಾಚಾನ್ ಯಾತುಧಾನಾಂಶ್ಚ ಫಲಂ ಗಚ್ಛತ್ಯಸಂಶಯಂ ॥ ೭೩ ॥

ಶೌಚಮಶ್ರದ್ದಧಾನಂಶ್ಚ ಮ್ಲೇಚ್ಛಜಾತಿಷು ಜಾಯತೇ ।
ಅಯಜ್ಞಾಶ್ಚೈವ ಪಾಪೋ ವಾ ತಿರ್ಯಗ್ಯೋನಿಗತೋಽಪಿ ವಾ ॥ ೭೪ ॥

ಶೌಚೇನ ಮೋಕ್ಷಂ ಕುರ್ವಾಣಃ ಸ್ವರ್ಗವಾಸೀ ಭವೇನ್ನರಃ ।
ಶುಚಿಕಾಮಾ ಹಿ ದೇವಾ ವೈ ದೇವೈರೇತದುದಾಹೃತಂ ॥ ೭೫ ॥

---

೭೧. ವೇದಪಾರಂಗತರೂ, ಶಿಷ್ಟರೂ ಆದ ಬ್ರಾಹ್ಮಣರಿಂದ ವರ್ಜಿತವಾದ ದೇಶಗಳು ಪಾಪದೇಶಗಳಾಗಿವೆ. ಅಂತಹ ಪಾಪದೇಶಗಳಿಗೆ ಹೋದರೆ ಸಂಪೂರ್ಣ ಪಾಪಗಳನ್ನು ಹೊಂದುವರು.

೭೨-೭೩. ಮನಶ್ಶುದ್ಧಿ, ಅಗ್ನಿಶುದ್ಧಿ, ಸಕಾಲಶೌಚ, ಶೌಚಶುದ್ಧಿ ಇವುಗಳು ಇಲ್ಲದಿದ್ದರೆ ನಿತ್ಯವೂ ಅಜ್ಞಾನವುಂಟಾಗುವುದು. ಯಾವನು ಅಜ್ಞಾನದಿಂದ ಶೌಚಾಚಾರವಿಹೀನನಾಗಿರುವನೋ ಅವನು ಪಿಶಾಚ, ರಾಕ್ಷಸರು ಹೊಂದುವ ಫಲವನ್ನು ಹೊಂದುವನು.

೭೪. ಶೌಚಾಚಾರಗಳನ್ನು ನಂಬದ ಪುರುಷರು ಮ್ಲೇಂಚ್ಛಜಾತಿಯಲ್ಲಿ ಹುಟ್ಟಿದರು. ಪಂಚಯಜ್ಞಗಳನ್ನು ಮಾಡಿದವನೂ, ಪಾಪಿಗಳೂ ಕೂಡ ಪ್ರಾಣಿಗಳಾಗಿ ಹುಟ್ಟಿ ಪರಾಧೀನರಾಗುವರು.

೭೫. ಪುರುಷನು ಶೌಚಾಚಾರಗಳಿಂದ ಸ್ವರ್ಗವಾಸಿಯಾಗುವನು. ಏಕೆಂದರೆ ದೇವತೆಗಳು ಸದಾ ಶುಚಿಯನ್ನು ಬಯಸುವರು. ಇದಕ್ಕೆ ದೇವತೆಗಳೇ ಉದಾಹರಣೆಯಾಗಿರುವರು.

ಬೀಭತ್ಸಮಶುಚಿಂ ಚೈವ ವರ್ಜಯಂತಿ ಸುರಾಃ ಸದಾ ।
ತ್ರೀಣಿ ಶೌಚಾನಿ ಕುರ್ವಂತಿ ನ್ಯಾಯತಃ ಶುಭಕರ್ಮಣಃ || ೭೬ ||

ಬ್ರಹ್ಮಣ್ಯಾಯಾತಿಥೇಯಾಯ ಶೌಚಯುಕ್ತಾಯ ಧೀಮತೇ ।
ಪಿತೃಭಕ್ತಾಯ ದಾಂತಾಯ ಸಾನುಕ್ರೋಶಾಯ ಚ ದ್ವಿಜಾಃ || ೭೭ ||

ತೈಸ್ತ್ರೈಃ ಪ್ರೀತಾಃ ಪ್ರಯಚ್ಛಂತಿ ಪಿತರೋ ಯೋಗವರ್ಧನಾಃ ।
ಮನಸಾ ಕಾಂಕ್ಷಿತಾನ್ ಕಾಮಾಂಸ್ತ್ರೈಲೋಕ್ಯಪ್ರಭವಾನಿತಿ || ೭೮ ||

ಇತಿ ಶ್ರೀ ಮಹಾಪುರಾಣೇ ವಾಯುಪ್ರೋಕ್ತೇ " ಶ್ರಾದ್ಧಕಲ್ಪೇ "
ನಾಮ ಷೋಡಶೋಽಧ್ಯಾಯಃ

---

೭೬. ದೇವತೆಗಳು ಹೇಸಿಗೆಯ ಪುರುಷನನ್ನೂ, ಅಶುಚಿಯಾದ ಮನುಜನನ್ನೂ ತಿರಸ್ಕರಿಸುವರು. ಆದುದರಿಂದ ಶುಭಕರ್ಮಿಗಳು ಮೂರು ವಿಧವಾದ ಶೌಚವನ್ನು ಆಚರಿಸಬೇಕು.

೭೭–೭೮ ಎಲೈ ವಿಪ್ರೋತ್ತಮರೇ, ಯೋಗಿವರ್ಯರಾದ ಪಿತೃದೇವತೆಗಳು ಅತಿಥಿಸತ್ಕಾರನಿರತರೂ, ಶೌಚಪಾರಾಯಣರೂ, ಜ್ಞಾನಿಗಳೂ, ಪಿತೃಭಕ್ತರೂ, ದಾಂತರೂ, ದಯಾಪರರೂ ಆದ ಬ್ರಾಹ್ಮಣಾದಿ ಭಕ್ತಜನರ ಶ್ರದ್ಧಾಸತ್ಕರ್ಮಗಳಿಂದ ಪ್ರೀತರಾಗಿ ಅವರು ಕೋರುವ ಸಕಲಕಾಮಗಳನ್ನೂ ಕೊಟ್ಟು, ಮುಕ್ತಿಮಾರ್ಗ ಪ್ರದರ್ಶಕರೂ ಆಗುವರು ಎಂದು ಸೂತರು ಮುನಿಗೆ ಹೇಳಿದರು.

ಇಲ್ಲಿಗೆ ವಾಯುಪ್ರೋಕ್ತವಾದ ವಾಯುಪುರಾಣದಲ್ಲಿ " ಶ್ರಾದ್ಧಕಲ್ಪನಿರೂಪಣವೆಂಬ "
ಹದಿನಾರನೆಯ ಅಧ್ಯಾಯವು ಮುಗಿದುದು.



## ಹದಿನಾರನೆಯ ಅಧ್ಯಾಯದ ಸಾರಾಂಶವು



ಈ ಅಧ್ಯಾಯದಲ್ಲಿ ಶ್ರಾದ್ಧಕರ್ಮದಲ್ಲಿ ತ್ಯಾಜ್ಯವಾದ ವಸ್ತು, ದೇಶ, ಕಾಲ ಇವುಗಳ ವಿಷಯಗಳು ನಿರೂಪಿತವಾಗಿವೆ. ಶ್ರಾದ್ಧಕರ್ಮಗಳನ್ನು ರಾತ್ರಿಯ ಕಾಲದಲ್ಲಿಯೂ, ಗ್ರಹಣಕಾಲದಲ್ಲಿಯೂ, ಸೂತಕಾದಿ ಆಶೌಚಾದಿಗಳು ಬಂದ ಕಾಲದಲ್ಲಿಯೂ ಮಾಡಬಾರದು. ನೀರುಳ್ಳಿ, ಬೆಳ್ಳುಳ್ಳಿ, ಬದನೇಕಾಯಿ ಮೊದಲಾದ ವಸ್ತುಗಳನ್ನು ಉಪಯೋಗಿಸಬಾರದು. ಗೆಡ್ಡೆ, ಗೆಣಸು, ಫಲಪುಷ್ಪ ಮೊದಲಾದ ಸಾತ್ವಿಕವಸ್ತುಗಳನ್ನು ಉಪಯೋಗಿಸಬಹುದು. ತ್ರಿಶಂಕು, ಕಲಿಂಗ ಮೊದಲಾದ ದೇಶಗಳಲ್ಲಿ ಮಾಡಬಾರದು. ನಗ್ನರೂ, ಬೇಡರೂ. ಅಂಧರೂ, ಬ್ರಹ್ಮಹತ್ಯಾದಿ ದೋಷಿಗಳೂ, ನಾಸ್ತಿಕರೂ, ದುಷ್ಟರೂ, ಚೋರರೂ ಶ್ರಾದ್ಧಕ್ಕೆ ಅನರ್ಹರಾಗಿರುವರು. ನಾಯಿ, ಹಂದಿ, ಕೋಳಿ, ಬೆಕ್ಕು, ಚಂಡಾಲ ಇವರು ದೃಷ್ಟವಾದ ವಸ್ತುಗಳನ್ನು ತ್ಯಜಿಸಬೇಕು. ವಾತಾತಪಗಳಿಂದ ಶುದ್ಧವಾದ ಪ್ರದೇಶಗಳನ್ನು ಸಂಮಾರ್ಜನ ಪ್ರೋಕ್ಷಣಾದಿಗಳಿಂದ ಶುದ್ಧಿಮಾಡಿ ಪಿತೃಕಾರ್ಯವನ್ನು ಮಾಡಬೇಕು. ಶೌಚಾಚಾರ ವಿಹೀನರಾದ ಪುರುಷರು ಯಾವ ಕರ್ಮಗಳಿಗೂ ಅನರ್ಹರಾಗಿರುವರು. ಶೌಚಾಚಾರ ಗಳಿಂದ ಪಿತೃಗಳು ಪ್ರೀತರಾಗಿ ಸಕಲಸುಖಗಳನ್ನೂ ಕೊಡುವರೆಂಬ ವಿಷಯಗಳು ವರ್ಣಿತವಾಗಿವೆ.

